ಅನೇಕ ಚಂದ್ರರು ದ್ವೈತಕ್ಕೆ ದೃಷ್ಟಾಂತ), ೨೭.

**೬೧. ದೃಷ್ಟಾದೃಷ್ಟಭೋಗಾಃ—**

ಕಾಣಬಹುದಾದ (ಈ ಲೋಕದ), ಕಾಣುವದಕ್ಕಾಗದ (ಪರಲೋಕದ) ಭೋಗಗಳು, ೫.

**೬೨. ದೇವಃ—**

ಪರಮಾತ್ಮ, ೧೯.

**೬೩. ಧರ್ಮಾಧರ್ಮೌ—**

ಬೇರೆಬೇರೆಯ ಶರೀರಕ್ಕೆ ಕಾರಣವಾಗಿರುವ ಪುಣ್ಯಪಾಪಗಳು, ೧೦.

**೬೪. ನಾಮರೂಪೇ—**

ಆಕಾಶವೇ ಮುಂತಾದ ಜಗತ್ತಿನ ಮೂಲರೂಪವಾದ ನಾಮ ಮತ್ತು ರೂಪಗಳು, ೧೩, ೧೪, ೧೫, ೧೮, ೧೯.

**೬೫. ನಿತ್ಯಾವಗತಿಸ್ವರೂಪಃ, ಚೈತನ್ಯಸ್ವರೂಪಃ—**

ನಿತ್ಯವಾಗಿರುವ ಅರಿವಿನ ಸ್ವರೂಪದ ಆತ್ಮನು, ೫೪, ೫೫, ೬೨.

**೬೬. ನಿರ್ವಿಶೇಷತ್ವಮ್—**

ಇಂಥದ್ದು, ಅಂಥದ್ದು ಎಂಬ ವಿಶೇಷವಿಲ್ಲದಿರುವದು, ೪೭.

**೬೭. ಪಞ್ಚಮಹಾಭೂತಾನಿ—**

ಆಕಾಶಾದಿಸೂಕ್ಷ್ಮಭೂತಗಳು, ೧೫, ೧೬.

**೬೮. ಪರ ಆತ್ಮಾ, ಪರಮಾತ್ಮಾ, ಪರಂ ಬ್ರಹ್ಮ—**

ಪರಮಾರ್ಥವಾಗಿರುವ ಅಪರಿಚ್ಛಿನ್ನಚೈತನ್ಯರೂಪನಾದ ಆತ್ಮನು, ೭,೮, ೧೨, ೧೩, ೧೪, ೨೦, ೨೧, ೨೨, ೩೫, ೩೬.

**೬೯. ಪರಮಾರ್ಥದರ್ಶನಮ್**

ನಿಜವಾಗಿರುವ ಜ್ಞಾನವು, ಅದ್ವೈತಜ್ಞಾನವು, ೨೯.

**೭೦. ಪರಮಾರ್ಥದರ್ಶೀ—**

ನಿಜವಾದ ಜ್ಞಾನವುಳ್ಳವನು, ಅದ್ವೈತಜ್ಞಾನಿ, ೨೮.

**೭೧. ಪರಾರ್ಥ—**

ಮತ್ತೊಂದಕ್ಕಾಗಿರುವ, ಸ್ವತಂತ್ರವಲ್ಲದ ಅನಾತ್ಮ, ೪೧, ೫೫, ೬೦, ೬೬.

**೭೨. ಪರಿಚ್ಛಿತ್ತಿಃ—**

ಗೊತ್ತುಪಡಿಸಿ ಅರಿತುಕೊಳ್ಳುವದು, ೫೭.

**೭೩. ಪರಿವ್ರಾಟ್—**

ಸಂನ್ಯಾಸಿ, ಸಕಲಕರ್ಮಗಳನ್ನೂ ಕರ್ಮಸಾಧನಗಳನ್ನೂ ತೊರೆದ ಮುಮುಕ್ಷು, ೧೭.

**೭೪. ಪರಿಸಂಖ್ಯಾನಮ್—**

ತತ್ತ್ವವನ್ನು ಮನದಲ್ಲಿಯೇ ಚಿಂತಿಸಿಕೊಳ್ಳುವದು, ೬೮.

**೭೫. ಪ್ರತ್ಯಕ್ಷ—**

ಎದುರಿಗಿರುವ, ಅನುಭವಕ್ಕೆ ಗೋಚರವಾಗಿರುವ, ೨೩, ೨೪.

**೭೬. ಪ್ರತ್ಯಕ್ಷಾದೀನಿ—**

ಪ್ರತ್ಯಕ್ಷ, ಅನುಮಾನ- ಮುಂತಾದ ಶಬ್ದೇತರ ಪ್ರಮಾಣಗಳು, ೨೬, ೩೬, ೪೦, ೪೩, ೬೩, ೬೪.

**೭೭. ಪ್ರತ್ಯಯಃ—**

ಅಂತಃಕರಣದ ವೃತ್ತಿಗಳು, ೪೮, ೪೯, ೫೦.

**೭೮. ಪ್ರಮಾಣಮ್—**

ಅರಿಯುವದಕ್ಕೆ ಸಾಧನವಾದ ಪ್ರತ್ಯಕ್ಷವೇ ಮುಂತಾದವು, ೫೭, ೫೯, ೬೫.

**೭೯. ಪ್ರಮಾಣನಿರಪೇಕ್ಷ—**

ಪ್ರಮಾಣವನ್ನು ಬಯಸದೆ ಸಿದ್ಧವಾಗುವ, ೫೮, ೬೬.

**೮೦. ಪ್ರಮಾಣಾಪೇಕ್ಷ—**

ಪ್ರಮಾಣಗಳಿಂದಲೇ ಸಿದ್ಧವಾಗುವ, ೫೭, ೫೯, ೬೪.

**೮೧. ಪ್ರಮಾ—**

ಪ್ರಮಾಣದಿಂದಾಗುವ ಅರಿವು, ಸರಿಯಾದ ಅರಿವು, ಅವಗತಿ, ೫೮, ೬೦, ೬೧.

**೮೨. ಪ್ರಮೇಯಮ್—**
ಪ್ರಮಾಣಕ್ಕೆ ಗೋಚರವಾದದ್ದು, ವಿಷಯ, ೫೭, ೫೯.

**೮೩. ಪ್ರಸಿದ್ಧ—**
ಪ್ರಮಾಣದಿಂದ, ಅಥವಾ ತಾನೇ ಸಿದ್ಧವಾಗಿರುವ, ೩೬, ೩೭, ೩೮.

**೮೪. ಫಲಮ್, ಪ್ರಮಾಣಫಲಮ್**
ಪ್ರಮಾಣದ ವ್ಯಾಪಾರದ ಕೊನೆಯಲ್ಲಿ ಕಾಣಿಸಿಕೊಳ್ಳುವ ಅರಿವು, ೫೨, ೬೧, ೬೪, ೬೫,

**೮೫. ಫೇನಸ್ಥಾನೀಯೋ**
ನೀರಿಗಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳುವದಕ್ಕೆ ಬಾರದಿರುವ ನೊರೆಯಂತೆ ಪರಮಾತ್ಮನಿಂದ ಬೇರೆಯೆಂದು ಅಥವಾ ಬೇರೆಯಲ್ಲವೆಂದು ಹೇಳುವದಕ್ಕಾಗದಿರುವ ನಾಮರೂಪಗಳು, ೧೫.

**೮೬. ಬಲ್ಯುಪಹಾರನಮಸ್ಕಾರಾದಯಃ—**
ತನಗಿಂತ ಬೇರೆಯೆಂದು ಭಾವಿಸಿದ ಪರಮೇಶ್ವರನ ಆರಾಧನೆಗೆ ಉಪಯೋಗಿಸುವ ಬಲಿಯೇ ಮುಂತಾದ ಸಾಧನಗಳು, ೧೯.

**೮೭. ಬಾಧ್ಯ—**
ಜ್ಞಾನದಿಂದ ಅಸತ್ಯವಾಗಿ ತೋರುವ, ೫೪.

**೮೮. ಬೌದ್ಧಪ್ರತ್ಯಯಃ—**
ಅಂತಃಕರಣದಲ್ಲಾಗುವ ವೃತ್ತಿ, ೫೦, ೫೧, ೫೩.

**೮೯. ಬ್ರಹ್ಮ—**
ಪರಮಾತ್ಮ, ೭.

**೯೦. ಬ್ರಹ್ಮವಿತ್—**
ಬ್ರಹ್ಮಜ್ಞಾನಿ, ೫.

**೯೧. ಬ್ರಹ್ಮವಿದ್ಯಾ—**
ಬ್ರಹ್ಮದ ಜ್ಞಾನ, ೨.

**೯೨. ಬ್ರಹ್ಮಣಿ ಸ್ಥಿತಃ—**
ಬ್ರಹ್ಮವೇ ತಾನೆಂಬ ಬುದ್ಧಿಯಿಂದ ಅದರಲ್ಲಿ ನೆಲೆಸಿಂತವನು, ೫.

**೯೩. ಭಾವರೂಪ—**
ಕ್ರಿಯಾರೂಪವಾದ, ೨೫.

**೯೪. ಭಿನ್ನಜಾತ್ಯನ್ವಯಸಂಸ್ಕಾರಮ್—**
ಬೇರೆಬೇರೆಯ ಜಾತಿ, ವಂಶ, ಕರ್ಮದಿಂದಾಗುವ ಸಂಸ್ಕಾರ_ ಇವುಗಳುಳ್ಳ ಶರೀರ, ೧೧,೧೨,೧೭,೧೮.

**೯೫. ಭೇದದರ್ಶನಮ್, ಭೇದಪ್ರತಿಪತ್ತಿಃ—**
ಭೇದವನ್ನು ಸತ್ಯವೆಂದು ತಿಳಿಯುವ ತಪ್ಪುತಿಳಿವಳಿಕೆ, ೧೯, ೨೦, ೨೧, ೨೨, ೨೯.

**೯೬. ಮನಃ—**
ಅಂತಃಕರಣ, ೧೮.

**೯೭. ಮಿಥ್ಯಾಜ್ಞಾನಮ್—**
ತಪ್ಪು ತಿಳಿವಳಿಕೆ, ೭೨.

**೯೮. ಮಿಥ್ಯಾಧ್ಯಾರೋಪಣಾ—**
ಹುಸಿವಸ್ತುವನ್ನೇ ಕಲ್ಪಿಸಿಕೊಳ್ಳುವದು, ೪೫.

**೯೯. ಮುಮುಕ್ಷುಃ—**
ಮೋಕ್ಷವನ್ನೇ ಬಯಸುವವನು, ೧, ೨೨, ೬೮.

**೧೦೦. ಮೋಕ್ಷಃ—**
ಸಂಸಾರಭಯದಿಂದ ಬಿಡುಗಡೆ, ೩೦.

**೧೦೧. ಲಬ್ಧಾಗಮಃ—**
ಸಾಂಪ್ರದಾಯಿಕವಾದ ಉಪದೇಶವನ್ನು ಪಡೆದವನು, ೫.

**೧೦೨. ವಿದ್ಯಾ–**
ತಿಳಿವಳಿಕೆ, ಬ್ರಹ್ಮಜ್ಞಾನ, ೩, ೬೭.

**೧೦೩. ವಿದ್ಯಾಸಂತತಿಃ–**
ವಿದ್ಯೆಯು ಗುರುಶಿಷ್ಯಪರಂಪರೆಯಿಂದ ಒಂದೇ ಸಮನೆ ಮುಂದೆ ಸಾಗುವದು, ೩.

**೧೦೪. ವಿಷಯಾಃ–**
ಶಬ್ದಾದಿ ಇಂದ್ರಿಯಾರ್ಥಗಳು, ೬೯.

**೧೦೫. ಶಾಸ್ತ್ರಮ್–**
ವೇದ, ೨೯.

**೧೦೬. ಶುಕ್ತಿಕಾಯಾಂ ರಜತಮ್**
ಕಪ್ಪೆಯ ಚಿಪ್ಪಿನಲ್ಲಿ ಹುಟ್ಟುಗಟ್ಟಿದ ಬೆಳ್ಳಿ, ೩೬.

**೧೦೭. ಸಂಸಾರಃ–**
ಹುಟ್ಟುಸಾವುಗಳು, ಎಚ್ಚರಕನಸುಗಳು, ೧೦,೨೬,೩೦,೩೩,೩೬,೬೭.

**೧೦೮. ಸಂಸಾರಗಮನಮ್–**
ಸಂಸಾರವನ್ನು ಹೊಂದುವದು, ೨೦.

**೧೦೯. ಸಂಸಾರೀ–**
ಸಂಸಾರದಲ್ಲಿ ತೊಳಲುತ್ತಿರುವ ಜೀವ, ೧೯, ೨೦, ೨೧, ೨೩, ೩೫.

**೧೧೦. ಸಂಸ್ಕಾರಃ–**
[೧] ಮಂತ್ರದಿಂದಲೂ ಕರ್ಮದಿಂದ ಆಗುವ ಗುಣವಿಶೇಷ, ೧೬,೧೭,೧೮, [೨] ವೇದನಾದಿಗಳಿಂದ ಮನಸ್ಸಿನಲ್ಲಿ ಉಂಟಾಗುವ ವಾಸನೆ,೨೫,೨೬,

**೧೧೧. ಸಂಹತ–**
ಮತ್ತೊಂದರೊಡನೆ ಸೇರಿಕೊಂಡು ತನಗಿಂತ ಬೇರೆಯಾದದ್ದರ ಪ್ರಯೋಜನಕ್ಕಾಗಿರುವ (ವಸ್ತು) ೪೧, ೪೮, ೫೫, ೬೦, ೬೨, ೭೧.

**೧೧೨. ಸಙ್ಘಾತಃ–**
ಸಂಹತವಾದ ಪರತಂತ್ರವಾದ ದೇಹ, ಇಂದ್ರಿಯಾದಿಗಳ ಗುಂಪು, ೪೪, ೪೫,೫೯.

**೧೧೩. ಸಮ್ಯಗ್ಜ್ಞಾನಮ್, ಸಮ್ಯಕ್ಪ್ರತ್ಯಯಃ–**
ಸರಿಯಾದ ತಿಳಿವಳಿಕೆ, ಆತ್ಮಜ್ಞಾನ, ೩, ೨೯.

**೧೧೪. ಸರ್ವಾತ್ಮಾ–**
ಎಲ್ಲರಿಗೂ ಆತ್ಮನಾಗಿರುವ ಪರಮಾತ್ಮ, ೧೨.

**೧೧೫. ಸಾಧನಸಾಧ್ಯ–**
ಸಾಧನದಿಂದ ಪಡೆಯತಕ್ಕ ಅನಿತ್ಯಫಲ, ೨.

**೧೧೬. ಸಾಧ್ಯಸಾಧನೇ–**
ಪುತ್ರ, ಕರ್ಮ, ಉಪಾಸನೆ- ಎಂಬ ಸಾಧನೆ, ಮನುಷ್ಯಲೋಕ, ಪಿತೃಲೋಕ ಮತ್ತು ದೇವಲೋಕ- ಎಂಬ ಸಾಧನ, ೨೭, ೨೮.

**೧೧೭. ಸಿದ್ಧಿಃ–**
ಪ್ರಮಾಣದ ಫಲವಾದ ಅರಿವು, ೬೪.

**೧೧೮. ಸುಷುಪ್ತಿಃ–**
ಕನಸಿಲ್ಲದ ಗಾಢನಿದ್ರೆ, ೫೪,೫೫,೫೬.

**೧೧೯. ಸ್ಮೃತಿಃ–**
[೧] ಶ್ರುತ್ಯರ್ಥವನ್ನು ತಿಳಿಸುವ ಪೌರುಷೇಯ ಗ್ರಂಥವಿಶೇಷ, ೩, ೭, ೧೪, ೨೫, ೨೬. [೨] ಅಂತಃಕರಣ ಧರ್ಮವಾದ ನೆನಪು, ೫೯,೬೦,೬೧.

**೧೨೦. ಸ್ವತಃಸಿದ್ಧ, ಸ್ವಯಂಸಿದ್ಧ, ಪ್ರಮಾಣಕ–**
ಪ್ರಮಾಣವನ್ನು ಬಯಸದೆ ತಾನೇ ಸಿದ್ಧವಾಗಿರುವ [ಆತ್ಮ] ೫೭, ೫೮, ೬೩, ೬೪, ೬೬.

**೧೨೧. ಸ್ವತಃಸಿದ್ಧಿಃ ನಿತ್ಯಸಿದ್ಧಿಃ–**
ಪ್ರಮಾಣವನ್ನು ಬಯಸದೆ ತಾನೇ ಸಿದ್ಧವಾಗುವಿಕೆ, ೪೩, ೪೮, ೫೫, ೫೮.

**೧೨೨. ಸ್ವಭಾವಃ–**
ತನ್ನ ಸ್ವರೂಪ, ೩೧,೩೨,೩೪,೩೬,೪೭.

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಸಂಖ್ಯೆ ೫೨

ಶ್ರೀ ಶಂಕರಾಚಾರ್ಯವಿರಚಿತ

# ಉಪದೇಶಸಾಹಸ್ರಿ

## (ಪದ್ಯಪ್ರಬಂಧ)

ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ ಮುಂತಾದವುಗಳೊಡನೆ

ಬರೆದವರು:
ಶ್ರೀ ಸಚ್ಚಿದಾನಂದಸರಸ್ವತೀಸ್ವಾಮಿಗಳವರು

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೨೦

ಅಧ್ಯಾತ್ಮಪ್ರಕಾಶ ಕಾರ್ಯಾಲಯ
ಹೊಳೆನರಸೀಪುರ
೧೯೪೯

# ಮೊದಲ ಮಾತು



ಉಪದೇಶಸಾಹಸ್ರಿಯ ಪದ್ಯಭಾಗವು ಶ್ಲೋಕ, ಶ್ಲೋಕಾರ್ಥ, ಅನ್ವಯ, ಸಂಕ್ಷಿಪ್ತಟಿಪ್ಪಣಿ ಮತ್ತು ವಿಸ್ತಾರವಾದ ಕನ್ನಡವ್ಯಾಖ್ಯಾನಪಾಠ- ಇಷ್ಟು ಪರಿಕರಗಳೊಡನೆ ಕಾರ್ಯಾಲಯದ "ಅಧ್ಯಾತ್ಮಪ್ರಕಾಶ" ಮಾಸಪತ್ರಿಕೆಯಲ್ಲಿ ಭಾಗಭಾಗವಾಗಿ ಅಚ್ಚಾಗಿರುತ್ತದೆ. ಅದರ ಸ್ವಲ್ಪಭಾಗವು ಇನ್ನೂ ಪ್ರಕಟವಾಗದೆ ಇರುತ್ತದೆ. ಗ್ರಂಥಕ್ಕೆ ಹೆಚ್ಚಿನ ವಿವರವು ಬೇಕೆನ್ನುವವರು ಆ ಸಂಸ್ಕರಣವನ್ನೇ ಓದಬೇಕು.

ಆದರೆ ಮೂಲಸಮೇತವಾಗಿ ಗದ್ಯಪದ್ಯಭಾಗಗಳೆರಡನ್ನೂ ಹೋಲಿಸಿಕೊಂಡು ಓದಬೇಕೆನ್ನುವವರಿಗೆ ಈ ಸಂಪುಟವು ಹೆಚ್ಚು ಉಪಯುಕ್ತವಾಗಿರುತ್ತದೆ. ಪಾಠಗಳನ್ನು ಶೋಧನೆಮಾಡಿ ಟಿಪ್ಪಣಿಗಳನ್ನು ಅಲ್ಲಲ್ಲಿ ಹಿಗ್ಗಿಸಿ ಶ್ಲೋಕಾನುಕ್ರಮಣಿಕೆಯನ್ನೂ ವಿಚಾರಪ್ರಧಾನವಾದ ಪೀಠಿಕೆಯನ್ನೂ ಶಬ್ದಕೋಶವನ್ನೂ ಸೇರಿಸಿರುವದು ಈ ಪ್ರಕಟನೆಯ ವಿಶೇಷವು. ಈ ಗ್ರಂಥವು ಸಂಗ್ರಹಾಪೇಕ್ಷಿಗಳಿಗೆ ಪ್ರಯೋಜನಕರವಾಗಿರುವದೆಂದು ನಮ್ಮ ಆಶೆ.

ಅಧ್ಯಾತ್ಮಪ್ರಕಾಶಕಾರ್ಯಾಲಯ,
13—10—49

ಪ್ರಕಾಶಕರು



# ಪೀಠಿಕೆ



## ಗ್ರಂಥಕರ್ತೃ ವಿಚಾರ

ಈ ಗ್ರಂಥರತ್ನಮಾಲೆಯ ಉಪದೇಶಸಾಹಸ್ರೀ ಗದ್ಯಭಾಗದ ಪೀಠಿಕೆಯಲ್ಲಿ ನಾವು ಹೇಳಿರುವಂತೆ ಉಪದೇಶಸಾಹಸ್ರಿಯ ಪದ್ಯಭಾಗವು ಶ್ರೀ ಶಂಕರಾಚಾರ್ಯರವರ ಕೃತಿಯೇ ಎಂದು ನಿಶ್ಚಯಿಸುವದಕ್ಕೆ ಮುಖ್ಯವಾಗಿ ನೈಷ್ಕರ್ಮ್ಯಸಿದ್ಧಿಯಲ್ಲಿಯೂ ಬೃಹದಾರಣ್ಯಕದಲ್ಲಿಯೂ ಶ್ರೀ ಸುರೇಶ್ವರಾಚಾರ್ಯರವರು ಈ ಗ್ರಂಥದ ಶ್ಲೋಕಗಳನ್ನು ಭಗವತ್ಪಾದರವರ ಉಕ್ತಿಯೆಂದೇ ಸ್ಪಷ್ಟೋಕ್ತಿಗಳಿಂದ ತಿಳಿಸಿ ಉದಾಹರಿಸಿರುವದೊಂದು ಪ್ರಬಲವಾದ ಬಾಹ್ಯಪ್ರಮಾಣವಾಗಿರುತ್ತದೆ. ಈ ಗ್ರಂಥದ ಶ್ಲೋಕಾನುಕ್ರಮಣಿಕೆಯಲ್ಲಿ ಇಂಥ ಶ್ಲೋಕಪ್ರತೀಕಗಳ ಕೊನೆಯಲ್ಲಿ ನಾವು 'ನೈ.' ಅಥವಾ 'ವಾ.' ಎಂಬ ಸಂಕೇತದಿಂದ ಕೆಲವು ಉದಾಹರಣೆಗಳನ್ನು ಸೂಚಿಸಿರುತ್ತೇವೆ. ಗ್ರಂಥದಲ್ಲಿ ಪ್ರಸ್ಥಾನತ್ರಯಭಾಷ್ಯದಲ್ಲಿ ಪ್ರಮಾಣವೆಂದು ಹಿಡಿದಿರುವ ಮುಖ್ಯೋಪನಿಷತ್ತುಗಳನ್ನೂ ಅವರ ಗ್ರಂಥಗಳನ್ನೂ ಮಾತ್ರವೇ ಉದಾಹರಿಸಿರುವದು, ವಿಚಾರಸರಣಿಯಲ್ಲಿ ಉಚ್ಚಕೋಟಿಯ ಯುಕ್ತಿಗಳನ್ನು ಬಳಸಿರುವದು, ಭಾಷೆಯು ಪ್ರಸನ್ನಗಂಭೀರವಾಗಿರುವದು – ಮುಂತಾದ ಕಾರಣಗಳಿಂದಲೂ ಇದು ಈ ಆಚಾರ್ಯರ ಕೃತಿಯೇ ಎಂದು ನಾವು ಕಲ್ಪಿಸಬಹುದಾಗಿರುತ್ತದೆ.

## ಗ್ರಂಥದ ಪ್ರಕರಣಗಳೂ ವ್ಯಾಖ್ಯಾತೃಗಳೂ

ಪದ್ಯಭಾಗದಲ್ಲಿ ಹತ್ತೊಂಬತ್ತು ಪ್ರಕರಣಗಳಿವೆ. ಇವು ಈಗ ಅಚ್ಚಾಗಿರುವ ಅನುಕ್ರಮದಲ್ಲಿಯೇ ಆಚಾರ್ಯರಿಂದ ರಚಿತವಾದವೆ, ಅಥವಾ ಅವು ಆಗಾಗ್ಗೆ ರಚಿತವಾಗಿದ್ದು ಇವೆಲ್ಲವನ್ನೂ ಯಾರೋ ಒಬ್ಬರು ಕೂಡಿಸಿ 'ಉಪದೇಶಸಾಹಸ್ರಿ' ಎಂಬ ಹೆಸರನ್ನಿಟ್ಟರೆ ? – ಎಂಬುದು ವಿಚಾರಣೀಯವಾಗಿದೆ. ಪ್ರಕರಣಗಳಲ್ಲಿ ಕೆಲವು ಶ್ಲೋಕಪರಿಮಾಣದಿಂದ ಬಹು ಸಣ್ಣವಾಗಿವೆ ; ಕೆಲವು ಬಹು ದೊಡ್ಡವು. ಒಂದು ಪ್ರಕರಣದಲ್ಲಿರುವ ವಿಷಯಕ್ಕೂ ಅದರ ಮುಂದಿನ ಪ್ರಕರಣದ ವಿಷಯಕ್ಕೂ ಅಷ್ಟು ನಿಕಟಸಂಬಂಧವೇನೂ ಇರುವಂತೆ ಕಾಣುವದಿಲ್ಲ. ಒಂದರಲ್ಲಿದ್ದ ವಿಷಯವು ಮಿಕ್ಕ ಪ್ರಕರಣಗಳಲ್ಲಿಯೂ ರೂಪಾಂತರದಿಂದ ಬಂದಿರುತ್ತದೆ.

ಪ್ರಕರಣಗಳಿಗೆ ವ್ಯಾಖ್ಯಾನಕಾರರು ಕೊಟ್ಟಿರುವ ಹೆಸರುಗಳು ಬೇರೆಬೇರೆಯಾಗಿರುತ್ತವೆ. ಅನೇಕ ವೇಳೆಗಳಲ್ಲಿ ಪ್ರಕರಣದ ಆದ್ಯಶ್ಲೋಕದ ಒಂದೊಂದು

ಮಾತಿನ ಅವಲಂಬನೆಯಿಂದ ಪ್ರಕರಣದ ಹೆಸರನ್ನು ಕಲ್ಪಿಸಿರುವಂತೆ ತೋರುತ್ತದೆ. ಅಂಥ ಸಂದರ್ಭಗಳಲ್ಲಿ ನಾವು ಪ್ರಕರಣದ ಒಟ್ಟರ್ಥವನ್ನು ಸೂಚಿಸುವ ಹೊಸ ಹೆಸರನ್ನು ಕಲ್ಪಿಸಿ, ವ್ಯಾಖ್ಯಾನಕಾರರು ಕೊಟ್ಟಿರುವ ಹೆಸರನ್ನೂ ಅಲ್ಲಲ್ಲಿ ತಿಳಿಸುತ್ತಾಹೋಗಿರುತ್ತೇವೆ.

ಪ್ರಕರಣಗಳಲ್ಲಿರುವ ಶ್ಲೋಕಗಳಿಗೆ ಸಂಖ್ಯೆಯನ್ನು ಕೊಟ್ಟಿರುವ ಪದ್ಧತಿಯೂ ವ್ಯಾಖ್ಯಾನಗಳಲ್ಲಿ ಏಕರೂಪವಾಗಿರುವದಿಲ್ಲ. ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿ ಮಹದೇವಶಾಸ್ತ್ರಿಗಳು ಅಚ್ಚುಮಾಡಿಸಿರುವ **ರಾಮತೀರ್ಥರ ವ್ಯಾಖ್ಯಾನ**ವೊಂದು, ಅದೇ ಲೈಬ್ರರಿಯಲ್ಲಿರುವ ಕೈಬರಹದ **ಬೋಧನಿಧಿಯ ವ್ಯಾಖ್ಯಾನ**ವೊಂದು, **ಆನಂದಜ್ಞಾನಯತಿಗಳ ವ್ಯಾಖ್ಯಾನ**ವೊಂದು– ಹೀಗೆ ಮೂರು ವ್ಯಾಖ್ಯಾನಗಳನ್ನು ನಾವು ನೋಡಿರುತ್ತೇವೆ. ಮೊದಲನೆಯ ವ್ಯಾಖ್ಯಾನದಲ್ಲಿ ಗದ್ಯವನ್ನು ಖಂಡಗಳಾಗಿ ಬರೆದು ಸಂಖ್ಯೆಗಳನ್ನು ಕೊಟ್ಟಿದೆ; ಪದ್ಯಕ್ಕೆ ಆಯಾ ಶ್ಲೋಕದ ಸಂಖ್ಯೆಗಳನ್ನು ಕೊಟ್ಟಿದೆ. ಬೋಧನಿಧಿಯ ವ್ಯಾಖ್ಯಾನದಲ್ಲಿ ಶ್ಲೋಕಸಂಖ್ಯೆಗಳನ್ನು ಉದ್ದಕ್ಕೆ ಅನುಕ್ರಮವಾಗಿ ಕೊಟ್ಟಿರುತ್ತದೆ. ಆನಂದಜ್ಞಾನವ್ಯಾಖ್ಯಾನದಲ್ಲಿ ಸಂಖ್ಯೆಗಳೇ ಇರುವದಿಲ್ಲ. ಇದೂ ಅಲ್ಲದೆ ವ್ಯಾಖ್ಯಾನಗಳಲ್ಲಿ ಶ್ಲೋಕಗಳ ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಸಂಬಂಧವು ಅಷ್ಟು ಸ್ಫುಟವಾಗಿಲ್ಲದಿದ್ದರೂ ಎರಡು ಸಾಲುಗಳಿಗೆ ಒಂದು ಶ್ಲೋಕವೆಂದು ಲೆಕ್ಕ ಹಾಕಿ ಸಂಖ್ಯೆಯನ್ನು ಕೊಟ್ಟಿರುವದೂ ವಾಚಕರಿಗೆ ಸ್ವಲ್ಪ ಕ್ಲೇಶವನ್ನು ತಂದೊಡ್ಡಿರುತ್ತದೆ. ಆದ್ದರಿಂದ ನಾವು ಅರ್ಥಾನುಗುಣವಾಗಿ ಒಂದು, ಎರಡು ಅಥವಾ ಹೆಚ್ಚು ಶ್ಲೋಕಗಳನ್ನು ಒಂದೊಂದು ಉಂಡೆಯಾಗಿ ಭಾವಿಸಿ ಪ್ರಕರಣಗಳನ್ನು ಖಂಡಗಳಾಗಿ ಬರೆದುಕೊಂಡು ಶ್ಲೋಕಗಳ ಸಂಖ್ಯೆಯನ್ನು ಅವಶ್ಯಬಿದ್ದಂತೆ ಬದಲಾಯಿಸಿಕೊಂಡಿರುವದಲ್ಲದೆ, ಕೆಲವು ಸಂದರ್ಭಗಳಲ್ಲಿ ಅರ್ಧಶ್ಲೋಕಗಳನ್ನೇ ಒಂದೆಂತ ಭಾವಿಸಿ ಅರ್ಥಸ್ಫೂರ್ತಿಗೆ ತಕ್ಕಂತೆ ವಿಂಗಡಿಸಿಕೊಳ್ಳುವ ಸ್ವಾತಂತ್ರ್ಯವನ್ನು ತೆಗೆದುಕೊಂಡಿರುತ್ತೇವೆ. ಈ ಕಾರಣದಿಂದ ಮೈಸೂರು, ನಿರ್ಣಯಸಾಗರ, ಅಷ್ಟೇಕರ್, ವಾಣೀವಿಲಾಸ ಮುದ್ರಣಾಲಯಗಳಲ್ಲಿ ಅಚ್ಚಾಗಿರುವ ಪಾಠಗಳಿಗಿಂತ ನಮ್ಮ ಶ್ಲೋಕಗಳ ಪಾಠವೂ ಅನುಕ್ರಮವೂ ಅಲ್ಲಲ್ಲಿ ಭಿನ್ನವಾಗಿರುತ್ತವೆ. ಆದರೂ ಗ್ರಂಥದ ಕೊನೆಯಲ್ಲಿ ಕೊಟ್ಟಿರುವ ಶ್ಲೋಕಾನುಕ್ರಮಣಿಕೆಯಿಂದ ಬೇಕಾದ ಶ್ಲೋಕವನ್ನು ಕಂಡುಹಿಡಿಯಬಹುದಾದ್ದರಿಂದ ಈ ಅನುಕ್ರಮಭೇದದಿಂದ ಹೆಚ್ಚಿನ ತೊಡಕೇನೂ ಆಗಿರುವದಿಲ್ಲ.

ರಾಮತೀರ್ಥರ ವ್ಯಾಖ್ಯಾನವು ವಿದ್ವತ್ತಾಪೂರ್ಣವಾಗಿರುತ್ತದೆ ; ಬೋಧನಿಧಿಯ ವ್ಯಾಖ್ಯಾನವು ಸರಳವಾಗಿ ಅಕ್ಷರಾರ್ಥವನ್ನು ತಿಳಿಸಿ ವಾಕ್ಯಾರ್ಥವನ್ನು ವಿಶದಗೊಳಿಸುವದಾಗಿದೆ. ಆನಂದಜ್ಞಾನವ್ಯಾಖ್ಯಾನದಲ್ಲಿ ವಿಶೇಷವೇನೂ

ಇರುವದಿಲ್ಲ ; ಅದು ಸಂಕ್ಷಿಪ್ತವಾಗಿರುತ್ತದೆ. ಅನೇಕಕಡೆಗಳಲ್ಲಿ – ವಿಶೇಷವಾಗಿ ಹದಿನೆಂಟನೆಯ ತತ್ತ್ವಮಸಿಪ್ರಕರಣದಲ್ಲಿ – ಬೋಧನಿಧಿಯ ಪಾಠವೇ ಉತ್ತಮವೆಂತ ನಮಗೆ ತೋರಿಬಂದಿರುತ್ತದೆ. ಇಂಥ ಸಂದರ್ಭಗಳಲ್ಲಿ ಟಿಪ್ಪಣಿಯಲ್ಲಿ ಪಾಠಭೇದಗಳನ್ನು ತಿಳಿಸಿಕೊಂಡೇ ಹೋಗಿರುತ್ತೇವೆ. ಇಷ್ಟೆಲ್ಲಾ ಆದ ಮೇಲೂ ವ್ಯಾಖ್ಯಾನಗಳ ಸಹಾಯದಿಂದಲೂ ಮೂಲಗ್ರಂಥದ ಆಶಯವು ಸ್ಪಷ್ಟವಾಗದ ಕೆಲವು ಗ್ರಂಥಗ್ರಂಥಿಗಳು ಉಳಿದುಕೊಂಡಿರುತ್ತವೆ. ಕೆಲವು ಕಡೆಗಳಲ್ಲಿ ವ್ಯಾಖ್ಯಾನಕಾರರುಗಳಲ್ಲಿ ಮತಭೇದವುಂಟಾಗಿದೆ ; ಒಂದೇ ಅಭಿಪ್ರಾಯವನ್ನು ತೆಗೆದಿದ್ದರೂ ಗ್ರಂಥದ ಆಶಯವು ಅದಾಗಿರಲಾರದೆಂದು ವಾಚಕರಿಗೆ ಅತೃಪ್ತಿಯಾಗುವ ಸ್ಥಲಗಳೂ ಉಂಟು. ಇಂಥ ಸಂದರ್ಭಗಳಲ್ಲಿ ಪ್ರಸ್ಥಾನತ್ರಯ ಭಾಷ್ಯಗಳ ಆಧಾರವನ್ನು ತೆಗೆದುಕೊಂಡು ವಿಮರ್ಶಿಸುವದು, ಉಪದೇಶ ಸಾಹಸ್ರಿಯ ಗದ್ಯಪದ್ಯಭಾಗಗಳನ್ನು ಹೋಲಿಸುವದು – ಹೀಗೆ ಸಮಾಖ್ಯಾಬಲದಿಂದ ಶಂಕರಾಚಾರ್ಯರ ಅಭಿಪ್ರಾಯವನ್ನು ಶಂಕರಾಚಾರ್ಯರ ಗ್ರಂಥಗಳಿಂದಲೇ ತಿಳಿದುಕೊಳ್ಳುವದೇ ಉತ್ತಮವೆಂಬ ತತ್ತ್ವವನ್ನು ನಾವು ಅನುಸರಿಸಿರುತ್ತೇವೆ. ಈ ಪ್ರಯತ್ನದ ಗುಣದೋಷಗಳನ್ನು ವಿದ್ವಾಂಸರ ಸಮಾಲೋಚನೆಗೆ ಬಿಟ್ಟಿರುತ್ತೇವೆ.

## ಗ್ರಂಥದಲ್ಲಿರುವ ಮನನೀಯಾಂಶಗಳು

ಪದ್ಯಭಾಗದಲ್ಲಿ ಪ್ರತಿಪಾದಿತವಾಗಿರುವ ಕೆಲವು ವಿಷಯಗಳನ್ನು ಭಾಷ್ಯಗಳಿಗೆ ಹೋಲಿಸುವದರಿಂದ ಆಚಾರ್ಯಕೃತಿವಾಙ್ಮಯದಲ್ಲಿ ಈ ಗ್ರಂಥದ ಸ್ಥಾನವು ವ್ಯಕ್ತವಾಗುವದಲ್ಲದೆ ಅವರ ಪ್ರಕ್ರಿಯೆಯ ಕೆಲವು ಭಾಗಗಳನ್ನು ಚೆನ್ನಾಗಿ ಮನದಟ್ಟುಮಾಡಿಕೊಳ್ಳುವದಕ್ಕೂ ಸಹಾಯವಾಗುತ್ತದೆ. ಇಂಥ ವಿಚಾರಗಳಲ್ಲಿ ವಾಕ್ಯಜ್ಞಾನ, ಆತ್ಮಾನುಭವ, ಸಾಕ್ಷ್ಯಹಂಕಾರಗಳ ಸಂಬಂಧ, ಅವಸ್ಥಾತ್ರಯ, ಜ್ಞಾನಕರ್ಮಗಳ ಸಂಬಂಧ – ಇವುಗಳು ಮುಖ್ಯವಾಗಿರುತ್ತವೆ.

## ವಾಕ್ಯಜನ್ಯಜ್ಞಾನ

ವಾಕ್ಯಜನ್ಯಜ್ಞಾನವನ್ನು ಈ ಗ್ರಂಥದಲ್ಲಿ ಪ್ರತಿಪಾದಿಸಿರುವ ರೀತಿಯು ಮನನೀಯವಾಗಿರುತ್ತದೆ. ದಶರಥರಾಮನಿಗೆ ಮೊದಲೇ ಇದ್ದ ವಿಷ್ಣುತ್ವವನ್ನು ಬ್ರಹ್ಮನು ತಿಳಿಸಿಕೊಟ್ಟಂತೆಯೂ (೧೮–೯೭), ಮೊದಲೇ ಇದ್ದ ಹತ್ತನೆಯವನೆಂಬ ವಿಷಯವನ್ನು ನೀನು ಹತ್ತನೆಯವನು ಎಂಬ ದಶಮವಾಕ್ಯವು ತಿಳಿಸಿಕೊಟ್ಟಂತೆಯೂ (೧೮–೧೭೭ರಿಂದ ೧೮೯) ತತ್ತ್ವಮಸಿ ಎಂಬ ವಾಕ್ಯವು ಮೊದ

ಲೇ ಸಿದ್ಧವಾಗಿದ್ದ ಬ್ರಹ್ಮಾತ್ಮೈಕತ್ವವನ್ನು ತಿಳಿಸುವದು. ನಾನು, ಇದು– ಎಂಬ ಪ್ರತ್ಯಯಗಳಿಗೆ ಅಸಾಧಾರಣವಾದ ಅರ್ಥವನ್ನು ವಿಂಗಡಿಸಿ ತಿಳಿದುಕೊಳ್ಳದೆ ಇರುವವನಿಗೆ ವಾಕ್ಯದ ಜ್ಞಾನವಾಗದು (೧೮–೮೭). ತತ್ತ್ವಮಸಿವಾಕ್ಯದಲ್ಲಿ ತ್ವಂಪದಾರ್ಥವನ್ನು ವಿಂಗಡಿಸಿ ಅರಿತುಕೊಳ್ಳುವದಕ್ಕಾಗಿ ಅನ್ವಯವ್ಯತಿರೇಕಗಳನ್ನು ಮಾಡಿಕೊಳ್ಳಬೇಕು ; ಅದರಿಂದ ವಾಕ್ಯಾರ್ಥವು ಸ್ಫುಟವಾಗಿ ಅರಿಯಬರುವದು (೧೮–೧೬೧ರಿಂದ ೧೭೫, ೧೮೨ರಿಂದ ೧೮೩). ಈ ವಾಕ್ಯದಲ್ಲಿ ತತ್ತ್ವಂಪದಗಳು ಸಮಾನಾಧಿಕರಣವಾಗಿರುವದರಿಂದ ಸಂಸಾರಿತ್ವವನ್ನು ಅಲ್ಲಗಳೆದು ಸರ್ವಧರ್ಮವಿಯುಕ್ತವಾದ ಪರಮಾರ್ಥವನ್ನು ವಾಕ್ಯವು ತಿಳಿಸುವದು (೧೮–೧೮೭½ಯಿಂದ ೧೮೮½). ನಾನು ನಿತ್ಯಮುಕ್ತನು ಎಂಬುದೇ ಈ ವಾಕ್ಯದಿಂದಾಗುವ ಜ್ಞಾನವು (೧೮–೩) – ಎಂದು ಇಲ್ಲಿ ನಿರೂಪಿತವಾಗಿರುತ್ತದೆ.

## ಆತ್ಮಾನುಭವ

ಆತ್ಮಜ್ಞಾನವು ವೇದಾಂತವಾಕ್ಯದಿಂದ ಆದರೂ ಶಾಸ್ತ್ರಯುಕ್ತಿಗಳ ಅಭ್ಯಾಸ, ಅಥವಾ ಸಮಾಧಿಪ್ರಾಪ್ತಿ - ಇವುಗಳಿಂದಲೇ ಆತ್ಮನ ವಿಶೇಷಾನುಭವವು ಉಂಟಾಗಬೇಕು – ಎಂಬ ಅಭಿಪ್ರಾಯವನ್ನು ಕೆಲವರು ವಾದಿಗಳು ಆಚಾರ್ಯರ ಕಾಲಕ್ಕೇ ಇಟ್ಟುಕೊಂಡಿದ್ದರು. ಈಗಲೂ ಕೆಲವರು ಈ ಅಭಿಪ್ರಾಯವುಳ್ಳವರಾಗಿರುವದರಿಂದ ಪ್ರಸಂಖ್ಯಾನವಾದಖಂಡನರೂಪವಾದ ಹದಿನೆಂಟನೆಯ ಪ್ರಕರಣವು ಈ ವಿಷಯದಲ್ಲಿ ಜಿಜ್ಞಾಸುಗಳ ಸಂಶಯವನ್ನೆಲ್ಲ ತೊಲಗಿಸುವದಕ್ಕೆ ಉತ್ತಮಸಹಕಾರಿಯಾಗಿರುತ್ತದೆ. ಆತ್ಮನು ಅಂತಃಕರಣದ ವೃತ್ತಿಗಳಿಗೂ ಸಾಕ್ಷಿಯಾಗಿರುತ್ತಾನೆ (೭–೨, ೧೧–೧ರಿಂದ ೩, ೧೩–೬, ೧೩–೧೯, ೧೪–೭), ನಿತ್ಯಾಪರೋಕ್ಷನಾಗಿರುತ್ತಾನೆ (೧೬–೭). ಜ್ಞಾನರೂಪನಾದ ಆತ್ಮನೂ ಜ್ಞೇಯನೆಂದರೆ ಅವನನ್ನರಿಯುವದಕ್ಕೆ ಬೇರೆಯ ಜ್ಞಾತೃಜ್ಞಾನಗಳನ್ನು ಸಾಲಾಗಿ ಕಲ್ಪಿಸುವದೆಂಬ ಅನವಸ್ಥಾದೋಷವು ಬರುತ್ತದೆ (೧೭–೫೬). ಆತ್ಮನು ಯಾವ ಅನುಭವಕ್ಕೂ ಕರ್ಮವಾಗುವಂತಿಲ್ಲ (೧೨–೧೨, ೧೬–೧೦) ; ಅವನು ಅನುಭವಸ್ವರೂಪನೇ ಆಗಿರುತ್ತಾನೆ (೧೨–೯, ೧೫–೫೦, ೧೬–೩, ೧೭–೪೧, ೧೮–೧೦೧). ಈ ಕಾರಣಗಳಿಂದ ವಾಕ್ಯಾರ್ಥಜ್ಞಾನವಾದ ಬಳಿಕ ಅನುಭವಕ್ಕಾಗಿ ಕರ್ತವ್ಯ ಉಳಿದಿರುತ್ತದೆ ಎಂಬುದು ತಪ್ಪು, ಅಂಥ ಅನುಭವವೇ ಇಲ್ಲ (೧೨–೮ ೧೮–೨೧೦) ನೀನು ನಿತ್ಯಮುಕ್ತನಾಗಿರುವ ಬ್ರಹ್ಮವೇ ಎಂದು ಹೇಳುವ ವಾಕ್ಯಗಳು ನಿನಗೆ ಶ್ರವಣಾದಿಕರ್ತವ್ಯವಿದೆ ಎಂದು ಹೇಳುತ್ತದೆ ಎನ್ನುವದು ವಾಕ್ಯಕ್ಕೇ ಅಪ್ರಾಮಾಣ್ಯವನ್ನು ತಂದಂತೆ ಆಗುವದು. (೧೮–೧೯೬) ; ಇನ್ನು ಮುಂದೆ ನೀನು ಮುಕ್ತನಾಗುವೆ ಎಂದು ಈ ವಾಕ್ಯವನ್ನು ತಿರಿಚಿ ಅರ್ಥಮಾಡಿದ

ರೂ ಮೋಕ್ಷವು ಅನಿತ್ಯವೆಂದಾಗುವದು (೧೮–೧೯೭). ವಾಕ್ಯಜನ್ಯಜ್ಞಾನವು ಪ್ರತ್ಯಕ್ಷಾದಿಗಳಿಗೆ ವಿರುದ್ಧವೆಂದೂ ಪ್ರತ್ಯಕ್ಷಾದಿಜನ್ಯಜ್ಞಾನದಿಂದ ಅದು ಬಾಧಿತವಾಗುವದೆಂದೂ ಹೇಳುವ ಪ್ರಸಂಖ್ಯಾನವಾದಿಗಳ ಮತವು ಸರಿಯಲ್ಲ. ಏಕೆಂದರೆ 'ಕೃಷ್ಣಲಗಳನ್ನು ಜೇಯಿಸಬೇಕು' ಎಂಬ ವೇದವಾಕ್ಯಜ್ಞಾನದಂತೆ ಈ ವಾಕ್ಯಜ್ಞಾನವು ನಿರೂಪಿತಪ್ರತ್ಯಕ್ಷಕ್ಕೆ ವಿರುದ್ಧವಲ್ಲ, ಪ್ರತ್ಯಕ್ಷಾದಿಜ್ಞಾನವು ಆಭಾಸಮಾತ್ರವಾಗಿರುವದರಿಂದ ಅದೇ ಈ ಜ್ಞಾನದಿಂದ ಬಾಧಿತವಾಗುವದು (೨–೨, ೩ ; ೧೮–೧೭೭, ೧೮೬, ೨೦೫ರಿಂದ ೨೦೮) ಆತ್ಮನಿಗೆ ಆಗಿರುವ ಸಂಸಾರಿತ್ವವು ಅಧ್ಯಾಸಮಾತ್ರವಾಗಿರುವದರಿಂದ 'ನೇತಿನೇತಿ','ತತ್ತ್ವಮಸಿ' ಮುಂತಾದ ವಾಕ್ಯಗಳಿಂದ ಬಾಧಿತವಾಗುತ್ತದೆ ; ಮತ್ತೆ ಅಧ್ಯಾಸವನ್ನು ಮಾಡಿಕೊಳ್ಳೆಂದು ವಾಕ್ಯವು ವಿಧಿಸುತ್ತದೆ ಎಂದು ಕಲ್ಪಿಸುವದು ಸರ್ವಥಾ ಸರಿಯಲ್ಲ (೩–೨ರಿಂದ ೩ ; ೧೮–೧೯ರಿಂದ ೨೩) ಎಂದು ಇಲ್ಲಿ ವಾಕ್ಯಜ್ಞಾನದ ಪ್ರಾಬಲ್ಯವನ್ನೂ ಅದಕ್ಕಿಂತ ವ್ಯತಿರಿಕ್ತವಾದ ಆತ್ಮಾನುಭವದ ಅಭಾವವನ್ನೂ ಪ್ರತಿಪಾದಿಸಿರುತ್ತದೆ. ಆತ್ಮಸ್ವರೂಪದಲ್ಲಿ ವಿಕ್ಷೇಪವಿಲ್ಲವ್ವರಿಂದ ವಾಕ್ಯಜ್ಞಾನವಾದಬಳಿಕ ಸಮಾಧಿಯೂ ಅವಶ್ಯವಿಲ್ಲವೆಂದು ಸ್ಪಷ್ಟವಾಗಿ ಹೇಳಿದೆ (೧೩–೧೪, ೧೭ ; ೧೪–೩೫).

## ಸಾಕ್ಷ್ಯಹಂಕಾರಗಳ ವಿಂಗಡ

ಸಾಕ್ಷ್ಯವಾದ ಅಹಂಕಾರದಿಂದ ಸಾಕ್ಷಿಯಾದ ಆತ್ಮನನ್ನು ವಿಂಗಡಿಸುವದಕ್ಕಾಗಿ ಚಿದಾಭಾಸನಿರೂಪಣವನ್ನು ಈ ಗ್ರಂಥದಲ್ಲಿರುವಷ್ಟು ವಿಸ್ತಾರವಾಗಿ ಆಚಾರ್ಯರ ಮತ್ತೆ ಯಾವ ಗ್ರಂಥದಲ್ಲಿಯೂ ಮಾಡಿರುವದು ಕಂಡುಬರುವದಿಲ್ಲ. ಶ್ರುತಿಯಲ್ಲಿ ಹೇಳಿರುವ ಗಾಂಧಾರದೇಶದವನಂತೆ ಆತ್ಮನಲ್ಲಿ ಅಧ್ಯಸ್ತನಾದ ಇದಂವನನ್ನು ನೇತಿನೇತಿವಾಕ್ಯದಿಂದ ಅಲ್ಲಗಳೆದು ದಾಟಿ ಸ್ವಯಂಸಿದ್ಧನಾದ ಆತ್ಮನನ್ನು ಪಡೆದುಕೊಳ್ಳಬೇಕು (೨–೧ರಿಂದ ೪). ಅಹಂಕಾರವು ಆತ್ಮಚೈತನ್ಯದಿಂದ ಬೆಳಗುವದು, ಚೈತನ್ಯಾರ್ಥವಾಗಿರುವದು – ಎಂದು ಅದರಲ್ಲಿರುವ ಇದಮಂಶವನ್ನು ಕಳೆದು ಆತ್ಮನನ್ನು ಅರಿತುಕೊಳ್ಳಬೇಕು (೫–೫, ೬೬). ಆತ್ಮನು ಬುದ್ಧಿಪ್ರತ್ಯಯಗತವಾಗಿರುವದೆಲ್ಲವನ್ನೂ ತನ್ನಲ್ಲಿ ಯಾವ ವಿಕಾರವೂ ಇಲ್ಲದೆ ನೋಡುತ್ತಿರುತ್ತಾನೆ ; ಬುದ್ಧಿಯಂತೆ ತನ್ನ ವಿಷಯದ ಆಕಾರವಾಗಿ ಪರಿಣಮಿಸಿ ನೋಡುವದಿಲ್ಲ (೭–೧ರಿಂದ ೩, ೧೧–೩, ೧೪–೪೩ ೧೬–೫, ೧೭–೬೫, ೧೭–೩೭) ಆತ್ಮನು ಎಲ್ಲಾ ಬುದ್ಧಿಗಳನ್ನೂ ಕೂಟಸ್ಥನಾಗಿದ್ದು ನೋಡುತ್ತಿರುವದರಿಂದ ಸರ್ವಜ್ಞನೂ ಎಲ್ಲರ ಆತ್ಮನೂ ಆಗಿರುತ್ತಾನೆ (೭-೨, ೧೪-೭, ೧೫-೧೭). ದೃಶ್ಯವಾಗಿರುವ ಅಂತಃಕರಣದ ಪ್ರತ್ಯಯವನ್ನೂ ದೃಗ್ರೂಪನಾದ ಆತ್ಮನನ್ನೂ ವಿಂಗಡಿಸಿಕೊಳ್ಳದೆ ಇರುವದರಿಂದ ಆತ್ಮಚೈತನ್ಯವೂ ಅನಿತ್ಯವೆಂದೂ ಅವಿಶುದ್ಧ

ವೆಂದೂ ಭ್ರಾಂತಿಯುಂಟಾಗಿರುತ್ತದೆ (೧೩-೯). ಆತ್ಮನು ಜ್ಞಾತೃವೆಂದರೆ ಜ್ಞಾನಕರ್ತೃವೆಂದು ಅರ್ಥವಲ್ಲ, ಸೂರ್ಯನಂತೆ ಜ್ಞಾನಪ್ರಕಾಶರೂಪನೇ ಅವನು (೧೫-೪೭ಟಿ) – ಎಂದು ಈ ಗ್ರಂಥದಲ್ಲಿ ಕೂಟಸ್ಥಚೈತನ್ಯರೂಪನಾದ ಆತ್ಮನನ್ನೂ ಆ ಚೈತನ್ಯದಿಂದ ಬೆಳಗುವ ವಿಕಾರಿಯಾದ ಅಹಂಕಾರವನ್ನೂ ಅಲ್ಲಲ್ಲಿ ವಿಂಗಡಿಸಿ ಹೇಳಿರುತ್ತದೆ.

ಈ ಸಾಕ್ಷ್ಯಹಂಕಾರಗಳನ್ನು ಜನರು ವಿಂಗಡಿಸಿ ಅರಿತುಕೊಳ್ಳದೆ ಇವೆರಡನ್ನೂ ಒಂದೆಂದು ತಿಳಿದಿರುವದಕ್ಕೆ ಕಾರಣವೇನು ? – ಎಂದರೆ ಅಹಂಕಾರವು ಚಿದಾಭಾಸಯುಕ್ತವಾಗಿರುವದೇ ಇದಕ್ಕೆ ಮುಖ್ಯಕಾರಣವು. ವ್ಯಾಪಕವಾದ ಚಿತ್ತನ್ನೂ ವ್ಯಾಪ್ಯವಾದ ಚಿದಾಭಾಸಯುಕ್ತವಾದ ಅಹಂಕಾರವನ್ನೂ ವಿಂಗಡಿಸಿ ತಿಳಿಸುವದೇ ಶಾಸ್ತ್ರದ ಕೃತ್ಯವು ಎಂಬುದನ್ನು ಈ ಗ್ರಂಥದಲ್ಲಿ ಮತ್ತೆಮತ್ತೆ ತಿಳಿಸಿರುತ್ತದೆ. ಚೈತನ್ಯಪ್ರತಿಬಿಂಬದಿಂದ ವ್ಯಾಪ್ತವಾಗಿ ಬುದ್ಧಿಯ ಪ್ರತ್ಯಯವು ಉಂಟಾಗುತ್ತದೆ ; ಆದ್ದರಿಂದ ಜನರು ಭ್ರಾಂತರಾಗಿರುತ್ತಾರೆ (೫-೪). ಬೆಳಕಿನಲ್ಲಿರುವ ದೇಹವನ್ನೇ ದೇಹವೆಂದು ವ್ಯವಹರಿಸುವಂತೆ ದ್ರಷ್ಟ್ರಾಭಾಸವಾಗಿರುವ ಚಿತ್ತವನ್ನು ದ್ರಷ್ಟೃವೆಂದೇ ತಪ್ಪಾಗಿ ವ್ಯವಹರಿಸುತ್ತಾರೆ (೧೨-೧, ೧೨-೬). ನಾನು ಜ್ಞಾತೃವು, ಜ್ಞೇಯನಲ್ಲ –ಎಂಬ ವಿವೇಕಿಪ್ರತ್ಯಯವುಕೂಡ ದೃಶ್ಯವು, ವಿನಾಶಿಯು ; ಅದನ್ನು ನೋಡುತ್ತಿರುವ ಆತ್ಮನ ದೃಷ್ಟಿಯಾದ ಚೈತನ್ಯವು ಪ್ರತ್ಯಯದಂತೆ ಹುಟ್ಟತಕ್ಕದ್ದಲ್ಲ (೧೨-೧೫). ಆತ್ಮನು ಚೈತನ್ಯಸ್ವರೂಪನೇ ಆಗಿರುತ್ತಾನೆ ; ಅವನ ಸನ್ನಿಧಿಯಲ್ಲಿ ಅಹಂಕಾರವು ಚೈತನ್ಯದಂತೆ ತೋರುತ್ತಿರುತ್ತದೆ (೧೮-೨೭). ಆಭಾಸಯುಕ್ತವಾದ ಶಬ್ದಪ್ರವೃತ್ತಿನಿಮಿತ್ತವುಳ್ಳ ಅಹಂಕಾರಕ್ಕೇ ಶಬ್ದಾದಿಗಳು ವಾಚಕಗಳಾಗಿದ್ದು ಚೈತನ್ಯವನ್ನು ಲಕ್ಷಣೆಯಿಂದ ತಿಳಿಸುತ್ತವೆ (೧೮-೨೯, ೩೦). ಮುಖ, ಕನ್ನಡಿ – ಇವುಗಳ ಸಂಬಂಧದಿಂದ ಕನ್ನಡಿಯಲ್ಲಿ ತೋರುವ ಮುಖಾಭಾಸದಂತೆ ಚಿದಾಭಾಸವು ಅಹಂಕಾರದಲ್ಲಿ ತೋರುತ್ತದೆ (೧೮-೩೧, ೩೨). ಚೈತನ್ಯವು ಅವಿಕಾರಿಯಾದ್ದರಿಂದಲೂ ಆಭಾಸವು ಅಸತ್ಯವಾದ್ದರಿಂದಲೂ ಅಹಂಕಾರವು ಅಚೇತನವಾಗಿರುವದರಿಂದಲೂ ಸಂಸಾರವು ನಿಜವಾಗಿ ಯಾರಿಗೂ ಇಲ್ಲ ; ಅದು ಅವಿದ್ಯಾಮಾತ್ರವೇ (೧೮-೪೨, ೪೩). ಆತ್ಮನು ಅರಿಯುತ್ತಾನೆ ಎಂದು ·ತಿಳಿಯುವಾಗ ಕ್ರಿಯಾವಿಭಕ್ತಿಗೆ ವಾಚ್ಯವು ಆಭಾಸವು, ಧಾತ್ವರ್ಥವು ಬುದ್ಧಿಯ ಪ್ರತ್ಯಯವು ; ಆತ್ಮನು ಚೈತನ್ಯಸ್ವರೂಪವು. ಇವನ್ನು ವಿಂಗಡಿಸಿಕೊಳ್ಳಲಾರದೆ ಅರಿಯುತ್ತಾನೆ ಎಂಬ ಪ್ರಯೋಗವಾಗುತ್ತದೆ (೧೮-೫೧, ೫೨). ಜ್ಞಾನವು ಉಂಟಾಗುವದೆಂದು ತಾರ್ಕಿಕರು ತಿಳಿಯುವದೂ ಪ್ರತ್ಯಯಗಳು ತಾವುತಾವೇ ಅರಿಯುವವೆಂದು

ಬೌದ್ಧರು ಭ್ರಾಂತರಾಗಿರುವದೂ ಆಭಾಸವನ್ನು ತಿಳಿಯದ್ದರಿಂದಲೇ (೧೮-೬೩, ೬೯).

ಆಭಾಸವನ್ನು ಒಪ್ಪದಿದ್ದರೆ ವಾಕ್ಯೋಪದೇಶವು ಯಾರಿಗೆಂಬುದೇ ಸಿದ್ಧವಾಗುವದಿಲ್ಲ (೧೮-೭೬), ಸಾಕ್ಷಿಸಾಕ್ಷ್ಯವಾದ ಆತ್ಮಾಹಂಕಾರಗಳಿಗೆ ಸಂಬಂಧವೂ ಸಿದ್ಧವಾಗುವದಿಲ್ಲ (೧೮-೭೭). ಆಭಾಸವನ್ನೊಪ್ಪಿದರೆ ದ್ರಷ್ಟೃದೃಶ್ಯತ್ವ ಸಂಬಂಧವು ಆಧ್ಯಾಸಿಕವೆಂದು ಸಿದ್ಧವಾಗುವದು (೧೮-೮೦, ೧೮-೧೫೦); ಚೈತನ್ಯಕ್ಕೇ ವಾಕ್ಯಾರ್ಥಜ್ಞಾನವೆಂಬ ಫಲವೆಂದೂ ಸಿದ್ಧವಾಗುತ್ತದೆ (೧೮-೧೦೪, ೧೦೫, ೧೫೫ರಿಂದ ೧೫೭); ಸಾಕ್ಷಿಯೇ ಅವಿವೇಕದಿಂದ ಶ್ರೋತೃವಾಗಿರುವದೆಂದೂ ಆಗುತ್ತದೆ (೧೮-೧೦೮). ಶಿಷ್ಯಬೋಧನೆಗೆ ಆಭಾಸಯುಕ್ತವಾದ ಜ್ಞಾನರೂಪಪ್ರತ್ಯಯವು ಪ್ರಮಾಣವೆಂದೂ ಏರ್ಪಡುತ್ತದೆ (೧೮-೧೨೧ರಿಂದ ೧೩೫). ಆತ್ಮನಿಗೆ ಆಧ್ಯಾಸಿಕದುಃಖವೆಂದೂ ಸಿದ್ಧವಾಗುತ್ತದೆ (೧೮-೧೫೦ರಿಂದ ೧೬೪). ಶ್ರುತಿಯಲ್ಲಿ ಆಭಾಸವನ್ನು ಹೇಳಿದೆ; ಆಭಾಸವು ಯುಕ್ತಿಸಿದ್ಧವೂ ಆಗಿದೆ; ಆತ್ಮನೂ ಆಭಾಸವೂ ಬೇರೆಬೇರೆಯಾಗಿ ಸ್ವಪ್ನದಲ್ಲಿ ಅನುಭವದಲ್ಲಿಯೂ ತೋರುತ್ತವೆ (೧೮-೧೧೦, ೧೧೨ರಿಂದ ೧೧೭) ಎಂಬುದು ಚಿದಾಭಾಸ ನಿರೂಪಣದ ಸಾರವು.

## ಅವಸ್ಥಾತ್ರಯ

ಆಭಾಸವಿಚಾರಕ್ಕೆ ಎರಡನೆಯದಾಗಿದ್ದರೂ ಅವಸ್ಥಾತ್ರಯನಿರೂಪಣೆಗೂ ಈ ಗ್ರಂಥದಲ್ಲಿ ಒಂದು ಮುಖ್ಯಸ್ಥಾನವಿದೆ. ಅವಸ್ಥಾತ್ರಯದಲ್ಲಿ ಆತ್ಮನಿಗೆ ಸಂಬಂಧಪಟ್ಟದ್ದು ಯಾವದೂ ಇರುವದಿಲ್ಲ; ದೃಶ್ಯಗಳು ತಮ್ಮ ದೃಷ್ಟಿಯಿಂದಲೂ ಆತ್ಮದೃಷ್ಟಿಯಿಂದಲೂ ಅಸತ್ತೇ ಆಗಿರುತ್ತವೆ (೧೧-೪). ಸುಷುಪ್ತಿಯಲ್ಲಿ ಏನನ್ನೂ ಕಾಣದಿರುವಂತೆ ಎಚ್ಚರದಲ್ಲಿ ದ್ವಿತೀಯವಸ್ತುವನ್ನು ಕಂಡರೂ ಕಾಣದೆ ಇರುವವನೂ, ಸುಷುಪ್ತಿಯಲ್ಲಿ ಏನನ್ನೂ ಮಾಡದಿರುವಂತೆ ಎಚ್ಚರದಲ್ಲಿ ಮಾಡುತ್ತಿದ್ದರೂ ಮಾಡದೆ ಇರುವವನೂ, ಆತ್ಮಜ್ಞನು (೧೦-೧೩). ಕನಸು ಎಚ್ಚರವಾಗುವವರೆಗೆ ಸತ್ಯವಾಗಿರುವಂತೆ ಆತ್ಮಜ್ಞಾನವಾಗುವವರೆಗೂ ದೇಹಾತ್ಮಭಾವವು ಸತ್ಯವಾಗಿರುವದು, ಪ್ರತ್ಯಕ್ಷಾದಿಗಳೂ ಪ್ರಮಾಣವಾಗಿರುವವು (೧೧-೫). ಆತ್ಮನು ಅವಸ್ಥಾತ್ರಯಸಾಕ್ಷಿಯು (೧೫-೨೧ರಿಂದ ೨೬, ೩೩ರಿಂದ ೩೪). ಎಚ್ಚರಕನಸುಗಳಿಗೆ ಬೀಜವಾದ ಸುಷುಪ್ತಿ ಎಂಬ ಅಜ್ಞಾನವನ್ನು ಆತ್ಮಜ್ಞಾನದಿಂದ ಸುಟ್ಟುಹಾಕಿದರೆ ಹುಟ್ಟಿಲ್ಲವಾಗುತ್ತದೆ (೧೭-೨೬). ಆ ಒಂದೇ ಬೀಜವು ಮೂರು ಬಗೆಯಾಗಿರುವದು; ಆತ್ಮನೂ ಆ ಉಪಾಧಿಗಳಿಂದ ಮೂರು ಬಗೆಯಾಗಿ ತೋರುತ್ತಿರುವನು; ಆದರೆ ಜ್ಞಾನದೃಷ್ಟಿಯಿಂದ ಆ

ಮಾಯಾಬೀಜವಾಗಲಿ ಮಾಯಾವಿಯಾಗಲಿ ಇರುವದೇ ಇಲ್ಲ (೧೭-೨೭ರಿಂದ ೩೧). ಜಾಗ್ರತ್ತನ್ನು ಸ್ವಪ್ನದಲ್ಲಿಯೂ ಸ್ವಪ್ನವನ್ನು ಸುಷುಪ್ತಿಯಲ್ಲಿಯೂ ಲಯ ಮಾಡಿ ಆ ಬಳಿಕ ಆತ್ಮಜ್ಞಾನದ ಕಣ್ಣನ್ನು ತೆರೆದರೆ ಬ್ರಹ್ಮಪ್ರಾಪ್ತಿಯಾಗುವದು (೧೭-೫೭, ೫೮). ಸುಷುಪ್ತಿಯಲ್ಲಿ ಏನನ್ನೂ ಸ್ವಲ್ಪವೂ ಅರಿಯಲಿಲ್ಲ ಎಂಬ ನೆನಪಿನಲ್ಲಿ ತನ್ನ ಸ್ವರೂಪವಾದ ದೃಷ್ಟಿಯನ್ನೂ ಇಲ್ಲವೆನ್ನುವದಿಲ್ಲ, ಪ್ರತ್ಯಯವು ಇರಲಿಲ್ಲವೆಂದು ಗೊತ್ತಾಗುತ್ತದೆ; ಶ್ರುತಿಯಲ್ಲಿ ಹೀಗೆಂದೇ ಹೇಳಿರುತ್ತದೆ (೧೮-೯೪, ೯೫). ಕನಸಿನಲ್ಲಿ ಸಾಕ್ಷಿಯೂ ಪ್ರತ್ಯಯವೂ ಬೇರೆಬೇರೆಯಾಗಿರುತ್ತವೆ (೧೮-೧೧೪).

ಈ ಮೇಲಿನ ವಾಕ್ಯಗಳನ್ನು ಮನದಂದರೆ ಅವಸ್ಥಾತ್ರಯನಿರೂಪಣದಿಂದ ಈ ಗ್ರಂಥದಲ್ಲಿ ಎಂಥ ಅಮೂಲ್ಯಸಿದ್ಧಾಂತವನ್ನು ತೆಗೆದಿದೆ ಎಂಬುದು ಸ್ಪಷ್ಟವಾಗುತ್ತದೆ.

## ಜ್ಞಾನಕರ್ಮಗಳ ಸಂಬಂಧ

ಅಜ್ಞಾನವೇ ಕರ್ಮಕ್ಕೂ ಸಂಸಾರಕ್ಕೂ ಮೂಲವಾಗಿರುವದರಿಂದ ಜ್ಞಾನದಿಂದ ಅಜ್ಞಾನದ ನಾಶವಾದಬಳಿಕ ಮತ್ತೆ ಕರ್ಮವು ಎದ್ದುಕೊಳ್ಳುವ ಹಾಗಿಲ್ಲ. ಜ್ಞಾನವು ಮತ್ತೆ ಯಾವ ಸಹಾಯವನ್ನೂ ಬಯಸದೆ ಅಜ್ಞಾನವನ್ನು ನಾಶಮಾಡಿ ಮೋಕ್ಷವನ್ನು ಕೊಟ್ಟುಬಿಡುವದು. ಮೋಕ್ಷವು ನಿತ್ಯಸಿದ್ಧವಾದ್ದರಿಂದ ಅದನ್ನು ವಾಕ್ಯವು ತಿಳಿಸಿದಮೇಲೆ ಮಾಡಬೇಕಾದ ಕರ್ಮವು ಯಾವದೂ ಉಳಿದಿರುವದಿಲ್ಲ. ವ್ಯವಹಾರದೃಷ್ಟಿಯಿಂದ ಪ್ರಾರಬ್ಧಕರ್ಮವು ಫಲವನ್ನು ಕೊಡುತ್ತಿದ್ದರೂ ಅಜ್ಞಾನವನ್ನು ಬಾಧಿಸುವ ಜ್ಞಾನಕ್ಕೆ ಅದು ವಿರುದ್ಧವಲ್ಲ (೧, ೪, ೧೧, ೧೮) ಎಂದು ಈ ಗ್ರಂಥದಲ್ಲಿ ಪ್ರತಿಪಾದಿಸಿರುತ್ತದೆ. ಕರ್ಮವೂ ಜ್ಞಾನಕ್ಕೆ ಸಹಾಯವಾಗಿರಬೇಕು- ಎಂಬ ಸಮುಚ್ಚಯವಾದದಲ್ಲಿ ಜ್ಞಾನವೆಂದರೆ ಉಪಾಸನೆಯು; ಸಿದ್ಧಾಂತದಲ್ಲಿ ಜ್ಞಾನವೆಂದರೆ ನಿರ್ವಿಶೇಷನಾದ ಆತ್ಮನಲ್ಲಿ ಅಧ್ಯಾಸವಾಗಿರುವ ಸಂಸಾರಿತ್ವವನ್ನು ನೇತಿನೇತಿ ಎಂದು ಅಲ್ಲಗಳೆಯುವದರಿಂದಾಗುವ ಜ್ಞಾನವು. ಈ ವಿಷಯವನ್ನು ಉಪೋದ್ಘಾತಪ್ರಕರಣದಲ್ಲಿಯೇ ಸ್ಪಷ್ಟಪಡಿಸಿರುತ್ತದೆ.

ಬಂಧಮೋಕ್ಷವ್ಯವಹಾರವು ಕೂಡ ಆವಿದ್ಯಕವಾಗಿರುವದರಿಂದ (೧೫-೪೯) ನಿಜವಾಗಿ ಮೋಕ್ಷವು ಹೊಸದಾಗಿ ಆಗಬೇಕೆನ್ನುವವರ ಮತವು ಶ್ರುತಿಯುಕ್ತಿಗಳಿಗೆ ವಿರುದ್ಧ ಎಂಬುದನ್ನು- ಜೈನಮತ, (೧೭-೨೨) ವಿಜ್ಞಾನವಾದ, ಶೂನ್ಯವಾದ (೧೬-೨೩ರಿಂದ ૩೮), ಮೋಕ್ಷವು ಅವಸ್ಥಾಂತರ, ದುಃಖವಿಯೋಗ, ಆನಂದದ ಸಂಯೋಗ ಎಂಬ ವಾದಗಳ (೧೬-೩೯, ೪೦) ಸಾಂಖ್ಯ

ವೈಶೇಷಿಕರ ಮತಗಳು (೧೬-೪೫ರಿಂದ ೫೦, ೧೬-೫೧ರಿಂದ ೫೭ರ್ತ್ತಿ) ಇವುಗಳ ಖಂಡನೆಯ ಮೂಲಕ – ತಿಳಿಸಿ ಅಂತಃಕರಣದಲ್ಲಿರುವ ಅನಾದಿಭ್ರಾಂತಿಯೇ ಬಂಧವು, ಅದರ ನಾಶವೇ ಮೋಕ್ಷವು (೧೬-೫೮ರಿಂದ ೬೧ರ್ತ್ತಿ) ಎಂದು ಇಲ್ಲಿ ಸಿದ್ಧಪಡಿಸಿರುತ್ತದೆ.

ಹೀಗೆ ಜ್ಞಾನಕರ್ಮಸಮುಚ್ಚಯವನ್ನು ಖಂಡಿಸಿದ್ದರೂ ಕರ್ಮಕ್ಕೆ ಚಿತ್ತಶುದ್ಧಿಯು ಪ್ರಯೋಜನವಾಗಿರುವದರಿಂದ ಅವಶ್ಯವಾಗಿ ಮುಮುಕ್ಷುವು ಅವನ್ನು ಜ್ಞಾನಕ್ಕೆ ಪೂರ್ವದಲ್ಲಿ ಮಾಡಲೇ ಬೇಕು (೧೭-೩೨ರಿಂದ ೩೪) ಎಂದು ಸ್ಪಷ್ಟವಾಗಿ ಇಲ್ಲಿ ಹೇಳಿರುತ್ತದೆ.

## ಉಪಸಂಹಾರ

ಶಾಸ್ತ್ರದ ಒಂದು ಭಾಗವನ್ನು ತೆಗೆದುಕೊಂಡು ಶಾಸ್ತ್ರದಿಂದ ಆಗದೆ ಇರುವ ಕಾರ್ಯವನ್ನು ಮಾಡಿಕೊಡುವ ಗ್ರಂಥವಿಶೇಷಕ್ಕೆ **ಪ್ರಕರಣ**ವೆಂದು ಹೆಸರು. ಪ್ರಕೃತವಾದ ಉಪದೇಶಸಾಹಸ್ರಿಯಲ್ಲಿ ವೇದಾಂತದ ಅತ್ಯಂತಮುಖ್ಯಭಾಗವಾದ ಆತ್ಮಜ್ಞಾನದ ಸ್ವರೂಪವನ್ನೂ ಅದಕ್ಕೆ ಸಾಧನವನ್ನೂ ಫಲವನ್ನೂ ಚಿದಾಭಾಸಸಹಿತಾಹಂಕಾರದಿಂದ ಸಾಕ್ಷಿಯನ್ನು ವಿಂಗಡಿಸಿಕೊಡುವ ಮೂಲಕವೂ 'ತತ್ತ್ವಮಸಿ', 'ನೇತಿನೇತಿ'– ಮುಂತಾದ ವೇದಾಂತಮಹಾವಾಕ್ಯಗಳ ನಿರೂಪಣೆಯ ಮೂಲಕವೂ ತಿಳಿಸಿಕೊಡುವದರಿಂದ ಇದೊಂದು ಅಮೋಘ ವೇದಾಂತಪ್ರಕರಣವೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ಗ್ರಂಥದಲ್ಲಿರುವ ವಿಚಾರಸರಣಿಯು ಭಾಷ್ಯಗ್ರಂಥಗಳ ಪ್ರೌಢಸರಣಿಯನ್ನೇ ಹೋಲುತ್ತದೆ ; ಭಾಷ್ಯಗಳ ಸಾರವನ್ನೇ ಇಲ್ಲಿ ಹಿಂಡಿಟ್ಟಿರುತ್ತದೆ ಎಂದರೂ ಸಲ್ಲುವಂತೆ ಇದೆ. ಇಲ್ಲಿ ಕೊಟ್ಟಿರುವ ಯುಕ್ತಿಗಳು ಕೆಲವು ಅನಿತರಸಾಧಾರಣವಾಗಿವೆ. ಸುಪ್ರಸಿದ್ಧವಾದ ದಶೋಪನಿಷತ್ತುಗಳು ಮತ್ತು ಭಗವದ್ಗೀತೆ – ಇವುಗಳಿಂದಲೇ ಇಲ್ಲಿ ಪ್ರಮಾಣವಚನಗಳನ್ನು ಉದಾಹರಿಸಿರುತ್ತದೆ. ಈ ಎಲ್ಲಾ ಕಾರಣಗಳಿಂದ ಈ ಗ್ರಂಥವು ಶ್ರೀ ಶಂಕರಾಚಾರ್ಯರ ಉಚ್ಚತರಗತಿಯ ಗ್ರಂಥಗಳ ಸಾಲಿಗೆ ಸೇರುವದಕ್ಕೆ ಎಲ್ಲಾ ಬಗೆಯಿಂದಲೂ ಅರ್ಹವಾಗಿರುತ್ತದೆ. ನಮ್ಮ ದೇಶದ ಜಿಜ್ಞಾಸುಗಳು ಈ ಕನ್ನಡದ ಅನುವಾದದಿಂದ ಗ್ರಂಥದ ಮಹಿಮೆಯನ್ನು ಮನವರಿಕೆಮಾಡಿಕೊಂಡು ಇದರ ಶ್ರವಣಮನನನಿದಿಧ್ಯಾಸನಗಳಿಂದ ಕೃತಾರ್ಥರಾಗುವಂತೆ ಅನುಗ್ರಹಿಸಬೇಕೆಂದು ಆ ಜಗದ್ಗುರುಗಳನ್ನು ಪ್ರಾರ್ಥಿಸಿ ಈ ಪೀಠಿಕೆಯನ್ನು ಇಲ್ಲಿಗೆ ಉಪಸಂಹಾರಮಾಡುವೆವು.

| | |
|---|---|
| ಅಧ್ಯಾತ್ಮಪ್ರಕಾಶ ಕಾರ್ಯಾಲಯ,<br>ವಿರೋಧಿ ಸಂವತ್ಸರದ ಆಶ್ವಿನ ಬ. ೩ | **ಅನುವಾದಕ** |

# ವಿಷಯಾನುಕ್ರಮಣಿಕೆ



ಇಲ್ಲಿ ಕಂಸದಲ್ಲಿ ಕೊಟ್ಟಿರುವದು ಶ್ಲೋಕಗಳ ಸಂಖ್ಯೆ

ಚಿತಿಮತಿಸಂವಾದಪ್ರಕರಣದ ಸಾರ ಪುಟ ೩೦

## ೯. ಸೂಕ್ಷ್ಮತಾವ್ಯಾಪಿತಾಪ್ರಕರಣ

ಆತ್ಮನು ಪರಮಸೂಕ್ಷ್ಮನು, ಸರ್ವವ್ಯಾಪಿಯು (೧–೩)– ಆತ್ಮನು ಏಕನು, ಅಸಂಗನು (೪–೬)– ಆತ್ಮನು ಅದ್ವಿತೀಯನು (೭–೯). ಪುಟ ೩೧–೩೪

ಸೂಕ್ಷ್ಮತಾವ್ಯಾಪಿತಾಪ್ರಕರಣದ ಸಾರ ಪುಟ ೩೫

## ೧೦. ಪರಮಾರ್ಥದರ್ಶನ

### (ದೃಶಿಸ್ವರೂಪಪರಮಾರ್ಥದರ್ಶನಪ್ರಕರಣ)

ಆತ್ಮನು ಅದ್ವಿತೀಯಚಿನ್ಮಾತ್ರನು (೧–೩)– ಆತ್ಮನು ನಿತ್ಯನಿರವದ್ಯನು (೪–೫)– ಆತ್ಮನು ನಿರ್ವಿಕಾರನು (೬–೭)– ಆತ್ಮನು ಪುರುಷೋತ್ತಮನು (೮)– ಆತ್ಮನು ಅವಿದ್ಯಾಕಾಮಕರ್ಮರಹಿತನು (೯–೧೦)– ಆತ್ಮನು ನಿರ್ವಿಕಲ್ಪನು, ಅಕರ್ತೃ, ನಿಷ್ಪ್ರಪಂಚನು (೧೧–೧೩)– ಪರಮಾರ್ಥದರ್ಶನದ ಫಲ (೧೪) ಪುಟ ೩೬–೪೨

ಪರಮಾರ್ಥದರ್ಶನಪ್ರಕರಣದ ಸಾರ ಪುಟ ೪೩

## ೧೧. ಈಕ್ಷಿತೃತ್ವ

ಶುದ್ಧಚೈತನ್ಯರೂಪವು ಜೀವನಿಗೆ ಸ್ವತಃಸಿದ್ಧ (೧–೨)– ಜೀವನು ಚಿನ್ಮಾತ್ರನೆಂಬುದು ಹೇಗೆ? (೩–೪) ಪ್ರತ್ಯಕ್ಷಾದಿಗಳಿಂದ ತೋರುವ ಜೀವತ್ವವು ವ್ಯಾವಹಾರಿಕವು (೫–೭)– ಜೀವತ್ವವು ಪಾರಮಾರ್ಥಿಕವಲ್ಲ (೮)– ಅದ್ವೈತಜ್ಞಾನವು ಶಾಸ್ತ್ರಸಿದ್ಧ (೯)– ಅಕರ್ಮಸಂಬಂಧಿಯಾದ ಆತ್ಮನ ಸಿದ್ಧಿ (೧೦–೧೩)– ಆತ್ಮನಿಗೆ ಕರ್ಮವಿಲ್ಲ (೧೪) ಕರ್ಮವು ಮೋಕ್ಷಕ್ಕೆ ಹೇತುವಲ್ಲ (೧೫–೧೬). ಪುಟ ೪೪–೪೯

ಈಕ್ಷಿತೃತ್ವಪ್ರಕರಣದ ಸಾರ ಪುಟ ೫೦

## ೧೨. ದೃಗ್ದೃಶ್ಯವಿವೇಕ

### (ಪ್ರಕಾಶಪ್ರಕರಣ)

ಆತ್ಮಜ್ಞಾನಕ್ಕಿರುವ ಅಡ್ಡಿ (೧–೩)– ಅಧ್ಯಾಸವನ್ನು ಕಳೆಯುವ ಜ್ಞಾನ (೪–೯)– ಆತ್ಮನಿಗೆ ದುಃಖಿತ್ವವಿಲ್ಲವೆಂಬುದಕ್ಕೆ ಯುಕ್ತಿ (೧೦–೧೨)– ಉಪಸಂಹಾರ (೧೩–೧೯) ಪುಟ ೫೧–೫೬

## ೧೩. ನಿರ್ವಿಕಲ್ಪಾತ್ಮ
### (ಅಚಕ್ಷುಷ್ಟ್ವಪ್ರಕರಣ)



## ೧೪. ಕೂಟಸ್ಥಾತ್ಮ
### (ಸ್ವಪ್ನಸ್ಮೃತಿಪ್ರಕರಣ)



## ೧೫. ನಿಷ್ಕ್ರಿಯಾತ್ಮಪ್ರಕರಣ
### (ನಾನ್ಯದನ್ಯತ್ಪ್ರಕರಣ)



## ೧೬. ಸ್ವಯಂಜ್ಯೋತಿ
### (ಪಾರ್ಥಿವಪ್ರಕರಣ)

## ೧೭. ಸಮ್ಯಙ್ಮತಿ



## ೧೮. ತತ್ತ್ವಮಸಿ

# ೧೯. ಭೇದಗ್ರಹನಾಶ

## (ಭೇಷಜಯೋಗಪ್ರಕರಣ)





# ಸಂಕೇತಗಳ ವಿವರಣೆ

ಉಪನಿಷತ್ತುಗಳನ್ನು ಮೊದಲನೆಯ ಅಕ್ಷರದಿಂದ ತಿಳಿಸಿದೆ ಉದಾಹರಣೆಗೆ

ಈ.= ಈಶಾವಾಸ್ಯೋಪನಿಷತ್ತು ಛಾಂ.= ಛಾಂದೋಗ್ಯೋಪನಿಷತ್ತು,
ಶ್ವೇ.= ಶ್ವೇತಾಶ್ವತರೋಪನಿಷತ್ತು ಇತ್ಯಾದಿ.

ಭಾ. ಎಂಬಕ್ಷರವನ್ನು ಸೇರಿಸಿದ್ದರೆ ಭಾಷ್ಯವೆಂದರ್ಥ. ಉದಾಹರಣೆಗೆ
ಈ. ಭಾ.= ಈಶಾವಾಸ್ಯೋಪನಿಷದ್ಭಾಷ್ಯ, ಗೀ. ಭಾ.= ಗೀತಾಭಾಷ್ಯ,
ಸೂ. ಭಾ.= ಸೂತ್ರಭಾಷ್ಯ ಇತ್ಯಾದಿ.

ಭಾ. ಭಾ. ಎಂದರೆ ಈ ಗ್ರಂಥರತ್ನಮಾಲೆಯಲ್ಲಿ ಅಚ್ಚಾಗಿರುವ ಪುಸ್ತಕದಲ್ಲಿರುವ ಭಾಷ್ಯ.

ಸುಮ್ಮನೆ ಹಾಕಿರುವ ಸಂಖ್ಯೆಗಳು ಈ ಗ್ರಂಥದ ಪ್ರಕರಣ ಮತ್ತು ಶ್ಲೋಕಗಳನ್ನು ಸೂಚಿಸುವವು.

| ಸಂಕೇತ | ವಿವರಣೆ |
|---|---|
| ಉ. ಸಾ. ಗ<br>ಉ. ಸಾ. ಗದ್ಯ<br>ಉಪ. ಗದ್ಯ | ಈ ಗ್ರಂಥರತ್ನಮಾಲೆಯಲ್ಲಿ ಪ್ರಕಟವಾಗಿರುವ ಉಪದೇಶಸಾಹಸ್ರೀ ಗದ್ಯಪ್ರಬಂಧದ ಖಂಡಗಳು |
| ಗೌ. ಕಾ. | ಗೌಡಪಾದೀಯ ಕಾರಿಕೆ |
| ತೈ. ಸಂ. | ತೈತ್ತಿರೀಯ ಸಂಹಿತೆ |
| ನೈ. ಸಿ. | ನೈಷ್ಕರ್ಮ್ಯಸಿದ್ಧಿ |
| ಬೋ. ಆ. | ಬೋಧನಿಧಿಯ ಮತ್ತು ಆನಂದಜ್ಞಾನಯತಿಯ ಪಾಠ |
| ಬೋ. ನಿ. | ಬೋಧನಿಧಿ |

ಮಿಕ್ಕ ಸಂಕೇತಗಳನ್ನು ಉಪದೇಶಸಾಹಸ್ರಿಯ ಗದ್ಯಪ್ರಬಂಧದಂತೆ ತಿಳಿಯಬೇಕು.

——:o:——

# ತಿ ದ್ದು ಪ ಡಿ

ಸಂಸ್ಕೃತಶ್ಲೋಕಗಳಲ್ಲಿ ಈ ಕೆಳಗಿನ ತಪ್ಪುಗಳನ್ನು ಹೀಗೆ ತಿದ್ದಿಕೊಂಡು ಓದಬೇಕಾಗಿ ಪ್ರಾರ್ಥನೆ:

| ಪುಟ | ಶ್ಲೋಕ | ಇರಬೇಕಾದದ್ದು |
|---|---|---|
| ೧೧ | ೪ | ಇದಂವನಮತಿಕ್ರಮ್ಯ |
| ೧೮ | ೧ | ಆತ್ಮಜ್ಞಾನಾ |
| ೩೧ | ೨ | ಬಾಹ್ಯಾಪ್ರಮಾಣತಃ |
| ೫೫ | ೧೫ | ಆತ್ಮನೋ ದೃಷ್ಟಿ |
| ೬೧ | ೧೧ | ಬಾಹ್ಯಾಭ್ಯನ್ತರಂ |
| ,, | ೧೩ | ಪ್ಯಮುನಾ ಯಸ್ಮಾ |
| ೮೮ | ೧೧ | ಆತ್ಮಾನಂ ಸಮಂ ಸ ಬ್ರಹ್ಮವಿತ್ತಮ |
| ೧೬ | ೧೬ | ಪಿತ್ಯೇಷು |
| ,, | ,, | ದೋಷಾಶ್ಚಾತ್ಮಾಮಲೋ |
| ೯೬ | ೩೮ | ವಿಜಾನೀಯಾತ್ |
| ೧೦೧ | ೫೩ | ಶ್ರುತೇಃ |
| ೧೧೧ | ೨೬ | ಆಧಾರಸ್ಯಾಪ್ಯಸತ್ತ್ವಾಚ್ಚ |
| ೧೨೧ | ೫೬ | ಸ್ಯಾನ್ಮಾಲಾಪರಿಹಾರ್ಯ |
| ,, | ೫೭॥ | ಸೂಕ್ಷ್ಮೈಕಾ |
| ೧೪೦ | ೩೭ | ಹೀತ್ಯತಃ |
| ೧೫೫ | ೮೮ | ದನ್ಯನ್ನ ವಿದ್ಯತೇ |
| ೧೭೭ | ೬೧ | ಆದರ್ಶ |
| ೧೮೩ | ೮೦ | ಯೋವಿಸ್ಫುಲಿಙ್ಗ |
| ೧೮೭ | ೯೧ | ಸಾಹಙ್ಕರ್ತೃ |
| ೧೯೮ | ೧೨೪ | ಚೇತನಸ್ಯಾ |
| ೨೦೭ | ೧೩೫ | ಸಿದ್ಧಿರ್ಜ್ಞಾ |
| ೨೩೩ | ೨೧೮ | ಚರಣ |
| ೨೪೫ | ೧೧ | ದೃಷ್ಟತೋ |



॥ ಓಂ ॥

# ಉಪದೇಶಸಾಹಸ್ರಿ

## ( ಪದ್ಯಪ್ರಬನ್ಧ )

## ೧. ಉಪೋದ್ಘಾತ

### ಮಂಗಲ

**ಚೈತನ್ಯಂ ಸರ್ವಗಂ ಸರ್ವಂ ಸರ್ವಭೂತಗುಹಾಶಯಮ್**
**ಯತ್ಸರ್ವವಿಷಯಾತೀತಂ ತಸ್ಮೈ ಸರ್ವವಿದೇ ನಮಃ ॥ ೧ ॥**

೧. ಎಲ್ಲವನ್ನೂ ವ್ಯಾಪಿಸಿಕೊಂಡಿರುವ, ಎಲ್ಲವೂ (ತಾನೇ) ಆಗಿರುವ, ಸರ್ವಭೂತಗಳ (ಹೃದಯ)ಗುಹೆಯಲ್ಲಿಯೂ ಇರುವ[1] ಸರ್ವವಿಷಯಗಳನ್ನೂ ಮೀರಿರುವ ಚೈತನ್ಯವು ಯಾವದುಂಟೋ ಅಂಥ ಸರ್ವಜ್ಞತತ್ತ್ವಕ್ಕೆ[2] ನಮಸ್ಕಾರ!

### ಕರ್ಮಕಾಂಡಕ್ಕೂ ಜ್ಞಾನಕಾಂಡಕ್ಕೂ ಸಂಬಂಧ

**ಸಮಾಪಯ್ಯ ಕ್ರಿಯಾಃ ಸರ್ವಾಃ ದಾರಾಗ್ನ್ಯಾಧಾನಪೂರ್ವಿಕಾಃ ।**
**ಬ್ರಹ್ಮವಿದ್ಯಾಮಥೇದಾನೀಂ ವಕ್ತುಂ ವೇದಃ ಪ್ರಚಕ್ರಮೇ ॥ ೨ ॥**
**ಕರ್ಮಾಣಿ ದೇಹಯೋಗಾರ್ಥಂ ದೇಹಯೋಗೇ ಪ್ರಿಯಾಪ್ರಿಯೇ ।**
**ಧ್ರುವೇ ಸ್ಯಾತಾಂ ತತೋ ರಾಗೋ ದ್ವೇಷಶ್ಚೈವ ತತಃ ಕ್ರಿಯಾಃ ॥ ೩ ॥**
**ಧರ್ಮಾಧರ್ಮೌ ತತೋಽಜ್ಞಸ್ಯ ದೇಹಯೋಗಸ್ತಥಾ ಪುನಃ ।**
**ಏವಂ ನಿತ್ಯಪ್ರವೃತ್ತೋಽಯಂ ಸಂಸಾರಶ್ಚಕ್ರವದ್ ಭೃಶಮ್ ॥ ೪ ॥**
**ಅಜ್ಞಾನಂ ತಸ್ಯ ಮೂಲಂ ಸ್ಯಾದಿತಿ ತದ್ಧಾನಮಿಷ್ಯತೇ ।**
**ಬ್ರಹ್ಮವಿದ್ಯಾತ ಆರಬ್ಧಾ ತತೋ ನಿಃಶ್ರೇಯಸಂ ಭವೇತ್ ॥ ೫ ॥**

೨. ಹೆಂಡತಿಯನ್ನು (ಮಾಡಿಕೊಳ್ಳುವದು), ಅಗ್ನಿಯನ್ನಿಟ್ಟುಕೊಳ್ಳುವದು ಮುಂತಾದ ಕರ್ಮಗಳೆಲ್ಲವನ್ನೂ (ಹೇಳಿ)ಮುಗಿಸಿದ ಬಳಿಕ ಇನ್ನು ಈಗ

---

1. ಒಬ್ಬನೇ ಆತ್ಮನು ಎಲ್ಲರ ಅಂತಃಕರಣಕ್ಕೂ ಸಾಕ್ಷಿಯಾಗಿರುತ್ತಾನೆ.

2. ಎಲ್ಲವೂ ತಾನೇ ಆಗಿ ಜ್ಞಾನಸ್ವರೂಪವಾಗಿರುವ; ಅಥವಾ ವಿಶೇಷರೂಪದಿಂದ ಅರಿಯುವವರೆಲ್ಲರೂ ತಾನೇ ಆಗಿರುವ.

ವೇದವು ಬ್ರಹ್ಮವಿದ್ಯೆಯನ್ನು ಹೇಳುವದಕ್ಕೆ ಮೊದಲುಮಾಡಿರುತ್ತದೆ

೩–೪. ಕರ್ಮಗಳು ದೇಹಸಂಬಂಧಕ್ಕೆ (ಕಾರಣವು). ದೇಹಸಂಬಂಧವಾದರೆ ಪ್ರಿಯಾಪ್ರಿಯಗಳು ಅವಶ್ಯವಾಗಿ ಆಗುವವು. ಅವುಗಳಿಂದ ರಾಗವೂ ದ್ವೇಷವೂ (ಉಂಟಾಗುವವು). ಅವುಗಳಿಂದ ಕರ್ಮಗಳೂ ಪಾಪಪುಣ್ಯಗಳೂ (ಆಗುವವು). ಅಜ್ಞಾನಾದವನಿಗೆ[1] ಅದರಿಂದ ಮತ್ತೆ ಹಾಗೆಯೇ ದೇಹಸಂಬಂಧವಾಗುವದು. ಹೀಗೆ ಚಕ್ರದಂತೆ ಈ ಸಂಸಾರ(ದ ತೊಳಲು) ಯಾವಾಗಲೂ ಬಲವಾಗಿ ಸುತ್ತಿಕೊಂಡು ಬರುತ್ತಿರುವದು.

೫. ಇದಕ್ಕೆ ಅಜ್ಞಾನವು[2] ಮೂಲವಾಗಿರುತ್ತದೆ. ಆದ್ದರಿಂದ ಅದನ್ನು ನಾಶಗೊಳಿಸುವದು ಇಷ್ಟವಾಗಿರುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯನ್ನು ಆರಂಭಿಸಿರುತ್ತದೆ : ಅದರಿಂದ ಮೋಕ್ಷವುಂಟಾಗುವದು.

## ಮೋಕ್ಷಕ್ಕೆ ಜ್ಞಾನವೇ ಬೇಕು

**ವಿದ್ಯೈವಾಜ್ಞಾನಹಾನಾಯ ನ ಕರ್ಮಾಪ್ರತಿಕೂಲತಃ ।**
**ನಾಜ್ಞಾನಸ್ಯಾಪ್ರಹಾಣೇ ಹಿ ರಾಗದ್ವೇಷಕ್ಷಯೋ ಭವೇತ್ ॥ ೬ ॥**
**ರಾಗದ್ವೇಷಕ್ಷಯಾಭಾವೇ ಕರ್ಮ ದೋಷೋದ್ಭವಂ ಧ್ರುವಮ್ ।**
**ತಸ್ಮಾನ್ನಿಃಶ್ರೇಯಸಾರ್ಥಾಯ ವಿದ್ಯೈವಾತ್ರ ವಿಧೀಯತೇ ॥ ೭ ॥**

೬–೭. ಅಜ್ಞಾನವು ನಾಶವಾಗುವದಕ್ಕೆ ವಿದ್ಯೆಯೇ ಬೇಕು, ಕರ್ಮವಲ್ಲ ; ಏಕೆಂದರೆ (ಅದು ಅಜ್ಞಾನಕ್ಕೆ) ವಿರುದ್ಧವಾಗಿರುವದಿಲ್ಲ. ಅಜ್ಞಾನವು ನಾಶವಾಗದಿದ್ದರೆ ರಾಗದ್ವೇಷಗಳು ಕ್ಷಯವಾಗಲಾರವು. ರಾಗದ್ವೇಷಗಳು ಕ್ಷಯವಾಗದಿದ್ದರೆ ದೋಷಗಳಿಂದ ಉಂಟಾಗುವ ಕರ್ಮವು ಅವಶ್ಯವಾಗಿ (ಹುಟ್ಟುವದು). ಆದ್ದರಿಂದ ಮೋಕ್ಷವೆಂಬ ಪ್ರಯೋಜನಕ್ಕಾಗಿ ಇಲ್ಲಿ ವಿದ್ಯೆಯನ್ನೇ ತಿಳಿಸಿರುತ್ತದೆ.

## ಪೂರ್ವಪಕ್ಷ: ಜ್ಞಾನಕರ್ಮಸಮುಚ್ಚಯವು ಮುಕ್ತಿಗೆ ಸಾಧನ

**ನನು ಕರ್ಮ ತಥಾ ನಿತ್ಯಂ ಕರ್ತವ್ಯಂ ಜೀವನೇ ಸತಿ ।**
**ವಿದ್ಯಾಯಾಃ ಸಹಕಾರಿತ್ವಂ ಮೋಕ್ಷಂ ಪ್ರತಿ ಹಿ ತದ್ ವ್ರಜೇತ್ ॥ ೮ ॥**

---

1. ಆತ್ಮಸ್ವರೂಪವನ್ನು ಅರಿಯದವನಿಗೆ ಕಾಮ, ಕರ್ಮ, ಶರೀರಗ್ರಹಣ – ಇವು ತಪ್ಪುವಂತಿಲ್ಲ.

2. ಅಜ್ಞಾನ, ಅವಿದ್ಯೆ, ಆತ್ಮಾನಾತ್ಮರ ಅನ್ಯೋನ್ಯಾಧ್ಯಾಸ – ಇವೆಲ್ಲ ಒಂದೇ ಅರ್ಥದ ಮಾತುಗಳು.

**ಯಥಾ ವಿದ್ಯಾ ತಥಾ ಕರ್ಮ ಚೋದಿತತ್ವಾವಿಶೇಷತಃ ।**
**ಪ್ರತ್ಯವಾಯಸ್ಮೃತೇಶ್ಚೈವ ಕಾರ್ಯಂ ಕರ್ಮ ಮುಮುಕ್ಷುಭಿಃ ॥ ೯ ॥**
**ನನು ಧ್ರುವಫಲಾ ವಿದ್ಯಾ ನಾನ್ಯತ್ ಕಿಂಚಿದಪೇಕ್ಷತೇ ।**
**ನಾಗ್ನಿಷ್ಟೋಮೋ ಯಥೈವಾನ್ಯದ್ಧ್ರುವಕಾರ್ಯೋಽಪ್ಯಪೇಕ್ಷತೇ[1] ।೧೦।**
**ತಥಾ ಧ್ರುವಫಲಾ ವಿದ್ಯಾ ಕರ್ಮ ನಿತ್ಯಮಪೇಕ್ಷತೇ ।**

೮-೯. (ಪೂರ್ವಪಕ್ಷಿ) ಹಾಗೆಯೇ ನಿತ್ಯಕರ್ಮವನ್ನೂ ಬದುಕಿರುವ ವರೆಗೂ[2] ಮಾಡಬೇಕು. ಏಕೆಂದರೆ ಮೋಕ್ಷ(ಫಲವನ್ನು ಕೊಡುವ)ದಕ್ಕೆ ಅದು ವಿದ್ಯೆಗೆ ಸಹಕಾರಿಯಾದೀತು. ವಿದ್ಯೆಯು ಹೇಗೋ ಹಾಗೆಯೇ ಕರ್ಮವೂ (ಶಾಸ್ತ್ರದಲ್ಲಿ) ವಿಹಿತವಾಗಿದೆ ಎಂಬುದು ಸಮಾನವಾಗಿರುವದರಿಂದಲೂ[3] (ಅದನ್ನು ಮಾಡದಿದ್ದರೆ) ಪ್ರತ್ಯವಾಯವು[4] (ಉಂಟಾಗುವದೆಂದು) ಸ್ಮೃತಿ (ಯಲ್ಲಿ ಹೇಳಿರು)ವದರಿಂದಲೂ ಮುಮುಕ್ಷುಗಳು (ಅದನ್ನು) ಮಾಡಬೇಕು.

೧೦-೧೧. (ಸಿದ್ಧಾಂತಿಯ ಆಕ್ಷೇಪ):- ವಿದ್ಯೆಯು ಅವಶ್ಯವಾಗಿ (ತನ್ನ) ಫಲವನ್ನು (ಕೊಟ್ಟೇತೀರುವದ)ರಿಂದ (ಅದು) ಮತ್ತೆ ಯಾವ (ಸಹಾಯ) ವನ್ನೂ ಅಪೇಕ್ಷಿಸುವದಿಲ್ಲ.

(ಪೂರ್ವಪಕ್ಷಿ):- ಹಾಗಲ್ಲ. ಅವಶ್ಯವಾಗಿ ಫಲವನ್ನು ಕೊಡುವ ಅಗ್ನಿಷ್ಟೋಮವೂ ಹೇಗೆ ಮತ್ತೊಂದನ್ನು ಬಯಸುತ್ತದೆಯೋ ಹಾಗೆಯೇ ಅವಶ್ಯವಾಗಿ ಫಲವನ್ನು ಕೊಡುವ ವಿದ್ಯೆಯೂ ನಿತ್ಯಕರ್ಮವನ್ನು[5] ಅಪೇಕ್ಷಿಸುತ್ತದೆ.

## ಸಿದ್ಧಾಂತ: ಕರ್ಮವು ವಿದ್ಯೆಗೆ ಪ್ರತಿಕೂಲವಾಗಿರುತ್ತದೆ

**ಇತ್ಯೇವಂ ಕೇಚಿದಿಚ್ಛನ್ತಿ ನ ಕರ್ಮಪ್ರತಿಕೂಲತಃ ।  ॥ ೧೧ ॥**
**ವಿದ್ಯಾಯಾಃ ಪ್ರತಿಕೂಲಂ ಹಿ ಕರ್ಮ ಸ್ಯಾತ್ ಸಾಭಿಮಾನತಃ**
**ನಿರ್ವಿಕಾರಾತ್ಮಬುದ್ಧಿಶ್ಚ ವಿದ್ಯೇತೀಹ ಪ್ರಕೀರ್ತಿತಾ  ॥ ೧೨ ॥**

---

1. 'ಪ್ಯ' ಎಂಬ ಮೈ॥ ಪಾಠಕ್ಕಿಂತ ಇದು ಉತ್ತಮ.

2. ಸಾಯುವವರೆಗೂ ಕರ್ಮವನ್ನು ಮಾಡುತ್ತಲೇ ಇರಬೇಕೆಂದು ವೇದದಲ್ಲಿ ವಿಧಿಸಿದೆ.

3. ಇಲ್ಲಿ ವಿದ್ಯೆ ಎಂದರೆ ಉಪಾಸನೆ; ಉಪಾಸನೆಯನ್ನು ಮಾಡಬೇಕೆಂದು ವಿಧಿಸಿರುವಂತೆ ಕರ್ಮವನ್ನೂ ವಿಧಿಸಿದೆ ಎಂದು ಪೂರ್ವಪಕ್ಷಿಯ ಅಭಿಪ್ರಾಯ. ಎರಡನ್ನೂ ಸೇರಿಸಿ ಅನುಷ್ಠಾನಮಾಡಬೇಕೆಂಬ ವಾದಕ್ಕೆ ಸಮುಚ್ಚಯವಾದವೆಂದು ಹೆಸರು.

4. ದುಃಖವನ್ನು ಕೊಡುವ ದೋಷವು.

5. ಕಾಮ್ಯನಿಷಿದ್ಧಕರ್ಮಗಳನ್ನು ಬಿಡಬೇಕಾದರೂ ಮುಮುಕ್ಷುವು ನಿತ್ಯಕರ್ಮವನ್ನು ಮಾಡುತ್ತಿರಲೇಬೇಕು ಎಂದು ಭಾವ.

**ಅಹಂ ಕರ್ತಾ ಮಮೇದಂ ಸ್ಯಾದಿತಿ ಕರ್ಮ ಪ್ರವರ್ತತೇ ।**
**ವಸ್ತ್ವಧೀನಾ ಭವೇದ್ವಿದ್ಯಾ ಕರ್ತ್ರಧೀನೋ ಭವೇದ್ವಿಧಿಃ ॥ ೧೩ ॥**
**ಕಾರಕಾಣ್ಯುಪಮೃದ್ನಾತಿ ವಿದ್ಯಾ ಬುದ್ಧಿಮಿವೋಷರೇ ।**
**ತತ್ಸತ್ಯಮತಿಮಾದಾಯ[1] ಕರ್ಮ ಕರ್ತುಂ ವ್ಯವಸ್ಯತಿ ॥ ೧೪ ॥**
**ವಿರುದ್ಧತ್ವಾದತಃ ಶಕ್ಯಂ ಕರ್ಮ ಕರ್ತುಂ ನ ವಿದ್ಯಯಾ ।**
**ಸಹೈವ ವಿದುಷಾ ತಸ್ಮಾತ್ ಕರ್ಮ ಹೇಯಂ ಮುಮುಕ್ಷುಣಾ ॥೧೫॥**

೧೨–೧೫ ಹೀಗೆಂದು ಕೆಲವರು ಅಭಿಪ್ರಾಯಪಡುತ್ತಾರೆ. (ಇದು) ಸರಿಯಲ್ಲ. ಏಕೆಂದರೆ ಕರ್ಮವು ಪ್ರತಿಕೂಲವಾಗಿರುತ್ತದೆ. (ಇದರ ವಿವರ): ವಿದ್ಯೆಗೆ ಕರ್ಮವು ಪ್ರತಿಕೂಲವಾಗಿರುತ್ತದೆ. ಹೇಗೆಂದರೆ, (ಕರ್ಮವು) ಅಭಿಮಾನ ದಿಂದ[2] ಕೂಡಿ(ದವರಿಗೆ ಆಗತಕ್ಕದ್ದು). ಯಾವ ವಿಕಾರವೂ ಇಲ್ಲದ ಆತ್ಮನು (ನಾನು) ಎಂಬ ಬುದ್ಧಿಯನ್ನು ಇಲ್ಲಿ ವಿದ್ಯೆ ಎಂದು ಕರೆದಿರುತ್ತದೆ. 'ನಾನು ಕರ್ತೃವು, ನನಗೆ ಈ (ಫಲವು) ಆಗಬೇಕು' ಎಂಬ (ಬುದ್ಧಿಯಿಂದ) ಕರ್ಮವು ಸಾಗುತ್ತದೆ.

ವಿದ್ಯೆಯು ವಸ್ತುವಿಗೆ (ಅಧೀನವಾಗಿರುತ್ತದೆ), ವಿಧಿಯು ಕರ್ತೃವಿಗಧೀನ ವಾಗಿರುತ್ತದೆ[3]. ಮರುಭೂಮಿಯಲ್ಲಿ (ನೀರೆಂಬ) ತಿಳಿವಳಿಕೆಯನ್ನು (ಮರು ಭೂಮಿ ಎಂಬ ತಿಳಿವಳಿಕೆಯು ಕಳೆಯು)ವಂತೆ, ವಿದ್ಯೆಯು ಕಾರಕಗಳನ್ನು ಇಲ್ಲ ವಾಗಿಸುತ್ತದೆ;[4] ಅವುಗಳು ಸತ್ಯವೆಂಬ ತಿಳಿವಳಿಕೆಯನ್ನು ಸ್ವೀಕರಿಸಿ ಕರ್ಮವನ್ನು ಮಾಡುವದಕ್ಕೆ ನಿಶ್ಚಯಿಸುತ್ತಾನೆ. (ಹೀಗೆ ಕರ್ಮವು ಜ್ಞಾನಕ್ಕೆ) ವಿರುದ್ಧ ವಾಗಿರುವದರಿಂದ ವಿವೇಕಿಯಾದವನು ಜ್ಞಾನದೊಡನೆಯೇ ಕರ್ಮವನ್ನು ಮಾಡುವದು ಆಗಲಾರದು.

ಆದ್ದರಿಂದ ಮುಮುಕ್ಷುವು ಕರ್ಮವನ್ನು ತ್ಯಾಗಮಾಡಬೇಕು[5].

---

1. 'ಇತಿ ತತ್ಸತ್ಯಮಾದಾಯ' ಎಂಬ ಮೈ॥ ಅ॥ ನಿ॥ ಪಾಠಕ್ಕಿಂತ ಈ ಬೋಧ ನಿಧಿಯ ಪಾಠವೇ ಮೇಲು.

2. ನಾನು ದೇಹಾದಿಗಳಿಂದ ಕೂಡಿದವನು, ಕರ್ಮವನ್ನು ಮಾಡುವವನು, ಎಂಬ ತಿಳಿವಳಿಕೆಯಿಂದ.

3. ಆದ್ದರಿಂದ ಕರ್ತೃವಿಗೆ ಅಧೀನವಲ್ಲದ ವಿದ್ಯೆಯನ್ನು ವಿಧಿಸಿದೆ ಎನ್ನುವದು ತಪ್ಪು; ಕರ್ಮದೊಡನೆ ಅದು ಇರುವದೂ ಸಾಧ್ಯವಿಲ್ಲ.

4. ಆದ್ದರಿಂದ ಜ್ಞಾನವುಂಟಾದಾಗ ಕರ್ತೃತ್ವಬುದ್ಧಿಯಿರುವದಿಲ್ಲ.

5. ಕರ್ಮವು ಕರ್ತೃತ್ವಬುದ್ಧಿಯನ್ನು ಬಯಸುತ್ತದೆ; ಆದರೆ ಮುಮುಕ್ಷುವು ಅಕರ್ತೃತ್ವಬುದ್ಧಿಯನ್ನು ಸಂಪಾದಿಸಿಕೊಳ್ಳಲು ಬಯಸುತ್ತಾನೆ. ಆದ್ದರಿಂದ ಮುಮುಕ್ಷುವು ಕರ್ಮವನ್ನು ತ್ಯಾಗಮಾಡುವದೇ ಜ್ಞಾನಪ್ರಾಪ್ತಿಗೆ ಅನುಕೂಲವಾಗಿರುತ್ತದೆ.

## ವಿದ್ಯೆಗೆ ಸಹಾಯವು ಬೇಕಿಲ್ಲ

**ದೇಹಾದ್ಯೈರವಿಶೇಷೇಣ ದೇಹಿನೋ ಗ್ರಹಣಂ ನಿಜಮ್ ।**
**ಪ್ರಾಣಿನಾಂ ತದವಿದ್ಯೋತ್ಥಂ ತಾವತ್ ಕರ್ಮವಿಧಿರ್ಭವೇತ್ ॥೧೬॥**
**ನೇತಿ ನೇತೀತಿ ದೇಹಾದೀನಪೋಹ್ಯಾತ್ಮಾವಶೇಷಿತಃ ।**
**ಅವಿಶೇಷಾತ್ಮಬೋಧಾರ್ಥಂ ತೇನಾವಿದ್ಯಾ ನಿವರ್ತಿತಾ ॥ ೧೭ ॥**
**ನಿವೃತ್ತಾ ಸಾ ಕಥಂ ಭೂಯಃ ಪ್ರಸೂಯೇತ ಪ್ರಮಾಣತಃ ।**
**ಅಸತ್ಯೇವಾವಿಶೇಷೇಽಪಿ ಪ್ರತ್ಯಗಾತ್ಮನಿ ಕೇವಲೇ ॥ ೧೮ ॥**
**ನ ಚೇದ್ಭೂಯಃ ಪ್ರಸೂಯೇತ ಕರ್ತಾ ಭೋಕ್ತೇತಿ ಧೀಃ ಕಥಮ್ ।**
**ಸದಸ್ಮೀತಿ ಚ ವಿಜ್ಞಾತೇ[1] ತಸ್ಮಾದ್ ವಿದ್ಯಾಸಹಾಯಿತಾ ॥ ೧೯ ॥**

೧೬-೧೯. ದೇಹಿಯಾದ ಆತ್ಮನನ್ನು ದೇಹವೇ ಮುಂತಾದವುಗಳಿಗಿಂತ ಬೇರೆಯಲ್ಲವೆಂದು ತಿಳಿಯುವದು ಪ್ರಾಣಿಗಳಿಗೆ ಸ್ವಾಭಾವಿಕವು. ಆ (ತಿಳಿವಳಿಕೆಯು) ಅಜ್ಞಾನದಿಂದ ಉಂಟಾಗಿರುತ್ತದೆ. ಅಲ್ಲಿಯವರೆಗೂ[2] ಕರ್ಮವಿಧಿಯಿರಬಹುದು. ಆತ್ಮನಲ್ಲಿ ಯಾವ ವಿಶೇಷವೂ ಇಲ್ಲವೆಂದು ತಿಳಿಸಿಕೊಡುವದಕ್ಕಾಗಿ 'ಇದಲ್ಲ, ಇದಲ್ಲ' (ಬೃ. ೨-೩-೬) ಎಂದು ದೇಹಾದಿಗಳನ್ನು ಅಲ್ಲಗಳೆದು ಆತ್ಮನನ್ನು ಉಳಿಸಿಕೊಂಡಿರುತ್ತದೆ. ಆ (ತಿಳಿವಳಿಕೆ)ಯಿಂದ ಅಜ್ಞಾನವು ಬಾಧಿತವಾಗಿರುತ್ತದೆ. ನಿರ್ವಿಶೇಷನಾದ ಅದ್ವಿತೀಯಪ್ರತ್ಯಗಾತ್ಮನಲ್ಲಿ ಇಲ್ಲದೆಯೇ ಇರುವ[3], ಪ್ರಮಾಣದಿಂದ[4] ಬಾಧಿತವಾಗಿರುವ ಆ (ಅವಿದ್ಯೆಯು) ಮತ್ತೆ ಹೇಗೆ ಹುಟ್ಟೀತು ? ಮತ್ತೆ ಹುಟ್ಟದೆ ಇದ್ದರೆ, 'ಸದ್ರೂಪವಾದ ಬ್ರಹ್ಮವು ನಾನಾಗಿರುತ್ತೇನೆ' ಎಂದೂ ಅರಿವು ಉಂಟಾದಮೇಲೆ[5] '(ನಾನು) ಕರ್ತೃ, ಭೋಕ್ತೃ' ಎಂಬ ಬುದ್ಧಿ ಹೇಗೆ (ಉಂಟಾದೀತು) ? ಆದ್ದರಿಂದ ವಿದ್ಯೆಗೆ (ತನ್ನ ಫಲವನ್ನು ಕೊಡುವದಕ್ಕೆ ಯಾವದರ) ಸಹಾಯವೂ ಬೇಕಿಲ್ಲ[6].

---

1. 'ವಿಜ್ಞಾನೇ' ಎಂದು ಅಚ್ಚಿನ ಪಾಠ.
2. ಅವಿದ್ಯೆಯಿರುವವರೆಗೂ.
3. ಹುಸಿಯಾಗಿ ತೋರುತ್ತಿರುವ.
4. ನೀನು ನಿರ್ವಿಶೇಷವಾದ ಬ್ರಹ್ಮವು ಎಂಬ ವಾಕ್ಯದಿಂದ ಉಂಟಾದ ಜ್ಞಾನದಿಂದ.
5. 'ತತ್ತ್ವಮಸಿ' (ಆ ಸದ್ಬ್ರಹ್ಮವೇ ನೀನು) ಎಂಬ ವಾಕ್ಯದಿಂದಾದ ಜ್ಞಾನವೇ ಇದು.
6. ಜ್ಞಾನವುಂಟಾದ ಬಳಿಕ ನಾನು ಕರ್ತೃಭೋಕ್ತೃವೆಂಬ ಜ್ಞಾನವು ಇರುವಂತಿಲ್ಲವಾದ್ದರಿಂದ ಜ್ಞಾನವನ್ನೂ ಕರ್ಮವನ್ನೂ ಸಮುಚ್ಚಯಮಾಡಿಕೊಂಡು ಅನುಷ್ಠಾನಮಾಡುವದಾಗಲಾರದು ಎಂದು ಭಾವ, ಕರ್ತೃಭೋಕ್ತೃಜ್ಞಾನವಿರುವವರೆಗೆ ಆತ್ಮಜ್ಞಾನವಿರುವದಿಲ್ಲ ಎಂಬ ಹೇತುವನ್ನು ಇದಕ್ಕೆ ಜೋಡಿಸಿಕೊಳ್ಳಬೇಕು.

## ಸಂನ್ಯಾಸವನ್ನು ಶ್ರುತಿಯಲ್ಲಿ ವಿಧಿಸಿದೆ

**ಅತ್ಯರೇಚಯದಿತ್ಯುಕ್ತೋ ನ್ಯಾಸಃ ಶ್ರುತ್ಯಾತ ಏವ ಹಿ |**
**ಕರ್ಮಭ್ಯೋ ಮಾನಸಾಂತೇಭ್ಯ ಏತಾವದಿತಿ ವಾಜಿನಾಮ್ || ೨೦ ||**
**ಅಮೃತತ್ವಂ ಶ್ರುತಂ ಯಸ್ಮಾತ್ ತ್ಯಾಜ್ಯಂ ಕರ್ಮ ಮುಮುಕ್ಷುಭಿಃ |**

೨೦. ಆದ್ದರಿಂದಲೇ ಅಲ್ಲವೆ, ಮಾನಸಕರ್ಮದವರೆಗೂ ಇರುವ[1] ಕರ್ಮಗಳಿಗಿಂತಲೂ ಸಂನ್ಯಾಸವೇ ಹೆಚ್ಚಿನದೆಂದು (ತೈ. ನಾ ೭೮) ಶ್ರುತಿಯಲ್ಲಿ ಹೇಳಿರುತ್ತದೆ? 'ಇಷ್ಟೇ ಅಮೃತತ್ವವು' (ಬೃ. ೪-೫-೧೫) ಎಂದು ವಾಜಸನೇಯ (ಶಾಖೆಯವರ ಉಪನಿಷದ್ವಾಕ್ಯ)ವೂ ಹೇಳುತ್ತದೆ. ಆದ್ದರಿಂದ ಮುಮುಕ್ಷುಗಳು ಕರ್ಮವನ್ನು ಬಿಡತಕ್ಕದ್ದು.

## ವಿದ್ಯೆಯು ಅಗ್ನಿಷ್ಟೋಮದಂತೆ ಅಲ್ಲ

**ಅಗ್ನಿಷ್ಟೋಮವದಿತ್ಯುಕ್ತಂ ತತ್ರೇದಮಭಿಧೀಯತೇ || ೨೧ ||**
**ನೈಕಕಾರಕಸಾಧ್ಯತ್ವಾತ್ ಫಲಾನ್ಯತ್ವಾಚ್ಚ ಕರ್ಮಣಃ |**
**ವಿದ್ಯಾ ತದ್ವಿಪರೀತಾತೋ ದೃಷ್ಟಾಂತೋ ವಿಷಮೋ ಭವೇತ್ || ೨೨ ||**
**ಕೃಷ್ಯಾದಿವತ್ ಫಲಾರ್ಥತ್ವಾದನ್ಯಕರ್ಮೋಪಬೃಂಹಣಮ್ |**
**ಅಗ್ನಿಷ್ಟೋಮಸ್ತ್ವಪೇಕ್ಷೇತ ವಿದ್ಯಾನ್ಯತ್ ಕಿಮಪೇಕ್ಷತೇ || ೨೩ ||**

೨೧-೨೩. ಅಗ್ನಿಷ್ಟೋಮದಂತೆ (ಜ್ಞಾನಕ್ಕೂ ಸಹಕಾರಿಸಾಧನವು ಬೇಕು) ಎಂದು (೧೭ರಲ್ಲಿ) ಹೇಳಿದ್ದಿರಷ್ಟೆ, ಅದಕ್ಕೆ ಈ (ಉತ್ತರವನ್ನು) ಹೇಳುತ್ತೇವೆ. ಕರ್ಮವು ಅನೇಕ ಕಾರಕಗಳಿಂದ ಆಗತಕ್ಕದ್ದು, ಫಲಕ್ಕಿಂತ ತಾನು ಬೇರೆಯಾಗಿಯೂ ಇದೆ[2]; ಆದ್ದರಿಂದ (ಅದಕ್ಕೆ ಬೇರೊಂದು ಸಹಾಯವು ಬೇಕಾಗಬಹುದು). ವಿದ್ಯೆಯು ಅದಕ್ಕೆ ವಿರುದ್ಧವಾಗಿರುತ್ತದೆ[3]. ಆದ್ದರಿಂದ ದೃಷ್ಟಾಂತವು ಸರಿಯಾಗುವದಿಲ್ಲ. ಅಗ್ನಿಷ್ಟೋಮವು ಕೃಷ್ಯಾದಿಗಳಂತೆ ಫಲಕ್ಕಾಗಿ (ಮಾಡತಕ್ಕದ್ದು); ಆದ್ದರಿಂದ ಮತ್ತೊಂದು ಕರ್ಮದಿಂದ ಅದು ಪುಷ್ಟಿಯನ್ನು ಬಯಸಬಹುದು. ವಿದ್ಯೆಯು ಮತ್ತೇನನ್ನು ಬಯಸೀತು[4] ?

---

1. ಸತ್ಯ, ತಪಸ್ಸು, ದಮ, ಶಮ, ದಾನ, ಧರ್ಮ, ಪ್ರಜನನ, ಅಗ್ನಿಹೋತ್ರ, ಯಜ್ಞ, ಮಾನಸ.

2. ಕರ್ಮವು ಬೇರೆ, ಫಲವು ಬೇರೆ.

3. ವಸ್ತುವನ್ನನುಸರಿಸಿ ಪ್ರಮಾಣದಿಂದ ಆಗತಕ್ಕದ್ದೇ ಹೊರತು ಮತ್ತೆ ಅನೇಕ ಕಾರಕಗಳನ್ನು ಬಯಸತಕ್ಕ ಕ್ರಿಯೆಯಲ್ಲ.

4. ಜ್ಞಾನವು ಪದಾರ್ಥವನ್ನು ತೋರಿಸುವದಲ್ಲದೆ ಮತ್ತೇನನ್ನೂ ಮಾಡಬೇಕಾಗಿರುವದಿಲ್ಲ.

## ಜ್ಞಾನಿಗೆ ಪ್ರತ್ಯವಾಯವಿಲ್ಲ

**ಪ್ರತ್ಯವಾಯಸ್ತು ತಸ್ಯೈವ ಯಸ್ಯಾಹಙ್ಕಾರ ಇಷ್ಯತೇ |**
**ಅಹಙ್ಕಾರಫಲಾರ್ಥಿತ್ವೇ ವಿದ್ಯೇತೇ ನಾತ್ಮವೇದಿನಃ || ೨೪ ||**

೨೪. ಪ್ರತ್ಯವಾಯವೋ ಎಂದರೆ ಯಾವಾತನಿಗೆ ಅಹಂಕಾರವಿರುತ್ತದೆಯೋ ಅವನಿಗೇ ಎಂದು ಒಪ್ಪಬೇಕು. (ಆದರೆ) ಆತ್ಮಜ್ಞಾನಿಗೆ ಅಹಂಕಾರವಾಗಲಿ ಫಲಾಪೇಕ್ಷೆಯಾಗಲಿ ಇರುವದಿಲ್ಲ[1].

## ಉಪಸಂಹಾರ

**ತಸ್ಮಾದಜ್ಞಾನಹಾನಾಯ ಸಂಸಾರವಿನಿವೃತ್ತಯೇ |**
**ಬ್ರಹ್ಮವಿದ್ಯಾವಿಧಾನಾಯ ಪ್ರಾರಬ್ಧೋಪನಿಷತ್ತ್ವಿಯಮ್ || ೨೫ ||**
**ಸದೇರುಪನಿಪೂರ್ವಸ್ಯ ಕ್ವಿಪಿ ಚೋಪನಿಷದ್ಭವೇತ್ |**
**ಮನ್ದೀಕರಣಭಾವಾಚ್ಚ ಗರ್ಭಾದೇಃ ಶಾತನಾತ್ತಥಾ || ೨೬ ||**

೨೫-೨೬. ಆದ್ದರಿಂದ ಸಂಸಾರವನ್ನು ಹೋಗಲಾಡಿಸುವದಕ್ಕಾಗಿ ಅಜ್ಞಾನವನ್ನು ಕಳೆಯುವದಕ್ಕೋಸ್ಕರ ಬ್ರಹ್ಮವಿದ್ಯೆಯನ್ನು ತಿಳಿಸುವದಕ್ಕೇ ಈ ಉಪನಿಷತ್ತು ಪ್ರಾರಂಭವಾಗಿರುತ್ತದೆ.[2] ಉಪ, ನಿ- (ಎಂಬ ಉಪಸರ್ಗಗಳು) ಮೊದಲಿರುವ ಸದ್ (ಎಂಬ ಧಾತುವಿಗೆ) ಕ್ವಿಪ್ ಪ್ರತ್ಯಯವು ಪರವಾದರೆ 'ಉಪನಿಷತ್' (ಎಂಬ ರೂಪ)ವಾಗುತ್ತದೆ. ಗರ್ಭ(ವಾಸವೇ) ಮುಂತಾದವುಗಳನ್ನು ಸಡಿಲಿಸುವದರಿಂದಲೂ ನಾಶಗೊಳಿಸುವದರಿಂದಲೂ ಈ ವಿದ್ಯೆಗೆ 'ಉಪನಿಷತ್ತು'[3] ಎಂದು ಹೆಸರು.



1. ಅಹಂಕಾರವಾಗಲಿ ಫಲಾಪೇಕ್ಷೆಯಾಗಲಿ ಇಲ್ಲದೆ ಕರ್ಮವಿಲ್ಲ; ಆದ್ದರಿಂದ ಜ್ಞಾನಕರ್ಮಸಮುಚ್ಚಯವು ಅಸಾಧ್ಯ. ಮುಮುಕ್ಷುವಿಗೆ ಜ್ಞಾನವುಂಟಾಗಿಲ್ಲವಾದರೂ ಕರ್ಮಸಂನ್ಯಾಸವನ್ನು ವಿಧಿಸುವ ಶ್ರುತಿಯಿಂದ ಅವನು ಕರ್ಮವನ್ನು ತ್ಯಜಿಸುತ್ತಾನೆ. ಈ ಕಾರಣದಿಂದ ಜ್ಞಾನಿಯಂತೆ ಅವನಿಗೂ ಪ್ರತ್ಯವಾಯಕ್ಕೆ ಅವಕಾಶವಿಲ್ಲ -ಎಂದು ಭಾವ.

2. ಬ್ರಹ್ಮವಿದ್ಯೆಯನ್ನು ತಿಳಿಸುವ ಉಪನಿಷದ್ರೂಪವಾದ ಗ್ರಂಥವೂ ಉಪನಿಷತ್ತಿನ ಸಾರವನ್ನು ತಿಳಿಸುವ ಈ ಪ್ರಕರಣವೂ ಎಂದರ್ಥ.

3. ವಿದ್ಯೆಗೆ 'ಉಪನಿಷತ್ತು' ಎಂಬ ಹೆಸರು ಮುಖ್ಯಾರ್ಥದಲ್ಲಿ ಬಂದಿರುತ್ತದೆ. ವಿದ್ಯೆಯನ್ನು ತಿಳಿಸುವ ಗ್ರಂಥಕ್ಕೂ ಗೌಣವಾಗಿ ಆ ಹೆಸರು ಬಂದಿದೆ ಎಂದು ಭಾವ.

# ಉಪೋದ್ಘಾತಪ್ರಕರಣದ ಸಾರ

೧. ವೇದಾಂತವೇದ್ಯನಾದ ಪರಮಾತ್ಮನು ಶುದ್ಧಚೈತನ್ಯರೂಪನಾದರೂ ಚೇತನಾಚೇತನರೂಪನಾದ ಸರ್ವವೂ ಆಗಿರುತ್ತಾನೆ. ಹೀಗೆ ಸರ್ವವಿಷಯಾತ್ಮಕನೂ ಸರ್ವವಿಷಯಾತೀತನೂ ಆಗಿರುವ ಆ ಪರಮಾತ್ಮನಿಗೆ ನಮಸ್ಕಾರ.

೨-೫. ಅಜ್ಞನು ಮಾಡುವ ಕರ್ಮದಿಂದ ದೇಹಾಧಾರಣೆಯುಂಟಾಗುವದು. ದೇಹಿಯಾದವನಿಗೆ ಪ್ರಿಯಾಪ್ರಿಯಗಳು ತಪ್ಪದೆ ಉಂಟಾಗುವವು. ಅದರಿಂದ ರಾಗದ್ವೇಷಗಳೂ ಧರ್ಮಾಧರ್ಮಗಳೂ ಅವುಗಳಿಗನುಗುಣವಾದ ಹೊಸ ದೇಹವೂ ಉಂಟಾಗುತ್ತಿರುವವು. ಚಕ್ರದಂತೆ ತಿರುಗುತ್ತಿರುವ ಈ ಸಂಸಾರವನ್ನು ತಪ್ಪಿಸಿಕೊಳ್ಳುವದಕ್ಕೆ ಅಜ್ಞಾನವು ತೊಲಗಬೇಕು. ಆದ್ದರಿಂದ ಕರ್ಮಕಾಂಡವಾದ ಬಳಿಕ ಮುಂದಿನ ವೇದಭಾಗದಲ್ಲಿ ಬ್ರಹ್ಮವಿದ್ಯೆಯನ್ನು ಹೇಳುವದಕ್ಕೆ ಪ್ರಾರಂಭಿಸಿರುತ್ತದೆ.

೬-೭. ಮೋಕ್ಷಕ್ಕೆ ಜ್ಞಾನವೇ ಬೇಕು; ಏಕೆಂದರೆ ಜ್ಞಾನವಿಲ್ಲದೆ ಅಜ್ಞಾನವು ನಾಶವಾಗುವದಿಲ್ಲ, ಅಜ್ಞಾನನಾಶವಿಲ್ಲದೆ ರಾಗದ್ವೇಷಗಳಾಗಲಿ ಕರ್ಮವಾಗಲಿ ದೇಹಪ್ರಾಪ್ತಿಯಾಗಲಿ ಹೋಗುವದಿಲ್ಲ.

೮-೧೦. ಆದರೆ ಕೆಲವರು ಕರ್ಮವೂ ಮುಕ್ತಿಗೆ ಬೇಕೆಂದು ವಾದಿಸುತ್ತಾರೆ. ಬದುಕಿರುವವರೆಗೆ ನಿತ್ಯಕರ್ಮವನ್ನು ಮಾಡಲೇಬೇಕೆಂದು ಶ್ರುತಿಯಲ್ಲಿದೆ; ಅದನ್ನು ಮಾಡದೆ ಇದ್ದರೆ ಪ್ರತ್ಯವಾಯವೂ ಉಂಟಾಗುತ್ತದೆ. ಜ್ಞಾನವು ಅವಶ್ಯವಾಗಿ ಫಲವನ್ನು ಕೊಡತಕ್ಕದ್ದೇ ಆದರೂ ಅಗ್ನಿಷ್ಟೋಮದಂತೆ ಅದಕ್ಕೂ ಮತ್ತೊಂದರ ಸಹಾಯವು ಬೇಕಾಗಬಹುದು ಎಂದು ಅವರ ವಾದ.

೧೧-೧೫. ಆದರೆ ಈ ಅಭಿಪ್ರಾಯವು ಸರಿಯಿಲ್ಲ. ಏಕೆಂದರೆ ಕರ್ಮವು ಜ್ಞಾನಕ್ಕೆ ವಿರುದ್ಧವಾಗಿರುತ್ತದೆ. ಜ್ಞಾನವೆಂದರೆ ಯಾವ ವಿಕಾರವೂ ಇಲ್ಲದವನು ನಾನು ಎಂಬ ತಿಳಿವಳಿಕೆ; ಕರ್ಮದಂತೆ ಕರ್ತೃಭೋಕ್ತೃರೂಪನು ನಾನು ಎಂಬ ತಿಳಿವಳಿಕೆಯು ಅದರಲ್ಲಿರುವದಿಲ್ಲ. ಅದು ವಸ್ತುವಿಗೆ ಅಧೀನವಾಗಿರುವದರಿಂದ ಕರ್ತೃವಿಗೆ ಅಧೀನವಾಗಿರುವ ಕರ್ಮದಂತೆ ಅಲ್ಲ. ಜ್ಞಾನದಲ್ಲಿ ಕಾರಕಗಳು ಸತ್ಯವೆಂಬ ತಿಳಿವಳಿಕೆಯುಂಟಾಗಿರುವದು; ಕಾರಕಗಳು ಸತ್ಯವೆಂಬ ಬುದ್ಧಿಯಿಂದಲೇ ಕರ್ಮವನ್ನು ಮಾಡುವದು. ಹೀಗೆ ಕರ್ಮವು ಜ್ಞಾನಕ್ಕೆ ಎಲ್ಲಾ ಬಗೆಯಿಂದಲೂ ವಿರುದ್ಧವಾಗಿರುತ್ತದೆ. ಆದ್ದರಿಂದ ಮುಮುಕ್ಷುವಾದವನು ಕರ್ಮವನ್ನೆಲ್ಲ ತ್ಯಾಗಮಾಡಬೇಕು.

೧೬-೧೯. ಇದಲ್ಲದೆ ದೇಹವೇ ಮುಂತಾದವುಗಳು ತಾನೆಂಬ ಅಭಿಮಾನದ ರೂಪವಾಗಿರುವ ಅವಿದ್ಯೆಯಿಂದ ಕರ್ಮ ಉಂಟಾಗುತ್ತದೆ. ದೇಹಾದಿಗಳು ಯಾವವೂ ತಾನಲ್ಲವೆಂಬ ತಿಳಿವಳಿಕೆಯೇ ವಿದ್ಯೆಯಾದ್ದರಿಂದ ಅದು ಉಂಟಾದಕೂಡಲೆ ಅವಿದ್ಯೆಯು ನಾಶವಾಗಿಬಿಡುತ್ತದೆ, ಆತ್ಮನು ಅದ್ವಿತೀಯನು ನಿತ್ಯನಿರ್ವಿಶೇಷನು ಎಂಬ ತಿಳಿವಳಿಕೆಯುಂಟಾಗಿ

ಬಿಡುತ್ತದೆ. ಅವಿದ್ಯೆಯು ನಾಶವಾದಬಳಿಕ ಮತ್ತೆ ಹುಟ್ಟಲಾರದಾದ್ದರಿಂದ ಕರ್ತೃಭೋಕ್ತೃ ಬುದ್ಧಿಯೂ ಉಂಟಾಗುವದಿಲ್ಲ; ಆದ್ದರಿಂದ ಜ್ಞಾನಕ್ಕೆ ಕರ್ಮವು ಸಹಾಯವಾಗಿರುತ್ತದೆ ಎಂಬ ಮಾತೂ ಸಲ್ಲುವದಿಲ್ಲ.

೨೦. ಸತ್ಯ, ತಪಸ್ಸು- ಮುಂತಾದವುಗಳೆಲ್ಲಕ್ಕಿಂತಲೂ ಕರ್ಮಸಂನ್ಯಾಸವೇ ಹೆಚ್ಚಿನ ದೆಂದು ತೈತ್ತಿರೀಯೋಪನಿಷತ್ತಿನ ನಾರಾಯಣಪನ್ನದಲ್ಲಿ ಹೇಳಿರುತ್ತದೆ. ಮೋಕ್ಷಕ್ಕೆ ಜ್ಞಾನ ವೊಂದೇ ಸಾಕೆಂದು ಬೃಹದಾರಣ್ಯಕದಲ್ಲಿ ಹೇಳಿದೆ. ಆದ್ದರಿಂದಲೂ ಮುಮುಕ್ಷುಗಳು ಕರ್ಮವನ್ನು ತ್ಯಾಗಮಾಡಬೇಕು.

೨೧-೨೩. ಅಗ್ನಿಷ್ಟೋಮದಂತೆ ವಿದ್ಯೆಯು ಮತ್ತೊಂದು ಸಹಾಯವನ್ನು ಬಯಸ ಬಹುದು ಎಂದು ಹೇಳುವದು ಸರಿಯಲ್ಲ, ಏಕೆಂದರೆ ಅಗ್ನಿಷ್ಟೋಮವು ಕರ್ಮವಾಗಿರುತ್ತದೆ. ಕ್ರಿಯೆಗೆ ಅನೇಕ ಕಾರಕಗಳು ಬೇಕಾಗಿರುತ್ತವೆ, ಮತ್ತು ಕ್ರಿಯೆಯು ಫಲವನ್ನುಂಟುಮಾಡುವ ಸಾಧನವಾಗಿರುತ್ತದೆ; ಆದ್ದರಿಂದ ಅಗ್ನಿಷ್ಟೋಮಕ್ಕೆ ಮತ್ತೊಂದರ ಸಹಾಯವು ಬೇಕಾಗ ಬಹುದು. ಆದರೆ ವಿದ್ಯೆಯೆಂದರೆ ವಿಷಯವನ್ನು ತಿಳಿಸತಕ್ಕದ್ದೇ ಹೊರತು ಉಂಟುಮಾಡ ತಕ್ಕದ್ದಲ್ಲ; ಅದು ಕ್ರಿಯೆಯೂ ಅಲ್ಲ. ಆದ್ದರಿಂದ ಅದಕ್ಕೆ ವಸ್ತುವನ್ನು ತಿಳಿಸಿಕೊಡು ವದಕ್ಕೆ ಮತ್ತೆ ಯಾವ ಸಹಾಯವೂ ಬೇಕಿರುವದಿಲ್ಲ.

೨೪. ನಿತ್ಯಕರ್ಮವನ್ನು ಬಿಟ್ಟರೆ ಪ್ರತ್ಯವಾಯವಾಗುವದರಿಂದ ಬದುಕಿರುವವರೆಗೂ ಕರ್ಮಗಳನ್ನು ಮಾಡುತ್ತಲೇ ಇರಬೇಕು ಎಂಬುದು ಸರಿಯಲ್ಲ. ಏಕೆಂದರೆ ಅಹಂಕಾರವೂ ಫಲೇಚ್ಛೆಯೂ ಇರುವವನೇ ಕರ್ಮವನ್ನು ಮಾಡುವವನು; ಅವನು ನಿತ್ಯಕರ್ಮವನ್ನು ಬಿಟ್ಟರೆ ಪ್ರತ್ಯವಾಯವಾದರೂ ಆಗಬಹುದು. ಆದರೆ ಅಹಂಕಾರವಾಗಲಿ ಫಲೇಚ್ಛೆಯಾಗಲಿ ಇಲ್ಲದ ಜ್ಞಾನಿಗೆ ಕರ್ಮವಾಗಲಿ ಅದನ್ನು ಬಿಟ್ಟದ್ದರಿಂದ ಪ್ರತ್ಯಯವಾಗಲಿ ಆಗಲಾರದು.

೨೫. ಆದ್ದರಿಂದ ಅಜ್ಞಾನವನ್ನು ನಾಶಮಾಡುವದರ ಮೂಲಕ ಸಂಸಾರವನ್ನು ಕೊಲಗಿಸುವದಕ್ಕೆಂದೇ ಬ್ರಹ್ಮವಿದ್ಯೆಯನ್ನು ತಿಳಿಸುವ ಉಪನಿಷತ್ತು ಪ್ರಾರಂಭವಾಗಿರುತ್ತದೆ. ಸಂಸಾರವನ್ನು ನಾಶಮಾಡುವದರಿಂದಲೇ ಬ್ರಹ್ಮವಿದ್ಯೆಗೆ ಉಪನಿಷತ್ತು ಎಂಬ ಹೆಸರು ಬಂದಿರುತ್ತದೆ. ಕರ್ಮದ ಗೋಜು ವಿದ್ಯೆಗೆ ಎಳ್ಳಷ್ಟೂ ಇಲ್ಲ ಎಂಬುದೇ ಸಿದ್ಧಾಂತವು.



# ೨. ಆತ್ಮಜ್ಞಾನೋತ್ಪತ್ತಿ

## ಶಾಸ್ತ್ರದಿಂದ ಆತ್ಮನನ್ನು ಅರಿಯುವ ರೀತಿ

**ಪ್ರತಿಷೇದ್ಧುಮಶಕ್ಯತ್ವಾನ್ನೇತಿ ನೇತೀತಿ ಶೇಷಿತಮ್ ।**
**ಇದಂ ನಾಹಮಿದಂ ನಾಹಮಿತ್ಯದ್ಧಾ ಪ್ರತಿಪದ್ಯತೇ ॥ ೧ ॥**

೧. 'ಇದಲ್ಲ, ಇದಲ್ಲ' (ಬೃ. ೨-೩-೬) ಎಂದು ಉಳಿಸಿಕೊಂಡಿರುವ (ಆತ್ಮನನ್ನು) ಅಲ್ಲಗಳೆಯುವದಕ್ಕೆ ಆಗದೆ ಇರುವದರಿಂದ[1] 'ಇದು ನಾನಲ್ಲ, ಇದು ನಾನಲ್ಲ' ಎಂದು ಸರಿಯಾಗಿ ತಿಳಿದುಕೊಳ್ಳುತ್ತಾನೆ[2].

## ಶಾಸ್ತ್ರಜನ್ಯಜ್ಞಾನವು ಪ್ರತ್ಯಕ್ಷಬಾಧಿತವಲ್ಲ

**ಅಹಂಧೀರಿದಮಾತ್ಮೋತ್ಥಾ ವಾಚಾರಮ್ಭಣಗೋಚರಾ ।**
**ನಿಷಿದ್ಧಾತ್ಮೋದ್ಭವತ್ವಾತ್ ಸಾ ನ ಪುನರ್ಮಾನತಾಂ ವ್ರಜೇತ್ ॥ ೨ ॥**
**ಪೂರ್ವಬುದ್ಧಿಮಬಾಧಿತ್ವಾ ನೋತ್ತರಾ ಜಾಯತೇ ಮತಿಃ ।**
**ದೃಶಿರೇಕಃ ಸ್ವಯಂಸಿದ್ಧಃ ಫಲತ್ವಾತ್ ಸ ನ ಬಾಧ್ಯತೇ ॥ ೩ ॥**

೨-೩. ನಾನೆಂಬ ಬುದ್ಧಿಯು ಇದು ಎಂಬ ಆತ್ಮನಿಂದ ಉಂಟಾದದ್ದು[3], ಬರಿಯ ಮಾತಿನ ಕಾರ್ಯವೇ (ಅದರ) ವಿಷಯವು[4]. ಬಾಧಿತವಾದ ಆತ್ಮನಿಂದ ಉಂಟಾಗಿರುವದರಿಂದ ಮತ್ತೆ ಅದು ಪ್ರಾಮಾಣ್ಯವನ್ನು ಹೊಂದಲಾರದು. ಹಿಂದಿನ ಬುದ್ಧಿಯನ್ನು ಬಾಧಿಸದೆ ಮುಂದಿನ ಬುದ್ಧಿಯು ಉಂಟಾಗುವದಿಲ್ಲ[5].

---

1. ಅನಾತ್ಮವೆಲ್ಲವನ್ನೂ ನಾನಲ್ಲವೆಂದು ಅಲ್ಲಗಳೆದ ಬಳಿಕ ಉಳಿಯುವ ಆತ್ಮನನ್ನು ನಾನಲ್ಲವೆಂದು ಅಲ್ಲಗಳೆಯುವದಕ್ಕೆ ಆಗುವದಿಲ್ಲ; ಏಕೆಂದರೆ ಅಲ್ಲಗಳೆಯುವದಕ್ಕೆ ಒಬ್ಬನು ಬೇಕು. ಅವನೇ ನಿಜವಾದ ಆತ್ಮನು.

2. ಸ್ಥೂಲಸೂಕ್ಷ್ಮವಾದ ಅನಾತ್ಮದಲ್ಲಿ ಆತ್ಮಬುದ್ಧಿಯನ್ನು ನೀಗಿಕೊಳ್ಳುವದರಿಂದಲೇ ನಿಜವಾದ ಆತ್ಮನನ್ನು ಅರಿತುಕೊಳ್ಳಬೇಕು. ಅನಾತ್ಮದಂತೆ ಅವನನ್ನು ವಿಷಯೀಕರಿಸುವದಕ್ಕಾಗುವದಿಲ್ಲ.

3. ವಿಷಯವಾದ ಅನಾತ್ಮವಾದ ಅಹಂಕಾರದಿಂದಲೇ ಅಹಂಬುದ್ಧಿಯು ಉಂಟಾಗಿರುತ್ತದೆ.

4. ಕಾರ್ಯವು ಕಾರಣಕ್ಕಿಂತ ಬೇರೆಯಾಗಿಲ್ಲ; ಬರಿಯ ಮಾತೇ ಹೊರತು ಕಾರ್ಯವೆಂಬ ಸ್ವತಂತ್ರಪದಾರ್ಥವಿಲ್ಲ. ಛಾಂ. ೬-೧-೪ ರ ಸೂಚನೆ.

5. ಇದು ಬೆಳ್ಳಿ ಎಂಬ ಭ್ರಾಂತಿಯನ್ನು ಹೊಡೆದುಹಾಕಿಯೇ ಇದು ಕಪ್ಪೆಯಚಿಪ್ಪೆಂಬ ಸರಿಯಾದ ಬುದ್ಧಿಯುಂಟಾಗುವದು.

ಸಾಕ್ಷಿಯು ಒಬ್ಬನೇ, ಸ್ವಯಂಸಿದ್ಧನಾಗಿರುತ್ತಾನೆ. ಅವನು ಫಲರೂಪವಾಗಿರುವದರಿಂದ ಬಾಧಿತನಾಗುವದಿಲ್ಲ[1].

## ಅನಾತ್ಮಬಂಧದಿಂದ ಬಿಡುಗಡೆ

**ಇದಂವನಮತಿಕ್ರಮ್ಯ ಶೋಕಮೋಹಾದಿದೂಷಿತಮ್ ।**
**ವನಾದ್ಗಾನ್ಧಾರಕೋ ಯದ್ವತ್ ಸ್ವಾತ್ಮಾನಂ ಪ್ರತಿಪದ್ಯತೇ ॥ ೪ ॥**

೪. ಶೋಕಮೋಹಾದಿಗಳೆಂಬ ದೋಷವುಳ್ಳ ಇದೆಂಬ ಕಾಡನ್ನು ದಾಟಿ ಗಾಂಧಾರದೇಶದವನಂತೆ ತನ್ನ ಆತ್ಮನನ್ನು ಸೇರಿಕೊಳ್ಳುತ್ತಾನೆ[2].



## ಆತ್ಮಜ್ಞಾನೋತ್ಪತ್ತಿಪ್ರಕರಣದ ಸಾರ

೧. ಶಾಸ್ತ್ರವು ಆತ್ಮನನ್ನು ಹೊಸದಾಗಿ ಉಂಟುಮಾಡುವದಿಲ್ಲ. ಅನಾತ್ಮವನ್ನು ಆತ್ಮನಲ್ಲವೆಂದು ತಿಳಿಸಿಕೊಡುತ್ತದೆ. ಇದರಿಂದ ಆತ್ಮಜ್ಞಾನದ ನಿಶ್ಚಯವಾಗುತ್ತದೆ.

೨-೩. ದೇಹಾದಿಗಳು ನಾನು ಎಂಬ ಬುದ್ಧಿಯುಂಟಾಗಿದ್ದರೂ ಆ ದೇಹಾದಿಗಳು ಬರಿಯ ಮಾತಿನಿಂದ ಹೇಳುವ ಅಸತ್ಪದಾರ್ಥಗಳು. ಇವುಗಳು ನಾನೆಂಬುದು ಸುಳ್ಳೆಂದು ತೋರಿಸಿದ ಹೊರತು ಶಾಸ್ತ್ರಜನ್ಯವಾದ ಆತ್ಮಜ್ಞಾನವು ಉಂಟಾಗುವದಿಲ್ಲ. ಆತ್ಮನು ಅದ್ವಿತೀಯನೂ ಸ್ವಯಂಪ್ರಕಾಶಕನೂ ಅನಾತ್ಮ ವಸ್ತುಗಳ ಜ್ಞಾನದ ಫಲವಾದ ಚೈತನ್ಯವೂ ಆಗಿರುವದರಿಂದ ಆತ್ಮಜ್ಞಾನವನ್ನು ಬಾಧಿಸುವದಕ್ಕೆ ಯಾವದೂ ಇರುವಂತಿಲ್ಲ.

೪. ಗಾಂಧಾರದೇಶದವನು ಕಾಡನ್ನು ದಾಟಿ ಊರನ್ನು ಸೇರಿದಂತೆ ಅಜ್ಞಾನಕಲ್ಪಿತವಾದ ವಿಷಯಪ್ರಪಂಚವನ್ನು ಶಾಸ್ತ್ರೋಪದೇಶದಿಂದ ಮೀರಿ ಆತ್ಮಸ್ವರೂಪವನ್ನು ತಿಳಿದುಕೊಳ್ಳಬಹುದು.

---

1. ಆತ್ಮನು ಅದ್ವಿತೀಯನು ; ಆದ್ದರಿಂದ ಆತ್ಮನು ಹುಸಿ ಎಂದು ತೋರಿಸುವ ಪ್ರಮಾಣವಿಲ್ಲ. ಆತ್ಮನು ಸ್ವಯಂಸಿದ್ಧನು ; ಆದ್ದರಿಂದ ಆತ್ಮನು ಇದಾನೆಂದು ಸಾಧಿಸುವ ಅಥವಾ ಇಲ್ಲವೆಂದು ಬಾಧಿಸುವ ಪ್ರಮಾಣವಿಲ್ಲ. ಆತ್ಮನು ಜ್ಞಾನದ ಫಲವಾಗಿರುವ ಚೈತನ್ಯವು; ಆದ್ದರಿಂದ ಅದರಿಂದ ಮುಂದಕ್ಕೆ ಸಾಧಕವಾಗಲಿ ಬಾಧಕವಾಗಲಿ ಇರುವ ಸಂಭವವಿಲ್ಲ.

2. ಗಾಂಧಾರದೇಶದವನೊಬ್ಬನನ್ನು ಕಳ್ಳರು ಕಣ್ಣುಕಟ್ಟಿ ಕಾಡಿನೊಳಗೆ ಬಿಟ್ಟಿದ್ದರು. ದಾರಿಹೋಕನೊಬ್ಬನು ಅವನ ಕಣ್ಣುಕಟ್ಟನ್ನು ಬಿಚ್ಚಿ ಈ ದಿಕ್ಕಿನಲ್ಲಿ ಗಾಂಧಾರದೇಶವಿದೆ ಎಂದು ಹೇಳಿಕೊಟ್ಟನು. ಆಗ ಅವನು ಕಾಡನ್ನು ದಾಟಿಹೋಗಿ ಊರನ್ನು ಸೇರಿಕೊಂಡನು. ಇದರಂತೆ ಶಾಸ್ತ್ರೋಪದೇಶದಿಂದ 'ಇದಂವನವನ್ನು' ಎಂದರೆ ವಿಷಯರೂಪವಾಗಿರುವ ದುಃಖರೂಪವಾದ ಅನಾತ್ಮವನ್ನೆಲ್ಲ ಅಲ್ಲಗಳೆದು ತನ್ನ ಸ್ವರೂಪವಾದ ಆತ್ಮನನ್ನು ಜಿಜ್ಞಾಸುವು ಅರಿತುಕೊಳ್ಳುತ್ತಾನೆ ಎಂದರ್ಥ. ಈ ದೃಷ್ಟಾಂತವು ಛಾಂ. ೬-೧೪-೧ರಲ್ಲಿದೆ.

# ೩. ಈಶ್ವರಾತ್ಮ

## ಈಶ್ವರನು ಆತ್ಮನಲ್ಲವೆಂದರೆ ದೋಷ

**ಈಶ್ವರಶ್ಚೇದನಾತ್ಮಾ ಸ್ಯಾನ್ನಾಸಾವಸ್ಮೀತಿ ಧಾರಯೇತ್ |**
**ಆತ್ಮಾ ಚೇದೀಶ್ವರೋಽಸ್ಮೀತಿ ವಿದ್ಯಾ ಸಾನ್ಯನಿವರ್ತಿಕಾ || ೧ ||**

೧. ಈಶ್ವರನು ತಾನಲ್ಲದೆ ಇದ್ದರೆ 'ಅವನೇ ನಾನಾಗಿರುವೆನು' ಎಂದು ಚಿಂತಿಸಬಾರದಾಗುವದು[1]. ತಾನೇ ಆದರೆ 'ಈಶ್ವರನಾಗಿರುವೆನು' ಎಂಬುದು ವಿದ್ಯೆಯಾಗುವದು ; ಅದು (ತನಗಿಂತ) ಬೇರೆಯಾದ ಅವಿದ್ಯೆಯನ್ನು ನಿವೃತ್ತಿಗೊಳಿಸುತ್ತದೆ (ಎಂದಾಗುವದು)[2].

## ಅಸ್ಥೂಲಾದಿಶ್ರುತಿಯು ಅಧ್ಯಾಸವನ್ನು ಕಳೆಯುತ್ತದೆ

**ಆತ್ಮನೋಽನ್ಯಸ್ಯ ಚೇದ್ಧರ್ಮಾ ಅಸ್ಥೂಲತ್ವಾದಯೋ ಮತಾಃ |**
**ಅಜ್ಞೇಯತ್ವೇಽಸ್ಯ ಕಿಂ ತೈಃ ಸ್ಯಾದಾತ್ಮತ್ವೇ ಹ್ಯನ್ಯಧೀಹ್ನುತಿಃ || ೨ ||**
**ಮಿಥ್ಯಾಧ್ಯಾಸನಿಷೇಧಾರ್ಥಂ ತತೋಽಸ್ಥೂಲಾದಿ ಗೃಹ್ಯತಾಮ್ |**
**ಪರತ್ರ ಚೇನ್ನಿಷೇಧಾರ್ಥಂ ಶೂನ್ಯತಾವರ್ಣನಂ ಹಿ ತತ್ || ೩ ||**

೨-೩. ಅಸ್ಥೂಲತ್ವವೇ ಮುಂತಾದವುಗಳು ತನಗಿಂತ ಬೇರೆಯಾದ (ಈಶ್ವರನ) ಧರ್ಮಗಳೆಂದಾದರೆ ಅವನು ಅಜ್ಞೇಯನಾಗಿರುವದರಿಂದ ಅವುಗಳಿಂದ ಏನು ಪ್ರಯೋಜನವಾದೀತು[3] ? ಈಶ್ವರನು (ತನ್ನ) ಆತ್ಮನೇ ಆದರೆ ಅನ್ಯಬುದ್ಧಿಯನ್ನು ಅಲ್ಲಗಳೆದಂತಾಗುವದು[4]. ಆದ್ದರಿಂದ ಅಸ್ಥೂಲವೇ ಮುಂತಾದ (ವಾಕ್ಯವು) ತಪ್ಪಾಗಿ ಆಗಿರುವ ಅಧ್ಯಾಸವನ್ನು ಕಳೆಯುವದಕ್ಕಾಗಿ ಎಂದು ಗ್ರಹಿಸಬೇಕು. (ತಾನಲ್ಲದ) ಮತ್ತೊಂದು ವಸ್ತುವಿನಲ್ಲಿ (ಸ್ಥೂಲತ್ವಾದಿ

---

1. ನಾನು ಬ್ರಹ್ಮವೆಂದು ತಿಳಿದರೆ ಸರ್ವಾತ್ಮನಾಗುವನು (ಬೃ. ೧-೪-೧೦) ಎಂದು ಶ್ರುತಿಯಲ್ಲಿ ಹೇಳಿರುವದು ಹೊಂದುವದಿಲ್ಲ.

2. ತಾನೇ ಬ್ರಹ್ಮವಾಗಿದ್ದರೆ ಶ್ರುತಿಯಲ್ಲಿ ಅದನ್ನು ಉಪದೇಶಿಸುವದೇಕೆ ? -ಎಂದರೆ ತಾನಲ್ಲದ್ದನ್ನು ತಾನೆಂದು ತಪ್ಪಾಗಿತಿಳಿದುಕೊಂಡಿರುವದನ್ನು ತಿದ್ದುವದಕ್ಕೆ.

3. ಜಿಜ್ಞಾಸುವು ಅರಿಯದೆ ಇರುವ ಈಶ್ವರನಲ್ಲಿ ಸ್ಥೂಲತ್ವಾದಿಧರ್ಮಗಳನ್ನು ತಪ್ಪಾಗಿ ತಿಳಿದುಕೊಳ್ಳುವ ಸಂಭವವಿಲ್ಲದ್ದರಿಂದ ಅವನು ಅಸ್ಥೂಲನು ಎಂದು ಮುಂತಾಗಿ ಶ್ರುತಿಯಲ್ಲಿ ಉಪದೇಶಿಸಿದ ಆವಶ್ಯಕತೆ ಯಿರುವದಿಲ್ಲ.

4. ತಾನು ಸ್ಥೂಲನು ಎಂದು ಮುಂತಾಗಿ ತಪ್ಪಾಗಿತಿಳಿದುಕೊಂಡಿರುವವನ್ನು ಕಳೆಯುವದಕ್ಕೆ ಶ್ರುತಿಯಲ್ಲಿ ಅಸ್ಥೂಲತ್ವಾದಿಧರ್ಮಗಳನ್ನುಪದೇಶಿಸಿದೆ ಎಂಬ ಪ್ರಯೋಜನವು ವಾಕ್ಯಕ್ಕೆ ಬರುತ್ತದೆ.

ಧರ್ಮಗಳನ್ನು) ಅಲ್ಲಗಳೆಯುವದಕ್ಕಾಗಿ (ಅಸ್ಥೂಲತ್ವಾದಿಗಳನ್ನು ಹೇಳಿದೆ) ಎಂದರೆ ಅದು ಶೂನ್ಯದ ವರ್ಣನೆಯೇ (ಆಗುವದು)[1].

## ಅಪ್ರಾಣಾದಿಶ್ರುತಿಯೂ ಪ್ರತ್ಯಗಾತ್ಮನಿಗೇ ಹೊಂದುತ್ತದೆ

**ಬುಭುತ್ಸೋರ್ಯದಿ ಚಾನ್ಯತ್ರ ಪ್ರತ್ಯಗಾತ್ಮನ ಇಷ್ಯತೇ |**
**ಅಪ್ರಾಣೋ ಹ್ಯಮನಾಃ ಶುಭ್ರ ಇತಿ ಚಾನರ್ಥಕಂ ವಚಃ || ೪ ||**

೪. ಜಿಜ್ಞಾಸುವಿನ ಪ್ರತ್ಯಗಾತ್ಮನಿಗಿಂತ ಬೇರೆಯವನಾಗಿರುವ (ಈಶ್ವರನ ವಿಷಯವು ಎಂದು) ಒಪ್ಪುವದಾದರೆ "ಅಪ್ರಾಣೋ ಹ್ಯಮನಾಃ ಶುಭ್ರಃ" (ಪ್ರಾಣವಿಲ್ಲದವನು, ಮನಸ್ಸಿಲ್ಲದವನು, ಶುಭ್ರನು) ಎಂಬ (ಮುಂ. ೨-೧-೨) ವಾಕ್ಯವೂ ವ್ಯರ್ಥವಾಗುತ್ತದೆ[2].

———:○:———

1. ಆತ್ಮನಿಗಿಂತ ಬೇರೆಯಾಗಿರುವ ವಸ್ತುವಿನಲ್ಲಿ ಸ್ಥೂಲತ್ವ, ಅಣುತ್ವ ಮುಂತಾದ ಧರ್ಮಗಳೆಲ್ಲವನ್ನೂ ಅಲ್ಲಗಳೆದರೆ ಅದು ಯಾವ ವಸ್ತುವೆಂದು ಹೇಳುವದಕ್ಕೆ ಆಗುವದೇ ಇಲ್ಲವಾದ್ದರಿಂದ ಶ್ರುತಿಯಲ್ಲಿ ಶೂನ್ಯವನ್ನೇ ಹೇಳಿದೆ ಎಂದು ಅನಿಷ್ಟವು ಬಂದೊದಗುತ್ತದೆ. ಅದರ ಬದಲು ಆತ್ಮಸ್ವರೂಪದಲ್ಲಿ ಅಧ್ಯಸ್ತವಾಗಿರುವ ಸ್ಥೂಲತ್ವಾದಿಗಳನ್ನು ನಿಷೇಧಿಸಿದೆ ಎಂದು ತಿಳಿದರೆ ಆತ್ಮನು ನಿರ್ಧರ್ಮಕನೆಂಬುದು ಶ್ರುತಿಯ ತಾತ್ಪರ್ಯವಾಗುವದು. ಆತ್ಮನೆಂದರೆ ತನ್ನ ಸ್ವರೂಪವೇ ಆಗಿರುವದರಿಂದ ತನ್ನನ್ನು ತಾನು ಇಲ್ಲವೆಂದು ಕಲ್ಪಿಸುವದು ಆಗದೆ ಇರುವದರಿಂದ ಶೂನ್ಯವಾದಪ್ರಸಕ್ತಿಯೂ ಬರುವದಿಲ್ಲ.

2. ಪ್ರಾಣ, ಮನಸ್ಸು -ಮುಂತಾದವುಗಳು ನಮ್ಮಗಳ ಆತ್ಮನಲ್ಲಿ ಪ್ರಸಕ್ತವಾಗಿರುವದರಿಂದ ಅವನ್ನು ದುರಿತೋರಿಕೆ ಎಂದು ತಿಳಿಸುವದಕ್ಕೆ ಶ್ರುತಿಯು ಇವನ್ನು ಅಲ್ಲಗಳೆದಿದೆ ಎಂದು ನಿಷೇಧವು ಸಾರ್ಥಕವಾಗುವದು ; ಹಾಗಿಲ್ಲದಿದ್ದರೆ ಅಪ್ರಾಪ್ತನಿಷೇಧವಾಗುವದರಿಂದ ಶ್ರುತಿಗೆ ಪ್ರಾಮಾಣ್ಯವಿಲ್ಲದೆ ಹೋಗುವದು. ನಿಷೇಧವಾಕ್ಯಗಳಿಗೆಲ್ಲ ಹೀಗೆಯೇ ಅಧ್ಯಾಸವನ್ನು ಅಲ್ಲಗಳೆಯುವದರಲ್ಲಿ ತಾತ್ಪರ್ಯವನ್ನು ಕಲ್ಪಿಸಬೇಕು.

# ಈಶ್ವರಾತ್ಮಪ್ರಕರಣದ ಸಾರ

೧. ಶ್ರುತಿಯಲ್ಲಿ ಈಶ್ವರನೇ ನಾನೆಂದು ತಿಳಿಯಬೇಕೆಂದು ಬೋಧಿಸಿದೆ. ಈಶ್ವರನು ನಮ್ಮ ಆತ್ಮನಲ್ಲದಿದ್ದರೆ ಈ ಶ್ರುತಿಯು ಅಪ್ರಮಾಣವಾಗುತ್ತದೆ. ಈಶ್ವರನು ನಮ್ಮ ಆತ್ಮನೇ ಆದರೆ ಆತ್ಮನಲ್ಲಿ ಅವಿದ್ಯೆಯಿಂದ ಆರೋಪಿತವಾಗಿರುವ ಸಂಸಾರಿತ್ವವನ್ನು ಈ ಶ್ರುತಿಯು ಅಲ್ಲಗಳೆಯುತ್ತದೆ ಎಂದು ವಾಕ್ಯಕ್ಕೆ ಪ್ರಾಮಾಣ್ಯವು ಬರುತ್ತದೆ. ಆದ್ದರಿಂದ ಜೀವೇಶ್ವರೈಕ್ಯವನ್ನು ತಿಳಿಸುವ ವಾಕ್ಯದ ಪ್ರಾಮಾಣ್ಯಕ್ಕಾಗಿ ಆತ್ಮೈಕತ್ವವೇ ಪರಮಾರ್ಥವೆಂದು ಒಪ್ಪಬೇಕು.

೨-೪. ಇದರಂತೆ ನಿಷೇಧವಾಕ್ಯಗಳ ಪ್ರಾಮಾಣ್ಯಕ್ಕಾಗಿಯೂ ಆತ್ಮೈಕತ್ವವನ್ನು ಒಪ್ಪಬೇಕು. ಹೇಗೆಂದರೆ ಆತ್ಮನಲ್ಲಿ ಅಸ್ಥೂಲತ್ವಾದಿಗಳನ್ನು ಉಪದೇಶಿಸಿರುವದು ತಪ್ಪು ತಿಳಿವಳಿಕೆಯಿಂದ ಅಧ್ಯಸ್ತವಾಗಿರುವ ಸ್ಥೂಲತ್ವಾದಿಧರ್ಮಗಳನ್ನು ಅಲ್ಲಗಳೆಯುವದಕ್ಕೆ ಎಂದು ನಿಷೇಧವಾಕ್ಯಗಳಿಗೆ ಪ್ರಾಮಾಣ್ಯವನ್ನು ಕಲ್ಪಿಸಬಹುದು. ಹಾಗಿಲ್ಲದಿದ್ದರೆ ತನಗಿಂತ ಬೇರೆಯಾಗಿರುವ ವಸ್ತುವನ್ನು ನಿರ್ಧರ್ಮಕವೆಂದು ಶಾಸ್ತ್ರವು ತಿಳಿಸಿದರೆ ಅದು ಶೂನ್ಯವೆಂದೇ ಆಗುವದರಿಂದ ನಿಷೇಧವಾಕ್ಯಕ್ಕೆ ಪ್ರಾಮಾಣ್ಯವಿಲ್ಲವೆ ಹೋಗುತ್ತದೆ. ಇದರಂತೆ ಜೀವನಲ್ಲಿ ಕಲ್ಪಿತವಾಗಿರುವ ಪ್ರಾಣವನ್ನೂ ಮನಸ್ಸನ್ನೂ ಅಲ್ಲಗಳೆಯುವದಕ್ಕೆ ಅಪ್ರಾಣಾದಿವಾಕ್ಯಗಳು ಬಂದಿವೆ ಎಂದರೆ ಅವುಗಳಿಗೆ ಪ್ರಾಮಾಣ್ಯವು ಬರುತ್ತದೆ; ಹಾಗಿಲ್ಲದಿದ್ದರೆ ಅಪ್ರಸಕ್ತವಾದದ್ದನ್ನು ಪ್ರತಿಷೇಧಮಾಡುತ್ತವೆ ಎಂದು ಆ ವಾಕ್ಯಗಳು ವ್ಯರ್ಥವೆಂದೇ ಆಗುತ್ತದೆ. ಆದ್ದರಿಂದ ಶ್ರುತಿಪ್ರಾಮಾಣ್ಯಕ್ಕಾಗಿ ಈಶ್ವರನು ನಮ್ಮಗಳ ಆತ್ಮನೆಂದೇ ತಿಳಿಯಬೇಕು.

——o——

# ೪. ತತ್ತ್ವಜ್ಞಾನಸ್ವಭಾವ

## ಜ್ಞಾನವುಂಟಾದಬಳಿಕ ಕರ್ಮವು ಫಲವನ್ನು ಕೊಡಲಾರದು

**ಅಹಂಪ್ರತ್ಯಯಬೀಜಂ ಯದಹಂಪ್ರತ್ಯಯವತ್ಸ್ಥಿತಮ್ ।**
**ನಾಹಂಪ್ರತ್ಯಯವಹ್ನ್ಯುಷ್ಟಂ ಕಥಂ ಕರ್ಮ ಪ್ರರೋಹತಿ ॥ ೧ ॥**

೧. ಯಾವದು ಅಹಂಪ್ರತ್ಯಯವೆಂಬ ಬೀಜವುಳ್ಳದ್ದಾಗಿ[1] ಅಹಂ ಪ್ರತ್ಯಯವುಳ್ಳವನಲ್ಲಿಯೇ ಇದ್ದುಕೊಂಡಿರುವದೋ[2] (ಅಂಥ) ಕರ್ಮವು ನಾನಲ್ಲ ಎಂಬ ಪ್ರತ್ಯಯವೆಂಬ ಬೆಂಕಿಯಿಂದ ಸುಟ್ಟುಹೋದಬಳಿಕ[2] (ಮತ್ತೆ) ಹೇಗೆ ಮೊಳೆಯುವದು ?

## ಪ್ರಾರಬ್ಧಕರ್ಮಕ್ಕೂ ಮಿಕ್ಕ ಕರ್ಮಕ್ಕೂ ತಾರತಮ್ಯವಿದೆ

**ದೃಷ್ಟವಚ್ಚೇತ್ ಪ್ರರೋಹಃ ಸ್ಯಾನ್ನಾನ್ಯಕರ್ಮಾ ಸ ಇಷ್ಯತೇ ।**
**ತನ್ನಿರೋಧೇ ಕಥಂ ತತ್ ಸ್ಯಾತ್ ಪೃಚ್ಛಾಮೋ ವಸ್ತದುಚ್ಯತಾಮ್**

೨. ಕಂಡಿರುವ (ಪ್ರಾರಬ್ಧಕರ್ಮ)ದಂತೆಯೇ (ಅದೂ) ಮೊಳೆಯು ವದೂ ಆಗಬಹುದು ಎನ್ನುವದಾದರೆ ಹಾಗಲ್ಲ. ಅದು ಮತ್ತೊಂದು ಕರ್ಮ ದಿಂದ ಆದದ್ದು ಎಂದು (ನಾವು) ಒಪ್ಪಿರುತ್ತೇವೆ[3]. ಅದು ನಾಶವಾದಮೇಲೆ ಆ (ಕರ್ಮವು) ಹೇಗೆ ಉಂಟಾದೀತು[4] ? –(ಎಂದು) ನಿಮ್ಮನ್ನು ಕೇಳುತ್ತಿ ದೇವೆ. ಅದನ್ನು ಹೇಳಿರಿ.

---

1. ನಾನೆಂಬ ಅರಿವೇ ಕರ್ಮಕ್ಕೆ ಕಾರಣವು.

2. ನಾನೆಂಬ ಅರಿವುಳ್ಳಾತನೇ ಕರ್ಮಕ್ಕೆ ಕರ್ತೃ. ಪ್ರ. ೧–೧೬ರನ್ನು ನೋಡಿರಿ.

3. ಪ್ರಾರಬ್ಧಕರ್ಮವು ಈಗ ಫಲವನ್ನು ಕೊಟ್ಟಿರುತ್ತದೆ ; ಆ ಕರ್ಮವನ್ನು ಮಾಡಿ ದಾಗ ಅಹಂಕಾರವಿತ್ತು. ಆದ್ದರಿಂದ ಅದು ಅಹಂಕಾರದ ಕಾರ್ಯವು.

4. ಅಹಂಕಾರವು 'ನಾನು ಅಕರ್ತ್ರಾತ್ಮನು' ಎಂಬ ಅರಿವಿನಿಂದ ಬಾಧಿತವಾದ ಮೇಲೆ ಕರ್ಮವು ಉಂಟಾಗಲಾರದು ಎಂದರ್ಥ. ಜ್ಞಾನಿಗೆ ಅಹಂಕಾರವಿಲ್ಲದ್ದರಿಂದ ಅವನಿಗೆ ಸಂಚಿತಾಗಾಮಿಕರ್ಮಗಳ ಫಲವುಂಟಾಗಲಾರದು ಎಂದು ಅಭಿಪ್ರಾಯ.

**ದೇಹಾದ್ಯಾರಂಭಸಾಮರ್ಥ್ಯಾಜ್ಜ್ಞಾನಂ ಸದ್ವಿಷಯಂ ತ್ವಪಿ[1] ।**
**ಅಭಿಭೂಯ ಫಲಂ ಕುರ್ಯಾತ್ ಕರ್ಮಾನ್ತೇ ಜ್ಞಾನಮುದ್ಭವೇತ್**
**ಆರಬ್ಧಸ್ಯ ಫಲೇ ಹ್ಯೇತೇ ಭೋಗೋ ಜ್ಞಾನಂ ಚ ಕರ್ಮಣಃ ।**
**ಅವಿರೋಧಸ್ತಯೋರ್ಯುಕ್ತೋ ವೈಧರ್ಮ್ಯಂ ಚೇತರಸ್ಯ ತು ॥ ೪ ॥**

೩–೪. ದೇಹವೇ ಮುಂತಾದದ್ದನ್ನು ಉಂಟುಮಾಡಿರುವ ಸಾಮರ್ಥ್ಯದಿಂದ (ಪ್ರಾರಬ್ಧ)ಕರ್ಮವು ಪರಮಾರ್ಥವಿಷಯವಾದ ಜ್ಞಾನವನ್ನುಕೂಡ ಮರೆಮಾಡಿ ಫಲವನ್ನು ಕೊಡುತ್ತದೆ[2]. ಕೊನೆಯಲ್ಲಿ ಜ್ಞಾನವು ತೋರಿಕೊಳ್ಳುತ್ತದೆ[3]. ಭೋಗ, ಜ್ಞಾನ – ಈ ಎರಡೂ ಆರಬ್ಧಕರ್ಮಕ್ಕೇ ಫಲಗಳು. ಆದ್ದರಿಂದ ಅವುಗಳೆರಡಕ್ಕೂ ವಿರೋಧವಿಲ್ಲವೆಂಬುದು ಯುಕ್ತವಾಗಿರುತ್ತದೆ[4]. ಆದರೆ ಮಿಕ್ಕ ಕರ್ಮವು (ಹೀಗಲ್ಲ), ಬೇರೆಯ ಸ್ವಭಾವದ್ದಾಗಿರುತ್ತದೆ[5].

## ಜ್ಞಾನದಿಂದ ಕರ್ಮವು ನಾಶವಾಗದು, ಬಾಧಿತವಾಗುತ್ತದೆ

**ದೇಹಾತ್ಮಜ್ಞಾನವಜ್ಜ್ಞಾನಂ ದೇಹಾತ್ಮಜ್ಞಾನಬಾಧಕಮ್ ।**
**ಆತ್ಮನ್ಯೇವ ಭವೇದ್ಯಸ್ಯ ಸ ನೇಚ್ಛನ್ನಪಿ ಮುಚ್ಯತೇ[6] ॥ ೫ ॥**

೫. (ಅಜ್ಞಾನಿಗೆ ಇರುವ) ದೇಹವೇ ನಾನೆಂಬ ಜ್ಞಾನದಂತೆ ದೇಹವೇ ತಾನೆಂಬ ಜ್ಞಾನವನ್ನು ಬಾಧಿಸುವ ಜ್ಞಾನವು ಯಾವನಿಗೆ (ತನ್ನ) ಆತ್ಮನಲ್ಲಿಯೇ ಉಂಟಾಗುವದೋ ಅವನು ಒಲ್ಲೆನೆಂದರೂ ಮುಕ್ತನಾಗುತ್ತಾನೆ[7].

---

1. 'ತ್ವಯಿ' ಎಂಬ ವ್ಯಾ॥ ಪಾಠಕ್ಕಿಂತ ಇದೇ ಉತ್ತಮ.

2. ಶರೀರವನ್ನು ಪ್ರಾರಬ್ಧಕರ್ಮವು ಕೊಟ್ಟುಬಿಟ್ಟಿರುತ್ತದೆ; ಆದ್ದರಿಂದ ಜ್ಞಾನವು ಆ ವಿಷಯದಲ್ಲಿ ಕರ್ಮದ ಸಾಮರ್ಥ್ಯವನ್ನು ತಡೆಯಲಾರದು.

3. ಶರೀರವುಂಟಾದ ಮೇಲೆಯೇ ಜ್ಞಾನವುಂಟಾಗಿರುತ್ತದೆ.

4. ಜ್ಞಾನವು ಎಲ್ಲಾ ಕರ್ಮಕ್ಕೂ ವಿರೋಧಿಯಲ್ಲ; ಮುಂದೆ ಆಗಬೇಕಾಗಿರುವ ಅವಿದ್ಯಾಕಾರ್ಯವಾದ ಕರ್ಮಫಲಕ್ಕೇ ಅದು ವಿರೋಧಿ. ಜ್ಞಾನವುಂಟಾದಬಳಿಕ ಯಾವ ಕರ್ಮವೂ ಮೊಳೆಯಲಾರದು.

5. ಸಂಚಿತಕರ್ಮವು ತನ್ನ ಫಲವನ್ನು ಕೊಡುವದಕ್ಕೆ ಮೊದಲು ಶರೀರವನ್ನುಂಟುಮಾಡಿಕೊಳ್ಳಬೇಕು. ಆದರೆ ಶರೀರಗ್ರಹಣಕ್ಕೆ ಅವಶ್ಯವಾದ ಅವಿದ್ಯೆಯೂ ಕಾಮವೂ ಜ್ಞಾನಿಗೆ ಇರುವದಿಲ್ಲವಾದ್ದರಿಂದ ಅದು ಫಲವನ್ನು ಕೊಡಲಾರದು. ಪ್ರಾರಬ್ಧಕರ್ಮವು ಫಲವನ್ನು ಕೊಟ್ಟದ್ದು ಆಗಿದೆ, ಸಂಚಿತವು ಕೊಡಬೇಕಾಗಿದೆ – ಎಂಬುವೇ ಈ ಎರಡು ಕರ್ಮಗಳಿಗೂ ಇರುವ ವೈಧರ್ಮ್ಯವು. ಇದನ್ನು ಪೂರ್ವಪಕ್ಷಿಯು ಕಡೆಗಣಿಸಿರುತ್ತಾನೆ.

6. ಇದರ ಮುಂದೆ "ತತಃ ಸರ್ವಮಿದಂ ಸಿದ್ಧಂ ಪ್ರಯೋಗೋಽಸ್ಮಾಭಿರೀರಿತಃ ॥" ಎಂಬ ಅರ್ಧಶ್ಲೋಕವು ಕೆಲವು ಪುಸ್ತಕಗಳಲ್ಲಿ ಮಾತ್ರ ಇದೆ. ಇದು ಇಲ್ಲದಿದ್ದರೂ ಪ್ರಕರಣವು ಪೂರ್ಣವಾಗುವದರಿಂದ ಅದನ್ನು ಕೈಬಿಟ್ಟಿದೇನೆ.

7. ನಿತ್ಯಮುಕ್ತನಾಗಿಯೇ ಇರುತ್ತಾನಾದ್ದರಿಂದ ಅವನಿಗೆ ಬಂಧದ ಪ್ರಸಕ್ತಿಯೇ ಇರುವದಿಲ್ಲ.

# ತತ್ತ್ವಜ್ಞಾನಸ್ವಭಾವಪ್ರಕರಣದ ಸಾರ

೧. ದೇಹಾದಿಗಳು ತಾನು ಎಂದು ಅರಿಯುವದೇ ಕರ್ಮಕ್ಕೆ ಕಾರಣವು. ಈ ಅರಿವು ಯಾವನಿಗಿರುವದೋ ಅವನಿಗೇ ಕರ್ಮವು ಇರುತ್ತದೆ; ನಾನು ದೇಹವಲ್ಲ ಎಂಬ ಬುದ್ಧಿಯುಂಟಾದಕೂಡಲೆ ಅದು ಹೋಗಿಬಿಡುತ್ತದೆ, ಮತ್ತೆ ಫಲವನ್ನು ಕೊಡುವದಿಲ್ಲ.

೨-೪. ದೇಹಾಭಿಮಾನವಿರುವಾಗ ಮಾಡಿದ ಕರ್ಮದ ಫಲವಾಗಿ ಹೊಸ ದೇಹವು ಉಂಟಾಗಿಬಿಟ್ಟಿರುತ್ತದೆ. ಆ ದೇಹದಲ್ಲಿ ಜ್ಞಾನವುಂಟಾದ ಮೇಲೆ ಕರ್ತೃಭೋಕ್ತೃಬುದ್ಧಿಯಿರುವದಿಲ್ಲವಾದ್ದರಿಂದ ಇನ್ನುಮುಂದೆ ಸಂಚಿತಾಗಾಮಿಕರ್ಮಗಳು ಫಲವನ್ನು ಕೊಡಲಾರವು.

೫. ಜ್ಞಾನವು ಕರ್ಮವನ್ನು ನಾಶಮಾಡುವದಿಲ್ಲ, ದೇಹಾತ್ಮಬುದ್ಧಿಯನ್ನು ಅಸತ್ಯವೆಂದು ತಿಳಿಸಿ ಬಾಧಿಸುವ ಮೂಲಕ ಕರ್ಮಫಲದ ಅಂಜಿಕೆಯನ್ನು ತಪ್ಪಿಸುವದು. ಆದರಿಂದ ದೇಹಾತ್ಮಜ್ಞಾನದಿಂದಲೇ ಬಂಧವು, ಪರಮಾತ್ಮನೇ ನಾನು ಎಂಬ ಜ್ಞಾನದಿಂದಲೇ ಮುಕ್ತಿಯು.

———:0:———

# ೫. ಬುದ್ಧ್ಯಪರಾಧ

## ಕರ್ಮಿಗಳು ಜ್ಞಾನಕ್ಕೆ ಹೆದರುವದೇಕೆ?

**ಮೂತ್ರಾಶಙ್ಕ್ಯೋ ಯಥೋದಙ್ಕೋ ನಾಗ್ರಹೀದಮೃತಂ ಯಥಾ ।**
**ಕರ್ಮನಾಶಭಯಾಜ್ಜನ್ತೋರಾತ್ಮಜ್ಞಾನಾಗ್ರಹಸ್ತಥಾ ॥ ೧ ॥**

೧. ಹೇಗೆ ಉದಂಕನು ಉಚ್ಚೆ ಎಂಬ ಶಂಕೆಯಿಂದ ನಿಜವಾದ ಅಮೃತವನ್ನುಕೂಡ ತೆಗೆದುಕೊಳ್ಳಲಿಲ್ಲವೋ[1] ಹಾಗೆ ಕರ್ಮನಾಶದ ಅಂಜಿಕೆಯಿಂದ ಜೀವನು ಆತ್ಮಜ್ಞಾನವನ್ನು ಸ್ವೀಕರಿಸುವದಿಲ್ಲ[2].

## ಆತ್ಮನಲ್ಲಿ ಕರ್ತೃತ್ವವು ಭ್ರಾಂತಿಯಿಂದ ತೋರುತ್ತದೆ

**ಬುದ್ಧಿಸ್ಥಶ್ಚಲತೀವಾತ್ಮಾ ಧ್ಯಾಯತೀವ ಚ ದೃಶ್ಯತೇ ।**
**ನೌಗತಸ್ಯ ಯಥಾ ವೃಕ್ಷಾಸ್ತದ್ವತ್ಸಂಸಾರವಿಭ್ರಮಃ ॥ ೨ ॥**
**ನೌಸ್ಥಸ್ಯ ಪ್ರಾತಿಲೋಮ್ಯೇನ ನಗಾನಾಂ ಗಮನಂ ಯಥಾ ।**
**ಆತ್ಮನಃ ಸಂಸೃತಿಸ್ತದ್ವದ್ ಧ್ಯಾಯತೀವೇತಿ ಹಿ ಶ್ರುತಿಃ ॥ ೩ ॥**

೨-೩. ಆತ್ಮನು ಬುದ್ಧಿಯಲ್ಲಿರುವದರಿಂದ[3] ಓಡಾಡುತ್ತಿರುವಂತೆಯೂ ಆಲೋಚನೆಮಾಡುತ್ತಿರುವಂತೆಯೂ ಕಾಣುಬರುತ್ತಾನೆ[4]. ಹಡಗಿನಲ್ಲಿರುವವ

---

1. ಉದಂಕನೆಂಬ ಋಷಿಗೆ ಭಗವಂತನನ್ನು ನೆನಸಿಕೊಂಡಕೂಡಲೆ ನೀರು ದೊರೆಯುವದೆಂಬ ವರವನ್ನು ಶ್ರೀಕೃಷ್ಣನು ಕೊಟ್ಟಿದ್ದನು. ಒಮ್ಮೆ ಅವನು ಭಗವಂತನನ್ನು ಸ್ಮರಿಸಿಕೊಂಡಾಗ ಶ್ರೀಕೃಷ್ಣನು ಆವನಿಗೆ ಅಮೃತವನ್ನು ಕೊಡೆಂದು ಇಂದ್ರನಿಗೆ ಅಪ್ಪಣೆ ಮಾಡಿದನು. ಆದರೆ ಇಂದ್ರನು ಚಂಡಾಲವೇಷದಿಂದ ಅಮೃತಕಲಶವನ್ನು ತಂದು ಕೆಳಗಿಡಲು ಆ ಋಷಿಯು ಅದನ್ನು ಮೂತ್ರವೆಂಬ ಭ್ರಾಂತಿಯಿಂದ ಕುಡಿಯದೆ ಹೋದನು- ಎಂದು ಭಾರತದಲ್ಲಿ ಒಂದು ಕಥೆಯಿದೆ.

2. ಉದಂಕನಿಗೆ ಮೂತ್ರಶಂಕೆಯಿದ್ದರೂ ನಿಜವಾಗಿ ಇಂದ್ರನು ಕೊಟ್ಟದ್ದು ಅಮೃತವೇ. ಇದರಂತೆ ಜನರಿಗೆ ತಮ್ಮ ಕರ್ಮವು ಅಕರ್ತೃತ್ವಜ್ಞಾನದಿಂದ ನಾಶವಾಗುವದೆಂಬ ಅಂಜಿಕೆಯಿದ್ದರೂ ನಿಜವಾಗಿ ಅವರು ಯಾವಾಗಲೂ ಅಕರ್ತೃಸ್ವಭಾವದವರೇ. ಕರ್ಮದ ಫಲವು ತಮಗೆ ಆಗುವದು ನಿಜ; ಅದು ಜ್ಞಾನದಿಂದ ತಪ್ಪಿಹೋಗುತ್ತದೆ -ಎಂದು ಅಜ್ಞರು ತಿಳಿದುಕೊಂಡಿರುವದು ಭ್ರಾಂತಿಯಿಂದಲೇ.

3. ಅಂತಃಕರಣವೆಂಬ ಉಪಾಧಿಯ ನಿಮಿತ್ತದಿಂದ ಎಂದರ್ಥ. ನಿಜವಾಗಿ ಆತ್ಮನು ಅಂತಃಕರಣದಲ್ಲಿರುವನೆಂದು ತಿಳಿಯಬಾರದು.

4. ಆತ್ಮನು ಇದ್ದಂತೆ ಇರುವವನು, ಕೂಟಸ್ಥನು; ಆದರೂ ಕರ್ಮೇಂದ್ರಿಯಗಳ ಮತ್ತು ಜ್ಞಾನೇಂದ್ರಿಯಗಳ ವ್ಯಾಪಾರವು ಅವನಲ್ಲಿ ತೋರುವದು ಅಂತಃಕರಣರೂಪವಾದ ಉಪಾಧಿಯಿಂದ.

ನಿಗೆ ಹೇಗೆ ಮರಗಳು (ಚಲಿಸುತ್ತಿರುವಂತೆ ಕಾಣುವವೋ) ಹಾಗೆಯೇ (ಆತ್ಮನಲ್ಲಿ) ಸಂಸಾರಭ್ರಾಂತಿ(ಯಾಗಿರುತ್ತದೆ). ಹೇಗೆ ಹಡಗಿನಲ್ಲಿರುವವನಿಗೆ ವಿರುದ್ಧವಾದ ಕಡೆಗೆ ಮರಗಳು ಹೋಗುತ್ತಿರುವಂತೆ ಕಾಣಿಸುತ್ತಿರುವವೋ ಇದರಂತೆ ಆತ್ಮನಿಗೆ ಸಂಸಾರವೂ (ಕಾಣಿಸುತ್ತಿರುವದು)[1]. "ಧ್ಯಾಯತೀವ" (ಆಲೋಚನೆ ಮಾಡುತ್ತಿರುವಂತೆ ಇರುತ್ತಾನೆ) ಎಂದಲ್ಲವೆ, (ಬೃ. ೪-೩-೭) ಶ್ರುತಿ (ಯಿರುವದು)[2] ?

## ಆತ್ಮನಲ್ಲಿ ಜ್ಞಾನಕರ್ತೃತ್ವವು ತೋರುವದು ಅಜ್ಞಾನದಿಂದ

**ಚೈತನ್ಯಪ್ರತಿಬಿಮ್ಬೇನ ವ್ಯಾಪ್ತೋ ಬೋಧೋ ಹಿ ಜಾಯತೇ ।**
**ಬುದ್ಧೇಃ ಶಬ್ದಾದಿನಿರ್ಭಾಸಸ್ತೇನ ಮೋಮುಹ್ಯತೇ ಜಗತ್ ॥ ೪ ॥**

೪. ಬುದ್ಧಿಯಲ್ಲಿ ಚೈತನ್ಯಪ್ರತಿಬಿಂಬದಿಂದ ವ್ಯಾಪ್ತವಾಗಿಯೇ ಶಬ್ದಾದಿಗಳಂತೆ ತೋರುವ ಅರಿವು ಉಂಟಾಗುತ್ತದೆ. ಅದರಿಂದ ಲೋಕವು ಮತ್ತೆಮತ್ತೆ ಮರುಳಾಗುತ್ತಿರುವದು[3].

## ಆತ್ಮಚೈತನ್ಯದ ಅನುಭವ

**ಚೈತನ್ಯಭಾಸ್ಯತಾಹಮಸ್ತಾದರ್ಥ್ಯಂ ಚ ತದಸ್ಯ ಯತ್ ।**
**ಇದಮಂಶಪ್ರಹಾಣೇನ ಪರಃ ಸೋಽನುಭವೋ ಭವೇತ್ ॥ ೫ ॥**

೫. ಅಹಂಕಾರವು ಚೈತನ್ಯದಿಂದ ಬೆಳಗಲ್ಪಡತಕ್ಕದ್ದು, ಅದು ಆ (ಚೈತನ್ಯ)ಕ್ಕಾಗಿರತಕ್ಕದ್ದು ಆಗಿರುವದಲ್ಲ, ಆ (ಕಾರಣ)ದಿಂದ, ಇದು ಎಂಬ ಅಂಶವನ್ನು ಬಿಟ್ಟುಬಿಡುವದರಿಂದ[4] ಅದು ಪರಮಾನುಭವವಾಗುವದು.

——:0:——

1. ಮರಗಳು ಚಲಿಸುವದಿಲ್ಲ, ಹಡಗು ಚಲಿಸುತ್ತಿರುವದು; ಆದರೂ ಮರಗಳು ಚಲಿಸುವಂತೆ ಕಾಣುತ್ತವೆ. ಇದರಂತೆ ಅಂತಃಕರಣದಲ್ಲಿ ಆಗುವ ವಿಕಾರವು ಆತ್ಮನಲ್ಲಿಯೇ ಆಗುತ್ತಿರುವಂತೆ ಕಾಣುತ್ತದೆ.

2. ಅಂತಃಕರಣದಿಂದಲೇ ಜೀವನು ಸಂಸಾರಧರ್ಮವುಳ್ಳವನಂತೆ ತೋರುತ್ತಿರುವನು ಎಂದು ಶ್ರುತಿಯ ಅರ್ಥ.

3. ಶಬ್ದವೇ ಮುಂತಾದ ವಿಷಯಗಳನ್ನು ನಾವು ಅರಿಯುವಾಗ ಅಂತಃಕರಣದ ವೃತ್ತಿಗಳು ಶಬ್ದವೇ ಮುಂತಾದ ಆಕಾರವನ್ನು ತಳೆಯುತ್ತವೆ. ಅವುಗಳು ಚೈತನ್ಯದಿಂದ ವ್ಯಾಪ್ತವಾಗಿಯೇ ಉಂಟಾಗುತ್ತವೆ; ಅವುಗಳಲ್ಲಿ ಚೈತನ್ಯದ ಪ್ರತಿಬಿಂಬವೂ ಉಂಟಾಗಿರುತ್ತದೆ. ಈ ವೃತ್ತಿಗಳನ್ನೇ ಜ್ಞಾನ, ಅರಿವು -ಎಂದು ಅಜ್ಞರು ಭಾವಿಸುತ್ತಾರೆ. ತೈ. ಭಾ. ದಲ್ಲಿ 'ಸತ್ಯಂ ಜ್ಞಾನಮನನ್ತಮ್' ಎಂಬ ವಾಕ್ಯದಲ್ಲಿ ಜ್ಞಾನಶಬ್ದವಿವರಣೆಯನ್ನು (ಭಾ. ಭಾ. ೧೦೭) ನೋಡಿ.

4. ವಿಷಯವಾಗಿರುವ ಅಹಂಕಾರವು ಆತ್ಮನಲ್ಲವೆಂದು ಬಿಟ್ಟು ಚೈತನ್ಯವೇ ಆತ್ಮನೆಂದು ನಿಶ್ಚಯಿಸಿದರೆ.

# ಬುದ್ಧ್ಯಪರಾಧಪ್ರಕರಣದ ಸಾರ

೧. ದೇವೇಂದ್ರನು ತನಗೆ ಕೊಡುವದಕ್ಕೆ ಬಂದ ಅಮೃತವನ್ನು ಉದಂಕನು ಅದು ಮೂತ್ರವೆಂಬ ಶಂಕೆಯಿಂದ ತೆಗೆದುಕೊಳ್ಳಲೊಲ್ಲದೆ ಹೋದಂತೆ, ಜೀವನು ಅಮೃತತ್ವಕ್ಕೆ ಕಾರಣವಾದ ಜ್ಞಾನವನ್ನು ಕರ್ಮಫಲನಾಶಕವೆಂಬ ಶಂಕೆಯಿಂದ ಒಲ್ಲದೆ ಇರುವನು.

೨-೩. ಚಲಿಸುತ್ತಿರುವ ಹಡಗಿನಲ್ಲಿರುವಾತನು ದಡದಲ್ಲಿರುವ ಮರಗಳು ಚಲಿಸುತ್ತಿರುವವೆಂದು ತಪ್ಪಾಗಿ ಎಣಿಸಿಕೊಳ್ಳುವಂತೆ ಅಂತಃಕರಣದ ಉಪಾಧಿಯ ಚಲನೆಯಿಂದಲೂ ಜ್ಞಾನವೃತ್ತಿಯಿಂದಲೂ ಆತ್ಮನೇ ಕರ್ಮವನ್ನು ಮಾಡುತ್ತಿರುವನೆಂತಲೂ ಬೇರೆಬೇರೆಯ ವಿಶೇಷಜ್ಞಾನವುಳ್ಳವನಾಗಿರುವನೆಂತಲೂ ಜನರು ತಪ್ಪಾಗಿ ಎಣಿಸಿರುತ್ತಾರೆ.

೪. ಅಂತಃಕರಣದಲ್ಲಿ ವೃತ್ತಿಯುಂಟಾಗುವಾಗ ಅದು ಚೈತನ್ಯದ ಆಭಾಸದಿಂದೊಡಗೂಡಿ ಉಂಟಾಗುತ್ತಿರುವದು. ಇದರಿಂದ ಜನರು ವೃತ್ತಿಯನ್ನೇ ಜ್ಞಾನವೆಂದು ಭ್ರಾಂತರಾಗುತ್ತಿರುವರು.

೫. ನಾನು ಎಂಬ ವಸ್ತುವಿನಲ್ಲಿ ಚೈತನ್ಯದಿಂದ ಬೆಳಗುವ ವಿಷಯವೂ ಚೈತನ್ಯಕ್ಕಾಗಿರುವ ಪರಾರ್ಥವೂ ಆದ ಅಹಂಕಾರವೆಂಬ ಅಂಶವನ್ನು ಬಿಟ್ಟು ತಾನೇ ಬೆಳಗುವ ಸ್ವತಂತ್ರವಾದ ಚೈತನ್ಯವೇ ಆತ್ಮನೆಂದು ನಿಶ್ಚಯಿಸುವದೇ ಉತ್ತಮವಾದ ಆತ್ಮಾನುಭವವು.

---:o:---

# ೬. ವಿಶೇಷಾಪೋಹ

**ಛಿತ್ತ್ವಾ ತ್ಯಕ್ತೇನ ಹಸ್ತೇನ ಸ್ವಯಂ ನಾತ್ಮಾ ವಿಶೇಷ್ಯತೇ ।**
**ತಥಾ ಶಿಷ್ಟೇನ ಸರ್ವೇಣ ಯೇನ ಯೇನ ವಿಶೇಷ್ಯತೇ ॥ ೧ ॥**
**ತಸ್ಮಾತ್ ತ್ಯಕ್ತೇನ ಹಸ್ತೇನ ತುಲ್ಯಂ ಸರ್ವಂ ವಿಶೇಷಣಮ್ ।**
**ಅನಾತ್ಮತ್ವೇನ ತಸ್ಮಾಜ್ಜ್ಞೋ ಮುಕ್ತಃ ಸರ್ವವಿಶೇಷಣೈಃ ॥ ೨ ॥**

೧-೨. ಕತ್ತರಿಸಿ (ಒಗೆದು)ಬಿಟ್ಟ ಕೈಗೆ ಆತ್ಮನು ತಾನು ವಿಶೇಷ್ಯನಾಗಿರುವದಿಲ್ಲ[1]. ಇದರಂತೆ ಉಳಿದ ಯಾವಯಾವ ವಿಶೇಷಣದಿಂದ ಕೂಡಿ(ದಂತಿ)ರುವನೋ (ಅದನ್ನು ಬಿಟ್ಟಮೇಲೆ ಅದಕ್ಕೂ ವಿಶೇಷ್ಯನಾಗಿರುವದಿಲ್ಲ). ಆದ್ದರಿಂದ ವಿಶೇಷಣವೆಲ್ಲವೂ ಅನಾತ್ಮವಾಗಿರುವದರಿಂದ ತೆಗೆದುಬಿಟ್ಟ ಕೈಗೆ ಸಮಾನವಾಗಿರುತ್ತದೆ[2]. ಆದ್ದರಿಂದ ಆತ್ಮನು ಯಾವ ವಿಶೇಷಣಗಳೂ ಇಲ್ಲದವನು.

## ಆತ್ಮನಲ್ಲಿ ತೋರಿಬರುವ ವಿಶೇಷಣವೆಲ್ಲವೂ ಅಧ್ಯಸ್ತ

**ವಿಶೇಷಣಮಿದಂ ಸರ್ವಂ ಸಾಧ್ವಲಂಕರಣಂ ಯಥಾ ।**
**ಅವಿದ್ಯಾಧ್ಯಾಸತಃ ಸರ್ವಂ ಜ್ಞಾತೇ ಆತ್ಮನ್ಯಸದ್ಭವೇತ್ ॥ ೩ ॥**

೩. ಈ ವಿಶೇಷಣವೆಲ್ಲವೂ ಚೆನ್ನಾಗಿ ಮಾಡಿದ ಅಲಂಕಾರದಂತೆ.[3] ಎಲ್ಲವೂ ಅವಿದ್ಯೆಯ ಅಧ್ಯಾಸದಿಂದ (ವಿಶೇಷಣವಾಗಿರುತ್ತದೆ); ಆತ್ಮನನ್ನು ಅರಿತುಕೊಂಡರೆ ಹುಸಿಯಾಗಿರುವದು[4].

---

1. ಕೈಯು ಶರೀರಕ್ಕೆ ಸೇರಿಕೊಂಡಿರುವಾಗ ಅದೂ ತಾನೆಂಬ ತಿಳಿವಳಿಕೆಯಿದ್ದರೂ ಅದನ್ನು ಕತ್ತರಿಸಿಹಾಕಿದ ಬಳಿಕ ಅದರಲ್ಲಿ ತಾನೆಂಬ ಭಾವನೆಯಿರುವದಿಲ್ಲ.

2. ವಿವೇಕದಿಂದ ಅದನ್ನು ಬೇರ್ಪಡಿಸಿನೋಡಿದರೆ ಅದು ಆತ್ಮನ ವಿಶೇಷಣವಾಗಿರುವದಿಲ್ಲ.

3. ಇಂದ್ರವಿರೋಚನರು ಕ್ಷೌರಮಾಡಿಸಿಕೊಂಡು ಚೆನ್ನಾಗಿ ಅಲಂಕಾರಮಾಡಿಕೊಂಡು ನೀರಿನ ಶ್ರಾವೆಯಲ್ಲಿ ನೋಡಲು ಪ್ರತಿಬಿಂಬವು ಹಾಗೆಯೇ ಕಾಣಿಸಿತು. (ಛಾ. ೮-೮-೨, ೮-೯-೧). ಅಲಂಕಾರವು ಮೊದಲು ಇರಲಿಲ್ಲ, ಆಮೇಲೆ ಹಾಕಿಕೊಂಡಾಗ ದೇಹದ ವಿಶೇಷಣವಾಯಿತು. ಹೀಗೆಯೇ ವಿಶೇಷಣವು ಮಾರ್ಪಡುತ್ತಿರುವದು ; ಅದು ಆತ್ಮನ ವಿಶೇಷಣವಲ್ಲ.

4. ಏಕೆಂದರೆ ಅದು ನಿಜವೆಂದು ತೋರುವಾಗಲೂ ಆತ್ಮನಿಗಿಂತ ಬೇರೆಯಾಗಿರುತ್ತದೆ ; ಅದು ಇಲ್ಲದಾಗಲೂ ಆತ್ಮನು ಹಾಗೆಯೇ ಇರುತ್ತಾನೆ.

## ಜ್ಞೇಯವಾದ ಅಹಂಕಾರವು ಆತ್ಮನಿಗೆ ಸೇರಿದ್ದಲ್ಲ

**ಜ್ಞಾತ್ರೈವಾತ್ಮಾ ಸದಾ ಗ್ರಾಹ್ಯೋ ಜ್ಞೇಯಮುತ್ಸೃಜ್ಯ ಕೇವಲಃ ।**
**ಅಹಮಿತ್ಯಪಿ ಯದ್ಗ್ರಾಹ್ಯಂ ವ್ಯಪೇತಾಙ್ಗಸಮಂ ಹಿ ತತ್ ॥ ೪ ॥**
**ಯಾವಾನ್ ಸ್ಯಾದಿದಮಂಶೋ ಯಃ ಸ ಸ್ವತೋಽನ್ಯೋ ವಿಶೇಷಣಮ್**
**ವಿಶೇಷಪ್ರಕ್ಷಯೋ ಯತ್ರ ಸಿದ್ಧೋ ಜ್ಞಶ್ಚಿತ್ರಗುರ್ಯಥಾ ॥ ೫ ॥**

೪–೫. ಜ್ಞೇಯವನ್ನು ಬಿಟ್ಟು ಬರಿಯ ಜ್ಞಾತೃವನ್ನೇ ಆತ್ಮನೆಂದು ಅರಿತುಕೊಳ್ಳಬೇಕು. ನಾನು ಎಂಬುದಿದೆಯಲ್ಲ, ಅದೂ ಜ್ಞೇಯವೇ; ಏಕೆಂದರೆ ಅದೂ ತೆಗೆದುಹಾಕಿದ ಅವಯವಕ್ಕೆ ಸಮನಾಗಿರುತ್ತದೆ[1]. ಯಾವದು ಎಷ್ಟರಮಟ್ಟಿಗೆ ಇದಮಂಶವಾಗಿರುವದೋ[2] ಅದು (ಅಷ್ಟರಮಟ್ಟಿಗೆ) ಆತ್ಮನಿಗಿಂತ ಬೇರೆಯಾಗಿರುವ ವಿಶೇಷಣವಾಗಿರುತ್ತದೆ[3]. ಯಾವ (ಆತ್ಮ)ನಲ್ಲಿ ವಿಶೇಷಗಳು (ಎಲ್ಲವೂ) ನಾಶವಾಗಿರುವವೋ (ಆ) ಆತ್ಮನು ಚಿತ್ರಗುವಿನಂತೆ (ಸ್ವತಃ)ಸಿದ್ಧನಾಗಿರುತ್ತಾನೆ[4].

## ಅಹಂ ಬ್ರಹ್ಮಾಸ್ಮಿ ಎಂಬಲ್ಲಿ ಅಹಂಪದಕ್ಕೆ ಅರ್ಥ

**ಇದಮಂಶೋಽಹಮಿತ್ಯತ್ರ ತ್ಯಾಜ್ಯೋ ನಾತ್ಮೇತಿ ಪಣ್ಡಿತೈಃ ।**
**ಅಹಂ ಬ್ರಹ್ಮೇತಿ ಶಿಷ್ಟೋಽಂಶೋ ಭೂತಪೂರ್ವಗತೇರ್ಭವೇತ್ ॥೬॥**

---

1. ಕತ್ತರಿಸಿಹಾಕಿದ ಕೈಯಲ್ಲಿ ಹೇಗೆ ತಾನೆಂಬ ಅಭಿಮಾನವಿರುವದಿಲ್ಲವೋ ಹೇಗೆ ಅದು ನಿಜವಾಗಿ ತನ್ನ ವಿಶೇಷಣವಲ್ಲವೋ ಹಾಗೆಯೇ ಜ್ಞೇಯವಾದ ಅಹಂಕಾರವೂ ಆತ್ಮನ ವಿಶೇಷಣವಲ್ಲ. ಅದನ್ನು ಅರಿಯುವವನೇ ಆತ್ಮನು.

2. ವಿಷಯವಾಗಿರುವದೋ.

3. ಆತ್ಮನಿಗೆ ವಿಶೇಷಣವಾಗಿ ಕಂಡರೂ ಆತ್ಮನ ಸ್ವರೂಪಕ್ಕೆ ಸೇರಿದ್ದಲ್ಲ; ಅಲಂಕಾರದ ವಸ್ತುವಿನಂತೆ ಆಗಂತುಕವಾಗಿ ಬಂದದ್ದು, ಅಧ್ಯಾಸದಿಂದ ಆತ್ಮನ ವಿಶೇಷಣವಾಗಿ ತೋರತಕ್ಕದ್ದು.

4. ಚಿತ್ರಗು (ಹಂಡೆ ಹಸುಗಳುಳ್ಳವನು) ಎಂಬ ಪ್ರಯೋಗದಲ್ಲಿ ವಿಶೇಷಣವಾದ ಹಸುಗಳು ಮನುಷ್ಯನ ಸ್ವರೂಪದಲ್ಲಿ ಸೇರಿರುವದಿಲ್ಲ; ಆದರೂ ಅವನ ಸ್ವರೂಪವನ್ನು ತಿಳಿಯುವದಕ್ಕೆ ಸಾಧನವಾಗಿರುತ್ತವೆ. ಇದರಂತೆ ವಿಶೇಷಣಗಳೆಲ್ಲವೂ ಜ್ಞೇಯವಾಗಿರುವದರಿಂದ ಆತ್ಮನಲ್ಲವಾದರೂ ಇವನ್ನು ಅರಿಯುವ ನಿರ್ವಿಶೇಷಚಿದಾತ್ಮನು ಇದ್ದಾನೆಂದು ಅರಿತುಕೊಳ್ಳುವದಕ್ಕೆ ಸಾಧನವಾಗಿರುತ್ತವೆ.

೬ ನಾನು ಎಂಬಲ್ಲಿ ಇದಮಂಶವು, ಅನಾತ್ಮವು ಎಂದು ವಿವೇಕಿಗಳಾದವರು (ಅದನ್ನು) ಬಿಟ್ಟುಬಿಡಬೇಕು.[1] ಉಳಿದ ಅಂಶವು[2] "ನಾನು ಬ್ರಹ್ಮವು" ಎಂದು ಭೂತಪೂರ್ವಗತಿಯಿಂದ (ವ್ಯವಹಾರ)ವಾಗುತ್ತದೆ.

---o---

# ವಿಶೇಷಾಪೋಹಪ್ರಕರಣದ ಸಾರ

೧-೨. ಒಬ್ಬ ಮನುಷ್ಯನ ಕೈಯನ್ನು ಕತ್ತರಿಸಿಹಾಕಿದರೆ ಆ ಕೈಯಲ್ಲಿದ್ದ ನಾನು ಎಂಬ ಅಭಿಮಾನವು ಹೋಗಿಬಿಡುತ್ತದೆ. ಇದರಂತೆ ಯಾವಯಾವದು ತನ್ನ ಸ್ವರೂಪಕ್ಕೆ ಸೇರಿದ ವಿಶೇಷಣವೆಂದು ಜನರು ತಿಳಿದುಕೊಂಡಿರುವರೋ ಅದು ಅವರನ್ನು ಬಿಟ್ಟಗಲಿದಾಗ ಅದರಲ್ಲಿ ತಾನೆಂಬ ಅಭಿಮಾನವು ಇಲ್ಲವಾಗುತ್ತದೆ.

೩. ಆದ್ದರಿಂದ ಆತ್ಮನಲ್ಲಿ ಕಾಣುವ ವಿಶೇಷಣಗಳೆಲ್ಲವೂ ದೇಹಕ್ಕೆ ಹಾಕಿಕೊಳ್ಳುವ ಅಲಂಕಾರದ ಒಡವೆಗಳಂತೆ ಅವನ ಸ್ವರೂಪಕ್ಕಿಂತ ಹೊರಚ್ಚಾಗಿಯೇ ಇರುತ್ತವೆ. ಆದ್ದರಿಂದ ಅವು ಆತ್ಮನ ಸ್ವರೂಪವೆಂಬುದು ತಪ್ಪುತಿಳಿವಳಿಕೆಯ ಅಧ್ಯಾಸದಿಂದ. ಆತ್ಮನು ನಿಜವಾಗಿ ನಿರ್ವಿಶೇಷನಾಗಿರುತ್ತಾನೆ.

೪-೫. ಆದ್ದರಿಂದ ಜ್ಞೇಯವಾಗಿರುವದನ್ನೆಲ್ಲ ಬಿಟ್ಟು ಬರಿಯ ಜ್ಞಾತೃವನ್ನೇ ಆತ್ಮನೆಂದು ಅರಿತುಕೊಳ್ಳಬೇಕು. ನಾನು ಎಂದು ಜ್ಞೇಯವಾಗಿರುವದೂ ಕತ್ತರಿಸಿದ ಕೈಯಿನಂತೆ ಆತ್ಮಸ್ವರೂಪಕ್ಕೆ ಹೊರಚ್ಚಾದದ್ದೇ. ಜ್ಞೇಯವಾದದ್ದು ಯಾವದೂ ಆತ್ಮನ ವಿಶೇಷಣವಲ್ಲ.

೬. 'ನಾನು ಬ್ರಹ್ಮವು' (ಬೃ. ೧-೪-೧೦) ಎಂಬ ಶ್ರುತಿವಾಕ್ಯದಲ್ಲಿ ಜ್ಞೇಯವಾಗಿರುವ ಅಹಂಕಾರವನ್ನು ಬಿಟ್ಟೇ ಉಳಿದ ಚೈತನ್ಯವನ್ನು ಹೇಳಿರುತ್ತದೆ. ಇಲ್ಲಿ 'ನಾನು' ಎಂಬ ಶಬ್ದದ ಪ್ರಯೋಗವು ಭೂತಪೂರ್ವಗತಿಯಿಂದ; ಎಂದರೆ ಮೊದಲು ಅಹಂಕಾರದ ಅಧ್ಯಾಸವಾಗಿದ್ದಾಗ 'ನಾನು' ಎಂದು ಕರೆಯಿಸಿಕೊಳ್ಳುತ್ತಿದ್ದ ಆತ್ಮನೇ ಪರಮಾರ್ಥವಾಗಿ ನಿರ್ವಿಶೇಷವಾದ ಆತ್ಮನು ಎಂದು ತಿಳಿಯಿಸುವದಕ್ಕೆ ಹೀಗೆ ವ್ಯವಹರಿಸಿರುತ್ತದೆ.

---o---

1. ಅದು ಆತ್ಮನಲ್ಲವೆಂದು ತಿಳಿಯಬೇಕು.
2. ವಿಷಯವಲ್ಲದ ಬರಿಯ ಚೈತನ್ಯವು

# ೭. ಬುದ್ಧಿಸಾಕ್ಷಿ[1]

## ಆತ್ಮನು ಸರ್ವಜ್ಞನಾದ ಬ್ರಹ್ಮವೇ

**ಬುದ್ಧ್ಯಾರೂಢಂ ಸದಾ ಸರ್ವಂ ದೃಶ್ಯತೇ ಯತ್ರ ತತ್ರ ವಾ ।**
**ಮಯಾ ತಸ್ಮಾತ್ ಪರಂ ಬ್ರಹ್ಮ ಸರ್ವಜ್ಞಶ್ಚಾಸ್ಮಿ ಸರ್ವಗಃ ॥ ೧ ॥**
**ಯಥಾತ್ಮಬುದ್ಧಿಚಾರಾಣಾಂ ಸಾಕ್ಷೀ ತದ್ವತ್ ಪರೇಷ್ವಪಿ ।**
**ನೈವಾಪೋಢುಂ ನ ವಾದಾತುಂ ಶಕ್ಯಸ್ತಸ್ಮಾತ್ ಪರೋ ಹ್ಯಹಮ್ ॥೨॥**

೧-೨. ನನಗೆ ಎಲ್ಲವೂ, (ಅದು)ಎಲ್ಲಿಯೇ ಇರಲಿ, ಬುದ್ಧಿಗೆ ಹತ್ತಿಕೊಂಡೇ ಯಾವಾಗಲೂ ಕಾಣಿಸುತ್ತಿರುತ್ತದೆ.[2] ಆದ್ದರಿಂದ ನಾನು ಪರಬ್ರಹ್ಮವೂ ಸರ್ವಜ್ಞನೂ ಸರ್ವಗತನೂ ಆಗಿರುತ್ತೇನೆ. ಹೇಗೆ ನನ್ನ ಬುದ್ಧಿವೃತ್ತಿಗಳಿಗೆ ಸಾಕ್ಷಿಯಾಗಿರುವೆನೋ ಹಾಗೆಯೇ ಮತ್ತೊಬ್ಬರಲ್ಲಿಯೂ (ಸಾಕ್ಷಿಯಾಗಿರುವೆನು).[3] ತೆಗೆದುಹಾಕುವದಕ್ಕಾಗಲಿ ತೆಗೆದುಕೊಳ್ಳುವದಕ್ಕಾಗಲಿ (ನಾನು)ಶಕ್ಯನಲ್ಲ.[4] ಆದ್ದರಿಂದ ನಾನು ಪರಮಾತ್ಮನೇ.

## ಆತ್ಮನಿಗೂ ಅಂತಃಕರಣಕ್ಕೂ ತಾರತಮ್ಯ

**ವಿಕಾರಿತ್ವಮಶುದ್ಧತ್ವಂ ಭೌತಿಕತ್ವಂ ನ ಚಾತ್ಮನಃ ।**
**ಅಶೇಷಬುದ್ಧಿಸಾಕ್ಷಿತ್ವಾದ್ಬುದ್ಧಿವಚ್ಚಾಲ್ಪವೇದನಾ ॥ ೩ ॥**

೩. ಆತ್ಮನಿಗೆ (ಬುದ್ಧಿಗೆ ಇರುವಂತೆ) ವಿಕಾರಿತ್ವವೂ ಅಶುದ್ಧತ್ವವೂ ಭೌತಿಕತ್ವವೂ ಇರುವದಿಲ್ಲ.[4] (ಆತ್ಮನು) ಎಲ್ಲಾ ಬುದ್ಧಿಗಳಿಗೂ ಸಾಕ್ಷಿಯಾಗಿ

---

1. 'ಬುದ್ಧ್ಯಾರೂಢಪ್ರಕರಣ' ಎಂದು ವ್ಯಾಖ್ಯಾನದಲ್ಲಿ ಹೆಸರು ಕೊಟ್ಟಿದೆ.

2. ಯಾವ ವಸ್ತುವಾದರೂ ಯಾವ ಪ್ರಮಾಣದಿಂದ ತಿಳಿದುಬಂದರೂ ಅಂತಃಕರಣದ ಮೂಲಕವೇ ತಿಳಿಯಬೇಕು; ಅದು ಚೈತನ್ಯಕ್ಕೆ ಸಂಬಂಧಪಟ್ಟೇ ತಿಳಿಯಬೇಕು.

3. ಒಂದೊಂದು ಬುದ್ಧಿಗೆ ಒಬ್ಬೊಬ್ಬ ಸಾಕ್ಷಿಯಲ್ಲ; ಎಲ್ಲಾ ಬುದ್ಧಿವೃತ್ತಿಗಳನ್ನೂ ಬೆಳಗುವವನು ಆತ್ಮನೊಬ್ಬನೇ.

4. ಅಂತಃಕರಣವು ವಿಷಯವನ್ನು ಬೆಳಗುವದಕ್ಕೆ ವಿಷಯದ ಆಕಾರವಾಗಿ ಮಾರ್ಪಡಬೇಕು, ವಿಷಯದ ಅನುಭವದಿಂದ ರಾಗಾದಿವಾಸನೆಗಳನ್ನು ಪಡೆಯಬೇಕು, ಅದು ಭೌತಿಕವಾದದ್ದೆಂದೂ ಶ್ರುತಿಯಲ್ಲಿ ಹೇಳಿದೆ. ಆತ್ಮನಿಗೆ ಈ ದೋಷಗಳಿಲ್ಲ.

ರುವದರಿಂದ [1] ಬುದ್ಧಿಯಂತೆ ಅಲ್ಪವನ್ನೇ ತಿಳಿಯುವದೆಂಬುದೂ (ಅವನಿಗೆ) ಇಲ್ಲ.[2]

## ಆತ್ಮನ ಸರ್ವಜ್ಞತೆಗೆ ದೃಷ್ಟಾಂತ

**ಮಣೌ ಪ್ರಕಾಶ್ಯತೇ ಯದ್ವದ್ರಕ್ತಾದ್ಯಾಕಾರತಾತಪೇ ।**
**ಮಯಿ ಸಂದೃಶ್ಯತೇ ಸರ್ವಮಾತಪೇನೇವ ತನ್ಮಯಾ ॥ ೪ ॥**
**ಬುದ್ಧೌ—**

೪. ಬಿಸಿಲಿನ (ಸನ್ನಿಧಿ)ಯಲ್ಲಿ ಹೇಗೆ (ಸ್ಫಟಿಕ)ಮಣಿಯಲ್ಲಿ ಕೆಂಪು ಮುಂತಾದ ಆಕಾರವು ಕಾಣಬರುವದೋ[3] ಹಾಗೆ ನನ್ನ (ಸನ್ನಿಧಿ)ಯಲ್ಲಿರುವ ಬುದ್ಧಿಯಲ್ಲಿ ಎಲ್ಲವೂ ಕಾಣಿಸುತ್ತದೆ. ಆದ್ದರಿಂದ ಬಿಸಿಲಿನಿಂದ (ಎಲ್ಲವೂ ಹೊಳೆಯುವ ಹಾಗೆ ಎಲ್ಲವೂ ನನ್ನಿಂದಲೇ ಹೊಳೆಯುತ್ತದೆ)[4].

## ಆತ್ಮನು ಪರಮಾರ್ಥವಾಗಿ ಅದ್ವಿತೀಯಬ್ರಹ್ಮವೇ

**—[5] ದೃಶ್ಯಂ ಭವೇದ್ಬುದ್ಧೌ ಸತ್ಯಾಂ ನಾಸ್ತಿ ವಿಪರ್ಯಯೇ ।**
**ದ್ರಷ್ಟಾ ಯಸ್ಮಾತ್ ಸದಾ ದ್ರಷ್ಟಾ ತಸ್ಮಾದ್ದ್ವೈತಂ ನ ವಿದ್ಯತೇ ॥ ೫ ॥**

೫. ಬುದ್ಧಿಯು ಇದ್ದರೆ ದೃಶ್ಯವಿರುವದು, ಹಾಗಿಲ್ಲದಿದ್ದರೆ (ಅದೂ) ಇರುವದಿಲ್ಲ. ದ್ರಷ್ಟೃವಾದ ಆತ್ಮನು ಮಾತ್ರ ಯಾವಾಗಲೂ ದ್ರಷ್ಟೃವೇ ಆಗಿರುತ್ತಾನೆ. ಆದ್ದರಿಂದ ದ್ವೈತವು ಇರುವದಿಲ್ಲ[6].

---

1. ಅಂತಃಕರಣವು ವಿಷಯದ ಆಕಾರವನ್ನು ಹೊಂದಿಯೇ ಅರಿಯಬೇಕಾಗಿರುವದರಿಂದ ಅಷ್ಟಷ್ಟನ್ನೇ ಅರಿಯಬೇಕಾಗಿರುವದು. ಆದರೆ ಸಾಕ್ಷಿಯು ಇದ್ದಂತೆಯೇ ಎಲ್ಲವನ್ನೂ ಬೆಳಗುವದರಿಂದ ಸರ್ವಜ್ಞನು.

2. ಈ ಹೇತುವು ಇಲ್ಲಿ ಹೇಳಿರುವ ಸಾಧ್ಯಗಳೆಲ್ಲಕ್ಕೂ ಹೊಂದುತ್ತದೆ; ಏಕೆಂದರೆ ಸಾಕ್ಷಿಗೆ ಸಾಕ್ಷ್ಯದ ಧರ್ಮಗಳು ಯಾವವೂ ಅಂಟುವದಿಲ್ಲ. ಅಂತಃಕರಣವು ಒಂದೊಂದು ವಿಷಯವನ್ನೇ ವೃತ್ತಿಯ ಮೂಲಕ ಅರಿಯಬೇಕು; ಆತ್ಮನಿಗೆ ಈ ಪರಿಚ್ಛೇದವಿಲ್ಲ.

3. ಸ್ಫಟಿಕದಲ್ಲಿ ಹತ್ತಿರವಿರುವ ದಾಸವಾಳದ ಹೂವೇ ಮುಂತಾದವುಗಳ ಕೆಂಪು ಮುಂತಾದ ಬಣ್ಣವು ಕಾಣುತ್ತದೆ; ಆದರೆ ಸ್ಫಟಿಕವನ್ನೂ ಹೂವನ್ನೂ ಬೆಳಗುವ ಬಿಸಿಲು ಇರುವಾಗಲೇ ಹಾಗೆ ಅದು ಕಾಣುತ್ತದೆ.

4. ವಿಷಯಗಳಿಂದ ಅಂತಃಕರಣದಲ್ಲಿ ಆಯಾ ಆಕಾರದ ವೃತ್ತಿಗಳುಂಟಾಗುವದು. ಅಂತಃಕರಣವನ್ನೂ ವಿಷಯಗಳನ್ನೂ ಬೆಳಗುವ ಆತ್ಮಚೈತನ್ಯದ ಸನ್ನಿಧಿಯಲ್ಲಿಯೇ.

5. ಈ ಶ್ಲೋಕದ ಮೊದಲಿನಲ್ಲಿರುವ 'ಬುದ್ಧೌ' ಎಂಬ ಮಾತು ಹಿಂದಿನ ಶ್ಲೋಕಕ್ಕೆ ಅನ್ವಿತವಾಗಿದೆ.

6. ಅಂತಃಕರಣವೂ ವಿಷಯಗಳೂ ಜೊತೆಯಲ್ಲಿಯೇ ಕಾಣುವವು, ಜೊತೆಯಲ್ಲಿಯೇ ಸುಷುಪ್ತ್ಯಾದಿಗಳಲ್ಲಿ ಮರೆಯಾಗುವವು. ಸಾಕ್ಷಿಯಾದ ಆತ್ಮನು ದ್ವೈತವಿರುವಾಗಲೂ ಇಲ್ಲದಾಗಲೂ ಇದ್ದೇ ಇರುತ್ತಾನೆ. ಆದ್ದರಿಂದ ನಿಜವಾದ ಇರವು ಆತ್ಮನಿಗೆ ಮಾತ್ರ ಇರುತ್ತದೆ; ದ್ವೈತಕ್ಕೆ ಸ್ವತಂತ್ರವಾದ ಇರವು ಇಲ್ಲ.

**ಅವಿವೇಕಾತ್ ಪರಾಭಾವಂ ಯಥಾ ಬುದ್ಧಿರವೈತ್ ತಥಾ ।**
**ವಿವೇಕಾತ್ತು ಪರಾದನ್ಯಃ ಸ್ವಯಂ ಚಾಪಿ ನ ವಿದ್ಯತೇ ॥ ೬ ॥**

೬. ಹೇಗೆ ಬುದ್ಧಿಯು ಅವಿವೇಕದಿಂದ ಪರಮಾತ್ಮನು ಇಲ್ಲವೆಂದು ತಿಳಿದುಕೊಂಡಿತ್ತೋ ಅದರಂತೆ ವಿವೇಕವುಂಟಾದ ಮೇಲೆ ಪರಮಾತ್ಮನಿಗಿಂತ ಬೇರೆಯಾಗಿ ಮತ್ತೆ ಯಾರೂ ಇರುವದಿಲ್ಲ, ತಾನೂ ಇರುವದಿಲ್ಲ[1].

—o—

## ಬುದ್ಧಿಸಾಕ್ಷಿಪ್ರಕರಣದ ಸಾರ

೧-೨. ಎಲ್ಲಿ ಏನಿದ್ದರೂ ಅಂತಃಕರಣದ ವೃತ್ತಿಯ ಮೂಲಕ ಚೈತನ್ಯರೂಪನಾದ ಆತ್ಮನಿಗೆ ತಿಳಿಯುತ್ತದೆ. ಸಾಕ್ಷಿಯೇ ನಮ್ಮ ಸ್ವರೂಪವು; ಅದಕ್ಕೆ ಪರಿಚ್ಛೇದವಿಲ್ಲದಿರುವದರಿಂದಲೂ ಸಾಕ್ಷಿಗಳು ಅನೇಕವೆಂಬುದು ಅನುಭವವಿರುದ್ಧವಾಗಿರುವದರಿಂದಲೂ ತೆಗೆದುಕೊಳ್ಳುವದಕ್ಕಾಗಲಿ ಬಿಡುವದಕ್ಕಾಗಲಿ ಬರದೆ ಇರುವ ಈ ಸಾಕ್ಷಿಚೈತನ್ಯವೇ ಸರ್ವಜ್ಞವಾದ ಬ್ರಹ್ಮವು.

೩-೪. ಅಂತಃಕರಣಕ್ಕೂ ಸಾಕ್ಷಿಯಾಗಿರುವ ಚೈತನ್ಯಕ್ಕೂ ತಾರತಮ್ಯವಿದೆ. ಅಂತಃಕರಣವು ವೃತ್ತಿಗಳ ರೂಪವನ್ನು ಪಡೆಯುತ್ತಿರುತ್ತದೆ, ವಿಷಯಗಳಿಂದ ವಾಸಿತವಾಗುತ್ತಿರುತ್ತದೆ, ಭೂತಗಳ ಕಾರ್ಯವಾಗಿರುತ್ತದೆ, ವಿಷಯಗಳನ್ನು ಒಂದೊಂದಾಗಿ ಅರಿಯುತ್ತಿರುತ್ತದೆ. ಸಾಕ್ಷಿಚೈತನ್ಯವು ನಿರ್ವಿಕಾರವು, ಸ್ವಚ್ಛವು, ಅಭೌತಿಕವು, ಎಲ್ಲವನ್ನೂ ಒಂದೇ ಕಾಲದಲ್ಲಿ ಅರಿಯತಕ್ಕದ್ದು. ಸೂರ್ಯನ ಬೆಳಕಿನಿಂದ ಕಾಣುವ ಸ್ಫಟಿಕವೂ ಅದರಲ್ಲಿ ಉಪಾಧಿಗಳಿಂದ ತೋರುವ ಕೆಂಪು ಮುಂತಾದ ಬಣ್ಣಗಳೂ ಆ ಬೆಳಕಿಗೆ ಸೇರದೆ ಇರುವಂತೆ ಸಾಕ್ಷಿಚೈತನ್ಯದ ಬೆಳಕಿನಿಂದ ಕಾಣಬರುವ ವಿಷಯಗಳೂ ಮನಸ್ಸಿನ ಮಾರ್ಪಾಡುಗಳೂ ಆ ಚೈತನ್ಯಕ್ಕೆ ಒಂದಿಷ್ಟೂ ತಟ್ಟುವದಿಲ್ಲ.

೫-೬. ಅಂತಃಕರಣವೂ ಬಾಹ್ಯದ್ವೈತವೂ ಜೊತೆಯಲ್ಲಿಯೇ ಇರುತ್ತವೆ, ಸುಷುಪ್ತ್ಯಾದಿಗಳಲ್ಲಿ ಜೊತೆಯಲ್ಲಿಯೇ ಕಾಣದೆಹೋಗುತ್ತವೆ. ಆತ್ಮನು ಯಾವಾಗಲೂ ಇದ್ದಂತೆ ಇರುತ್ತಾನೆ. ದ್ವೈತವು ತೋರುವದೂ ತೋರದಿರುವದೂ ಅಂತಃಕರಣಧರ್ಮಗಳೇ ಹೊರತು ಅದರಿಂದ ಅದ್ವಿತೀಯನಾದ ಆತ್ಮನಲ್ಲಿ ಯಾವ ವಿಶೇಷವೂ ಆಗಿರುವದಿಲ್ಲ.

—o—

1. ತಾನೂ ಎಂದರೆ ಅಂತಃಕರಣವೂ ಇರುವದಿಲ್ಲ. ತಾನೂ ಇರುವದಿಲ್ಲ ಎಂಬ ವಿವೇಕವೂ ಅಂತಃಕರಣಕ್ಕೇ ಸೇರಿದ್ದು.

# ೮. ಚಿತಿಮತಿಸಂವಾದ[1]

## ಆತ್ಮನು ನಿರ್ವಿಶೇಷನು

**ಚಿತಿಸ್ವರೂಪಂ[2] ಸ್ವತ ಏವ ಮೇ ಮತೇ**
**ರಸಾದಿಯೋಗಸ್ತವ ಮೋಹಕಾರಿತಃ ।।**
**ಅತೋ ನ ಕಿಂಚಿತ್ ತವ ಚೇಷ್ಟಿತೇನ ಮೇ ||**
**ಫಲಂ ಭವೇತ್ ಸರ್ವವಿಶೇಷಹಾನತಃ || ೧ ||**

೧. ಎಲೆ ಮನಸ್ಸೆ, ನನಗೆ ಚೈತನ್ಯಸ್ವರೂಪವು ತಾನಾಗಿಯೇ[3] ಇರತಕ್ಕದ್ದು; ಅನ್ನರಸಮಯಾದಿಗಳ[4] ಸಂಬಂಧವು ನಿನ್ನ ಭ್ರಾಂತಿಯಿಂದ ಆದದ್ದು. ಆದ್ದರಿಂದ ನಿನ್ನ ವ್ಯಾಪಾರದಿಂದ ನನಗೆ ಯಾವ ಪ್ರಯೋಜನವೂ ಆಗಬೇಕಾದದ್ದಿಲ್ಲ[5]; ಏಕೆಂದರೆ (ನಾನು) ಯಾವ ವಿಶೇಷವೂ ಇಲ್ಲದವನಾಗಿರುತ್ತೇನೆ.

## ಆತ್ಮನು ನಿತ್ಯಮುಕ್ತಬ್ರಹ್ಮಸ್ವರೂಪನು

**ವಿಮುಂಚ್ಯ ಮಾಯಾಮಯಕಾರ್ಯತಾಮಿಹ**
**ಪ್ರಶಾನ್ತಿಮಾಯಾಹ್ಯಸದೀಹಿತಾತ್ ಸದಾ |**
**ಅಹಂ ಪರಂ ಬ್ರಹ್ಮ ಸದಾ ವಿಮುಕ್ತವತ್**
**ತಥಾಜಮೇಕಂ ದ್ವಯವರ್ಜಿತಂ ಯತಃ || ೨ ||**

---

1. 'ಮತಿವಿಲಾಪನ'ವೆಂದು ಒಂದು ವ್ಯಾಖ್ಯಾನದಲ್ಲಿ 'ಚಿತಿಸ್ವರೂಪ' ಎಂದು ಮತ್ತೊಂದರಲ್ಲಿ ಹೆಸರುಕೊಟ್ಟಿದೆ. ಉಪಸಂಹಾರದಲ್ಲಿ 'ಸಂವಾದ' ಎಂಬ ಹೆಸರನ್ನು ಆಚಾರ್ಯರು ಕೊಟ್ಟಿರುವದನ್ನು ಅನುಸರಿಸಿ ನಾವು 'ಚಿತಿಮತಿಸಂವಾದ'ವೆಂದು ಕರೆದಿದೇವೆ.

2. 'ಚಿತಿಸ್ವರೂಪೇ' ಎಂಬ ಮೈ॥ ಪಾಠಕ್ಕಿಂತ ಈ ಬೋ॥ ಆ॥ ಪಾಠವು ಮೇಲು

3. ಮತ್ತೊಂದು ಉಪಾಧಿಯಿಂದ ಬಂದದ್ದಲ್ಲ.

4. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ-ಇವುಗಳು ರಸಾದಿ ಎಂಬ ಪ್ರಯೋಗಕ್ಕೆ ಗೌ. ಕಾ. ೩-೧೧ ನೋಡಿ.

5. ಅನಾತ್ಮವಾದ ಅನ್ನಮಯಾದಿಗಳ ಸಂಬಂಧವು ಭ್ರಾಂತಿಕೃತವಾದದ್ದರಿಂದ ನಿಜವಾಗಿ ಹೋಗಬೇಕಾದದ್ದಿಲ್ಲ. ಭ್ರಾಂತಿಯೂ ಅಂತಃಕರಣಕ್ಕೆ ಸಂಬಂಧಪಟ್ಟದ್ದಾದ್ದರಿಂದ ಭ್ರಾಂತಿ, ಅಭ್ರಾಂತಿ -ಎಂಬ ವಿಶೇಷವೂ ಆತ್ಮನಿಗಿಲ್ಲ ಎಂದು ಭಾವ. ೭-೩ನ್ನು ನೋಡಿ,

**ಸದಾ ಚ ಭೂತೇಷು ಸಮೋಽಸ್ಮಿ ಕೇವಲೋ**
**ಯಥಾ ಚ ಖಂ ಸರ್ವಗಮಕ್ಷರಂ ಶಿವಮ್ ।**
**ನಿರನ್ತರಂ ನಿಷ್ಕಲಮಕ್ರಿಯಂ ಪರಂ**
**ತತೋ ನ ಮೇಽಸ್ತೀಹ ಫಲಂ ತವೇಹಿತೈಃ ॥ ೩ ॥**

೨–೩. ಮಾಯಾಮಯವಾದ ಕಾರ್ಯ(ಗಳನ್ನು ಸೃಷ್ಟಿಮಾಡುತ್ತಾ) ಯಾವಾಗಲೂ ನಿರರ್ಥಕವಾದ ವ್ಯಾಪಾರವನ್ನು ಮಾಡುತ್ತಿರುವದನ್ನು ಬಿಟ್ಟು ಇಲ್ಲಿ ಪ್ರಶಾಂತಿಯನ್ನು ಹೊಂದು. ನಾನು ಯಾವಾಗಲೂ ಮುಕ್ತವೂ ಜನ್ಮ ರಹಿತವೂ ಏಕವೂ ದ್ವೈತಶೂನ್ಯವೂ ಆಗಿರುವ ಬ್ರಹ್ಮವಾಗಿರುವದರಿಂದಲೂ ಯಾವಾಗಲೂ ಸರ್ವಪ್ರಾಣಿಗಳಲ್ಲಿಯೂ ಸಮವಾಗಿರುವ ಒಬ್ಬನೇ ಒಬ್ಬನಾಗಿ ಆಕಾಶದಂತೆ ಸರ್ವವ್ಯಾಪಿಯೂ ನಾಶರಹಿತವೂ ಮಂಗಲಕರವೂ ಯಾವ ವ್ಯವಧಾನವೂ ಇಲ್ಲದ, ಅವಯವಗಳಿಲ್ಲದ, ಯಾವ ಕ್ರಿಯೆಯೂ ಇಲ್ಲದ ಪರ(ಬ್ರಹ್ಮವೇ ಆಗಿರುವದರಿಂದಲೂ) ನಿನ್ನ ವ್ಯಾಪಾರಗಳಿಂದ ನನಗೆ ಆಗಬೇಕಾದ ಫಲವು (ಯಾವದೂ) ಇರುವದಿಲ್ಲ[1].

## ಆತ್ಮನು ಅಸಂಗನು, ಅದ್ವಿತೀಯನು

**ಅಹಂ ಮಮೈಕೋ ನ ತದನ್ಯದಿಷ್ಯತೇ**
**ತಥಾ ನ ಕಸ್ಯಾಪ್ಯಹಮಸ್ಮ್ಯಸಙ್ಗತಃ ।**
**ಅಸಙ್ಗರೂಪೋಽಹಮತೋ ನ ಮೇ ತ್ವಯಾ**
**ಕೃತೇನ ಕಾರ್ಯಂ ತವ ಚಾದ್ವಯತ್ವತಃ ॥ ೪ ॥**

೪. ನಾನು ಒಬ್ಬನೇ, ನನಗೆ ಸೇರಿದ ಮತ್ತೊಂದು ಇಲ್ಲವೇ ಇಲ್ಲ; ಮತ್ತು ನಾನು ಮತ್ತೆ ಯಾವದೊಂದಕ್ಕೂ ಸೇರಿದವನಲ್ಲ. ಏಕೆಂದರೆ (ನಾನು) ಅಸಂಗನಾಗಿರುತ್ತೇನೆ. ನಾನು ಅಸಂಗರೂಪನಾಗಿರುವದರಿಂದ ನನಗೆ ನಿನ್ನ ಕೆಲಸದಿಂದ ಏನೂ ಆಗತಕ್ಕದ್ದಿರುವದಿಲ್ಲ, ನಿನಗೂ ಏನೂ ಆಗತಕ್ಕದ್ದಿರುವದಿಲ್ಲ[2]. ಏಕೆಂದರೆ (ನಾನು) ಅದ್ವಯನಾಗಿರುತ್ತೇನೆ.

---

1. ಮನಸ್ಸಿನ ವ್ಯಾಪಾರದಿಂದ ಆಗುವ ಕಾರ್ಯಗಳು ಎಲ್ಲವೂ ಅಸತ್ತು; ಆತ್ಮನು ಯಾವಾಗಲೂ ಜನ್ಮಾದಿವಿಕಾರರಹಿತವಾದ ನಿತ್ಯಮುಕ್ತವಾದ ಪರಮಾರ್ಥವಸ್ತು. ಮಾಯಿಕವಾದ ಮನೋವ್ಯಾಪಾರದ ಫಲವು ಕೂಟಸ್ಥವಾದ ಬ್ರಹ್ಮದಲ್ಲಿ ಎಂದಿಗೂ ಆಗಲಾರದು.

2. ಅಸಂಗನೂ ಅದ್ವಯನೂ ಆದ ಆತ್ಮನಿಗೆ ಮನೋವ್ಯಾಪಾರದಿಂದ ಯಾವ ಪ್ರಯೋಜನವೂ ಆಗುವಹಾಗಿಲ್ಲ; ಅಚೇತನವಾದ ಮನಸ್ಸಿಗಂತೂ ಯಾವ ಪ್ರಯೋಜನವೂ ಆಗಬೇಕಾದದ್ದಿಲ್ಲ.

## ಆತ್ಮಜ್ಞಾನದಿಂದ ಧರ್ಮಾಧರ್ಮಗಳ ಕಟ್ಟು ಹೋಗುವದು

ಫಲೇ ಚ ಹೇತೌ ಚ ಜನೋ ವಿಷಕ್ತವಾ
ನಿತಿ ಪ್ರಚಿನ್ತ್ಯಾಹಮತೋ ವಿಮೋಕ್ಷಣೇ।
ಜನಸ್ಯ ಸಂವಾದಮಿಮಂ ಪ್ರಕ್ಲಿಪ್ತವಾನ್
ಸ್ವರೂಪತತ್ತ್ವಾರ್ಥವಿಬೋಧಕಾರಣಮ್ ॥ ೫ ॥

೫. ಫಲದಲ್ಲಿಯೂ ಹೇತುವಿನಲ್ಲಿಯೂ ಜನವು ಆಸಕ್ತವಾಗಿರುತ್ತದೆ[1]- ಎಂಬುದನ್ನು ಆಲೋಚಿಸಿ ಇದರಿಂದ ಜನರನ್ನು ಬಿಡುಗಡೆಮಾಡಿಸುವದಕ್ಕಾಗಿ ನಾನು ಸ್ವರೂಪದ ತತ್ತ್ವಾರ್ಥವನ್ನು ಸರಿಯಾಗಿ ಅರಿತುಕೊಳ್ಳುವದಕ್ಕೆ ಕಾರಣವಾಗಿರುವ ಈ ಸಂವಾದವನ್ನು ರಚಿಸಿರುತ್ತೇನೆ.

## ಆತ್ಮಜ್ಞಾನದಿಂದ ಅವಿದ್ಯಾಕಾಮಗಳು ನಾಶವಾಗುವವು

ಸಂವಾದಮೇತಂ ಯದಿ ಚಿನ್ತಯೇನ್ನರೋ
ವಿಮುಚ್ಯತೇಽಜ್ಞಾನಮಹಾಭಯಾಗಮಾತ್ ।
ವಿಮುಕ್ತಕಾಮಶ್ಚ ತಥಾ ಜನಃ ಸದಾ
ಚರತ್ಯಶೋಕಃ ಸಮ ಆತ್ಮವಿತ್ ಸುಖೀ ॥ ೬ ॥

೬. ಮನುಷ್ಯನು ಈ ಸಂವಾದವನ್ನು (ಮನಸ್ಸಿನಲ್ಲಿ) ಚಿಂತಿಸಿಕೊಳ್ಳುತ್ತಿದ್ದರೆ ಅಜ್ಞಾನದಿಂದಾಗುವ ಹಿರಿಯ ಅಂಜಿಕೆಯ ಧಾಳಿಯಿಂದ ಬಿಡುಗಡೆಯನ್ನು ಹೊಂದುತ್ತಾನೆ. (ಅಂಥ) ಮನುಷ್ಯನು ಕಾಮಗಳಿಂದ ಬಿಡುಗಡೆಯನ್ನು ಹೊಂದಿ ಯಾವಾಗಲೂ ಶೋಕವಿಲ್ಲದೆ ಸಮನಾಗಿರುವ ಆತ್ಮಜ್ಞಾನಿಯಾಗಿ ಸುಖದಿಂದ ಬಾಳುತ್ತಾನೆ.[2]

——o——

1. ಹೇತುವೆಂದರೆ ಧರ್ಮಾಧರ್ಮಗಳು, ಫಲವೆಂದರೆ ಶರೀರವು. ಇದನ್ನು ಮಾಡಿ ಈ ಫಲವನ್ನು ಅನುಭವಿಸಬೇಕು, ಅಥವಾ ತಪ್ಪಿಸಿಕೊಳ್ಳಬೇಕು - ಎಂದು ಕರ್ಮದಲ್ಲಿಯೇ ಮುಳುಗಿರುತ್ತಾರೆ.

2. ಅಜ್ಞಾನದಿಂದಲೇ ಕಾಮವೂ ಅಂಜಿಕೆಯೂ ಉಂಟಾಗುತ್ತವೆ; ಕಾಮವನ್ನು ನೆರವೇರಿಸಿಕೊಳ್ಳುವದಕ್ಕೂ ಅಂಜಿಕೆಯನ್ನು ತೊಲಗಿಸಿಕೊಳ್ಳುವದಕ್ಕೂ ಜನರು ಹವಣಿಸುತ್ತಿರುವರು. ಅಜ್ಞಾನವು ಜ್ಞಾನದಿಂದ ತೊಲಗಿದರೆ ಕಾಮವೂ ಅಂಜಿಕೆಯೂ ಕರ್ಮಗಳೂ ನಾಶವಾಗುವವು. ಅದೇ ಮುಕ್ತಿಯು.

# ಚಿತಿಮತಿಸಂವಾದಪ್ರಕರಣದ ಸಾರ

೧. ಆತ್ಮನಿಗೆ ಶುದ್ಧಚೈತನ್ಯಸ್ವರೂಪವು ಸ್ವಾಭಾವಿಕವಾದದ್ದು; ಶರೀರಾದಿಗಳು ಮನಸ್ಸಿನ ಭ್ರಾಂತಿಯಿಂದ ಬಂದವುಗಳು. ಆದ್ದರಿಂದ "ನಾನು ನಿರ್ವಿಶೇಷಚಿನ್ಮಾತ್ರನು; ಮನೋವ್ಯಾಪಾರದಿಂದ ನನಗೆ ಆಗಬೇಕಾದದ್ದು ಏನೂ ಇರುವದಿಲ್ಲ" ಎಂದು ನಿಶ್ಚಯಿಸಬೇಕು.

೨-೩. ಮನಸ್ಸಿನ ವ್ಯಾಪಾರದಿಂದಾಗುವ ಸುಖದುಃಖಗಳು ಮಾಯಾಮಯವಾಗಿರುತ್ತವೆ. ಆದ್ದರಿಂದ ಮನಸ್ಸಿನ ವೃಥಾಯಾಸದಿಂದ ಆತ್ಮನಿಗೆ ಆಗಬೇಕಾದದ್ದು ಏನೂ ಇರುವದಿಲ್ಲ. ಆದಕಾರಣ "ನಾನು ನಿತ್ಯಮುಕ್ತನಾಗಿ ಸರ್ವಕಾರವಾಗಿ ಅದ್ವಿತೀಯನಾಗಿ ಸರ್ವಭೂತಗಳಲ್ಲಿಯೂ ಸಮನಾಗಿರುವ ಮಂಗಲಕರವಾದ ನಿರಂತರ ನಿಷ್ಕಲ ನಿಷ್ಕ್ರಿಯ ಪರಬ್ರಹ್ಮವೇ. ಮನಸ್ಸಿನ ವ್ಯಾಪಾರದಿಂದ ನನ್ನಲ್ಲಿ ಯಾವ ಹೆಚ್ಚುಕಡಿಮೆಯೂ ಆಗುವಂತಿಲ್ಲ" ಎಂದು ಚಿಂತಿಸುತ್ತಿರಬೇಕು.

೪. ನಮ್ಮ ಆತ್ಮನು ಅಸಂಗನೂ ಅದ್ವಿತೀಯನೂ ಆಗಿರುತ್ತಾನೆ. ಅವನು ಮತ್ತೊಂದಕ್ಕಾಗಲಿ ಮತ್ತೊಂದು ಅವನಿಗಾಗಲಿ ಸಂಬಂಧಿಸಿಕೊಂಡಿರುವದಿಲ್ಲ. ಆದ್ದರಿಂದ ಆತ್ಮನಿಗೆ ಅಸತ್ಯವಾದ ಮನಸ್ಸಿನ ವ್ಯಾಪಾರದಿಂದ ಆಗಬೇಕಾದದ್ದು ಏನೂ ಇರುವದಿಲ್ಲ. ಅಚೇತನವಾದ ಮನಸ್ಸಿಗಂತೂ ಆಗಬೇಕಾದದ್ದೇ ಏನೂ ಇರುವದಿಲ್ಲ.

೫-೬. ಜನರು ತಾವು ಧರ್ಮಾಧರ್ಮಗಳನ್ನು ಮಾಡಿ ಅವುಗಳ ಫಲವನ್ನು ಶರೀರಾಂತರದಲ್ಲಿ ಅನುಭವಿಸುತ್ತೇವೆಂದು ನಂಬಿಕೊಂಡಿರುವರು. ಇದಕ್ಕೆ ಅಜ್ಞಾನವೇ ಕಾರಣವು. ಆತ್ಮಸ್ವರೂಪಯಾಥಾತ್ಮ್ಯವನ್ನು ಮನಗಂಡವರಿಗೆ ಅಜ್ಞಾನವೂ ಅದರಿಂದಾಗುವ ಕಾಮವೂ ಅಂಜಿಕೆಯೂ ಧರ್ಮಾಧರ್ಮಗಳೂ ಸಂಪೂರ್ಣವಾಗಿ ಇಲ್ಲವಾಗುವವು. ಇದೇ ಮೋಕ್ಷವು.

———೦———

# ೯. ಸೂಕ್ಷ್ಮತಾವ್ಯಾಪಿತಾಪ್ರಕರಣ

## ಆತ್ಮನು ಪರಮಸೂಕ್ಷ್ಮನು, ಸರ್ವವ್ಯಾಪಿಯು

**ಸೂಕ್ಷ್ಮತಾವ್ಯಾಪಿತೇ ಜ್ಞೇಯೇ ಗನ್ಧಾದೇರುತ್ತರೋತ್ತರಮ್ ।**
**ಪ್ರತ್ಯಗಾತ್ಮಾವಸಾನೇಷು ಪೂರ್ವಪೂರ್ವಪ್ರಹಾಣತಃ ॥ ೧ ॥**

೧. ಗಂಧವೇ ಮುಂತಾದವುಗಳಲ್ಲಿ ಹಿಂದುಹಿಂದಿನ (ಗುಣವನ್ನು) ಬಿಡುವದರಿಂದ ಪ್ರತ್ಯಗಾತ್ಮನಲ್ಲಿ ಕೊನೆಗಾಣುವ (ಭೂತ)ಗಳಲ್ಲಿ ಮುಂದುಮುಂದಿನವುಗಳಲ್ಲಿ ಸೂಕ್ಷ್ಮತ್ವವನ್ನೂ ವ್ಯಾಪಿತ್ವವನ್ನೂ ಅರಿಯಬೇಕು.[1]

**ಶಾರೀರಾ ಪೃಥಿವೀ ತಾವದ್ಯಾವದ್ಬಾಹ್ಯಾ ಪ್ರಮಾಣತಃ ।**
**ಅಮ್ಬ್ವಾದೀನಿ ಚ ತತ್ತ್ವಾನಿ ತಾವಜ್ಜ್ಞೇಯಾನಿ ಕೃತ್ಸ್ನಶಃ ॥ ೨**

೨. ಹೊರಗಿನ ಪೃಥ್ವಿಯು ಎಷ್ಟು ಪ್ರಮಾಣವುಳ್ಳದ್ದೋ ಶರೀರದಲ್ಲಿರುವ ಪೃಥ್ವಿಯೂ ಅಷ್ಟು ಪ್ರಮಾಣವುಳ್ಳದ್ದೇ.[2] (ಇದರಂತೆ) ಅಪ್ಪು ಮುಂತಾದ ತತ್ತ್ವಗಳೆಲ್ಲವೂ ಅಷ್ಟಷ್ಟು ಪ್ರಮಾಣದವುಗಳೇ ಎಂದು ಪೂರ್ಣವಾಗಿ ಅರಿಯಬೇಕು.

**ವಾಯ್ವಾದೀನಾಂ ಯಥೋತ್ಪತ್ತೇಃ ಪೂರ್ವಂ ಖಂ ಸರ್ವಗಂ ತಥಾ ।**
**ಅಹಮೇಕಃ ಸದಾ ಸರ್ವಶ್ಚಿನ್ಮಾತ್ರಃ ಸರ್ವಗೋಽವ್ಯಯಃ ॥ ೩ ॥**

---

1. ಬೃಹದಾರಣ್ಯಕವಾರ್ತಿಕೆ ೨-೪-೨೯೪ರಲ್ಲಿ ಈ ಶ್ಲೋಕವನ್ನು ಉದಾಹರಿಸಿರುವಲ್ಲಿ 'ಗನ್ಧಾದೇಃ' ಎಂಬುವರ ಬದಲು 'ಭೂಮ್ಯಾದೇಃ' ಎಂದು ಪಾಠವಿದೆ. ಆ ಪಾಠವಿಲ್ಲದಿದ್ದರೂ ಗಂಧಾದಿ ಎಂದರೆ ಪೃಥ್ವ್ಯಾದಿ ಎಂದೇ ಅರ್ಥ. ಪೃಥ್ವಿಗಿಂತ ಅಪ್ಪು ಸೂಕ್ಷ್ಮ, ಅಪ್ಪಿಗಿಂತ ತೇಜಸ್ಸು ಸೂಕ್ಷ್ಮ, ತೇಜಸ್ಸಿಗಿಂತ ವಾಯು ಸೂಕ್ಷ್ಮ, ವಾಯುವಿಗಿಂತ ಆಕಾಶವು ಸೂಕ್ಷ್ಮ; ಆತ್ಮನು ಎಲ್ಲಕ್ಕಿಂತಲೂ ಸೂಕ್ಷ್ಮ. ಪೃಥಿವ್ಯಾದಿಭೂತಗಳಲ್ಲಿ ಒಂದೊಂದು ಗುಣವು ಕಡಿಮೆ; ಆತ್ಮನು ನಿರ್ಗುಣನು. ಗುಣವು ಕಡಿಮೆಯಾದಂತೆಲ್ಲ ಸೂಕ್ಷ್ಮತ್ವವೂ ವ್ಯಾಪಿತ್ವವೂ ಹೆಚ್ಚುತ್ತದೆ.

2. ಆಧ್ಯಾತ್ಮಿಕವಾದ ಪೃಥಿವಿಯೂ ಬಾಹ್ಯಪೃಥಿವಿಯೂ ಸೇರಿ ಒಂದೇ ಪೃಥ್ವಿ. ಹೀಗೆಯೇ ಅಬಾದಿಗಳನ್ನು ತಿಳಿಯಬೇಕು. ಹೀಗೆ ತಿಳಿದುಕೊಂಡರೆ ಒಂದೊಂದು ಗುಣವನ್ನು ಬಿಟ್ಟಂತೆ ಮುಂದುಮುಂದಿನ ವಸ್ತುವು ಸೂಕ್ಷ್ಮವೂ ವ್ಯಾಪಿಯೂ ಆಗಿರುವದು. ಆದ್ದರಿಂದ ಆತ್ಮನು ಎಲ್ಲಕ್ಕಿಂತಲೂ ಸೂಕ್ಷ್ಮನೂ ವ್ಯಾಪಿಯೂ ಆಗಿರುತ್ತಾನೆಂದು ಸಿದ್ಧವಾಗುತ್ತದೆ.

೩. ವಾಯುವೇ ಮುಂತಾದವುಗಳು ಹುಟ್ಟುವದಕ್ಕಿಂತ ಮುಂಚೆ(ಯೂ) ಸರ್ವಗತವಾದ ಆಕಾಶ ಹೇಗೆ (ಇದ್ದುಕೊಂಡಿರುವದೋ)[1] ಹಾಗೆ ಸರ್ವನೂ ಚಿನ್ಮಾತ್ರನೂ ಸರ್ವಗತನೂ ಅವ್ಯಯನೂ ಆಗಿರುವ ನಾನು ಯಾವಾಗಲೂ (ಇರುವೆನು)[2]

## ಆತ್ಮನು ಏಕನು, ಅಸಂಗನು

**ಬ್ರಹ್ಮಾದ್ಯಾಃ ಸ್ಥಾವರಾನ್ತಾ ಯೇ ಪ್ರಾಣಿನೋ ಮಮ ಪೂಃ ಸ್ಮೃತಾಃ ।**
**ಕಾಮಕ್ರೋಧಾದಯೋ ದೋಷಾ ಜಾಯೇರನ್ ಮೇ ಕುತೋಽನ್ಯತಃ ॥**

೪. ಬ್ರಹ್ಮನು ಮೊದಲಾಗಿ ಸ್ಥಾವರದವರೆಗಿನ ಪ್ರಾಣಿಗಳಿರುವವಲ್ಲ ಅವೆಲ್ಲವೂ ನನ್ನ ಪುರವಾಗಿರುವದೆಂದು ಸ್ಮೃತಿಯಿರುವದು.[3] (ಹೀಗಿರುವಲ್ಲಿ) ನನಗೆ ಮತ್ತೊಬ್ಬರಿಂದ ಕಾಮಕ್ರೋಧವೇ ಮುಂತಾದ ದೋಷಗಳು ಹೇಗೆ ಉಂಟಾಗುವವು ?[4]

**ಭೂತದೋಷೈಃ ಸದಾಽಸ್ಪೃಷ್ಟಂ ಸರ್ವಭೂತಸ್ಥಮೀಶ್ವರಮ್ ।**
**ನೀಲಂ ವ್ಯೋಮ ಯಥಾ ಬಾಲೋ ದುಷ್ಟಂ ಮಾಂ ವೀಕ್ಷತೇ ಜನಃ ॥**

೫. ಆಕಾಶವು ನೀಲವಾಗಿದೆ ಎಂದು ಹೇಗೆ ಅವಿವೇಕಿಯು (ತಿಳಿಯುವನೋ ಹಾಗೆ)[5] ಎಂದೆಂದಿಗೂ ಭೂತಗಳ ದೋಷಗಳ ಸೋಂಕಿಲ್ಲದೆ ಸರ್ವಭೂತಗಳಲ್ಲಿರುವ ಈಶ್ವರನಾದ ನನ್ನನ್ನು ದೋಷಗಳಿಂದ ಕೂಡಿದವನೆಂದು ಜನರು ತಿಳಿಯುತ್ತಿರುವರು.[6]

---

1. ಆಕಾಶವೇ ವಾಯ್ವಾದಿಗಳ ರೂಪದಲ್ಲಿ ಕಾಣುತ್ತಿರುತ್ತದೆ; ವಾಯ್ವಾದಿಗಳು ಈಗಲೂ ಹುಟ್ಟುವ ಮುಂಚೆಯೂ ಆಕಾಶವೇ ಆಗಿರುತ್ತವೆ.

2. ಇದರಂತೆ ಎಲ್ಲವೂ ಆತ್ಮನೇ, ಆತ್ಮನಿಗಿಂತ ವ್ಯತಿರಿಕ್ತವಾಗಿ ಇಲ್ಲ. ಆತ್ಮನಲ್ಲಿಯೇ ಎಲ್ಲವೂ ಕಲ್ಪಿತವಾಗಿರುತ್ತದೆ. ಕಲ್ಪಿತವಾದ ಅನಾತ್ಮದ ಅಪೇಕ್ಷೆಯಿಂದಲೇ ಆತ್ಮನನ್ನು ಸರ್ವಗತನೆನ್ನುವದು.

3. ಆ. ಧ. ಸೂ. ೧-೮-೨೨-೪. ಪ್ರಾಣಿಗಳೆಲ್ಲರೂ ಪರಮಾತ್ಮನಿಗೆ ಪುರ ಎಂದರೆ ಎಲ್ಲಾ ದೇಹಗಳಲ್ಲಿಯೂ ಒಬ್ಬನೇ ಆತ್ಮನಿರುವನು ಎಂದರ್ಥ.

4. ಎರಡನೆಯ ಆತ್ಮನಿದ್ದರಲ್ಲವೆ, ಒಬ್ಬರಲ್ಲೊಬ್ಬರಿಗೆ ಪ್ರೀತಿ, ದ್ವೇಷ- ಮುಂತಾದವುಗಳು ಆಗುವದು? ಆದರೆ ಆತ್ಮನು ಒಬ್ಬನೇ; ಆದ್ದರಿಂದ ಕಾಮಾದಿದೋಷಗಳು ಇಲ್ಲವೇಇಲ್ಲ.

5. ನೀಲವಾಗಿ ತೋರುವಾಗಲೂ ಆಕಾಶವು ಯಾವ ಬಣ್ಣವೂ ಇಲ್ಲದೆ ಇರುವದು ಎಂಬುದೇ ಇಲ್ಲಿ ವಿವಕ್ಷಿತಾಂಶ.

6. ಭೂತಗಳಿಂದಾಗಿರುವ ಸ್ಥೂಲದೇಹಧರ್ಮಗಳಾಗಲಿ, ಪ್ರಾಣಮಯಾದಿಕೋಶಗಳ ಧರ್ಮಗಳಾಗಲಿ, ಆತ್ಮನಲ್ಲಿಲ್ಲದಿದ್ದರೂ ಅವನಲ್ಲಿ ಸಂಸಾರಿತ್ವದೋಷವನ್ನು ಮೂಢರ ಅಧ್ಯಾಸಮಾಡಿರುತ್ತಾರೆ ಎಂದರ್ಥ.

**ಮಚ್ಚೈತನ್ಯಾವಭಾಸ್ಯತ್ವಾತ್ ಸರ್ವಪ್ರಾಣಿಧಿಯಾಂ ಸದಾ ।**
**ಪೂರ್ವಮ ಪ್ರಾಣಿನಃ ಸರ್ವೇ ಸರ್ವಜ್ಞಸ್ಯ ವಿಪಾಪ್ಮನಃ　　॥ ೬ ॥**

೬. ಸರ್ವಪ್ರಾಣಿಗಳ ಬುದ್ಧಿಗಳೂ ಯಾವಾಗಲೂ ನನ್ನ ಚೈತನ್ಯದಿಂದಲೇ ಬೆಳಗುತ್ತಿರುವವರಿಂದ ಸರ್ವಜ್ಞನೂ ಪಾಪರಹಿತನೂ ಆಗಿರುವ[1] ನನಗೆ ಪುರವಾಗಿರುತ್ತವೆ.

## ಆತ್ಮನು ಅದ್ವಿತೀಯನು

**ಜನಿಮಜ್ಜ್ಞಾನವಿಜ್ಞೇಯಂ ಸ್ವಪ್ನಜ್ಞಾನವದಿಷ್ಯತೇ ।**
**ನಿತ್ಯಂ ನಿರ್ವಿಷಯಂ ಜ್ಞಾನಂ ತಸ್ಮಾದ್ ದ್ವೈತಂ ನ ವಿದ್ಯತೇ　　॥ ೭ ॥**

೭. ಜ್ಞಾನದ ವಿಷಯವು ಜನ್ಮವುಳ್ಳದ್ದು. ಜ್ಞಾನವು ಸ್ವಪ್ನಜ್ಞಾನದಂತೆ ಯಾವಾಗಲೂ ನಿರ್ವಿಷಯವಾಗಿಯೇ ಇರುತ್ತದೆ.[2] ಆದ್ದರಿಂದ ದ್ವೈತವು ಇರುವದಿಲ್ಲ.[3]

**ಜ್ಞಾತುರ್ಜ್ಞಾತಿರ್ಹಿ ನಿತ್ಯೋಕ್ತಾ ಸುಷುಪ್ತೇ ತ್ವನ್ಯಶೂನ್ಯತಃ ।**
**ಜಾಗ್ರಜ್ಜ್ಞಾತಿಸ್ತ್ವವಿದ್ಯಾತಸ್ತದ್ಗ್ರಾಹ್ಯಂ ಚಾಸದಿಷ್ಯತಾಮ್　　॥ ೮ ॥**

೮. ಸುಷುಪ್ತಿಯಲ್ಲಿ ಮತ್ತೊಂದು (ಯಾವದೂ) ಇಲ್ಲದ್ದರಿಂದ ಅರಿಯುವಾತನ ಅರಿವು ನಿತ್ಯವೇ ಎಂದು (ಶ್ರುತಿಯಲ್ಲಿ) ಉಕ್ತವಾಗಿರುತ್ತದೆಯಲ್ಲವೆ ?[4]

1. ಬುದ್ಧಿಸಾಕ್ಷಿಪ್ರಕರಣದ (೭-೧,೨,೩) ಶ್ಲೋಕಗಳಲ್ಲಿಯೂ ಟಿಪ್ಪಣಿಗಳಲ್ಲಿಯೂ ಬರೆದಿರುವದನ್ನು ನೋಡಿರಿ. ಸಾಕ್ಷಿಯು ಕೂಟಸ್ಥನಾಗಿರುವದರಿಂದ ಸರ್ವಜ್ಞನೂ ಬುದ್ಧ್ಯಾದಿ ಸಾಕ್ಷ್ಯದ ಧರ್ಮದ ಸೋಂಕಿಲ್ಲದವನೂ ಆಗಿರುತ್ತಾನೆ ಎಂದರ್ಥ.

2. ಇಲ್ಲಿ ಜ್ಞಾನವೆಂದರೆ ಆತ್ಮಚೈತನ್ಯವು. ಸ್ವಪ್ನಜ್ಞಾನದಂತೆ ಎಚ್ಚರದ ಜ್ಞಾನವೂ ನಿರ್ವಿಷಯವಾಗಿರಬೇಕು ಎಂಬುದು ವಿಜ್ಞಾನವಾದಿಗಳನ್ನನುಸರಿಸುವ ಅನುಮಾನವಲ್ಲ. ಇದು ಅನುಭವಕ್ಕೆ ಅನುಸಾರವಾದ ಹೇಳಿಕೆ. ಕಠ ೨-೧-೪ ನೋಡಿ.

3. ಆತ್ಮಚೈತನ್ಯವ್ಯತಿರಿಕ್ತವಾದ ಅಂತಃಕರಣವೂ ವಿಷಯಗಳೂ ಎಲ್ಲವೂ ಬರಿಯ ತೋರಿಕೆ; ಆದ್ದರಿಂದ ತಮ್ಮ ರೂಪದಿಂದ ಅಸತ್ತು, ಪರಮಾರ್ಥವಲ್ಲ ಎಂದರ್ಥ. ವಿಜ್ಞಾನವೇ ವಿಷಯಾಕಾರವಾಗುತ್ತದೆ ಎಂಬ ಕ್ಷಣಿಕವಿಜ್ಞಾನವಾದವಿದಲ್ಲ.

4. ಬೃ. ೪-೩-೩೦ರಲ್ಲಿ ಹೇಳಿರುವದರ ಸಾರವಿದು. "ಅಲ್ಲಿ ಅರಿಯುವದಿಲ್ಲವಲ್ಲ, ಆಗ ಅರಿಯುವವನಾಗಿಯೇ ಅರಿಯುವದಿಲ್ಲ. ಅವನಿಗಿಂತ ಬೇರೆಯಾದ ಎರಡನೆಯದಿರುವದಿಲ್ಲ; ಹಾಗಿದ್ದರೆ ಅರಿಯಬಹುದಿತ್ತು" ಎಂಬುದು ವಾಕ್ಯದ ಪೂರ್ಣಾರ್ಥವು.

ಜಾಗ್ರದವಸ್ಥೆಯಲ್ಲಾಗುವ (ವಿಷಯ)ದರಿವು ಅವಿದ್ಯೆಯಿಂದಾದದ್ದು ; ಆದ್ದರಿಂದ ಅದರ ವಿಷಯವೂ ಅಸತ್ತೆಂದು ಒಪ್ಪಬೇಕು.[1]

**ರೂಪವತ್ತ್ವಾದ್ಯಸತ್ತ್ವಾನ್ನ ದೃಷ್ಟ್ಯಾದೇಃ ಕರ್ಮತಾ ಯಥಾ ।**
**ಏವಂ ವಿಜ್ಞಾನಕರ್ಮತ್ವಂ ಭೂಮ್ನೋ ನಾಸ್ತೀತಿ ಗಮ್ಯತೇ ॥ ೯ ॥**

೯. ರೂಪವೇ ಮುಂತಾದವುಗಳಿಲ್ಲದ್ದರಿಂದ ಭೂಮರೂಪನಾದ (ಆತ್ಮನು)[2] ನೋಟವೇ ಮುಂತಾದದ್ದಕ್ಕೆ ವಿಷಯನೆಂಬುದು ಹೇಗೆ (ಸರಿಯಲ್ಲವೋ) ಹಾಗೆಯೇ ವಿಜ್ಞಾನಕ್ಕೂ ವಿಷಯನಲ್ಲ ಎಂದು ನಿಶ್ಚಯಿಸಬೇಕಾಗಿರುತ್ತದೆ.[3]

---o---

1. ಎಚ್ಚರದಲ್ಲಿ ಎರಡನೆಯದನ್ನು ಕಂಡರೂ ಅದು ಪರಮಾರ್ಥವಲ್ಲ ; ಏಕೆಂದರೆ ಅಲ್ಲಿ ಆಗುವ ಅರಿವು ಕಾರಕಾಪೇಕ್ಷವಾಗಿರುವವರಿಂದ ಆವಿದ್ಯಕ. ಅಲ್ಲಿರುವ ವಿಶೇಷಜ್ಞಾನವೂ ವಿಷಯವೂ ಎರಡೂ ಕಣ್ಣುಪರೆಯಾದವನಿಗೆ ಕಾಣುವ ಎರಡನೆಯ ಚಂದ್ರನಂತೆ ಹುಸಿತೋರಿಕೆಯೇ. ತೈ. ಭಾ. ೨–೮ (ಛಾ. ಭಾ. ೨೧೪) ನೋಡಿ.

2. ಭೂಮವು ಎಂದರೆ ಎಲ್ಲಕ್ಕೂ ದೊಡ್ಡದು ; ಆತ್ಮನಿಗಿಂತ ಬೇರೆಯ ವಸ್ತು ಇಲ್ಲವೇ ಇಲ್ಲವಾದ್ದರಿಂದ ಆತ್ಮನು ಭೂಮವು, ಅವನೇ ಸರ್ವವು. ಛಾಂ. ೭–೨೪–೧.

3. ಛಾಂದೋಗ್ಯೋಪನಿಷತ್ತಿನಲ್ಲಿ ಭೂಮವನ್ನು ವರ್ಣಿಸುವಾಗ "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ ಕೇಳುವದಿಲ್ಲವೋ ಅರಿಯುವದಿಲ್ಲವೋ ಅದೇ ಭೂಮವು" ಎಂದು ಹೇಳಿದೆ. ಅಲ್ಲಿ ಮತ್ತೊಂದನ್ನು ಕಾಣುವದಿಲ್ಲ ಎಂದರೆ ತನ್ನನ್ನು ಕಾಣುತ್ತಾನೆ, ಮತ್ತೊಂದನ್ನು ಕೇಳುವದಿಲ್ಲ ಎಂದರೆ ತನ್ನನ್ನು ಕೇಳುತ್ತಾನೆ ಎಂದೇನೂ ಅರ್ಥವಲ್ಲ ; ಏಕೆಂದರೆ ಆತ್ಮಸ್ವರೂಪದಲ್ಲಿ ರೂಪವೂ ಇಲ್ಲ, ಶಬ್ದವೂ ಇಲ್ಲ. ಇದರಂತೆ ವಿಷಯತ್ವವೂ ಇಲ್ಲವಾದ್ದರಿಂದ ತನ್ನನ್ನು ಅರಿಯುತ್ತಾನೆ ಎಂಬ ಅಭಿಪ್ರಾಯವೂ ಇಲ್ಲ, ಆತ್ಮನು ಅದ್ವಿತೀಯನೆಂದು ಶ್ರುತಿಯ ಅಭಿಪ್ರಾಯ.

# ಸೂಕ್ಷ್ಮತಾವ್ಯಾಪಿತಾಪ್ರಕರಣದ ಸಾರ

೧-೩. ಪೃಥ್ವಿಯೇ ಮುಂತಾದ ಭೂತಗಳು, ಅವು ಆಧ್ಯಾತ್ಮಿಕವಾಗಿರಲಿ ಆಧಿಭೌತಿಕವಾಗಿರಲಿ, ಒಂದಕ್ಕಿಂತ ಒಂದು ಸೂಕ್ಷ್ಮವಾಗಿಯೂ ವ್ಯಾಪಕವಾಗಿಯೂ ಇರುತ್ತವೆ. ಏಕೆಂದರೆ ಇವುಗಳಲ್ಲಿ ಹಿಂದುಹಿಂದಿನ ಭೂತಕ್ಕಿಂತ ಮುಂದುಮುಂದಿನ ಭೂತದಲ್ಲಿ ಗುಣಗಳ ಸಂಖ್ಯೆಯು ಒಂದೊಂದು ಕಡಿಮೆಯಾಗಿರುತ್ತವೆ; ಇವು ಒಂದಕ್ಕೊಂದು ಕಾರಣವಾಗಿರುತ್ತವೆ. ಆತ್ಮನಲ್ಲಿ ಈ ಯಾವ ಗುಣಗಳೂ ಇಲ್ಲದಿರುವದರಿಂದಲೂ ಆಕಾಶಾದಿಗಳೆಲ್ಲಕ್ಕೂ ಕಾರಣನಾಗಿರುವದರಿಂದಲೂ ಅವನು ಎಲ್ಲಕ್ಕಿಂತಲೂ ಸೂಕ್ಷ್ಮನೂ ವ್ಯಾಪಕನೂ ಆಗಿರುತ್ತಾನೆ.

೪-೬. ಆತ್ಮನು ಬ್ರಹ್ಮಾದಿಸ್ತಂಬಪರ್ಯಂತವಾದ ಭೂತಗಳಲ್ಲೆಲ್ಲ ಇರುತ್ತಾನೆ. ಅವುಗಳಲ್ಲಿರುವ ಬುದ್ಧಿಗಳೆಲ್ಲಕ್ಕೂ ಸಾಕ್ಷಿಯಾಗಿದ್ದುಕೊಂಡು ತನ್ನ ಕೂಟಸ್ಥಚೈತನ್ಯದಿಂದ ಬೆಳಗುತ್ತಿರುತ್ತಾನೆ. ಆದ್ದರಿಂದ ಸಾಕ್ಷ್ಯವಾದ ಅವುಗಳ ದೋಷವು ಯಾವದೂ ಸಾಕ್ಷಿಯಾದ ಅವನಿಗೆ ಅಂಟುವದಿಲ್ಲ. ಆದರೂ ಅವನಲ್ಲಿ ಸಂಸಾರಿತ್ವವಿದೆಯೆಂದು ಮೂಢರು ತಿಳಿಯುತ್ತಿರುವರು. ಆಕಾಶದಲ್ಲಿ ತಲಮಲಿನತ್ವವನ್ನು ಆರೋಪಿಸುವಂತೆ ತಪ್ಪುತಿಳಿವಳಿಕೆಯ ಫಲವಾಗಿದೆ.

೭-೮. ಕನಸಿನಲ್ಲಿ ಹೇಗೆ ಆತ್ಮನು ಒಬ್ಬನೇ ಇದ್ದರೂ ಹುಸಿಯಾದ ಅಂತಃಕರಣವೂ ಬಹಿಃಪ್ರಪಂಚವೂ ಕಾಣುತ್ತಿರುವವೋ ಹಾಗೆಯೇ ಎಚ್ಚರದಲ್ಲಿಯೂ ಆತ್ಮನಿಗೆ ತೋರುವವೆಂಬ ದ್ವೈತಪ್ರಪಂಚವೆಲ್ಲವೂ ಹುಸಿಯೇ. ಆತ್ಮನಿಗೆ ಈ ಎರಡವಸ್ಥೆಗಳಲ್ಲಿಯೂ ಆಗುತ್ತಿರುವ ಜ್ಞಾನವು ಎರಡನೆಯದನ್ನು ಬಯಸಿ ಆಗುತ್ತಿರುವದರಿಂದ ಅವಿದ್ಯೆಯೇ. ಆದರೆ ಅರಿಯುವ ಆತ್ಮನ ಚೈತನ್ಯರೂಪವಾದ ಅರಿವು ನಿತ್ಯವಾಗಿಯೇ ಇರುತ್ತದೆ. ಸುಷುಪ್ತಿಯಲ್ಲಿ ಎರಡನೆಯ ವಸ್ತುವಿಲ್ಲದ್ದರಿಂದ ಆತ್ಮನು ಅರಿಯುವದಿಲ್ಲವೇ ಹೊರತು ಅರಿವಿಲ್ಲದ್ದರಿಂದಲ್ಲ ಎಂದು ಶ್ರುತಿ ಹೇಳುತ್ತವೆ. ಈ ಕಾರಣದಿಂದ ಆತ್ಮನು ಅದ್ವಿತೀಯನೆಂದು ಏರ್ಪಡುತ್ತದೆ.

೯. ಆತ್ಮನು ತನ್ನನ್ನು ತಾನು ನೋಡುವದಿಲ್ಲ, ಕೇಳುವದಿಲ್ಲ, ಮೂಸುವದಿಲ್ಲ, ಮುಟ್ಟುವದಿಲ್ಲ, ಸವಿಯುವದಿಲ್ಲ; ಏಕೆಂದರೆ ಆತ್ಮನಲ್ಲಿ ರೂಪಾದಿಗಳಿರುವದಿಲ್ಲ. ಇದರಂತೆ ಯಾವ ಪರಿಚ್ಛೇದವೂ ಇಲ್ಲದ ಚೈತನ್ಯವೇ ಆತ್ಮಸ್ವರೂಪವಾಗಿರುವದರಿಂದ ಭೂಮವೆನಿಸುವ ಆತನು ತನ್ನನ್ನು ಅರಿತುಕೊಳ್ಳುವದೂ ಇಲ್ಲ. ಹೀಗೆಂದು ನಿಶ್ಚಯಿಸುವದೇ ಆತ್ಮವಿಜ್ಞಾನವು.

—— ·-:0:-——

# ೧೦. ಪರಮಾರ್ಥದರ್ಶನ

## ಆತ್ಮನು ಅದ್ವಿತೀಯಚಿನ್ಮಾತ್ರನು

**ದೃಶಿಸ್ವರೂಪಂ ಗಗನೋಪಮಂ ಪರಂ**
**ಸಕೃದ್ವಿಭಾತಂ ತ್ವಜಮೇಕಮಕ್ಷರಮ್ ।**
**ಅಲೇಪಕಂ ಸರ್ವಗತಂ ಯದದ್ವಯಂ**
**ತದೇವ ಚಾಹಂ ಸತತಂ ವಿಮುಕ್ತ ಓಮ್ ॥ ೧ ॥**

೧. ದೃಗ್ರೂಪವಾಗಿಯೂ ಆಕಾಶದಂತೆ ಇರುವದಾಗಿಯೂ (ಎಲ್ಲಕ್ಕೂ) ಹೆಚ್ಚಿನದಾಗಿಯೂ ಯಾವಾಗಲೂ ಚೆನ್ನಾಗಿ ಹೊಳೆಯುತ್ತಿರುವದಾಗಿಯೂ ಜನ್ಮರಹಿತವಾಗಿಯೂ ಏಕವಾಗಿಯೂ ನಾಶರಹಿತವಾಗಿಯೂ (ದೋಷದ) ಸೋಂಕಿಲ್ಲದ್ದಾಗಿಯೂ ಸರ್ವಗತವಾಗಿಯೂ ಅದ್ವಯವಾಗಿಯೂ (ಇರುವ) ಯಾವ (ತತ್ತ್ವವುಂಟೋ) ಅದೇ ನಾನು; ಎಂದಿಗೂ ವಿಮುಕ್ತನು. ನಿಶ್ಚಯವು.

**ದೃಶಿಸ್ತು ಶುದ್ಧೋಽಹಮವಿಕ್ರಿಯಾತ್ಮಕೋ**
**ನ ಮೇಽಸ್ತಿ ಕಶ್ಚಿದ್ವಿಷಯಃ ಸ್ವಭಾವತಃ ।**
**ಪುರಸ್ತಿರಶ್ಚೋರ್ಧ್ವಮಧಶ್ಚ ಸರ್ವತಃ**
**ಸುಪೂರ್ಣಭೂಮಾ[1] ತ್ವಜ ಆತ್ಮನಿ ಸ್ಥಿತಃ ॥ ೨ ॥**

೨. ನಾನಾದರೆ ಯಾವ ವಿಕಾರವೂ ಇಲ್ಲದ ಸ್ವಭಾವದವನು, ಶುದ್ಧ ದೃಗ್ರೂಪನು. ಸ್ವಭಾವದಿಂದಲೇ ನನಗೆ ಯಾವದೊಂದು ವಿಷಯವೂ ಇರುವದಿಲ್ಲ. ಏಕೆಂದರೆ ಮುಂದೆ, ಅಡ್ಡಡ್ಡಲಾಗಿ, ಕೆಳಗೆ, ಮೇಲೆ, ಎಲ್ಲೆಲ್ಲಿಯೂ ತುಂಬಿರುವ ಭೂಮವೇ ಆಗಿರುತ್ತೇನೆ. ನನ್ನಲ್ಲಿ ನಾನಿರುವ ಅಜನು.[2]

**ಅಜೋಽಮರಶ್ಚೈವ ತಥಾಜರೋಽಮೃತಃ**
**ಸ್ವಯಂಪ್ರಭಃ ಸರ್ವಗತೋಽಹಮದ್ವಯಃ ।**
**ನ ಕಾರಣಂ ಕಾರ್ಯಮತೀವ ನಿರ್ಮಲಃ**
**ಸದೈಕತೃಪ್ತಶ್ಚ ತತೋ ವಿಮುಕ್ತ ಓಮ್ ॥ ೩ ॥**

---

1. 'ಸಂಪೂರ್ಣಭೂಮಾ' ಎಂಬ ಮ್ಯೆ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು; ಛಂದಸ್ಸಿಗೆ ಅನುಗುಣವಾಗಿದೆ.

2. ಇಲ್ಲಿರುವ ವಿಶೇಷಣಗಳಲ್ಲಿ ಪುನರುಕ್ತಿಯಿದ್ದರೂ ದೋಷವಿಲ್ಲ. ಅತ್ಯಂತ ನಿರ್ವಿಶೇಷವಾಗಿರುವ ತತ್ತ್ವವನ್ನು ಮತ್ತೆಮತ್ತೆ ನೆನಪಿಗೆ ತರುವದು ಅವಶ್ಯ.

೩. ನಾನು ಅಜನು, ಅಮರನು, ಮತ್ತು ಅಜರನು, ಅಮೃತನು ಸ್ವಯಂಪ್ರಕಾಶನು, ಸರ್ವಗತನು, ಅದ್ವಯನು, (ನನಗೆ) ಕಾರಣವಿಲ್ಲ, ಕಾರ್ಯವಿಲ್ಲ.[1] ಆದ್ದರಿಂದ ನಾನು ಯಾವಾಗಲೂ ತೃಪ್ತನಾಗಿರುವವನು, ವಿಮುಕ್ತನು, ನಿಶ್ಚಯವು.[2]

## ಆತ್ಮನು ನಿತ್ಯನಿರವಸ್ಥನು

**ಸುಷುಪ್ತಜಾಗ್ರತ್ಸ್ವಪತಶ್ಚ ದರ್ಶನಂ**
**ನ ಮೇಽಸ್ತಿ ಕಿಂಚಿತ್ ಸ್ವಮಿವೇಹ ಮೋಹನವ್ |**
**ಸ್ವತಶ್ಚ ತೇಷಾಂ ಪರತೋಽಪ್ಯಸತ್ತ್ವತ-**
**ಸ್ತುರೀಯ ಏವಾಸ್ಮಿ ಸದಾ ದೃಗದ್ವಯಃ || ೪ ||**

೪. ತನಿನಿದ್ರೆಯನ್ನು ಅನುಭವಿಸುವಾಗಲೂ ಎಚ್ಚತ್ತಿರುವಾಗಲೂ ಕನಸನ್ನು ಕಾಣುತ್ತಿರುವಾಗಲೂ ನನ್ನದೆಂಬುದು ಯಾವದೂ ಇರುವದಿಲ್ಲ. ಇಲ್ಲಿ ನನ್ನದೆಂಬಂತೆ ತೋರುತ್ತಿರುವದು ಭ್ರಾಂತಿಯು. ಅವು ತಮ್ಮ (ದೃಷ್ಟಿ)ಯಿಂದಲೂ ಮತ್ತೊಬ್ಬನಾದ ಆತ್ಮನ (ದೃಷ್ಟಿ)ಯಿಂದಲೂ ಅಸತ್ತೇ ಆಗಿರುವದರಿಂದ[3] ನಾನು ಯಾವಾಗಲೂ ದೃಗ್ರೂಪನಾದ ಅದ್ವಿತೀಯ ತುರೀಯನೇ ಆಗಿರುವೆನು.

**ಶರೀರಬುದ್ಧೀನ್ದ್ರಿಯದುಃಖಸನ್ತತಿ-**
**ರ್ನ ಮೇ ನ ಚಾಹಂ ಮಮನು ನಿರ್ವಿಕಾರತಃ |**
**ಅಸತ್ತ್ವಹೇತೋಶ್ಚ ತಥೈವ ಸನ್ತತೇ-**
**ರಸತ್ತ್ವಮಸ್ಯಾಃ ಸ್ವಪತೋ ಹಿ ದೃಶ್ಯವತ್ || ೫ ||**

೫. ಶರೀರ, ಅಂತಃಕರಣ, ಇಂದ್ರಿಯಗಳು, ದುಃಖ– ಇವುಗಳ ಪ್ರವಾಹವು ನನಗಿಲ್ಲ, ನಾನೂ (ಅದಕ್ಕೆ ಸೇರಿದವ)ನಲ್ಲ. ಏಕೆಂದರೆ ನಾನು ಯಾವ ವಿಕಾರವೂ ಇಲ್ಲದವನಾಗಿರುತ್ತೇನೆ. ಮತ್ತು ಪ್ರವಾಹವು ಅಸತ್ತಾಗಿದೆ ಎಂಬ

---

1. ಏಕೆಂದರೆ ಕಾರ್ಯವು ಕಾರಣವಾಗಿರುವ ಆತ್ಮನಿಗಿಂತ ಸ್ವತಂತ್ರವಾಗಿ ಬೇರೆ ಇಲ್ಲ.

2. (ನಾಮರೂಪಾತೀತವಾದ) ಓಂಕಾರವು (ನಾನು)— ಎಂದೂ ಇದನ್ನು ಕನ್ನಡಿಸಬಹುದು.

3. ಅವಸ್ಥೆಗಳು ಅವಸ್ಥಾರೂಪದಿಂದ ನಿಜವಾಗಿ ಇರುವದಿಲ್ಲ; ಏಕೆಂದರೆ ಹಗ್ಗದಲ್ಲಿ ಕಲ್ಪಿಸಿದ ಹಾವು, ನೀರಿನ ಕೋಡಿ, ಕೋಲು– ಇವುಗಳಂತೆ ಪರಸ್ಪರವ್ಯಭಿಚರಿತವಾಗಿರುತ್ತವೆ. ಆತ್ಮನ ದೃಷ್ಟಿಯಿಂದಲಂತೂ ಅವು ಇಲ್ಲವೇ ಇಲ್ಲ.

ಕಾರಣದಿಂದಲೂ[1] (ಹೀಗೆ). ಕನಸುಕಾಣುವವನಿಗೆ ಕಾಣುವದರಂತೆ ಅದಕ್ಕೂ ಅಸತ್ತ್ವವು (ಯುಕ್ತವು).[2]

## ಆತ್ಮನು ನಿರ್ವಿಕಾರನು

**ಇದಂ ತು ಸತ್ಯಂ ಮಮ ನಾಸ್ತಿ ವಿಕ್ರಿಯಾ**
**ವಿಕಾರಹೇತುರ್ನ ಹಿ ಮೇಽದ್ವಯತ್ವತಃ ।**
**ನ ಪುಣ್ಯಪಾಪೇ ನ ಚ ಮೋಕ್ಷಬನ್ಧನೇ**
**ನ ಚಾಸ್ತಿ ವರ್ಣಾಶ್ರಮತಾಶರೀರತಃ ॥ ೬ ॥**

೬. ನನಗೆ ವಿಕಾರವಿಲ್ಲ. ನಾನು ಅದ್ವಯನಾಗಿರುವದರಿಂದ ನನ್ನಲ್ಲಿ ವಿಕಾರವನ್ನುಂಟುಮಾಡುವ ಹೇತುವೂ ಇರುವದಿಲ್ಲ. ಪುಣ್ಯಪಾಪಗಳಿಲ್ಲ. ಮೋಕ್ಷ ಬಂಧಗಳೂ ಇರುವದಿಲ್ಲ, ವರ್ಣಾಶ್ರಮಗಳೂ ಇರುವದಿಲ್ಲ; ಏಕೆಂದರೆ (ನಾನು ಅಶರೀರನಾಗಿರುವೆನು.[3] ಇದೇ ಸತ್ಯವು.

## ಆತ್ಮನಿಗೆ ಕರ್ಮವೂ ಇಲ್ಲ, ಕರ್ಮಫಲವೂ ಇಲ್ಲ.

**ಅನಾದಿತೋ ನಿರ್ಗುಣತೋ ನ ಕರ್ಮ ಮೇ**
**ಫಲಂ ಚ ತಸ್ಮಾತ್ ಪರಮೋಽಹಮದ್ವಯಃ[4] ।**
**ಯಥಾ ನಭಃ ಸರ್ವಗತಂ ನ ಲಿಪ್ಯತೇ**
**ತಥಾ ಹ್ಯಹಂ ದೇಹಗತೋಽಪಿ ಸೂಕ್ಷ್ಮತಃ ॥ ೭ ॥**

೭. ಅನಾದಿಯಾಗಿರುವದರಿಂದಲೂ ನಿರ್ಗುಣನಾಗಿರುವದರಿಂಲೂ ನನಗೆ ಕರ್ಮವೂ ಅದರ ಫಲವೂ ಇರುವದಿಲ್ಲ.[5] ಆದ್ದರಿಂದ ನಾನು ಅದ್ವಿತೀಯನಾದ ಪರಮಾತ್ಮನು. ಸರ್ವಗತನಾಗಿದ್ದರೂ ಸೂಕ್ಷ್ಮವಾಗಿರುವದರಿಂದ ಆಕಾಶವು (ಮತ್ತೊಂದರ) ಅಂಟಿಲ್ಲದೆ ಇರುವದೋ ಹಾಗೆಯೇ ನಾನೂ ದೇಹದಲ್ಲಿದ್ದರೂ (ಅದರ ದೋಷದ ಅಂಟಿಲ್ಲದೆ ಇರುವೆನು.)[6]

---

1. ಶರೀರಾದಿಪ್ರಪಂಚವು ನಿಜವೆಂದರೂ ದೃಶ್ಯವಾಗಿರುವದರಿಂದ ದೃಗ್ರೂಪನಾದ ಆತ್ಮನಿಗಿಲ್ಲ; ಅವು ಅಸತ್ತೇ ಆದರೆ ಹೇಳುವದೇನು ?

2. ಅದು ಬರಿಯ ತೋರಿಕೆಯು. ಸುಷುಪ್ತಿಯೇ ಮುಂತಾದ್ದರಲ್ಲಿಲ್ಲವೇ ಇಲ್ಲ.

3. ಶರೀರವು ಆತ್ಮನಿಗೆ ಇದೆ ಎಂಬುದು ಮಿಥ್ಯಾಭಿಮಾನವು. ಕ. ೧-೨-೨೨.

4. ಗೀ. ೧೩-೩೧ರ ಅಭಿಪ್ರಾಯ. ಅನಾದಿಯಾಗಿರುವದಕ್ಕೆ ಹೊಸದಾಗಿ ವಿಕಾರವಾಗುವಂತಿಲ್ಲ. ನಿರ್ಗುಣವಾದದ್ದಕ್ಕೂ ವಿಕಾರವಿಲ್ಲ.

5. 'ಅವ್ಯಯಃ' ಎಂಬ ಪಾಠವೂ ಇರಬಹುದೆಂದು ತೋರುತ್ತದೆ. ಇದ್ದರೆ ಗೀತೆಗೆ ಅನುಗುಣವಾಗುವದು.

6. ಗೀ. ೧೩-೩೨ರ ಅಭಿಪ್ರಾಯ.

## ಆತ್ಮನು ಪುರುಷೋತ್ತಮನು

**ಸದಾ ಚ ಭೂತೇಷು ಸಮೋಽಹಮೀಶ್ವರಃ**
**ಕ್ಷರಾಕ್ಷರಾಭ್ಯಾಂ ಪರಮೋ ಹ್ಯಥೋತ್ತಮಃ ।**
**ಪರಾತ್ಮತತ್ತ್ವಶ್ಚ ತಥಾವ್ಯಯೋಽಪಿ ಸನ್**
**ವಿಪರ್ಯಯೇಣಾಭಿಮತಸ್ತ್ವವಿದ್ಯಯಾ ॥ ೮ ॥**

೮. ನಾನು ಯಾವಾಗಲೂ ಎಲ್ಲಾ ಪ್ರಾಣಿಗಳಲ್ಲಿಯೂ ಸಮವಾಗಿಯೇ ಇರುವ ಈಶ್ವರನು.[1] ಮತ್ತು ಕ್ಷರ, ಅಕ್ಷರ– (ಇವೆರಡ)ಕ್ಕಿಂತಲೂ ಹೆಚ್ಚಿನ ಉತ್ತಮಪುರುಷನಾಗಿರುತ್ತೇನೆ. ಪರಮಾತ್ಮತತ್ತ್ವ(ಸ್ವರೂಪ)ನೂ ಅವ್ಯಯನೂ ಆಗಿರುವೆನಾದರೂ[2] ಅವಿದ್ಯೆಯಿಂದ (ಇದಕ್ಕೆ) ವಿಪರೀತವಾದ (ಸ್ವರೂಪವುಳ್ಳವನೆಂದು) ಎಣಿಸಲ್ಪಟ್ಟಿರುವೆನು.[3]

## ಆತ್ಮನು ಅವಿದ್ಯಾಕಾಮಕರ್ಮರಹಿತನು

**ಅವಿದ್ಯಯಾ ಭಾವನಯಾ ಚ ಕರ್ಮಭಿ-**
**ರ್ವಿವಿಕ್ತ ಆತ್ಮಾವ್ಯವಧಿಃ ಸುನಿರ್ಮಲಃ ।**
**ದೃಗಾದಿಶಕ್ತಿಪ್ರಚಿತೋಽಹಮದ್ವಯಃ**
**ಸ್ಥಿತಃ ಸ್ವರೂಪೇ ಗಗನಂ ಯಥಾಮಲಮ್ ॥ ೯ ॥**

೯. ನಾನು ಅವಿದ್ಯೆಯಿಂದಲೂ ಕಾಮದಿಂದಲೂ ಕರ್ಮಗಳಿಂದಲೂ ರಹಿತನಾಗಿ[4] ಯಾವ ನಡುವಣ ಮರೆಯೂ ಇಲ್ಲದವನಾಗಿ ಅತ್ಯಂತನಿರ್ಮಲನಾಗಿರುವ ಆತ್ಮನು. ದೃಷ್ಟಿಯೇ ಮುಂತಾದ ಶಕ್ತಿಗಳಿಂದ[5] ಬೆಳೆದುಕೊಂಡಿರು

1. ಗೀ. ೧೩–೨೭ರ ಅಭಿಪ್ರಾಯವಿದು. ಪರಮಾತ್ಮನು ಒಂದೊಂದು ಪ್ರಾಣಿಯಲ್ಲಿಯೂ ಅವಕ್ಕೆ ತಕ್ಕಷ್ಟೇ ಪರಿಮಾಣದಿಂದ ಇರುತ್ತಾನೆಂದು ಭಾವಿಸಬಾರದು.

2. ಗೀ. ೧೫–೧೭,೧೮ ಈ ಶ್ಲೋಕಗಳ ಅಭಿಪ್ರಾಯವು ; ವ್ಯಾಕೃತಾವ್ಯಾಕೃತಗಳಿಗಿಂತ ಭಿನ್ನನಾಗಿರುವದರಿಂದ ಪರಮಾತ್ಮಸ್ವರೂಪನೇ,

3. ಮಿಥ್ಯಾಜ್ಞಾನದಿಂದಲೇ ಆತ್ಮನು ನಿಜವಾಗಿರುವದಕ್ಕಿಂತ ಬೇರೆಯಾದ ರೂಪದಲ್ಲಿ ಕಾಣುತ್ತಿರುವನು.

4. ಅವಿದ್ಯೆಯಿಂದ ಬೇರೆಯಾಗಿ ತೋರುತ್ತಾನೆಂದವ್ದರಿಂದ ಅವಿದ್ಯೆಯು ಆತ್ಮನಲ್ಲಿ ನಿಜವಾಗಿರುತ್ತದೆ ಎಂದು ಯಾರಾದರೂ ಭಾವಿಸಬಹುದು ; ಅದು ಸರಿಯಲ್ಲವೆಂದು ತಿಳಿಸುವದಕ್ಕೆ ಅವಿದ್ಯಾಕಾಮಗಳನ್ನು ಅಲ್ಲಗಳೆದಿದೆ. ಇವುಗಳನ್ನೂ ಕ್ಷೇತ್ರಧರ್ಮಗಳೆಂದು ಗೀತೆ ೧೩ರಲ್ಲಿ ಹೇಳಿದೆ.

5. ದೃಷ್ಟಿ, ಶ್ರುತಿ, ಮತಿ, ವಿಜ್ಞಾತಿ– ಮುಂತಾದ ಶಕ್ತಿವಿಶೇಷಗಳಿಂದ.

ವನಾಗಿ ಅದ್ವಯನಾಗಿ ನಿರ್ಮಲವಾದ ಗಗನದಂತೆ ಸ್ವರೂಪದಲ್ಲಿಯೇ ಇದ್ದು ಕೊಂಡಿರುವೆನು.

**ಅಹಂ ಪರಂ ಬ್ರಹ್ಮ ವಿನಿಶ್ಚಯಾತ್ಮದೃಕ್**
**'ನ ಜಾಯತೇ ಭೂಯ' ಇತಿ ಶ್ರುತೇರ್ವಚಃ ।**
**ನ ಚೈವ ಬೀಜೇ ತ್ವಸತಿ ಪ್ರಜಾಯತೇ**
**ಫಲಂ ನ ಜನ್ಮಾಸ್ತಿ ತತೋಽಸ್ಯಮೋಹತಾ ॥ ೧೦ ॥**

೧೦. ನಾನು ಪರಬ್ರಹ್ಮವು. ಅತ್ಯಂತನಿಶ್ಚಯರೂಪವಾದ[1] ಆತ್ಮ ದರ್ಶನವುಳ್ಳವನು. ಮತ್ತೆ ಹುಟ್ಟುವದಿಲ್ಲ ಎಂದು ಶ್ರುತಿಯ ವಚನವಿದೆ.[2] ಬೀಜವಿಲ್ಲದಿದ್ದರೆ ಫಲವು ಹುಟ್ಟುವದಿಲ್ಲ.[3] ಆದ್ದರಿಂದ ಮೋಹವೇ ಇಲ್ಲದ್ದ ರಿಂದ ಜನ್ಮವೂ ಇಲ್ಲ.[4]

## ಆತ್ಮನು ನಿರ್ವಿಕಲ್ಪನು, ಅಕರ್ತೃ, ನಿಷ್ಪ್ರಪಂಚನು

**ಮಮೇದಮಿತ್ಥಂ ನ ತವೇದಮೀದೃಶಂ[5]**
**ತಥಾಹಮೇವಂ ನ ಪರೋ ನ ವಾನ್ಯಥಾ ।**
**ವಿಮೂಢತೈವಾಸ್ಯ ಜನಸ್ಯ ಕಲ್ಪನಾ**
**ಸದಾ ಸಮೇ ಬ್ರಹ್ಮಣಿ ಚಾದ್ವಯೇ ಶಿವೇ ॥ ೧೧ ॥**

೧೧. 'ಇದು ನನ್ನದು, ಹೀಗಿರುತ್ತದೆ; ಇದು ನಿನ್ನದಲ್ಲ, ಹೀಗಿರುವದಿಲ್ಲ' ಎಂದೂ 'ನಾನು ಹೀಗಿರುವೆನು, ಮತ್ತೊಬ್ಬನು (ಹೀಗಿರುವದಿಲ್ಲ); (ನಾನು) ಬೇರೆ ರೀತಿಯಲ್ಲಿಲ್ಲವೇ ಇಲ್ಲ' ಎಂದೂ ಈ ಜನವು ಯಾವಾಗಲೂ ಸಮವಾಗಿ ರುವ ಅದ್ವಯವಾಗಿರುವ ಶಿವಸ್ವರೂಪವಾಗಿರುವ ಬ್ರಹ್ಮದಲ್ಲಿ ಕಲ್ಪಿಸುತ್ತಿರುವದು ವಿಶೇಷಮೂಢತನವೇ ಸರಿ.[6]

---

1. ಯಾವ ಸಂಶಯವೂ ಇಲ್ಲದ ಎಂದರ್ಥ. ಆತ್ಮಜ್ಞಾನವಾದಾಗ ಸಂಶಯ ಗಳು ಕತ್ತರಿಸಿಹೋಗುವವು.

2. ಕ. ೧-೩-೮ರ ಸೂಚನೆಯಿದು.

3. ಧರ್ಮಾಧರ್ಮಗಳು ಬೀಜವು; ಫಲವು ಶರೀರವು,

4. ಅಜ್ಞಾನವಿಲ್ಲದೆ ಕಾಮುಕರ್ಮಗಳಿರುವದಿಲ್ಲ; ಅವಿಲ್ಲದಿದ್ದರೆ ಜನ್ಮವೂ ಇಲ್ಲ.

5. 'ಚ ತಥೇದಮೀದೃಶಂ' ವ್ಯಾ॥ ಪಾಠ; 'ನ ತವಾತ ಈದೃಂಶ' ಎಂಬ ಬೋಧ ನಿಧಿಯ ಪಾಠ- ಈ ಎರಡನ್ನು ಕೂಡಿಸಿ ಹೀಗೆ ಮಾರ್ಪಡಿಸಿಕೊಂಡಿದೆ.

6. ಒಂದೇ ಹಗ್ಗವನ್ನು ಹಾವು, ನೀರಿನಕೋಡಿ- ಎಂದು ಮುಂತಾಗಿ ಭ್ರಾಂತರು ಕಲ್ಪಿಸುವಂತೆ ಒಬ್ಬ ಪರಮಾತ್ಮನಲ್ಲಿಯೇ ವಿಚಿತ್ರವಾದ ದ್ವೈತವನ್ನು ಜನರು ಕಲ್ಪಿಸಿ ಕೊಂಡಿರುತ್ತಾರೆ.

**ಯದದ್ವಯಂ ಜ್ಞಾನಮತೀವ ನಿರ್ಮಲಂ**
**ಮಹಾತ್ಮನಾಂ ತತ್ರ ನ ಶೋಕಮೋಹತಾ ।**
**ತಯೋರಭಾವೇ ನ ಹಿ ಕರ್ಮ ಜನ್ಮ ವಾ**
**ಭವೇದಯಂ ವೇದವಿದಾಂ ವಿನಿಶ್ಚಯಃ ॥ ೧೨ ॥**

೧೨. ಮಹಾತ್ಮರ ಅತಿನಿರ್ಮಲವಾಗಿರುವ ಅದ್ವಿತೀಯಜ್ಞಾನವಿದೆಯಲ್ಲ, ಅದರಲ್ಲಿ ಶೋಕಮೋಹಗಳಿರುವದಿಲ್ಲ[1]. ಅವುಗಳು ಇಲ್ಲದಿದ್ದರೆ ಕರ್ಮವಾಗಲಿ ಜನ್ಮವಾಗಲಿ (ಉಂಟಾಗ)ಲಾರದು[2]. ಇದು ವೇದವನ್ನು ಬಲ್ಲವರ ನಿಶ್ಚಯವು.

**ಸುಷುಪ್ತವಜ್ಜಾಗ್ರತಿ ಯೋ ನ ಪಶ್ಯತಿ**
**ದ್ವಯಂ ತು ಪಶ್ಯನ್ನಪಿ ಚಾದ್ವಯತ್ವತಃ ।**
**ತಥಾ ಚ ಕುರ್ವನ್ನಪಿ ನಿಷ್ಕ್ರಿಯಶ್ಚ ಯಃ**
**ಸ ಆತ್ಮವಿನ್ನಾನ್ಯ ಇತೀಹ ನಿಶ್ಚಯಃ ॥ ೧೩ ॥**

೧೩. ಯಾವನು ಅದ್ವಯನಾಗಿರುವದರಿಂದ ಸುಷುಪ್ತಿಯಲ್ಲಿ ಹೇಗೋ ಹಾಗೆ ಎಚ್ಚರ(ದವಸ್ಥೆ)ಯಲ್ಲಿಯೂ ದ್ವೈತವನ್ನು ಕಾಣುತ್ತಿದ್ದರೂ (ನಿಜವಾಗಿ) ಕಾಣದೆ ಇರುವನೋ, ಮತ್ತು (ಕರ್ಮವನ್ನು) ಮಾಡುತ್ತಿದ್ದರೂ ನಿಷ್ಕ್ರಿಯನಾಗಿರುವನೋ ಅವನೇ ಆತ್ಮಜ್ಞಾನಿಯು[3], ಮತ್ತೊಬ್ಬನಲ್ಲ[4] ಎಂದು ಇಲ್ಲಿ ನಿಶ್ಚಯವು.

## ಪರಮಾರ್ಥದರ್ಶನದ ಫಲ

**ಇತೀದಮುಕ್ತಂ ಪರಮಾರ್ಥದರ್ಶನಂ**
**ಮಯಾ ಹಿ ವೇದಾನ್ತವಿನಿಶ್ಚಿತಂ ಪರಮ್ ।**

1. ಏಕೆಂದರೆ ಶೋಕಮೋಹಗಳಿಗೆ ದ್ವೈತಜ್ಞಾನವು ಬೇಕು. ಅದ್ವಿತೀಯಾತ್ಮಜ್ಞಾನಿಗೆ ಅವು ಹೇಗೆ ಇದ್ದಾವು? ಈ. ೭.

2. ಶೋಕಮೋಹಗಳಿಂದಲೇ ಕರ್ಮವನ್ನು ಮಾಡುವದು, ಕರ್ಮದಿಂದಲೇ ಫಲಾನುಭವಕ್ಕಾಗಿ ಮತ್ತೊಂದು ಜನ್ಮವನ್ನು ಪಡೆಯಬೇಕಾಗುವದು.

3. ಗಾಢನಿದ್ರೆಯಲ್ಲಿ ಎರಡನೆಯ ವಸ್ತುವಿನ ದರ್ಶನವಿಲ್ಲ, ಯಾವ ಕರ್ಮವೂ ಇರುವದಿಲ್ಲ; ಆದ್ದರಿಂದ ಅಲ್ಲಿ ಯಾವ ಸಂಸಾರದುಃಖವೂ ಇರುವದಿಲ್ಲ. ಇದು ಸ್ವಾಭಾವಿಕವಾಗಿ ಎಲ್ಲರ ಅನುಭವದಲ್ಲಿಯೂ ಇದೆ. ಇದರಂತೆ ತಾನು ಅದ್ವಿತೀಯನೆಂಬ ಜ್ಞಾನವುಂಟಾದವನು ಎಚ್ಚರದಲ್ಲಿ ಕಾಣುವ ದ್ವೈತವು ಅಸತ್ಯವೆಂದೂ ಮಾಡುವಂತೆ ಕಾಣುವ ಕರ್ಮವು ಅಕರ್ಮವೆಂದೂ ತಿಳಿಯುತ್ತಾನೆ.

4. ದ್ವೈತವು ಸತ್ಯವೆಂದೂ ತಾನು ಮಾಡುವ ಕರ್ಮವು ನಿಜವಾಗಿ ಫಲವನ್ನು ಕೊಡುವದೆಂದೂ ತಿಳಿದವನು ಆತ್ಮಜ್ಞಾನಿಯಲ್ಲ.

**ವಿಮುಚ್ಯತೇಽಸ್ಮಿನ್ ಯದಿ ನಿಶ್ಚಿತೋ ಭವೇ-**
**ನ್ನ ಲಿಪ್ಯತೇ ವ್ಯೋಮವದೇವ ಕರ್ಮಭಿಃ** ॥ ೧೪ ॥

೧೪. ಹೀಗೆ ಉಪನಿಷತ್ತುಗಳಲ್ಲಿ ಸಿದ್ಧವಾಗಿರುವ ಈ ಹೆಚ್ಚಿನ ಪರಮಾರ್ಥದರ್ಶನವು ನನ್ನಿಂದ ಹೇಳಲ್ಪಟ್ಟಿರುತ್ತದೆ. ಇದರಲ್ಲಿ ನಿಶ್ಚಯವನ್ನು ಹೊಂದಿದನಾದರೆ ವಿಮುಕ್ತನಾಗುತ್ತಾನೆ, ಆಕಾಶದಂತೆಯೇ ಕರ್ಮಗಳಿಂದ ಬಿಡುಗಡೆಯನ್ನು ಹೊಂದುತ್ತಾನೆ.

——:o:——

# ಪರಮಾರ್ಥದರ್ಶನಪ್ರಕರಣದ ಸಾರ

೧-೩. ಆತ್ಮಚೈತನ್ಯವು ಸ್ವಯಂಪ್ರಕಾಶವಾಗಿ ಆಕಾಶದಂತೆ ತನಗಿಂತ ಬೇರೆಯಾದ ಎರಡನೆಯ ವಸ್ತುವಿಲ್ಲದೆ, ಜನ್ಮನಾಶಗಳಿಲ್ಲದ್ದಾಗಿ, ಸರ್ವಗತವಾಗಿ, ಮತ್ತೊಂದರ ಲೇಪ ವಿಲ್ಲದೆ ನಿರ್ವಿಕಾರವಾಗಿ ಎಲ್ಲೆಲ್ಲಿಯೂ ತಾನೇ ಆಗಿ ತನ್ನಲ್ಲಿ ತಾನು ಇದ್ದುಕೊಂಡಿರುವದು. ಅದು ಅಜವೂ ಅಮರವೂ ಅಮೃತವೂ ಕಾರ್ಯಕಾರಣವರ್ಜಿತವೂ ಆಗಿರುವ ನಿತ್ಯಶುದ್ಧ ಬುದ್ಧಮುಕ್ತಸ್ವಭಾವದ್ದಾಗಿರುತ್ತದೆ.

೪-೫. ಜಾಗ್ರದಾದಿಯಾದ ಅವಸ್ಥೆಗಳು ಒಂದನ್ನೊಂದು ಬಿಟ್ಟು ಹೋಗುತ್ತಿರುವದ ರಿಂದಲೇ ಅಸತ್ತು, ಪರಮಾರ್ಥವಾಗಿ ಆತ್ಮನೇ ಆಗಿರುವದರಿಂದಲೂ ಅಸತ್ತು. ಆದ್ದರಿಂದ ಚೈತನ್ಯವು ನಿತ್ಯನಿರವಸ್ಥವು. ನಿರ್ವಿಕಾರವಾದ ಅದಕ್ಕೆ ದೇಹೇಂದ್ರಿಯಾದಿಗಳ ಗೋಜು ಇಲ್ಲವೇ ಇಲ್ಲ ; ಅವು ಕನಸಿನ ತೋರಿಕೆಗಳಂತೆ ಅಸತ್ತಾಗಿರುವವು.

೬-೭. ಅದ್ವಿತೀಯನಾಗಿರುವದರಿಂದ ಆತ್ಮನು ನಿರ್ವಿಕಾರನು. ಅಶರೀರನಾಗಿರುವದ ರಿಂದ ವರ್ಣಾಶ್ರಮಗಳಾಗಲಿ ಪುಣ್ಯಪಾಪಗಳಾಗಲಿ ಬಂಧಮೋಕ್ಷಗಳಾಗಲಿ ಅವನಿಗೆ ಇಲ್ಲ. ಅನಾದಿಯೂ ನಿರ್ಗುಣನೂ ಸೂಕ್ಷ್ಮನೂ ಆಗಿರುವದರಿಂದ ದೇಹದಲ್ಲಿದ್ದರೂ ಆತ್ಮನು ಆಕಾಶ ದಂತೆ ನಿಷ್ಕ್ರಿಯನೂ ನಿರ್ಲೇಪನೂ ಆಗಿರುತ್ತಾನೆ.

೮. ಆತ್ಮನು ಒಬ್ಬನೇ ಎಲ್ಲಾ ಭೂತಗಳಲ್ಲಿಯೂ ಸಮವಾಗಿರುತ್ತಾನೆ. ಕ್ಷರಾಕ್ಷರ ಗಳೆರಡನ್ನೂ ಮೀರಿರುವ ಅವ್ಯಯನಾದ ಪುರುಷೋತ್ತಮನೇ ಆಗಿದ್ದರೂ ಅವಿದ್ಯೆಯಿಂದ ಬೇರೆಯಾಗಿ ತಿಳಿದುಕೊಂಡಿರುತ್ತಾರೆ.

೯-೧೦. ಆತ್ಮನು ಅವಿದ್ಯಾಕಾಮಕರ್ಮರಹಿತನು. ದೃಷ್ಟ್ಯಾದಿಗಳ ಶಕ್ತಿರೂಪವಾದ ಚೈತನ್ಯಸ್ವರೂಪನು, ನಿತ್ಯವಾಗಿ ಸ್ವರೂಪದಲ್ಲಿಯೇ ಇರುವವನು. ಆದ್ದರಿಂದ ಅಜನು.

೧೧-೧೩. ಆತ್ಮನು ಅದ್ವಿತೀಯನಾಗಿ ಯಾವಾಗಲೂ ಒಂದೇ ರೂಪದಲ್ಲಿರುತ್ತಿದ್ದರೂ ಜನರು ಅವನಲ್ಲಿ ಬಗೆಬಗೆಯಾದ ವಿಕಲ್ಪಗಳನ್ನು ಮಾಡಿಕೊಂಡಿರುವರು. ಅದ್ವಿತೀಯ ಜ್ಞಾನವುಂಟಾದವರಿಗೆ ಶೋಕಮೋಹಗಳಾಗಲಿ ಕರ್ಮವಾಗಲಿ ಜನ್ಮವಾಗಲಿ ಇರುವದಿಲ್ಲ. ಸರಿಯಾಗಿ ತಿಳಿದುಕೊಂಡಿರುವವರ ದೃಷ್ಟಿಯಲ್ಲಿ ಆತ್ಮನು ಸುಷುಪ್ತಿಯಲ್ಲಿರುವಂತೆ ಎಚ್ಚರ ದಲ್ಲಿಯೂ ನಿರ್ದ್ವಯನೂ ನಿಷ್ಕ್ರಿಯನೂ ಆಗಿರುತ್ತಾನೆ ; ಅಜ್ಞರಿಗೆ ಮಾತ್ರವೇ ಎಚ್ಚರ ದಲ್ಲಿರುವ ದ್ವೈತವೂ ಕರ್ಮವೂ ಸತ್ಯವಾಗಿರುತ್ತವೆ.

೧೪. ಈ ಪರಮಾರ್ಥದರ್ಶನವುಳ್ಳವರು ಕರ್ಮಲೇಪವಿಲ್ಲದೆ ಮುಕ್ತರಾಗುವರು.



# ೧೧. ಈಕ್ಷಿತೃತ್ವ

## ಶುದ್ಧಚೈತನ್ಯರೂಪವು ಜೀವರಿಗೆ ಸ್ವತಃಸಿದ್ಧ

**ಈಕ್ಷಿತೃತ್ವಂ ಸ್ವತಃಸಿದ್ಧಂ ಜನ್ತೂನಾಂ ಚ ತವೋಽನ್ಯತಾ ।**
**ಅಜ್ಞಾನಾದಿತ್ಯತೋಽನ್ಯತ್ವಂ ಸದಸೀತಿ ನಿವರ್ತ್ಯತೇ ॥ ೧ ॥**

೧. ನೋಡುವವರಾಗಿರುವದೆಂಬುದು ಜೀವರಿಗೆ ತಾನೇ ಸಿದ್ಧವಾಗಿರುತ್ತದೆ; ಅದಕ್ಕಿಂತ ಬೇರೆಯಾಗಿರುವದೆಂಬುದು ಅಜ್ಞಾನದಿಂದ. ಆದ್ದರಿಂದ ಹೀಗೆ ಬೇರೆಯಾಗಿರುವದನ್ನು 'ಸತ್ತೇ ಆಗಿರುವೆ'[1] (ಛಾಂ. ೬-೮-೭) ಎಂಬ (ವಾಕ್ಯದಿಂದ) ಅಲ್ಲಗಳೆದಿದೆ[2].

**ಏತಾವದ್ಧ್ಯಮೃತತ್ವಂ ನ ಕಿಂಚಿದನ್ಯತ್ ಸಹಾಯಕಮ್ ।**
**ಜ್ಞಾನಸ್ಯೇತಿ ಬ್ರುವಚ್ಛಾಸ್ತ್ರಂ ಸಲಿಙ್ಗಂ ಕರ್ಮ ಬಾಧತೇ ॥ ೨ ॥**

೨. ಇಷ್ಟೇ ಅಮೃತತ್ವವು[3], (ಅದಕ್ಕೆ) ಮತ್ತೊಂದು ಯಾವದೂ ಸಹಾಯಕವಲ್ಲ ಎಂದು ಶಾಸ್ತ್ರವು ಹೇಳುವದರಿಂದ ಲಿಂಗಸಹಿತವಾಗಿ[4] ಕರ್ಮವನ್ನು ಬಾಧಿಸುತ್ತದೆ.

## ಜೀವನು ಚಿನ್ಮಾತ್ರನೆಂಬುದು ಹೇಗೆ?

**ಸರ್ವೇಷಾಂ ಮನಸೋ ವೃತ್ತಮವಿಶೇಷೇಣ ಪಶ್ಯತಃ ।**
**ತಸ್ಯ ಮೇ ನಿರ್ವಿಕಾರಸ್ಯ ವಿಶೇಷಃ ಸ್ಯಾತ್ ಕಥಂಚನ ॥ ೩ ॥**

---

1. ಸತ್ತೊಂದೇ ಇತ್ತು, ಅದು ಆಲೋಚಿಸಿ ನೋಡಿತು, ತೇಜಸ್ಸನ್ನು ಸೃಷ್ಟಿ ಮಾಡಿತು; ಅದು ಸತ್ಯ, ಅದೇ ಆತ್ಮನು, ನೀನೇ ಅದಾಗಿರುವೆ- ಎಂದು ಛಾಂದೋಗ್ಯದಲ್ಲಿ ಹೇಳಿರುವದು ಚಿನ್ಮಾತ್ರವಾಗಿರುವ ಪರಮಾತ್ಮನಿಗಿಂತ ಜೀವನು ಭಿನ್ನನಲ್ಲ ಎಂದು ತಿಳಿಸುವದಕ್ಕೆ.

2. ವಾಕ್ಯವನ್ನು ಕೇಳಿದ ಮೇಲೆ ಚೈತನ್ಯವಾಗುವದಿಲ್ಲ, ಚಿದ್ಭಿನ್ನತ್ವವು ನಿವೃತ್ತಿಯಾಗುತ್ತದೆ.

3. ಅಮೃತತ್ವಕ್ಕೆ ಸಾಧನವು. ಬೃ. ೪-೫-೧೬. ಈ ಜ್ಞಾನವೊಂದೇ ಅಮೃತತ್ವಕ್ಕೆ ಸಾಕು, ಮತ್ತೇನೂ ಬೇಡ -ಎಂದು ಕರ್ಮರಹಿತಳಾದ ಮೈತ್ರೇಯಿಗೆ ಯಾಜ್ಞವಲ್ಕ್ಯನು ಹೇಳಿರುತ್ತಾನೆ.

4. ಆಶ್ರಮಾಂತರಸಹಿತವಾಗಿ ಎಂದರ್ಥ. ಯಾಜ್ಞವಲ್ಕ್ಯನು ಜ್ಞಾನವೊಂದೇ ಸಾಕು ಎಂದು ಹೇಳಿ ಪರಮಹಂಸಪರಿವ್ರಾಜಕನಾದನು ಎಂಬವದ್ದರಿಂದ ಮಿಕ್ಕ ಆಶ್ರಮ ಕರ್ಮಗಳು ಮೋಕ್ಷಕ್ಕೆ ಸಾಧನವಲ್ಲವೆಂದಂತೆ ಆಯಿತು ಎಂದು ಭಾವ.

**ಮನೋವೃತ್ತಂ ಮನಶ್ಚೈವ ಸ್ವಪ್ನವಜ್ಜಾಗ್ರತೀಕ್ಷಿತುಃ ।**
**ಸಂಪ್ರಸಾದೇ ದ್ವಯಾಸತ್ತ್ವಾಚ್ಚಿನ್ಮಾತ್ರಃ ಸರ್ವಗೋಽವ್ಯಯಃ ॥ ೪ ॥**

೩-೪. ಎಲ್ಲರ ಮನಸ್ಸಿನ ವ್ಯಾಪಾರಗಳನ್ನೂ ಸಮಾನವಾಗಿ ನೋಡುತ್ತಿರುವ ನಿರ್ವಿಕಾರನಾದ ನನಗೆ ಹೇಗೆ ತಾನೆ ವಿಶೇಷವುಂಟಾದೀತು[1] ? ಕನಸಿನಲ್ಲಿ ಹೇಗೋ ಹಾಗೆ ಎಚ್ಚರದಲ್ಲಿಯೂ ಮನಸ್ಸಿನ ವ್ಯಾಪಾರವನ್ನೂ ಮನಸ್ಸನ್ನೂ ನೋಡುತ್ತಿರುವ ನನಗೆ (ಹೇಗೆತಾನೆ ವಿಶೇಷವುಂಟಾದೀತು) ? ಸಂಪ್ರಸಾದದಲ್ಲಿ[2] ದ್ವೈತವಿಲ್ಲದಿರುವದರಿಂದ[3] (ನಾನು) ಚಿನ್ಮಾತ್ರನು, ಸರ್ವಗತನು, ಅವ್ಯಯನು[4].

## ಪ್ರತ್ಯಕ್ಷಾದಿಗಳಿಂದ ತೋರುವ ಜೀವತ್ವವು ವ್ಯಾವಹಾರಿಕವು

**ಸ್ವಪ್ನಃ ಸತ್ಯೋ ಯಥಾಬೋಧಾದ್ದೇಹಾತ್ಮತ್ವಂ ತಥೈವ ಚ ।**
**ಪ್ರತ್ಯಕ್ಷಾದೇಃ ಪ್ರಮಾಣತ್ವಂ ಜಾಗ್ರತ್ಸ್ಯಾದಾತ್ಮವೇದನಾತ್ ॥ ೫ ॥**

೫. ಕನಸು ಹೇಗೆ ಎಚ್ಚರವಾಗುವವರೆಗೆ ಸತ್ಯವೋ ಮತ್ತು ದೇಹಾತ್ಮತ್ವವು ಹೇಗೆ (ದೇಹವ್ಯತಿರಿಕ್ತಾತ್ಮಜ್ಞಾನವಾಗುವವರೆಗೆ ಸತ್ಯವಾಗಿರುವದೋ) ಹಾಗೆಯೇ ಎಚ್ಚರದ ಪ್ರತ್ಯಕ್ಷವೇ ಮುಂತಾದವುಗಳು ಆತ್ಮಜ್ಞಾನವುಂಟಾಗುವವರೆಗೂ[5] ಪ್ರಮಾಣವಾಗಿರುವವು.

**ವ್ಯೋಮವತ್ಸರ್ವಭೂತಸ್ಥೋ ಭೂತದೋಷೈರ್ವಿವರ್ಜಿತಃ ।**
**ಸಾಕ್ಷೀ ಚೇತಾಗುಣಃ ಶುದ್ಧೋ ಬ್ರಹ್ಮೈವಾಸ್ಮೀತಿ ಕೇವಲಃ ॥ ೬ ॥**

೬. ಆಕಾಶದಂತೆ ಸರ್ವಭೂತಗಳಲ್ಲಿಯೂ ಇರುವವನೂ (ಆ) ಭೂತಗಳ ದೋಷಗಳ ಸಂಬಂಧವಿಲ್ಲದವನೂ ಸಾಕ್ಷಿಯೂ ಚೈತನ್ಯರೂಪನೂ ನಿರ್ಗುಣನೂ ಶುದ್ಧನೂ ಆಗಿ ನಾನೇನಾನಾಗಿರುವದರಿಂದ ಬ್ರಹ್ಮವೇ ಆಗಿರುವೆನು[6].

---

1. ಇದನ್ನು ೭-೨, ೯-೬, ೭-ಇವುಗಳಲ್ಲಿಯೂ ತಿಳಿಸಿದೆ. ಮನಸ್ಸೆಂದರೆ ಅಂತಃಕರಣವೇ.

2. ಅತ್ಯಂತಪ್ರಸನ್ನವಾಗಿರುವ ತನಿನಿದ್ರೆಯಲ್ಲಿ.

3. ಸ್ವಪ್ನದಲ್ಲಿಯೂ ಎಚ್ಚರದಲ್ಲಿಯೂ ಬರಿಯ ತೋರಿಕೆಯಾಗಿದ್ದು ತನಿನಿದ್ರೆಯಲ್ಲಿ ಅದೂ ಇಲ್ಲವಾಗುವದರಿಂದ.

4. ಇದರಿಂದ ಚೈತನ್ಯರೂಪವು ಸ್ವತಃಸಿದ್ಧವೆಂಬುದನ್ನು ಸ್ಪಷ್ಟಪಡಿಸಿದಂತೆ ಆಯಿತು.

5. ಅದ್ವೈತಾತ್ಮಜ್ಞಾನವಾಗುವವರೆಗೂ.

6. ಶ್ಲೋ. ೬-೧೧ರ ಅಭಿಪ್ರಾಯವಿದು.

**ನಾಮರೂಪಕ್ರಿಯಾಭ್ಯೋಽನ್ಯೋ ನಿತ್ಯಮುಕ್ತಸ್ವರೂಪವಾನ್ |**
**ಅಹಮಾತ್ಮಾ ಪರಂ ಬ್ರಹ್ಮ ಚಿನ್ಮಾತ್ರೋಽಹಂ ಸದಾದ್ವಯಃ || ೭ ||**

೭. ನಾನು ನಾಮರೂಪಕರ್ಮಗಳಿಗಿಂತ ಬೇರೆಯಾಗಿರುವವನು, ನಿತ್ಯಮುಕ್ತವಾದ ಸ್ವರೂಪವುಳ್ಳವನು, ಆತ್ಮನು, ಪರಬ್ರಹ್ಮವು, ಚಿನ್ಮಾತ್ರನು, ಯಾವಾಗಲೂ ಅದ್ವಯನು.

## ಜೀವತ್ವವು ಪಾರಮಾರ್ಥಿಕವಲ್ಲ

**ಅಹಂ ಬ್ರಹ್ಮಾಸ್ಮಿ ಕರ್ತಾ ಚ ಭೋಕ್ತಾ ಚಾಸ್ಮೀತಿ ಯೇ ವಿದುಃ |**
**ತೇ ನಷ್ಟಾ ಜ್ಞಾನಕರ್ಮಭ್ಯಾಂ ನಾಸ್ತಿಕಾಃ ಸ್ಯುರ್ನ ಸಂಶಯಃ || ೮ ||**

೮. 'ನಾನು ಬ್ರಹ್ಮವೂ ಆಗಿದ್ದೇನೆ, ಕರ್ತೃವೂ ಭೋಕ್ತೃವೂ ಆಗಿದ್ದೇನೆ' ಎಂದು ಯಾರು ತಿಳಿದಿರುವರೋ ಅವರು ಜ್ಞಾನಕರ್ಮಗಳೆರಡನ್ನೂ ಕಳೆದುಕೊಂಡು[1] ನಾಸ್ತಿಕರಾಗುವರೆಂಬುದಕ್ಕೆ ಸಂಶಯವಿಲ್ಲ[2].

## ಅದ್ವೈತಜ್ಞಾನವು ಶಾಸ್ತ್ರಸಿದ್ಧ

**ಧರ್ಮಾಧರ್ಮಫಲೈರ್ಯೋಗ ಇಷ್ಟೋಽದೃಷ್ಟೋ ಯಥಾತ್ಮನಃ |**
**ಶಾಸ್ತ್ರಾದ್ ಬ್ರಹ್ಮತ್ವಮಪ್ಯಸ್ಯ ಮೋಕ್ಷೋ ಜ್ಞಾನಾತ್ ತಥೇಷ್ಯತಾಮ್||**

೯. ಆತ್ಮನಿಗೆ ಅದೃಷ್ಟವಾದ ಧರ್ಮಾಧರ್ಮಗಳ ಫಲಗಳ ಸಂಬಂಧವಾಗುವದೆಂದು ಶಾಸ್ತ್ರ(ಪ್ರಮಾಣ)ದಿಂದ ಹೇಗೆ ಒಪ್ಪಾಗಿರುವದೋ ಹಾಗೆಯೇ ಅದೇ ಶಾಸ್ತ್ರಪ್ರಮಾಣದಿಂದ ಈ ಆತ್ಮನಿಗೆ ಬ್ರಹ್ಮತ್ವವನ್ನೂ ಜ್ಞಾನದಿಂದ ಮೋಕ್ಷವು ಆಗುವದೆಂಬುದನ್ನೂ ಒಪ್ಪಬೇಕು[3].

---

1. ಬ್ರಹ್ಮವಾದರೆ ಕರ್ತೃತ್ವವಿಲ್ಲ; ಕರ್ತೃವಾದರೆ ಬ್ರಹ್ಮತ್ವವಿಲ್ಲ. ಆದ್ದರಿಂದ ಈ ಎರಡೂ ವಿರುದ್ಧವಾದ ಜ್ಞಾನಗಳನ್ನು ಸಂಪಾದಿಸಿಕೊಂಡರೆ ಕರ್ತೃತ್ವದಿಂದಾಗಬೇಕಾದ ಕರ್ಮವೂ ಇಲ್ಲದೆ, ಅಕರ್ತೃತ್ವಜ್ಞಾನದಿಂದ ಆಗುವ ಬ್ರಹ್ಮಜ್ಞಾನವೂ ಇಲ್ಲದೆಹೋಗುವದು. ಆಗ ವೇದಪ್ರಮಾಣವನ್ನೇ ಒಪ್ಪದ ನಾಸ್ತಿಕನಾಗುವರು.

2. ಅಕರ್ತೃಭೋಕ್ತೃವಾದ ಚಿನ್ಮಾತ್ರಬ್ರಹ್ಮವೇ ನಾನು ಎಂದು ಜ್ಞಾನವುಂಟಾಗಿ ಯಾರಿಗೂ ಮೋಕ್ಷವಾಗುವದಿಲ್ಲವೆಂದರೆ ಶಾಸ್ತ್ರವೇ ಅಪ್ರಮಾಣವೆಂದಾಗುತ್ತದೆ. ಧರ್ಮಾಧರ್ಮಗಳಿಂದ ಸ್ವರ್ಗಾದಿಗಳುಂಟಾಗುವವೆಂಬ ಜ್ಞಾನವು ಶಾಸ್ತ್ರದಿಂದ ಉಂಟಾಗುವದೆಂಬುದನ್ನು ಹೇಗೆ ನಂಬುತ್ತೇವೋ, ಅದ್ವೈತಾತ್ಮಜ್ಞಾನದಿಂದ ಮೋಕ್ಷವಾಗುವದೆಂಬ ಜ್ಞಾನವೂ ಹಾಗೆಯೇ ಅವಶ್ಯವಾಗಿ ಉಂಟಾಗುವದೆಂದು ನಂಬಬೇಕು. ಗೀ.ಭಾ. ೨-೨೧ ನೋಡಿ.

## ಅಕರ್ಮಸಂಬಂಧಿಯಾದ ಆತ್ಮನ ಸಿದ್ಧಿ

**ಯಾ ಮಾಹಾರಜನಾದ್ಯಾಸ್ತಾ ವಾಸನಾಃ ಸ್ವಪ್ನದರ್ಶಿಭಿಃ ।**
**ಅನುಭೂಯನ್ತ ಏವೇಹ ತತೋಽನ್ಯಃ ಕೇವಲೋ ದೃಶಿಃ ॥ ೧೦ ॥**

೧೦. ಕನಸನ್ನು ಕಾಣುವವರು ಅರಿಶಿನದ ಬಟ್ಟೆಯೇ ಮುಂತಾದವುಗಳಂತಿರುವ[1] ಯಾವ ವಾಸನೆಗಳನ್ನು ಅನುಭವಿಸುತ್ತಲೇ ಇರುವರೋ ಅವುಗಳಿಗಿಂತಲೂ ಆತ್ಮನು ಇಲ್ಲಿ ಬೇರೆಯಾಗಿಯೇ ಇರುತ್ತಾನೆ, ತಾನೇ ತಾನಾಗಿರುತ್ತಾನೆ[2].

**ಕೋಶಾದಿವ ವಿನಿಷ್ಕೃಷ್ಟಃ ಕಾರ್ಯಕಾರಣವರ್ಜಿತಃ ।**
**ಯಥಾಸಿರ್ದೃಶ್ಯತೇ ಸ್ವಪ್ನೇ ತದ್ವದ್ಬೋದ್ಧಾ ಸ್ವಯಂಪ್ರಭಃ ॥ ೧೧ ॥**

೧೧. ಒರೆಯಿಂದ ಹಿರಿದ ಕತ್ತಿಯು ಹೇಗೆ ತಾನೇ ಥಳಥಳಿಸುತ್ತಿರುವದೋ ಅದರಂತೆ ಕಾರ್ಯಕಾರಣಗಳಿಲ್ಲದ[3] ಅರಿಯುವ (ಆತ್ಮನು) ಕನಸಿನಲ್ಲಿ ಸ್ವಯಂಪ್ರಭನಾಗಿರುವನು[4].

**ಅಪೇಷಾತ್ ಪ್ರತಿಬುದ್ಧಸ್ಯ ಜ್ಞಸ್ಯ ಸ್ವಾಭಾವಿಕಂ ಪದಮ್ ।**
**ಉಕ್ತಂ ನೇತ್ಯಾದಿವಾಕ್ಯೇನ ಕಲ್ಪಿತಸ್ಯಾಪನೇತೃಣಾ ॥ ೧೨ ॥**

೧೨. ಚೆನ್ನಾಗಿ ಹೊರಳಾಡಿಸಿ[5] (ಎಬ್ಬಿಸಿದ್ದರಿಂದ) ಎಚ್ಚತ್ತ ಜೀವನ ಸ್ವಾಭಾವಿಕಸ್ಥಾನವನ್ನು ಕಲ್ಪಿತವಾದದ್ದನ್ನು ಅಲ್ಲಗಳೆಯುವ 'ನೇತಿ' ಮುಂತಾದ ವಾಕ್ಯವು[6] ಹೇಳಿರುತ್ತದೆ.

---

1. ಬೃ. ೨-೩-೬ ರಲ್ಲಿ ವಾಸನೆಗಳನ್ನು ಅರಿಶಿನದ ಬಟ್ಟೆಯೇ ಮುಂತಾದವುಗಳಿಗೆ ಹೋಲಿಸಿದೆ. ಬಿಳಿಯ ಬಟ್ಟೆಗೆ ಯಾವ ಬಣ್ಣವನ್ನು ಹಾಕಿದರೆ ಅದು ಆ ಬಣ್ಣದ್ದಾಗಿ ತೋರುವಂತೆ ವಾಸನೆಗಳು ಆಯಾ ವಿಷಯಾನುಭವಕ್ಕೆ ತಕ್ಕಂತೆ ತೋರುವವು.

2. ವಾಸನೆಗಳು ಬರಿಯ ತೋರಿಕೆಯಾದ್ದರಿಂದ ತಾನೊಬ್ಬನೇ ಇರುತ್ತಾನೆ.

3. ಕಾರ್ಯಕಾರಣಗಳು ಎಂದರೆ ಕಾರ್ಯಕರಣಗಳು, ದೇಹೇಂದ್ರಿಯಗಳು.

4. ಶರೀರ, ಇಂದ್ರಿಯಗಳು, ಬೆಳಕು ಮುಂತಾದ ಹೊರಗಿನ ಸಾಧನ- ಒಂದನ್ನೂ ಬಯಸದೆ ತನ್ನ ಬೆಳಕಿನಿಂದಲೇ ವ್ಯವಹರಿಸುತ್ತಿರುವದರಿಂದ ಆಗ ಆತ್ಮನು ಸ್ವಯಂಪ್ರಕಾಶನು.

5. ಬೃ. ೨-೧-೧೫ರಲ್ಲಿ ಅಜಾತಶತ್ರು ಗಾರ್ಗ್ಯನಿಗೆ ಭೋಕ್ತೃಸ್ವರೂಪವನ್ನು ತಿಳಿಸಿಕೊಡುವದಕ್ಕೆ ಸುಪ್ತಪುರುಷನನ್ನು ಹೊರಳಾಡಿಸಿ ಎಬ್ಬಿಸಿರುತ್ತಾನೆ.

6. ಬೃ. ೨-೩-೬ರಲ್ಲಿ 'ಅಥಾತ ಆದೇಶೋ ನೇತಿನೇತಿ' ಎಂಬ ವಾಕ್ಯವು ಕಲ್ಪಿತವಾದ ಮೂರ್ತಾಮೂರ್ತಗಳಿಗಿಂತ ಮತ್ತು ಅವುಗಳ ವಾಸನೆಗಳಿಗಿಂತ ಬೇರೆಯಾದ ಜೀವನ ಪರಮಾರ್ಥಸ್ವರೂಪವನ್ನು ತಿಳಿಸಿದೆ. ಸುಷುಪ್ತಿಯಲ್ಲಿ ಜೀವನು ಈ ಪರಮಾತ್ಮರೂಪದಲ್ಲಿಯೇ ಇರುತ್ತಾನೆ.

**ಮಹಾರಾಜಾದಯೋ ಲೋಕಾ ಮಯಿ ಯದ್ವತ್ ಪ್ರಕಲ್ಪಿತಾಃ |**
**ಸ್ವಪ್ನೇ ತದ್ವದ್ದ್ವಯಂ ವಿದ್ಯಾದ್ರೂಪಂ ವಾಸನಯಾ ಸಹ || ೧೩ ||**

೧೩. ಕನಸಿನಲ್ಲಿ ತೋರುವ ಮಹಾರಾಜತ್ವವೇ ಮುಂತಾದ[1] ಲೋಕಗಳು[2] ಹೇಗೆ ನನ್ನಲ್ಲಿ ಕಲ್ಪಿತವಾಗಿರುತ್ತವೆಯೋ ಅದರಂತೆ ವಾಸನಾಸಹಿತವಾದ (ಮೂರ್ತಾಮೂರ್ತಗ)ಳೆರಡೂ (ಎಚ್ಚರದಲ್ಲಿಯೂ) ಕಲ್ಪಿತವೆಂದು ತಿಳಿಯಬೇಕು.

## ಆತ್ಮನಿಗೆ ಕರ್ಮವಿಲ್ಲ

**ದೇಹಲಿಙ್ಗಾತ್ಮನಾ ಕಾರ್ಯಾ ವಾಸನಾರೂಪಿಣಾ ಕ್ರಿಯಾಃ ।**
**ನೇತಿ ನೇತ್ಯಾತ್ಮರೂಪತ್ವಾನ್ನ ಮೇ ಕಾರ್ಯಾ ಕ್ರಿಯಾ ಕ್ವಚಿತ್ || ೧೪ ||**

೧೪. ಕರ್ಮಗಳು (ಸ್ಥೂಲ)ದೇಹಲಿಂಗ(ದೇಹ)ಗಳ ಸ್ವರೂಪನಾಗಿಯೂ ವಾಸನಾರೂಪಿಯಾಗಿಯೂ ಇರುವವನು[3] ಮಾಡತಕ್ಕವುಗಳಾಗಿವೆ. ಆದರೆ ನಾನು 'ನೇತಿ, ನೇತಿ'[4] ಎಂಬ ಶ್ರುತಿಯಲ್ಲಿ ಹೇಳಿರುವ ಆತ್ಮರೂಪನಾದ್ದರಿಂದ ಎಂದಿಗೂ ಯಾವ ಕ್ರಿಯೆಯನ್ನೂ ಮಾಡತಕ್ಕದ್ದಿರುವದಿಲ್ಲ.

## ಕರ್ಮವು ಮೋಕ್ಷಕ್ಕೆ ಹೇತುವಲ್ಲ

**ನ ತತೋಽಮೃತತಾಶಾಸ್ತಿ ಕರ್ಮಣೋಽಜ್ಞಾನಹೇತುತಃ |**
**ಮೋಕ್ಷಸ್ಯ ಜ್ಞಾನಹೇತುತ್ವಾನ್ನ ತದನ್ಯದಪೇಕ್ಷತೇ || ೧೫ ||**

೧೫. ಆದ್ದರಿಂದ ಕರ್ಮದಿಂದ ಅಮೃತತ್ವದ ಆಶೆಯಿರುವದಿಲ್ಲ[5] ; ಏಕೆಂದರೆ (ಅದು) ಅಜ್ಞಾನಮೂಲಕವಾಗಿರುತ್ತದೆ. ಮೋಕ್ಷಕ್ಕೆ ಜ್ಞಾನವೇ ಕಾರಣವಾಗಿರುವದರಿಂದ ಅದು ಮತ್ತೇನನ್ನೂ ಬಯಸುವದಿಲ್ಲ.

---

1. ಬೃ. ೨-೧-೧೮ರ ಸೂಚನೆಯಿದು. ಮಹಾರಾಜನಂತೆಯೂ ಮಹಾಬ್ರಾಹ್ಮಣನಂತೆಯೂ ಹೆಚ್ಚಿನ ಕೀಳಿನ ರೂಪಗಳನ್ನು ತಾಳಿದವನಂತೆ ಕನಸಿನಲ್ಲಿ ಕಾಣುತ್ತಾನೆ -ಎಂದು ಕನಸಿನ ಕಲ್ಪಿತರೂಪಗಳನ್ನೂ ಅಲ್ಲಿ 'ಅಂತೆ' ಎಂಬ ಶಬ್ದದಿಂದ ಹೇಳಿದೆ.

2 ಕರ್ಮಫಲಗಳು.

3. ಮೂರ್ತಾಮೂರ್ತಗಳ ಮತ್ತು ಅವುಗಳ ವಾಸನೆಗಳ ಧರ್ಮಗಳನ್ನು ತನ್ನಲ್ಲಿ ಆರೋಪಿಸಿಕೊಂಡಿರುವವನು ಕರ್ಮವನ್ನು ಮಾಡುವ ಕರ್ತೃ. ಯಾವ ದೇಹೇಂದ್ರಿಯಗಳ ಅಧ್ಯಾರೋಪವನ್ನೂ ಮಾಡಿಕೊಳ್ಳದವನು ಕರ್ತೃವಾಗಲಾರನು.

4. ಬೃ. ೨-೩-೬.

5. 'ವಿತ್ತದಿಂದ ಅಮೃತತ್ವದ ಆಶೆಯಿಲ್ಲ' ಎಂಬ ಬೃ. ೨-೪-೧೨ರ ವಾಕ್ಯದ ಸೂಚನೆ. ವಿತ್ತವು ಕರ್ಮದ ಮೂಲಕ ಈ ಲೋಕದ ಮತ್ತು ಪರಲೋಕದ ಫಲಗಳನ್ನು ಕೊಡಬಹುದು ; ಮೋಕ್ಷವನ್ನು ಕೊಡಲಾರದು ಎಂದು ಅಲ್ಲಿ ಯಾಜ್ಞವಲ್ಕ್ಯನು ಹೇಳಿರುತ್ತಾನೆ.

**ಅಮೃತಂ ಚಾಭಯಂ ನಾರ್ತಂ ನೇತೀತ್ಯಾತ್ಮಾ ಪ್ರಿಯೋ ಮಮ ।**
**ವಿಪರೀತಮತೋಽನ್ಯದ್ಯತ್ ತ್ಯಜೇತ್ತತ್ ಸಕ್ರಿಯಂ ತತಃ ॥ ೧೬ ॥**

೧೬. (ಬ್ರಹ್ಮವು) ಅಮೃತವಾದದ್ದು, ಅಭಯವು, ನಾಶವಿಲ್ಲದ್ದು, ನೇತಿನೇತಿ (ಇದಲ್ಲ. ಇದಲ್ಲ ಎಂಬ) ನನ್ನ ಪ್ರಿಯನಾದ ಆತ್ಮನು[1]. ಇದಕ್ಕಿಂತ ಬೇರೆಯಾದದ್ದು ಯಾವದಿರುವದೋ (ಅದು ಇದಕ್ಕೆ) ವಿರುದ್ಧವಾಗಿರುತ್ತದೆ[2]. ಆದ್ದರಿಂದ ಅದನ್ನು ಕರ್ಮಸಹಿತವಾಗಿ ಬಿಡಬೇಕು[೩].

---

1. ಮೋಕ್ಷವು ನಿತ್ಯಸಿದ್ಧನಾದ ನಮ್ಮ ಆತ್ಮನೇ ಆಗಿರುವದರಿಂದ ಅಜ್ಞಾನದಿಂದಲೇ ಅಪ್ರಾಪ್ತವಾಗಿರುತ್ತದೆ ಎಂದರ್ಥ. ಈ ವಾಕ್ಯವನ್ನು ಹಿಂದಿನ ವಾಕ್ಯಕ್ಕೆ ಅನ್ವಯಿಸಿದರೆ ಕರ್ಮಕ್ಕೆ ಅಜ್ಞಾನವೇ ಕಾರಣವಾಗಿ ಮೋಕ್ಷಕ್ಕೆ ಜ್ಞಾನವು ಕಾರಣವಾಗಿರುವದರಿಂದ ಅದು ಜ್ಞಾನಕ್ಕಿಂತ ಬೇರೆಯಾದ ಅಜ್ಞಾನಮೂಲಕವಾದ ಕರ್ಮವನ್ನು ಬಯಸುವದಿಲ್ಲ ಎಂಬ ಅಭಿಪ್ರಾಯವನ್ನು ಕಲ್ಪಿಸಬಹುದು. ಇಲ್ಲಿರುವ ವಿಶೇಷಣಗಳಿಗೆ ಬೃ. ೪-೪-೨೫, ೨೬ ೪-೫-೬ ಈ ವಾಕ್ಯಗಳು ಮೂಲವಾಗಿರುವವು.

2. ಎಂದರೆ ಮರ್ತ್ಯವು, ಸಭಯವು, ನಾಶವುಳ್ಳದ್ದು, ಇಂಥದ್ದೆಂಬ ವಿಶೇಷವುಳ್ಳದ್ದು ಅಪ್ರಿಯವಾದದ್ದು -ಎಂದರ್ಥ.

3. ಮರ್ತ್ಯವೇ ಮುಂತಾದ ವಿಶೇಷಣಗಳಿಂದ ಕೂಡಿದ ಫಲವನ್ನೂ ಅದಕ್ಕೆ ಕಾರಣವಾಗಿರುವ ಕರ್ಮವನ್ನೂ ಬಿಡಬೇಕು ಎಂದರ್ಥ.

# ಈಕ್ಷಿತೃತ್ವಪ್ರಕರಣದ ಸಾರ

೧-೨. ಈಕ್ಷಿತೃತ್ವವು ಎಂದರೆ ಶುದ್ಧಚೈತನ್ಯಸ್ವರೂಪವು ಜೀವರಿಗೆ ಸ್ವಾಭಾವಿಕವು; ಕರ್ತೃತ್ವವು ಅಜ್ಞಾನದಿಂದ ಆಗಿರುತ್ತದೆ. ಆದ್ದರಿಂದ 'ತತ್ತ್ವಮಸಿ' ಎಂಬ ವಾಕ್ಯವು ಆ ಕರ್ತೃತ್ವವನ್ನು ಬಾಧಿಸುತ್ತದೆ. ಆದ್ದರಿಂದ 'ಜ್ಞಾನವೊಂದೇ ಅಮೃತತ್ವಕ್ಕೆ ಸಾಧನವು' ಎಂದು ಯಜ್ಞೋಪವೀತಾದಿಗಳೊಡನೆ ಕೂಡಿದ ಕರ್ಮವನ್ನು ಶ್ರುತಿಯು ಬೇಕಿಲ್ಲವೆಂದಿದೆ.

೩-೪. ಕನಸಿನಲ್ಲಿಯೂ ಎಚ್ಚರದಲ್ಲಿಯೂ ಮನಸ್ಸಿಗೂ ಮನಸ್ಸಿನ ವೃತ್ತಿಗಳಿಗೂ ನಾವು ಸಾಕ್ಷಿಯಾಗಿರುವದರಿಂದಲೂ ತನಿನಿದ್ರೆಯಲ್ಲಿ ಅದ್ವೈತವೇ ಇಲ್ಲದ್ದರಿಂದಲೂ ಶುದ್ಧಚೈತನ್ಯವೇ ನಮ್ಮ ಸ್ವರೂಪವೆಂದು ಗೊತ್ತಾಗುತ್ತದೆ.

೫-೮. ಎಚ್ಚರವಾಗುವವರೆಗೂ ಕನಸಿನ ವ್ಯವಹಾರವು ಸತ್ಯವಾಗಿರುವಂತೆ, ದೇಹವ್ಯತಿರಿಕ್ತನಾದ ಆತ್ಮಜ್ಞಾನವುಂಟಾಗುವವರೆಗೂ ದೇಹಾತ್ಮವಾದವು ಸತ್ಯವಾಗಿರುವಂತೆ "ಆಕಾಶದಂತೆ ಎಲ್ಲಾ ಭೂತಗಳಲ್ಲಿಯೂ ಇರುವ ನಿರ್ದೋಷವಾದ ಸಾಕ್ಷಿಚೈತನ್ಯವೇ ನಾನು, ನಾಮರೂಪಕರ್ಮಗಳಿಗಿಂತ ಭಿನ್ನವಾಗಿ ನಿತ್ಯಮುಕ್ತವಾದ ಅದ್ವಿತೀಯ ಬ್ರಹ್ಮವೇ ನಾನು" ಎಂಬ ಪರಮಾರ್ಥಜ್ಞಾನವಾಗುವವರೆಗೂ ಈ ಪ್ರತ್ಯಕ್ಷಾದಿಗಳು ಪ್ರಮಾಣವಾಗಿರುವವು; ಕರ್ತೃತ್ವವೂ ಸತ್ಯವಾಗಿರುವದು. ಆದ್ದರಿಂದ ಪರಸ್ಪರವಿರುದ್ಧವಾದ ಬ್ರಹ್ಮತ್ವವೂ ಕರ್ತೃಭೋಕ್ತೃತ್ವವೂ ಒಬ್ಬನೇ ಆತ್ಮನಲ್ಲಿ ಒಂದೇ ಕಾಲದಲ್ಲಿರಲಾರವು.

೯. ಶಾಸ್ತ್ರವಚನದಿಂದ ಕರ್ಮಫಲಗಳ ಸಂಬಂಧವು ಹೇಗೆ ತಿಳಿಯುವದೋ ಆತ್ಮಜ್ಞಾನಕ್ಕೂ ಮೋಕ್ಷಕ್ಕೂ ಇರುವ ಸಂಬಂಧವೂ ಹಾಗೆಯೇ ತಿಳಿಯಬರುತ್ತದೆ. ವಚನವು ಎರಡಕ್ಕೂ ಪ್ರಮಾಣವಾಗಿರುತ್ತದೆ.

೧೦-೧೩. ಕನಸಿನಲ್ಲಿರುವ ವಾಸನಾಮಯವಾದ ದೃಶ್ಯಗಳು ಅನುಭವಿಸಲ್ಪಡುವದರಿಂದ ಅವುಗಳನ್ನು ಅನುಭವಿಸುವ ಚೈತನ್ಯವು ಒರೆಯಿಂದ ಹಿರಿದ ಕತ್ತಿಯಂತೆ ಕಾರ್ಯಕರಣಸಂಘಾತಕ್ಕಿಂತ ಬೇರೆಯಾಗಿ ಸ್ವಯಂಪ್ರಕಾಶವಾಗಿರುವದೆಂದು ಗೊತ್ತಾಗುತ್ತದೆ- ಎಂದು ಶ್ರುತಿಯು ತಿಳಿಸುತ್ತದೆ. ಇದರಂತೆ ಮನುಷ್ಯನು ಮಲಗಿದ್ದಾಗ ಹೊರಗಿನ ಅರಿವಿಲ್ಲದೆ ಇರುತ್ತಾನೆ; ಅವನನ್ನು ಹೊರಳಾಡಿಸಿ ಎಬ್ಬಿಸಿದರೆ ಎಚ್ಚರುತ್ತಾನೆ. ಹೀಗೆ ಗಾಢನಿದ್ರೆಯಲ್ಲಿರುವಾಗ ಯಾವ ಕಲ್ಪಿತವಾದ ಉಪಾಧಿಗಳೂ ಇಲ್ಲದ ನಿರ್ವಿಶೇಷಾತ್ಮನಾಗಿರುತ್ತಾನೆ ಎಂದೂ ಶ್ರುತಿವಾಕ್ಯವಿದೆ. ಕನಸಿನಲ್ಲಿರುವ ನಮ್ಮರೂಪವು ಹೇಗೆ ಕಲ್ಪಿತವಾಗಿರುವದೋ ಹಾಗೆಯೇ ಎಚ್ಚರದಲ್ಲಿಯೂ ಕಲ್ಪಿತವಾಗಿರುತ್ತದೆ- ಎಂದು ಶಾಸ್ತ್ರವಚನವಿದೆ.

೧೪-೧೬. ಆದ್ದರಿಂದ ಆತ್ಮನಲ್ಲಿ ಸ್ಥೂಲದೇಹವಾಗಲಿ ಲಿಂಗದೇಹವಾಗಲಿ ಯಾವ ವಾಸನೆಯಾಗಲಿ ಇರುವದಿಲ್ಲ. ಅವನಿಗೆ ಯಾವ ಕರ್ಮಗಳೂ ಇರುವದಿಲ್ಲ. ಅಜ್ಞಾನದಿಂದಾಗಿರುವ ಕರ್ಮದಿಂದ ಅಮೃತತ್ವದ ಆಶೆಯೂ ಇರುವದಿಲ್ಲ; ಏಕೆಂದರೆ ಅಮೃತತ್ವವು ಜ್ಞಾನದಿಂದಲೇ ದೊರಕತಕ್ಕದ್ದು. ಜ್ಞಾನವು ವಸ್ತುವನ್ನು ತಿಳಿಸುವದಕ್ಕೆ ಕರ್ಮವನ್ನು ಬಯಸುವ ಹಾಗೆಯೇ ಇಲ್ಲ, ಜ್ಞಾನದಿಂದ ದೊರಕುವ ಮೋಕ್ಷವು ಬ್ರಹ್ಮರೂಪವಾಗಿರುತ್ತದೆ. ಅದು ಅಮೃತವೂ ಅಭಯವೂ ಅವಿನಾಶಿಯಾಗಿಯೂ 'ಅದಲ್ಲ, ಅದಲ್ಲ' ಎಂದು ತಿಳಿಯತಕ್ಕ ಆತ್ಮನಾಗಿಯೂ ಎಲ್ಲಕ್ಕಿಂತಲೂ ಪ್ರಿಯವಾಗಿಯೂ ಇರುತ್ತದೆ. ಕರ್ಮದ ಫಲವು ಈ ಜ್ಞಾನಫಲಕ್ಕಿಂತ ವಿಪರೀತಸ್ವಭಾವವುಳ್ಳದ್ದಾಗಿರುತ್ತದೆ. ಆದ್ದರಿಂದ ಮುಮುಕ್ಷುವಾದವನು ಕರ್ಮವನ್ನೂ ಕರ್ಮಫಲವನ್ನೂ ತ್ಯಜಿಸಬೇಕು.



# ೧೨. ದೃಗ್ದೃಶ್ಯವಿವೇಕ[1]

## ಆತ್ಮಜ್ಞಾನಕ್ಕಿರುವ ಅಡ್ಡಿ

**ಪ್ರಕಾಶಸ್ಥಂ ಯಥಾ ದೇಹಂ ಸಾಲೋಕಮಭಿಮನ್ಯತೇ ।**
**ದ್ರಷ್ಟ್ರಾಭಾಸಂ ತಥಾ ಚಿತ್ತಂ ದ್ರಷ್ಟಾಹಮಿತಿ ಮನ್ಯತೇ ॥ ೧ ॥**

೧. ಬೆಳಕಿನಲ್ಲಿರುವ ದೇಹವನ್ನು ಹೇಗೆ ಬೆಳಕಿನಿಂದ ಕೂಡಿರುವದೆಂದು ಎಣಿಸುವರೋ ಹಾಗೆ ಚಿತ್ತಿನಂತಿರುವ ಚಿತ್ತವನ್ನು 'ನಾನು ದ್ರಷ್ಟೃ' ಎಂದು ತಿಳಿಯುತ್ತಾರೆ[2].

**ಯದೇವ ದೃಶ್ಯತೇ ಲೋಕೇ ತೇನಾಭಿನ್ನತ್ವಮಾತ್ಮನಃ ।**
**ಪ್ರಪದ್ಯತೇ ತತೋ ಮೂಢಸ್ತೇನಾತ್ಮಾನಂ ನ ವಿನ್ದತಿ ॥ ೨ ॥**

೨. ಆದರಿಂದ ಮೂಢನಾಗಿ ಲೋಕದಲ್ಲಿ ಯಾವ (ಯಾವದು) ಕಾಣುವದೋ ಅದೇ ತಾನೆಂದು ತಿಳಿಯುತ್ತಿರುವನು. ಅದರಿಂದ[3] ತನ್ನ ಆತ್ಮನನ್ನು ಅರಿತುಕೊಳ್ಳದೆ ಇರುವನು.

**ದಶಮಸ್ಯ ನವಾತ್ಮತ್ವಪ್ರತಿಪತ್ತಿವದಾತ್ಮನಃ ।**
**ದೃಶ್ಯೇಷು ತದ್ವದೇವಾಯಂ ಮೂಢೋ ಲೋಕೋ ನ ಚಾನ್ಯಥಾ ॥**

೩. ಹತ್ತನೆಯವನಿಗೆ ತಾನು ಒಂಬತ್ತು (ಜನರಲ್ಲಿ ಒಬ್ಬ)ನೆಂಬ ಅರಿವು ಹೇಗೆ ಉಂಟಾಗಿರುವದೋ[4] ಹಾಗೆಯೇ ದೃಶ್ಯಗಳಲ್ಲಿಯೂ (ಆತ್ಮನೆಂಬ ಬುದ್ಧಿಯಿಂದ) ಈ ಜನವು ಮೂಢವಾಗಿರುತ್ತದೆಯೇ ಹೊರತು ಮತ್ತೆ ಬೇರೆಯಿಲ್ಲ.

---

1. ವ್ಯಾಖ್ಯಾನಕಾರರು ಮೊದಲನೆಯ ಶ್ಲೋಕದಲ್ಲಿರುವ 'ಪ್ರಕಾಶ' ಎಂಬ ಮೊದಲನೆಯ ಮಾತನ್ನೇ ಈ ಪ್ರಕರಣದ ಹೆಸರೆಂದು ಬರೆದಿರುತ್ತಾರೆ. ನಾವು ಕೊಟ್ಟಿರುವ ಹೆಸರು ವಿಷಯಕ್ಕೆ ಅನುಗುಣವಾಗಿದೆ.

2. ಚೈತನ್ಯದ ಸನ್ನಿಧಿಯಿಂದ ಚಿತ್ತವೂ ಚೈತನ್ಯವೆಂದಂ ತೋರುತ್ತಿರುವದು. ; ಆದ್ದರಿಂದ ಚಿತ್ತವೇ ಚೈತನ್ಯವೆಂದೂ ತಮ್ಮ ಆತ್ಮನೆಂದೂ ಜನರು ತಪ್ಪಾಗಿ ತಿಳಿದುಕೊಂಡಿರುತ್ತಾರೆ.

3. ದೃಶ್ಯವಾದ ಚಿತ್ತವನ್ನೇ ಚೈತನ್ಯವೆಂದು ತಿಳಿದುಕೊಳ್ಳುತ್ತಿರುವದರಿಂದ,

4. ಹತ್ತು ಜನ ಮಂಕರು ಹೊರಗಿನ ಒಂಬತ್ತು ಜನಗಳನ್ನೇ ಮಾತ್ರ ಎಣಿಸಿಕೊಂಡು ತಮ್ಮಲ್ಲಿ ಒಬ್ಬನು ಹೇಗೋ ಇಲ್ಲವಾಗಿರುವನೆಂದು ನಂಬಿ ದುಃಖಿಸುತ್ತಿದ್ದರು. ಹತ್ತನೆಯವನು ತಾನೇ ಎಂಬುದು ಅವರಲ್ಲಿ ಒಬ್ಬನಿಗೂ ತಿಳಿಯದೆ ಇತ್ತು.

## ಅಧ್ಯಾಸವನ್ನು ಕಳೆಯುವ ಜ್ಞಾನ

**ತ್ವಂ ಕುರು ತ್ವಂ ತದೇವೇತಿ ಪ್ರತ್ಯಯಾವೇಕಕಾಲಿಕೌ ।**
**ಏಕನೀಡೌ ಕಥಂ ಸ್ಯಾತಾಂ ವಿರುದ್ಧೌ ನ್ಯಾಯತೋ ವದ ॥ ೪ ॥**

೪. 'ನೀನು (ಕರ್ಮವನ್ನು) ಮಾಡು, 'ನೀನು ಅದೇ' ಎಂಬ (ಒಂದ ಕ್ಕೊಂದು) ವಿರುದ್ಧವಾದ ಜ್ಞಾನಗಳು[1] ಒಂದೇ ಒಬ್ಬನನ್ನೇ ಆಶ್ರಯಿಸಿ ಹೇಗೆ ಉಂಟಾದಾವು ?" ನ್ಯಾಯದಿಂದ ಹೇಳು[2].

**ದೇಹಾಭಿಮಾನಿನೋ ದುಃಖಂ ನಾದೇಹಸ್ಯ ಸ್ವಭಾವತಃ ।**
**ಸ್ವಾಪವತ್ ತತ್ಪ್ರಹಾಣಾಯ ತತ್ತ್ವಮಿತ್ಯುಚ್ಯತೇ ದೃಶೇಃ ॥ ೫ ॥**

೫. ದೇಹಾಭಿಮಾನವುಳ್ಳವನಿಗೇ ದುಃಖವು ; ನಿದ್ರೆಯಲ್ಲಿರುವಂತೆ ಸ್ವಭಾವದಿಂದ ಅದೇಹನಾಗಿರುವವನಿಗೆ[3] ( ದುಃಖ )ವಿಲ್ಲ. ದೃಗ್ರೂಪನಾದ ಆತ್ಮನಿಗೆ ಆ (ಅಭಿಮಾನ)ವನ್ನು ಕಳೆಯುವದಕ್ಕಾಗಿ[4] 'ಅದೇ ನೀನು' ಎಂದು ಹೇಳಿರುತ್ತದೆ.

**ದೃಶೇಶ್ಛಾಯಾ ಯದಾರೂಢಾ ಮುಖಚ್ಛಾಯೇವ ದರ್ಶನೇ ।**
**ಪಶ್ಯಂಸ್ತಂ ಪ್ರತ್ಯಯಂ ಯೋಗೀ ದೃಷ್ಟ ಆತ್ಮೇತಿ ಮನ್ಯತೇ ॥೬॥**
**ತಂ ಚ ಮೂಢಂ ಚ ಯದ್ಯನ್ಯಂ ಪ್ರತ್ಯಯಂ ವೇತ್ತಿ ನೋ ದೃಶೇಃ ।**
**ಸ ಏವ ಯೋಗಿನಾಂ ಶ್ರೇಷ್ಠೋ[5] ನೇತರಃ ಸ್ಯಾನ್ನ ಸಂಶಯಃ ॥ ೭ ॥**

೬-೭. ಕನ್ನಡಿಯಲ್ಲಿ[6] ಮುಖದ ಪ್ರತಿಬಿಂಬದಂತೆ ದೃಗ್ರೂಪವಾದ ಚೈತನ್ಯದ ಪ್ರತಿಬಿಂಬವು ಯಾವದರಲ್ಲಿ ಏರಿಕೊಂಡು (ತೋರುವದೋ) ಆ ಪ್ರತ್ಯಯವನ್ನು ಕಂಡ ಯೋಗಿಯು ಆತ್ಮನನ್ನು ಕಂಡೆನೆಂದು ತಿಳಿದುಕೊಳ್ಳು

1. ಅಕರ್ತೃವಾದ ಆತ್ಮನೇ ನಾನೆಂಬ ಜ್ಞಾನವು ನಾನು ಕರ್ತೃ ಎಂಬ ಜ್ಞಾನವನ್ನು ಬಾಧಿಸದೆ ಹುಟ್ಟುವದಿಲ್ಲ.

2. ವಿರುದ್ಧವಾದ ಎರಡು ಜ್ಞಾನಗಳು ಒಬ್ಬನಿಗೇ ಒಟ್ಟಿಗೆ ಇರಲಾರವು ಎಂಬುದೇ ನ್ಯಾಯ.

3. ಸುಷುಪ್ತಿಯಲ್ಲಿ ದೇಹದ ಅಭಿಮಾನವಿಲ್ಲದ್ದರಿಂದ ದುಃಖವೂ ಇಲ್ಲ ; ಅದ್ದ ರಿಂದ ನಾನು ಅದೇಹನು ಎಂಬ ಅರಿವು ಉಂಟಾದರೆ ದುಃಖವಿರದು.

4. ದೇಹಿಯು ನಾನು ಎಂಬ ತಪ್ಪುತಿಳಿವನ್ನು ಕಳೆಯುವದಕ್ಕಾಗಿ.

5. 'ಪ್ರೇಷ್ಠೋ' ಎಂಬ ಪಾಠಕ್ಕಿಂತ ಈ ಬೋಧನಿಧಿಪಾಠವೇ ಮೇಲು.

6. ಇದು 'ದರ್ಶನೇ' ಎಂಬುದರ ಅರ್ಥ , 'ದರ್ಪಣೇ' ಎಂದೇ ಮೂಲಪಾಠ ವಿದ್ದಿರಬಹುದೆಂದು ಕಾಣುತ್ತದೆ.

ವನು[1], ಅದನ್ನೂ ಅದನ್ನರಿತು ಮೋಹಗೊಂಡಿರುವ ಪ್ರತ್ಯಯವನ್ನೂ ದೃಗ್ರೂಪ ಚೈತನ್ಯಕ್ಕಿಂತ ಬೇರೆಯಲ್ಲವೆಂದು ಯಾವನು ಅರಿತುಕೊಳ್ಳುವನೋ[2] ಅವನೇ ಯೋಗಿಗಳಲ್ಲೆಲ್ಲ ಶ್ರೇಷ್ಠನು, ಮಿಕ್ಕವನು (ಯೋಗಿಶ್ರೇಷ್ಠ)ನಾಗಲಾರನು. ಇದಕ್ಕೆ ಸಂಶಯವಿಲ್ಲ.

**ವಿಜ್ಞಾತೇರ್ಯಸ್ತು ವಿಜ್ಞಾತಾ ಸ ತ್ವಮಿತ್ಯುಚ್ಯತೇ ಯತಃ ।**
**ಸ ಏವಾನುಭವಸ್ತಸ್ಯ[3] ತತೋಽನ್ಯೋಽನುಭವೋ ಮೃಷಾ ॥ ೮ ॥**

೮. ಅರಿವನ್ನು ಅರಿಯುವಾತನು ಯಾವನೋ 'ಅವನು ನೀನು' ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆಯಾದ್ದರಿಂದ ಅದೇ ಆ ಆತ್ಮನ ಅನುಭವವಾಗಿರುವದು ; ಅದಕ್ಕಿಂತ ಬೇರೆಯ ಅನುಭವವೆಂಬುದು ಸುಳ್ಳು.

**ದೃಶಿರೂಪೇ ಸದಾ ನಿತ್ಯೇ ದರ್ಶನಾದರ್ಶನೇ ಮಯಿ ।**
**ಕಥಂ ಸ್ಯಾತಾಂ ತತೋ ನಾನ್ಯ ಇಷ್ಯತೇಽನುಭವಸ್ತತಃ ॥೯॥**

೯. ಯಾವಾಗಲೂ ದೃಗ್ರೂಪನಾಗಿರುವ ನಿತ್ಯನಾದ ನನ್ನಲ್ಲಿ ದರ್ಶನಾದರ್ಶನಗಳು- ಹೇಗೆ ಆದಾವು[4] ? ಆದ್ದರಿಂದ ಇದಕ್ಕಿಂತ ಬೇರೆಯಾದ ಅನುಭವವನ್ನು (ನಾವು) ಒಪ್ಪುವದಿಲ್ಲ.

---

1. ಪ್ರತ್ಯಯದಲ್ಲಿ ಉಂಟಾದ ಚಿದಾಭಾಸವನ್ನು ಕಂಡು ಆತ್ಮನನ್ನು ಕಂಡೆನು, ಆತ್ಮಾನುಭವವಾಯಿತು- ಎಂದು ಅನುಭವವಾದಿಯು ಹೇಳುತ್ತಾನೆ. ಆತ್ಮನ ಸಾಕ್ಷಾತ್ಕಾರವಾಗುವ ಒಂದು ಪ್ರತ್ಯಯವುಂಟಾಗಬೇಕು ಎಂಬುದು ಅವನ ವಾದವು.

2. ಚಿದಾಭಾಸಪ್ರತ್ಯಯವು ಹೇಗೆ ಚೈತನ್ಯರೂಪನಾದ ಆತ್ಮನಿಗಿಂತ ಬೇರೆಯಾಗಿಲ್ಲವೋ ಹಾಗೆ ಅದನ್ನೇ ಆತ್ಮನೆಂದು ತಪ್ಪಾಗಿ ತಿಳಿಯುವ ಪ್ರತ್ಯಯವೂ ಬೇರೆಯಿಲ್ಲ. ಇವೆರಡೂ ಆತ್ಮನಲ್ಲಿಯೇ ಕಲ್ಪಿತವಾಗಿರುವವು.

3. 'ಸ ಸ್ಯಾದನುಭವಃ' ಎಂಬ ಮೈ॥ ಪಾಠಕ್ಕಿಂತ ಈ ಬೋ॥ ಪಾಠವೇ ಮೇಲು.

4. ಆತ್ಮನ ವಿಷಯದಲ್ಲಿ ಆತ್ಮನಿಗೆ ಈಗ ದರ್ಶನವಿಲ್ಲ, ಇನ್ನು ಮುಂದೆ ದರ್ಶನವಾಗುವದು- ಎಂಬ ಭೇದವಿಲ್ಲ. ಏಕೆಂದರೆ ಅವನು ಯಾವಾಗಲೂ ಚೈತನ್ಯರೂಪನೇ ಆಗಿರುತ್ತಾನೆ. ಬೆಳಕಿನ ರೂಪದ ಸೂರ್ಯನಿಗೆ ಹಗಲುರಾತ್ರಿಗಳಿಲ್ಲದಂತೆ ದೃಗ್ರೂಪನಿಗೆ ಕಾಣುವದು, ಕಾಣದಿರುವದು- ಎಂಬ ಭೇದಗಳಿರುವದಿಲ್ಲ.

## ಆತ್ಮನಿಗೆ ದುಃಖಿತ್ವವಿಲ್ಲವೆಂಬುದಕ್ಕೆ ಯುಕ್ತಿ

**ಯತ್ಸ್ಥಸ್ತಾಪೋ ರವೇರ್ದೇಹೇ ದೃಶೇಃ ಸ ವಿಷಯೋ ಯಥಾ ।**
**ಸತ್ತ್ವಸ್ಥಸ್ತದ್ವದೇವೇಹ ದೃಶೇಃ ಸ ವಿಷಯಸ್ತಥಾ ॥ ೧೦ ॥**

೧೦. ಸೂರ್ಯನಿಂದಾಗುವ (ಬಿಸಿಲಿನ) ತಾಪವು ದೇಹದಲ್ಲಿ ಎಲ್ಲಿರುವದೋ ಆ (ದೇಹಭಾಗವು) ದೃಗ್ರೂಪನಾದ (ಆತ್ಮನಿಗೆ) ಹೇಗೆ ವಿಷಯವಾಗಿರುವದೋ[1] ಅದರಂತೆಯೇ ಇಲ್ಲಿಯೂ ಅಂತಃಕರಣದಲ್ಲಿರುವ ಆ (ತಾಪವೂ)[2] ದೃಗ್ರೂಪನಾದ ಆತ್ಮನಿಗೆ ವಿಷಯವಾಗಿರುವದು.

**ಪ್ರತಿಷಿದ್ಧೇದಮಂಶೋ ಜ್ಞಃ ಖಮಿವೈಕರಸೋಽದ್ವಯಃ ।**
**ನಿತ್ಯಮುಕ್ತಸ್ತಥಾ ಶುದ್ಧಃ ಸೋಽಹಂ ಬ್ರಹ್ಮಾಸ್ಮಿ ಕೇವಲಃ ॥ ೧೧ ॥**

೧೧. ಇದಮಂಶವೇ ಇಲ್ಲದ ಚೈತನ್ಯಸ್ವರೂಪನಾದ (ಆತ್ಮನೂ) ಆಕಾಶದಂತೆ ಏಕರಸನೂ[3] ಅದ್ವಯನೂ ನಿತ್ಯಮುಕ್ತನೂ ಮತ್ತು (ನಿತ್ಯ) ಶುದ್ಧನೂ ಆಗಿರುವ ಆ ನಾನು ಕೇವಲ ಬ್ರಹ್ಮವಾಗಿರುತ್ತೇನೆ.[4]

**ವಿಜ್ಞಾತುರ್ನೈವ ವಿಜ್ಞಾತಾ ಪರೋಽನ್ಯಃ ಸಂಭವತ್ಯತಃ ।**
**ವಿಜ್ಞಾತಾಹಂ ಪರೋ ಮುಕ್ತಃ ಸರ್ವಭೂತೇಷು ಸರ್ವದಾ ॥ ೧೨ ॥**

೧೨. ಅರಿಯುವವನಿಗಿಂತ ಹೆಚ್ಚಿನ ಅರಿಯುವಾತನು ಮತ್ತೊಬ್ಬನು ಇರಲಾರನು. ಆದ್ದರಿಂದ ವಿಜ್ಞಾತೃವಾದ ನಾನೇ ಪರಮಾತ್ಮನು, ಸರ್ವಭೂತಗಳಲ್ಲಿಯೂ ಸರ್ವದಾ ಮುಕ್ತನಾಗಿರುವವನು.

---

1. ದೇಹವೂ ಬಿಸಿಲಿನಿಂದಾಗುವ ಬೇಗೆಯೂ ವಿಷಯವಾಗಿರುವದರಿಂದ ಅದನ್ನು ಕಾಣುವ ಆತ್ಮನಿಗಿಲ್ಲ ಎಂಬುದು ದೃಷ್ಟಾಂತವು. ದೇಹಕ್ಕಿಂತ ಬೇರೆಯಾಗಿರುವ ಆತ್ಮನನ್ನು ಒಪ್ಪುವವರೆಲ್ಲರೂ ಇದನ್ನು ಒಪ್ಪಿರುತ್ತಾರೆ.

2. ಅಂತಃಕರಣವೂ ಅದರಲ್ಲಿ ಆಗುವ ದುಃಖದ ಬೇಗೆಯೂ ಆತ್ಮನಿಗೆ ವಿಷಯವೇ ಆಗಿರುತ್ತದೆಯೆಂಬುದು ಅನುಭವದಲ್ಲಿದೆ. ಆದ್ದರಿಂದ ದೃಷ್ಟಾಂತದಂತೆ ಇಲ್ಲಿಯೂ ವಿಷಯಿಯಾದ ಆತ್ಮನಿಗೆ ಈ ದುಃಖವಿಲ್ಲ ಎಂದು ಒಪ್ಪಬೇಕು.

3. ವಿಷಯವಾದ ಭಾಗವಿಲ್ಲದ. ಯಾವಯಾವದು ವಿಷಯವೋ ಅದು ವಿಷಯಿಗೆ ಸೇರಿದ ಅಂಶವಲ್ಲವೆಂದು ನಿಶ್ಚಯಿಸಬೇಕು.

4. ವಿಷಯಗಳನ್ನೆಲ್ಲ ತನ್ನ ಚೈತನ್ಯದಿಂದ ವ್ಯಾಪಿಸಿಕೊಂಡಿರುವ ಆತ್ಮನಲ್ಲಿ ನಾನಾ ರಸವು, ವೈಚಿತ್ರ್ಯವು ಇರುವದಿಲ್ಲ. ಅವನಿಗೆ ವಿಷಯದ ಸಂಗವಿಲ್ಲ. ಆದ್ದರಿಂದ ಅವನು ಅಪರಿಚ್ಛಿನ್ನ ಚೈತನ್ಯವಾದ ಬ್ರಹ್ಮವೇ.

# ಉಪಸಂಹಾರ

**ಯೋ ವೇದಾಲುಪ್ತದೃಷ್ಟಿತ್ವಮಾತ್ಮನೋಽಕರ್ತೃತಾಂ ತಥಾ ।**
**ಬ್ರಹ್ಮವಿತ್ತ್ವಂ ತಥಾ ಮುಕ್ತ್ವಾ ಸ ಆತ್ಮಜ್ಞೋ ನ ಚೇತರಃ ॥ ೧೩ ॥**

೧೩. ಯಾವನು (ತಾನು) ಬ್ರಹ್ಮಜ್ಞಾನಿ ಎಂಬ (ಅಭಿಮಾನವನ್ನು ಕೂಡ) ಬಿಟ್ಟು ಆತ್ಮನು ದೃಷ್ಟಿಲೋಪವಿಲ್ಲದವನೆಂದೂ ಅಕರ್ತೃವೆಂದೂ ಅರಿತಿರುವನೋ ಅವನೇ ಆತ್ಮಜ್ಞಾನಿಯು, ಮತ್ತೊಬ್ಬನಲ್ಲ[1].

**ಜ್ಞಾತೈವಾಹಮವಿಜ್ಞೇಯಃ ಶುದ್ಧೋ ಮುಕ್ತಃ ಸದೇತ್ಯಪಿ ।**
**ವಿವೇಕೀ ಪ್ರತ್ಯಯೋ ಬುದ್ಧೇರ್ದೃಶ್ಯತ್ವಾನ್ನಾಶವಾನ್ ಯತಃ ॥ ೧೪ ॥**
**ಅಲುಪ್ತಾ ತ್ವಾತ್ಮನೋ ದೃಷ್ಟಿರ್ನೋತ್ಪಾದ್ಯಾ ಕಾರಕೈರ್ಯತಃ ।**
**ದೃಶ್ಯಯಾ ಚಾನ್ಯಯಾ ದೃಷ್ಟ್ಯಾ ಜನ್ಯತಾಸ್ಯಾಃ ಪ್ರಕಲ್ಪಿತಾ ॥ ೧೫ ॥**

೧೪-೧೫. ನಾನು ಜ್ಞಾತೃವೇ, ಜ್ಞೇಯವಲ್ಲ; ಯಾವಾಗಲೂ ಶುದ್ಧನು, ಮುಕ್ತನು- ಎಂದೆಂಬ ಬುದ್ಧಿಯ ವಿವೇಕರೂಪವಾದ ಪ್ರತ್ಯಯವುಕೂಡ ದೃಶ್ಯವಾಗಿರುವದರಿಂದ ನಾಶವುಳ್ಳದ್ದಾಗಿರುವದರಿಂದಲೂ ಆದರೆ ಆತ್ಮನ ದೃಷ್ಟಿಯು ಅಳಿವಿಲ್ಲದ್ದಾಗಿಯೂ ಕಾರಕಗಳಿಂದುಂಟಾಗದ್ದಾಗಿಯೂ ಇರುವದರಿಂದಲೂ ದೃಶ್ಯವಾದ (ಆ) ಇನ್ನೊಂದು ದೃಷ್ಟಿಯಿಂದ ಈ (ದೃಷ್ಟಿಗೂ) ಹುಟ್ಟುವಿಕೆಯು ಕಲ್ಪಿತವಾಗಿರುತ್ತದೆ[2].

**ದೇಹಾತ್ಮಬುದ್ಧ್ಯಪೇಕ್ಷತ್ವಾದಾತ್ಮನಃ ಕರ್ತೃತಾ ಮೃಷಾ ।**
**ನೈವ ಕಿಂಚಿತ್ ಕರೋಮೀತಿ ಸತ್ಯಾ ಬುದ್ಧಿಃ ಪ್ರಮಾಣಜಾ ॥ ೧೬ ॥**
**ಕರ್ತೃತ್ವಂ ಕಾರಕಾಪೇಕ್ಷಮಕರ್ತೃತ್ವಂ ಸ್ವಭಾವತಃ ।**
**ಕರ್ತಾ ಭೋಕ್ತೇತಿ ವಿಜ್ಞಾನಂ ಮೃಷೈವೇತಿ ಸುನಿಶ್ಚಿತಮ್ ॥ ೧೭ ॥**

೧೬-೧೭. ಆತ್ಮನು ಕರ್ತೃವೆಂಬುದು ದೇಹವೇ ತಾನೆಂಬ ಬುದ್ಧಿಯನ್ನವಲಂಬಿಸಿರುವದರಿಂದ ಹುಸಿಯಾಗಿರುವದು, "ನಾನು ಏನನ್ನೂ ಮಾಡು

---

1. ನಾನು ಆತ್ಮನನ್ನು ಅರಿತುಕೊಂಡು ಈಗ ಜ್ಞಾನಿಯಾಗಿರುವೆನು -ಎಂದು ಭಾವಿಸಿಕೊಂಡವನು ಆತ್ಮನಲ್ಲಿ ಜ್ಞಾನಕರ್ತೃತ್ವವನ್ನೂ ಜ್ಞಾನಕ್ಕೆ ಜನ್ಮವನ್ನೂ ಅಂಗೀಕರಿಸಿರುತ್ತಾನೆ. ಆದ್ದರಿಂದ ಅವನು ನಿಜವಾದ ಜ್ಞಾನಿಯಲ್ಲ.

2. ಆತ್ಮಸ್ವರೂಪವೇ ಆಗಿರುವ ಚೈತನ್ಯವು ಹುಟ್ಟಿ ನಾಶವಾಗುವದಿಲ್ಲ; ಆದರೆ ಪ್ರತ್ಯಯರೂಪವಾದ ಜ್ಞಾನವು ಹುಟ್ಟಿ ನಾಶವಾಗತಕ್ಕದ್ದು. ವೃತ್ತಿರೂಪವಾದ ಜ್ಞಾನದಿಂದಲೇ ಆತ್ಮನ ಸ್ವರೂಪವಾದ ಜ್ಞಾನಕ್ಕೂ ಜನ್ಮನಾಶಗಳುಂಟೆಂಬ ಭ್ರಾಂತಿಯುಂಟಾಗುತ್ತದೆ.

ವದಿಲ್ಲ' ಎಂಬ ತಿಳಿವಳಿಕೆಯು ಪ್ರಮಾಣದಿಂದ ಹುಟ್ಟಿದ್ದಾದ್ದರಿಂದ ಸತ್ಯವಾಗಿರುತ್ತದೆ. ಕರ್ತೃತ್ವವು ಕಾರಕಗಳನ್ನು ಅವಲಂಬಿಸಿರುತ್ತದೆ, ಅಕರ್ತೃತ್ವವು ಸ್ವಭಾವದಿಂದ ಇರುತ್ತದೆ. (ಆದ್ದರಿಂದ ಆತ್ಮನು) "ಕರ್ತೃ, ಭೋಕ್ತೃ' ಎಂಬ ತಿಳಿವಳಿಕೆಯು ತಪ್ಪುತಿಳಿವಳಿಕೆಯೇ ಎಂದು ಚೆನ್ನಾಗಿ ನಿಶ್ಚಯವಾಯಿತು[1].

**ಏವಂ ಶಾಸ್ತ್ರಾನುಮಾನಾಭ್ಯಾಂ ಸ್ವರೂಪೇಽವಗತೇ ಸತಿ ।**
**ನಿಯೋಜ್ಯೋಽಹಮಿತಿ ಹ್ಯೇಷಾ ಸತ್ಯಾ ಬುದ್ಧಿಃ ಕಥಂ ಭವೇತ್ ॥ ೧೮ ॥**

೧೮. ಹೀಗೆ ಶಾಸ್ತ್ರದಿಂದಲೂ ಅನುಮಾನದಿಂದಲೂ[2] ಸ್ವರೂಪವನ್ನು ನಿಶ್ಚಯಿಸಿಕೊಂಡಮೇಲೆ "ನಾನು ಶಾಸ್ತ್ರದ ಕಟ್ಟಳೆಗೆ ಒಳಪಟ್ಟವನು" ಎಂಬ ಬುದ್ಧಿಯು ಸತ್ಯವೆಂದು ಹೇಗೆ ಆದೀತು[3] ?

**ಯಥಾ ಸರ್ವಾನ್ತರಂ ವ್ಯೋಮ ವ್ಯೋಮ್ನೋಽಪ್ಯಭ್ಯನ್ತರೋ ಹ್ಯಹಮ್ ।**
**ನಿರ್ವಿಕಾರೋಽಚಲಃ ಶುದ್ಧೋಽಜರೋ ಮುಕ್ತಃ ಸದಾದ್ವಯಃ ॥ ೧೯ ॥**

೧೯. ಹೇಗೆ ಆಕಾಶವು ಎಲ್ಲಕ್ಕೂ ಒಳಗಿರುವದೋ ಹಾಗೆ ನಾನು ಆಕಾಶಕ್ಕೂ ಒಳಗಿರುವವನು. (ನಾನು) ನಿರ್ವಿಕಾರನು, ಅಚಲನು, ಶುದ್ಧನು, ಅಜರನು, ನಿತ್ಯಮುಕ್ತನು, ಅದ್ವಯನು.

——:0:——

1. ಯಾವದು ಮತ್ತೊಂದರ ಅಪೇಕ್ಷೆಯಿಂದ ತೋರುವದೋ ಅದು ವಸ್ತುವಿನ ಸ್ವಭಾವಕ್ಕೆ ಸೇರಿದ್ದಲ್ಲ. ಉದಾಹರಣೆಗೆ ಸ್ಫಟಿಕವು ಹತ್ತಿರವಿರುವ ದಾಸಿವಾಳದ ಹೂವಿನ ಕಾರಣದಿಂದ ಕೆಂಪಾಗಿ ತೋರಿದರೂ ಕೆಂಪು ಸ್ಫಟಿಕದ ಸ್ವಭಾವಕ್ಕೆ ಸೇರಿದ್ದಲ್ಲ.

2. ಶ್ರವಣಮನನಗಳಿಂದ ಎಂದರ್ಥ. ಅನುಮಾನವು ಸ್ವತಂತ್ರವಾಗಿ ಪ್ರಮಾಣವೆಂಬ ಅಭಿಪ್ರಾಯವಿಲ್ಲಿಲ್ಲ.

3. ಆತ್ಮನು ಅಕರ್ತೃ, ಅಭೋಕ್ತೃ –ಎಂಬ ನಿಶ್ಚಯಜ್ಞಾನವು ಶಾಸ್ತ್ರಪ್ರಮಾಣದಿಂದ ಆದಮೇಲೂ ಶಾಸ್ತ್ರವು ಇಂಥಿಂಥ ಕರ್ಮವನ್ನು ಮಾಡಬೇಕೆಂದು ನನಗೆ ಕಟ್ಟುಮಾಡುತ್ತದೆ. ಎಂಬ ಬುದ್ಧಿಯುಂಟಾಗುವದು ಅಸಂಭವ. ಶಾಸ್ತ್ರದ ಅಪ್ಪಣೆಯನ್ನು ಪಾಲಿಸಬೇಕು ಎಂದು ಭಾವಿಸುವದು ಅಕರ್ತ್ರಾತ್ಮಜ್ಞಾನಕ್ಕೆ ಮುಂಚೆಯೇ ಆಮೇಲಲ್ಲ.

# ದೃಗ್ದೃಶ್ಯವಿವೇಕಪ್ರಕರಣದ ಸಾರ

೧-೩. ದೃಗ್ರೂಪನಾದ ಆತ್ಮನನ್ನು ದೃಶ್ಯವಾದ ಸಾಭಾಸಾಂತಃಕರಣದಿಂದ ಬಿಂಗಡಿಸಿ ಕೊಳ್ಳಲಾರದೆ ಅಂತಃಕರಣವನ್ನೇ ತಾನೆಂದು ತಿಳಿದುಕೊಳ್ಳುತ್ತಾ ದೃಶ್ಯವನ್ನು ತಾನೆಂದು ಕೊಳ್ಳುತ್ತಿರುವ ಅಧ್ಯಾಸವೇ ಆತ್ಮಜ್ಞಾನವಿಲ್ಲದಿರುವದಕ್ಕೆ ಕಾರಣ. ದಶಮನ ಕಥೆಯಲ್ಲಿ ಹತ್ತನೆಯವನು ಹೊರಗಿನ ಒಂಬತ್ತು ಜನರಲ್ಲೇ ತಾನೊಬ್ಬನೆಂದು ತಿಳಿದಂತೆ ಅಜ್ಞನು ಅನಾತ್ಮವೇ ತಾನೆಂದು ತಿಳಿದುಕೊಂಡಿರುತ್ತಾರೆ.

೪-೯. ಕರ್ತೃತ್ವಜ್ಞಾನವೂ ಅಕರ್ತೃತ್ವಜ್ಞಾನವೂ ಒಬ್ಬನಿಗೇ ಏಕಕಾಲದಲ್ಲಿ ಇರ ಲಾರವು. ಆದ್ದರಿಂದ ಶಾಸ್ತ್ರದಲ್ಲಿರುವ ಕರ್ಮವಿಧಿಯೂ ಆತ್ಮಜ್ಞಾನೋಪದೇಶವೂ ಒಬ್ಬನಿಗೇ ಅಲ್ಲ. ದೇಹಾಭಿಮಾನಿಯಾದವನಿಗೆ ದುಃಖವಿರುವದೂ ಅದಿಲ್ಲದವನಿಗೆ ದುಃಖ ವಿಲ್ಲದಿರುವದೂ ಅವಸ್ಥಾತ್ರಯಪರೀಕ್ಷೆಯಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ತತ್ತ್ವಮಸಿ ಎಂಬ ಉಪದೇಶವು ದೇಹಾಭಿಮಾನದಿಂದಾಗಿರುವ ದುಃಖವನ್ನು ಕಳೆಯುವ ಜ್ಞಾನಕ್ಕಾಗಿ ಯೇ. ವಾಕ್ಯಜ್ಞಾನಕ್ಕಿಂತ ಬೇರೆಯಾಗಿ ಆತ್ಮದರ್ಶನರೂಪವಾದ ಬೇರೊಂದು ಜ್ಞಾನವೂ ಆಗಬೇಕೆಂದು ಕೆಲವರು ವಾದಿಸುತ್ತಾರೆ; ಆದರೆ ಅವರು ಹೇಳುವ ಅನುಭವಕ್ಕೆ ವಿಷಯ ವಾಗಿರುವದು ಚಿದಾಭಾಸದಿಂದ ಕೂಡಿದ ಅಂತಃಕರಣಪ್ರತ್ಯಯವು, ಆತ್ಮನಲ್ಲ. ಆದಕಾರಣ ಆತ್ಮನು ಅರಿವನ್ನೂ ಅರಿಯುವವನು ಅವನೇ ನೀನು ಎಂದು ಶಾಸ್ತ್ರವು ಬೋಧಿಸುತ್ತಿರುವದ ರಿಂದ ಉಂಟಾಗುವ ಅವಿದ್ಯಾನಾಶಕವಾದ ಅರಿವೇ ಆತ್ಮನ ಅನುಭವವಲ್ಲದೆ ಆತ್ಮದರ್ಶನ ರೂಪವಾದ ಮತ್ತೊಂದು ಅನುಭವವಿಲ್ಲ. ನಿತ್ಯದೃಗ್ರೂಪನಾಗಿರುವ ಆತ್ಮನ ವಿಷಯದಲ್ಲಿ ಅನಿತ್ಯವಾದ ದರ್ಶನವಾಗಲಿ ಅದರ್ಶನವಾಗಲಿ ಹೇಗೆ ಉಂಟಾದಾವು ?

೧೦-೧೨. ಆತ್ಮನಲ್ಲಿ ಅಧ್ಯಸ್ತವಾದ ದುಃಖವೇ ಹೊರತು ಪರಮಾರ್ಥವಾಗಿ ದುಃಖ ವಿರುವದಿಲ್ಲ. ಏಕೆಂದರೆ ದುಃಖವೂ ಅದಕ್ಕೆ ಆಶ್ರಯವಾಗಿರುವ ಅಂತಃಕರಣವೂ ಆತ್ಮನಿಗೆ ವಿಷಯವಾಗಿರುತ್ತದೆ; ವಿಷಯವಾಗಿರುವ ದುಃಖವು ವಿಷಯಿಯ ಧರ್ಮವಾಗಲಾರದು. ಇದರಂತೆ ವಿಷಯವಾದ್ದ ಯಾವದೂ ಆತ್ಮನಿಗೆ ಧರ್ಮವಾಗಲಾರದಾದ್ದರಿಂದ ಆತ್ಮನು ನಿತ್ಯ ಶುದ್ಧಬುದ್ಧಮುಕ್ತವಾದ ಬ್ರಹ್ಮವೇ ಆಗಿರುತ್ತಾನೆ. ಆತ್ಮನು ಅರಿಯುವವನಾದ್ದರಿಂದ ಅವ ನನ್ನು ಅರಿಯುವ ಮತ್ತೊಬ್ಬನು ಇರುವದಿಲ್ಲ. ಆದ್ದರಿಂದ ಇವನೇ ಪರಮಾತ್ಮನು, ಶಾಸ್ತ್ರ ವಾಕ್ಯದಿಂದ ಆಗುವ ಜ್ಞಾನವೇ ಇದು.

೧೩-೧೭. ಆತ್ಮನ ಜ್ಞಾನರೂಪವಾದ ದೃಷ್ಟಿಗೆ ಎಂದಿಗೂ ಲೋಪವಿಲ್ಲ, ಅವನು ಕರ್ತೃವೆಂಬುದು ಎಂದಿಗೂ ಸಲ್ಲದು. ನಾನು ಬ್ರಹ್ಮವನ್ನು ಅರಿತೆನು ಎಂಬ ಅರಿವಿನ ಕರ್ತೃತ್ವವೂ ತನಗಿಲ್ಲವೆಂದು ತಿಳಿದವನೇ ನಿಜವಾದ ಆತ್ಮಜ್ಞಾನಿಯು; ಏಕೆಂದರೆ ನಾನು ಜ್ಞಾತೃವೇ, ಜ್ಞೇಯನಲ್ಲ -ಎಂದು ಮುಂತಾಗಿ ತಿಳಿಯುವ ಪ್ರತ್ಯಯವೂ ನಾಶವಾಗುವದರಿಂದ ಅದೂ ಆತ್ಮನ ಧರ್ಮವಲ್ಲ. ಆತ್ಮಜ್ಞಾನವುಂಟಾಯಿತು ಎಂಬಾಗಲೂ ಚೈತನ್ಯಸ್ವ

ಅಂತಃಕರಣಾಧ್ಯಾಸದಿಂದಲೇ ಜನ್ಯತ್ವವು ಕಲ್ಪಿತವಾಗಿರುತ್ತದೆ. ಆತ್ಮನಿಗೆ ಯಾವ ಕರ್ತೃತ್ವವೇ ಆಗಲಿ ದೇಹಾತ್ಮಬುದ್ಧಿಯ ಅಪೇಕ್ಷೆಯಿಂದ ತೋರತಕ್ಕದ್ದು ; ಯಾವ ಕರ್ತೃತ್ವವೂ ಇಲ್ಲ ಎಂಬುದು ಶಾಸ್ತ್ರಪ್ರಮಾಣದಿಂದುಂಟಾಗತಕ್ಕದ್ದು. ಕರ್ತೃತ್ವವು ಕಾರಕಾಪೇಕ್ಷವಾಗಿ ಉಂಟಾಗತಕ್ಕದ್ದು, ಅಕರ್ತೃತ್ವವು ಆತ್ಮನಿಗೆ ಸ್ವಭಾವದಿಂದಲೇ ಇರತಕ್ಕದ್ದು. ಆದ್ದರಿಂದ ಸತ್ಯವಾಗಿರುವ ಈ ಅಕರ್ತೃತ್ವವನ್ನೇ ಶಾಸ್ತ್ರವು ತಿಳಿಸುತ್ತದೆ.

೧೮-೧೯. ಹೀಗೆ ಶಾಸ್ತ್ರದಿಂದಲೂ ಯುಕ್ತಿಯಿಂದಲೂ ಆತ್ಮನು ಅಕರ್ತೃವಾದ ಚೈತನ್ಯಸ್ವರೂಪನೇ ಎಂಬ ನಿಶ್ಚಯವಾದ ಬಳಿಕ ಮತ್ತೆ ಶಾಸ್ತ್ರನಿಯೋಗಕ್ಕೆ ಕಟ್ಟುಬಿದ್ದು ಅನುಭವಕ್ಕಾಗಿ ಏನಾದರೂ ಮಾಡತಕ್ಕದ್ದಿದೆ ಎಂದು ಭಾವಿಸುವದು ಎಂದಿಗೂ ಆಗಲಾರದು. ಆದ್ದರಿಂದ ಆತ್ಮನು ಸರ್ವಾಂತರನು, ನಿಷ್ಕ್ರಿಯನು, ಅಸಂಗನು, ನಿತ್ಯಶುದ್ಧನು, ನಿತ್ಯಮುಕ್ತನು, ಅದ್ವಿತೀಯಚೈತನ್ಯಸ್ವರೂಪನು.



# ೧೩. ನಿರ್ವಿಕಲ್ಪಾತ್ಮ[1]

## ಆತ್ಮನಲ್ಲಿ ದೃಷ್ಟ್ಯಾದಿಧರ್ಮಗಳಿಲ್ಲ

**ಅಚಕ್ಷುಷ್ಟ್ವಾನ್ನ ದೃಷ್ಟಿರ್ಮೇ ತಥಾಶ್ರೋತ್ರಸ್ಯ ಕಾ ಶ್ರುತಿಃ ।**
**ಅವಾಕ್ತ್ವಾನ್ನ ತು ವಕ್ತಿಃ ಸ್ಯಾದಮನಸ್ತ್ವಾನ್ಮತಿಃ ಕುತಃ ॥ ೧ ॥**
**ಅಪ್ರಾಣಸ್ಯ ನ ಕರ್ಮಾಸ್ತಿ ಬುದ್ಧ್ಯಭಾವೇ ನ ವೇದಿತಾ ।**
**ವಿದ್ಯಾವಿದ್ಯೇ ತತೋ ನಸ್ತಶ್ಚಿನ್ಮಾತ್ರಜ್ಯೋತಿಷೋ ಮಮ ॥ ೨ ॥**
**ನಿತ್ಯಮುಕ್ತಸ್ಯ ಶುದ್ಧಸ್ಯ ಕೂಟಸ್ಥಸ್ಯಾವಿಚಾಲಿನಃ ।**
**ಅಮೃತಸ್ಯಾಕ್ಷರಸ್ಯೈವಮಶರೀರಸ್ಯ ಸರ್ವದಾ ॥ ೩ ॥**
**ಜಿಘುತ್ಸಾ ವಾ ಪಿಪಾಸಾ ವಾ ಶೋಕಮೋಹೌ ಜರಾಮೃತೀ ।**
**ನ ವಿದ್ಯನ್ತೇಽಶರೀರತ್ವಾದ್ ವ್ಯೋಮವದ್ ವ್ಯಾಪಿನೋ ಮಮ ॥ ೪ ॥**
**ಅಸ್ಪರ್ಶತ್ವಾನ್ನ ಮೇ ಸ್ಪೃಷ್ಟಿರ್ನಾಜಿಹ್ವತ್ವಾದ್ರಸಜ್ಞತಾ ।**
**ನಿತ್ಯವಿಜ್ಞಾನರೂಪಸ್ಯ ಜ್ಞಾನಾಜ್ಞಾನೇ ನ ಮೇ ಸದಾ ॥ ೫ ॥**

೧-೫. ಚಕ್ಷುರಿಂದ್ರಿಯವಿಲ್ಲದ್ದರಿಂದ ನನಗೆ ನೋಟವಿಲ್ಲ. ಶ್ರೋತ್ರವಿಲ್ಲದ (ನನಗೆ) ಕೇಳುವಿಕೆ ಯಾವದು ? ವಾಗಿಂದ್ರಿಯವಿಲ್ಲದ್ದರಿಂದ ವಚನವಿಲ್ಲ. ಮನಸ್ಸಿಲ್ಲದವನಾದ್ದರಿಂದ ಮನನವೆಲ್ಲಿಯದು ? ಪ್ರಾಣವಿಲ್ಲದ (ನನಗೆ) ಕರ್ಮವಿಲ್ಲ, ಬುದ್ಧಿಯಿಲ್ಲದ್ದರಿಂದ ನಾನು ಅರಿಯುವವನಲ್ಲ. ಆದ್ದರಿಂದ ಚಿನ್ಮಾತ್ರಜ್ಯೋತಿಯಾದ ನನಗೆ ವಿದ್ಯಾವಿದ್ಯೆಗಳೂ ಇಲ್ಲ. ನಿತ್ಯಮುಕ್ತನೂ ಶುದ್ಧನೂ ಕೂಟಸ್ಥನೂ ಅಚಲನೂ ಅಮೃತನೂ ಅಕ್ಷರನೂ ಮತ್ತು ಅಶರೀರನೂ ಆಗಿರುವ ನನಗೆ ಹಸಿವಾಗಲಿ ಬಾಯಾರಿಕೆಯಾಗಲಿ ಶೋಕಮೋಹಗಳಾಗಲಿ ಮುಪ್ಪು ಸಾವುಗಳಾಗಲಿ ಇರುವದಿಲ್ಲ. ಶರೀರವಿಲ್ಲದ್ದರಿಂದ ಆಕಾಶದಂತೆ (ಎಲ್ಲೆಲ್ಲಿಯೂ) ವ್ಯಾಪಿಸಿಕೊಂಡಿರುವ ನನಗೆ ಸ್ಪರ್ಶೇಂದ್ರಿಯವಿಲ್ಲದ್ದರಿಂದ ಮುಟ್ಟುವಿಕೆಯಿಲ್ಲ. ಜಿಹ್ವೇಂದ್ರಿಯವಿಲ್ಲದ್ದರಿಂದ ಸವಿಯನ್ನರಿಯುವಿಕೆಯಿಲ್ಲ. ನಿತ್ಯಚೈತನ್ಯಸ್ವರೂಪನಾಗಿರುವದರಿಂದ ನನಗೆ ಅರಿಯುವದು, ಅರಿಯದಿರುವದು –ಎಂಬಿವು ಎಂದಿಗೂ ಇಲ್ಲ[2].

---

1. ಪ್ರಾರಂಭದ ಶಬ್ದದಮೇಲಿನಿಂದ ವ್ಯಾಖ್ಯಾನಗಳು ಇದನ್ನು 'ಅಚಕ್ಷುಷ್ಟ್ವಪ್ರಕರಣ'ವೆಂದು ಕರೆದಿವೆ.

2. ಶರೀರ, ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿ –ಎಂಬ ಉಪಾಧಿಗಳಿಂದಲೇ ಆತ್ಮನಿಗೆ ದೃಷ್ಟ್ಯಾದಿಗಳ ಧರ್ಮವೆಂಬ ಭ್ರಾಂತಿಯಾಗಿರುವದು. ಆದರೆ ಈ ಉಪಾಧಿಗಳು ಅವಿದ್ಯಾಕೃತವಾಗಿರುವದರಿಂದ ಈ ದೃಷ್ಟ್ಯಾದಿಗಳು ಆತ್ಮನ ಧರ್ಮವಲ್ಲವೇ ಅಲ್ಲ.

## ಆತ್ಮನಲ್ಲಿ ಸ್ವಾಭಾವಿಕವಾದ ನಿತ್ಯದೃಷ್ಟ್ಯಾದಿಗಳಿವೆ

**ಯಾ ತು ಸ್ಯಾನ್ಮಾನಸೀ ವೃತ್ತಿಶ್ಚಾಕ್ಷುಷ್ಯಾ ರೂಪರಞ್ಜನಾ |**
**ನಿತ್ಯಮೇವಾತ್ಮನೋ ದೃಷ್ಟ್ಯಾ ನಿತ್ಯಯಾ ದೃಶ್ಯತೇ ಹಿ ಸಾ || ೬ ||**
**ತಥಾನ್ಯೇನ್ದ್ರಿಯಯುಕ್ತಾ ಯಾ ವೃತ್ತಯೋ ವಿಷಯಾಞ್ಜನಾಃ |**
**ಸ್ಮೃತೀ ರಾಗಾದಿರೂಪಾ ಚ ಕೇವಲಾನ್ತರ್ಮನಸ್ಯಪಿ || ೭ ||**
**ಮಾನಸ್ಯಸ್ತದ್ವದನ್ಯಸ್ಯ ದೃಶ್ಯನ್ತೇ ಸ್ವಪ್ನವೃತ್ತಯಃ |**
**ದ್ರಷ್ಟುರ್ದೃಷ್ಟಿಸ್ತತೋ ನಿತ್ಯಾ ಶುದ್ಧಾನನ್ತಾ ಚ ಕೇವಲಾ || ೮ ||**

೬-೮. ಚಕ್ಷುರಿಂದ್ರಿಯದ (ಮೂಲಕ ಹೊರಟು) ರೂಪರಂಜಿತವಾಗುವ ಮನೋವೃತ್ತಿಯಿದೆಯಲ್ಲ, ಅದು ಆತ್ಮನ ನಿತ್ಯವಾದ ದೃಷ್ಟಿಯಿಂದ[1] ಯಾವಾಗಲೂ ನೋಡಲ್ಪಡುತ್ತಿರುವದು. ಇದರಂತೆ ಮಿಕ್ಕ ಇಂದ್ರಿಯಗಳ ಮೂಲಕ ವಿಷಯಗಳ ಬಳಿತದಿಂದೊಡಗೂಡಿ (ಹೊರಕ್ಕೆ ಬರುವ) ವೃತ್ತಿಗಳಿರುವವಲ್ಲ, (ಅವೂ) ಸ್ಮೃತಿಯೂ ರಾಗವೇ ಮುಂತಾದ ಬರಿಯ ಮನಸ್ಸಿನೊಳಗೇ ಆಗುವ ವೃತ್ತಿಗಳೂ (ಆತ್ಮನ ನಿತ್ಯದೃಷ್ಟಿಗೆ ವಿಷಯವಾಗಿಯೇ ಇರುವವು). ಇದೇ ರೀತಿಯಲ್ಲಿ ಸ್ವಪ್ನದಲ್ಲಿ (ಆಗುವ) ವೃತ್ತಿಗಳೂ (ತಮಗಿಂತ) ಬೇರೆಯಾದ[2] (ಆತ್ಮನಿಗೆ) ದೃಶ್ಯವಾಗಿಯೇ ಇರುತ್ತವೆ. ಆದ್ದರಿಂದ ದ್ರಷ್ಟೃವಾದ ಆತ್ಮನ ದೃಷ್ಟಿಯು[3] ನಿತ್ಯವಾದದ್ದು, ಶುದ್ಧವಾದದ್ದು, ಅನಂತವಾದದ್ದು, ತಾನೇ ತಾನಾಗಿರುವಂಥದ್ದು.

## ಆತ್ಮನ ದೃಷ್ಟಿಯು ಅನಿತ್ಯವೆಂಬ ಭ್ರಾಂತಿಗೆ ಕಾರಣ

**ಅನಿತ್ಯಾ ಸಾಽವಿಶುದ್ಧೇತಿ ಗೃಹ್ಯತೇಽತ್ರಾವಿವೇಕತಃ |**
**ಸುಖೀ ದುಃಖೀ ತಥಾ ಚಾಹಂ ದೃಶ್ಯಯೋಪಾಧಿಭೂತಯಾ || ೯ ||**
**ಮೂಢಯಾ ಮೂಢ ಇತ್ಯೇವಂ ಶುದ್ಧಯಾ ಶುದ್ಧ ಇತ್ಯಪಿ |**
**ಮನ್ಯತೇ ಸರ್ವಲೋಕೋಽಯಂ ಯೇನ ಸಂಸಾರಮೃಚ್ಛತಿ || ೧೦ ||**

---

1. ಚೈತನ್ಯರೂಪವನ್ನೇ ಇಲ್ಲಿ ದೃಷ್ಟಿಯೆಂದು ಕರೆದಿದೆ.

2. 'ತದ್ವದಪ್ಯಸ್ಯ' ಎಂಬ ಪಾಠವಿದ್ದರೆ 'ಈ ಆತ್ಮನ ಕನಸಿನಲ್ಲಾಗುವ ಮಾನಸ ವೃತ್ತಿಗಳು ಕೂಡ' ಎಂದು ಕನ್ನಡಿಸಬೇಕಾಗುವದು.

3. ಆತ್ಮನ ಸ್ವರೂಪವಾದ ಚೈತನ್ಯರೂಪದೃಷ್ಟಿಯು ಎಂದರ್ಥ. ಆತ್ಮನಿಗೆ ಅನಿತ್ಯವಾದ ದೃಷ್ಟಿರೂಪವಾದ ಧರ್ಮವು ನಿಜವಾಗಿಲ್ಲವೆಂದು ಹಿಂದೆ ತಿಳಿಸಿಯೇ ಇರುತ್ತದೆ. ಹೀಗೆ ದೃಷ್ಟಿ ಮುಂತಾದ ಶಬ್ದಗಳನ್ನು ಎರಡೆರಡರ್ಥದಲ್ಲಿ ಉಪಯೋಗಿಸಿರುವದನ್ನು ಐತರೇಯ ಒಂದನೆಯ ಅಧ್ಯಾಯದ ಉಪಸಂಹಾರಭಾಷ್ಯದಲ್ಲಿಯೂ ಬೃ. ೩-೪-೨೮ ಭಾಷ್ಯದಲ್ಲಿಯೂ ಸ್ಪಷ್ಟಗೊಳಿಸಿದೆ.

೯-೧೦. ಇಲ್ಲಿ ದೃಶ್ಯವಾಗಿ (ಆತ್ಮನಿಗೆ) ಉಪಾಧಿಯಾಗಿರುವ (ದೃಷ್ಟಿಯಿಂದ)[1] ವಿಂಗಡಿಸಿಕೊಳ್ಳಲಾರದೆ ಇರುವದರಿಂದ ಆ (ಚೈತನ್ಯದೃಷ್ಟಿಯು) ಅನಿತ್ಯವೆಂದೂ ಅಶುದ್ಧವಾಗಿರುವದೆಂದೂ ಗ್ರಹಿಸಲ್ಪಡುತ್ತಿದೆ. ಹೀಗೆಯೇ[2] ನಾನು ಸುಖಿಯು ದುಃಖಿಯು' ಎಂದೂ ಮೂಢವಾದ (ದೃಷ್ಟಿಯಿಂದ ವಿಂಗಡಿಸಿಕೊಳ್ಳಲಾರದೆ ನಾನು) 'ಮೂಢನು' ಎಂದೂ ಶುದ್ಧವಾದ (ದೃಷ್ಟಿಯಿಂದ ವಿಂಗಡಿಸಿಕೊಳ್ಳಲಾರದೆ ನಾನು) 'ಶುದ್ಧನು' ಎಂದೂ ಈ ಜನವೆಲ್ಲವೂ ಭಾವಿಸುತ್ತಿರುವದು[3]. ಇದರಿಂದ ಸಂಸಾರವನ್ನು ಪಡೆಯುತ್ತಿರುವದು.

## ನಿರ್ವಿಕಲ್ಪಾತ್ಮನ ಅನುಸಂಧಾನ

**ಅಚಕ್ಷುಷ್ಟ್ವಾದಿಶಾಸ್ತ್ರೋಕ್ತಂ ಸ ಬಾಹ್ಯಾನ್ತರಂ ಹ್ಯಜಮ್ |**
**ನಿತ್ಯಮುಕ್ತಮಿಹಾತ್ಮಾನಂ ಮುಮುಕ್ಷುಶ್ಚೇತ್ ಸದಾ ಸ್ಮರೇತ್ || ೧೧ ||**

ಈ (ಲೋಕ)ದಲ್ಲಿ ಮುಮುಕ್ಷೆಯುಳ್ಳವನಾಗಿದ್ದರೆ 'ಅಚಕ್ಷುಷ್ಕಮ್' (ಚಕ್ಷುರಿಂದ್ರಿಯವಿಲ್ಲದವನು. ಬೃ. ೩-೮-೮) ಮುಂತಾದ ಶಾಸ್ತ್ರದಲ್ಲಿ ಹೇಳಿರುವ 'ಒಳಗೂ ಹೊರಗೂ ಜನ್ಮರಹಿತವಾಗಿರುವ' (ಮುಂ. ೨-೧-೨) ನಿತ್ಯಮುಕ್ತನಾದ ಆತ್ಮನನ್ನು ಯಾವಾಗಲೂ ಸ್ಮರಿಸುತ್ತಿರಬೇಕು.

**ಅಚಕ್ಷುಷ್ಟ್ವಾದಿಶಾಸ್ತ್ರಾಚ್ಚ ನೇನ್ದ್ರಿಯಾಣಿ ಸದಾ ಮಮ |**
**ಅಪ್ರಾಣೋ ಹ್ಯಮನಾಃ ಶುಭ್ರ ಇತಿ ಚಾಥರ್ವಣೇ ವಚಃ || ೧೨ ||**
**ಶಬ್ದಾದೀನಾಮಭಾವಶ್ಚ ಶ್ರೂಯತೇ ಮಮ ಕಾಠಕೇ |**
**ಅಪ್ರಾಣೋ ಹ್ಯಮನಾಃ ಯಸ್ಮಾದವಿಕಾರೀ ಸದಾ ಹ್ಯಹಮ್ || ೧೩ ||**

೧೨-೧೩. "ಅಚಕ್ಷುಷ್ಟ್ವಾದಿಶಾಸ್ತ್ರ(ಪ್ರಮಾಣ)ದಿಂದ ನನಗೆ ಎಂದಿಗೂ ಇಂದ್ರಿಯಾದಿಗಳು ಇರುವದೇ ಇಲ್ಲ. "ಅಪ್ರಾಣೋ ಹ್ಯಮನಾಃ ಶುಭ್ರಃ" (ಮುಂ. ೨-೧-೨ ಪ್ರಾಣವಿಲ್ಲದವನು, ಮನಸ್ಸಿಲ್ಲದವನು, ಶುಭ್ರನು) ಎಂದು

1. ಇಲ್ಲಿ ದೃಷ್ಟಿ ಎಂದರೆ ಚಕ್ಷುರಿಂದ್ರಿಯಸಂಬಂಧದಿಂದ ಆಗಿರುವ ಮಾನಸವೃತ್ತಿ. ಈ ಅನಿತ್ಯದೃಷ್ಟಿಯನ್ನೂ ಆತ್ಮನ ಸ್ವರೂಪವಾಗಿರುವ ನಿತ್ಯದೃಷ್ಟಿಯನ್ನೂ ವಿಂಗಡಿಸಿಕೊಳ್ಳದೆ ಅನ್ಯೋನ್ಯಾಧ್ಯಾಸವನ್ನು ಮಾಡಿಕೊಂಡು ವಿಷಯಸಂಬಂಧದಿಂದ ನನಗೆ ಅಶುದ್ಧವಾದ ದೃಷ್ಟಿಯು ಹುಟ್ಟಿತು –ಎಂದು ಭಾವಿಸಿಕೊಳ್ಳುತ್ತಾರೆ.

2. ಸುಖಿತ್ವದುಃಖಿತ್ವವೃತ್ತಿಗಳಿಂದ ವಿಂಗಡಿಸಿಕೊಳ್ಳದ ನಿಮಿತ್ತದಿಂದ ಆದ ಅಧ್ಯಾಸದಿಂದ ಎಂದರ್ಥ.

3. ತಪ್ಪಾಗಿ ತಿಳಿದುಕೊಳ್ಳುತ್ತಿರುವದು. ಅವಿವೇಕದಿಂದ ಅಧ್ಯಾಸವಾಗಿರುವದರಿಂದ ವಿವೇಕವೇ ಇದನ್ನು ತೊಲಗಿಸುವದು ಎಂದು ಭಾವ.

ಆಥರ್ವಣ(ಶ್ರುತಿಯ) ವಚನವೂ ಇದೆ. ಶಬ್ದವೇ ಮುಂತಾದವುಗಳು ನನ್ನಲ್ಲಿ ಇಲ್ಲವೆಂದೂ ಕಾಠಕ(ಶ್ರುತಿಯಲ್ಲಿ) ಹೇಳಿದೆ[1]. ಅಪ್ರಾಣನೂ ಅಮನನೂ ಆಗಿರುವದರಿಂದ ನಾನು ಯಾವಾಗಲೂ ವಿಕಾರರಹಿತನಾಗಿರುತ್ತೇನೆ[2].

**ವಿಕ್ಷೇಪೋ ನಾಸ್ತಿ ತಸ್ಮಾನ್ಮೇ ನ ಸಮಾಧಿಸ್ತತೋ ಮಮ |**
**ವಿಕ್ಷೇಪೋ ವಾ ಸಮಾಧಿರ್ವಾ ಮನಸಃ ಸ್ಯಾದ್ವಿಕಾರಿಣಃ ॥ ೧೪ ॥**

**ಅಮನಸ್ಕಸ್ಯ ಶುದ್ಧಸ್ಯ ಕಥಂ ಸ್ಯಾತ್ ತದ್ದ್ವಯಂ ಮಮ |**
**ಅಮನಸ್ತ್ವಾವಿಕಾರಿತ್ವೇ ವಿದೇಹವ್ಯಾಪಿನೋ ಮಮ ॥ ೧೫ ॥**

**ಇತ್ಯೇವದ್ಯಾವದಜ್ಞಾತಂ ತಾವತ್ಕಾರ್ಯಂ ಮಮಾ ಭವತ್ ॥ ೧೫ ೧/೨**

**ನಿತ್ಯಮುಕ್ತಸ್ಯ ಶುದ್ಧಸ್ಯ ಬುದ್ಧಸ್ಯ ಚ ಸದಾ ಮಮ ।**
**ಸಮಾಧಿರ್ವಾಸಮಾಧಿರ್ವಾ ಕಾರ್ಯಂ ಚಾನ್ಯತ್ ಕುತೋ ಭವೇತ್ ॥**
**ಮಾಂ ಹಿ ಧ್ಯಾತ್ವಾ ಚ ಬುದ್ಧ್ವಾ ಚ ಮನ್ಯನ್ತೇ ಕೃತಕೃತ್ಯತಾಮ್ ॥೧೭॥**

೧೪-೧೭. "ಆದ್ದರಿಂದ ನನಗೆ ವಿಕ್ಷೇಪವಿಲ್ಲ; ಆದ್ದರಿಂದ ನನಗೆ ಸಮಾಧಿಯೂ ಇಲ್ಲ. ವಿಕ್ಷೇಪವಾಗಲಿ ಸಮಾಧಿಯಾಗಲಿ ವಿಕಾರವುಳ್ಳ ಮನಸ್ಸಿಗೆ ಆಗಬಹುದು. ಅಮನಸ್ಕನೂ ಶುದ್ಧನೂ ಆಗಿರುವ ನನಗೆ ಆ ಎರಡೂ ಹೇಗೆ ಆದೀತು? ಶರೀರರಹಿತನೂ ವ್ಯಾಪಿಯೂ ಆಗಿರುವದರಿಂದ ನಾನು ಅಮನಸ್ಕನೂ ಅವಿಕಾರಿಯೂ (ಆಗಿರುವೆನು)[3]. ಇಂತೆಂದು ಎಲ್ಲಿಯವರೆಗೆ ತಿಳಿದಿರಲಿಲ್ಲವೋ ಅಲ್ಲಿಯವರೆಗೆ ನನಗೆ ಕಾರ್ಯವು ಇದ್ದಿತು[4]. ನಿತ್ಯಮುಕ್ತನೂ ಯಾವಾಗಲೂ ಶುದ್ಧನೂ ಬುದ್ಧನೂ ಆಗಿರುವ ನನಗೆ ಸಮಾಧಿಯಾಗಲಿ ಅಸಮಾಧಿಯಾಗಲಿ ಮತ್ತೆ ಬೇರೆಯ ಕಾರ್ಯವಾಗಲಿ ಎಲ್ಲಿಂದ ಉಂಟಾದೀತು?

---

1. ಕ. ೧-೩-೧೫ರಲ್ಲಿ ಶಬ್ದಾದಿಗಳು ಆತ್ಮನಿಗಿಲ್ಲವೆಂದಿದೆ. ಶಬ್ದಾದಿಗಳು ಹೆಚ್ಚುವದರಿಂದ ಸ್ಥೂಲತ್ವವೂ ಕಾರ್ಯತ್ವವೂ ಅನಿತ್ಯತ್ವವೂ ಉಂಟಾಗುವವು.

2. ಜ್ಞಾನಕೃತವಿಕಾರಗಳಾಗಲಿ ಕರ್ಮಕೃತವಿಕಾರಗಳಾಗಲಿ ನನಗೆ ಇರುವದಿಲ್ಲ ಎಂದರ್ಥ.

3 ಮನಸ್ಸಿನಿಂದ ವಿಕ್ಷೇಪವನ್ನು ಅನುಭವಿಸುವವನು ಸಮಾಧಾನಕ್ಕಾಗಿ ಪ್ರಯತ್ನಿಸಬೇಕು. ಮನಸ್ಸೇ ಇಲ್ಲದ್ದರಿಂದ ಅದು ಜ್ಞಾನಿಗೆ ಏತಕ್ಕೆ ಬೇಕು?

4. ಅಜ್ಞಾನದಿಂದಲೇ ಮನಸ್ಸಿನ ವಿಕ್ಷೇಪವು ಕಾಣುತ್ತದೆ; ಸಮಾಧಾನಕ್ಕಾಗಿ ಪ್ರಯತ್ನ ಮಾಡುವ ಕರ್ತೃತ್ವವೂ ಅಜ್ಞಾನದೃಷ್ಟಿಯಿಂದಲೇ ಇರುತ್ತದೆ.

ನನ್ನನ್ನು ಧ್ಯಾನಮಾಡಿ ಅರಿತುಕೊಂಡೇ ಅಲ್ಲವೆ, (ಜನರು) ಕೃತಕೃತ್ಯರಾದೆವೆಂದು ಎಣಿಸಿಕೊಳ್ಳುತ್ತಾರೆ ?[1]

**ಅಹಂ ಬ್ರಹ್ಮಾಸ್ಮಿ ಸರ್ವೋಽಸ್ಮಿ ಶುದ್ಧೋ ಬುದ್ಧೋಽಸ್ಮ್ಯತಃ ಸದಾ |**
**ಅಜಃ ಸರ್ವತ ಏವಾಹಮಜರಶ್ಚಾಕ್ಷಯೋಽಮೃತಃ || ೧೮ ||**

೧೮. ನಾನು ಬ್ರಹ್ಮವಾಗಿರುತ್ತೇನೆ, ಎಲ್ಲವೂ ಆಗಿರುತ್ತೇನೆ. ಆದ್ದರಿಂದ ಯಾವಾಗಲೂ ಶುದ್ಧನೂ ಬುದ್ಧನೂ ಆಗಿರುತ್ತೇನೆ. ನಾನು ಎಲ್ಲೆಲ್ಲಿಯೂ ಜನ್ಮರಹಿತನು, ಮುಪ್ಪಿಲ್ಲದವನು, ನಾಶರಹಿತನು, ಅಮೃತ(ಸ್ವಭಾವ)ನು.

**ಮದನ್ಯಃ ಸರ್ವಭೂತೇಷು ಬೋದ್ಧಾ ಕಶ್ಚಿನ್ನ ವಿದ್ಯತೇ |**
**ಕರ್ಮಾಧ್ಯಕ್ಷಶ್ಚ ಸಾಕ್ಷೀ ಚ ಚೇತಾ ನಿತ್ಯೋಽಗುಣೋಽದ್ವಯಃ ||**

೧೯. ನನಗಿಂತ ಮತ್ತೊಬ್ಬ ವಿಜ್ಞಾತೃವು ಯಾವ ಪ್ರಾಣಿಗಳಲ್ಲಿಯೂ ಇರುವದಿಲ್ಲ. ನಾನೇ (ಅಲ್ಲೆಲ್ಲ) ಕರ್ಮಗಳಿಗೆ ಒಡೆಯನೂ ಸಾಕ್ಷಿಯೂ ಚೈತನ್ಯಸ್ವರೂಪನೂ ನಿತ್ಯನೂ ನಿರ್ಗುಣನೂ[2] ಅದ್ವಿತೀಯನೂ (ಆಗಿರುತ್ತೇನೆ.)

**ನ ಸಚ್ಚಾಹಂ ನ ಚಾಸಚ್ಚ ನೋಭಯಂ ಕೇವಲಃ ಶಿವಃ |**
**ನ ಮೇ ಸಂಧ್ಯಾ ನ ರಾತ್ರಿರ್ವಾ ನಾಹರ್ವಾ ಸರ್ವದಾ ದೃಶೇಃ || ೨೦ ||**

೨೦. ''ನಾನು ಸತ್ತಲ್ಲ, ಅಸತ್ತೂ ಅಲ್ಲ, ಎರಡೂ ಅಲ್ಲ; ಕೇವಲ ಶಿವನು. ನನಗೆ ಸಂಧ್ಯಾಕಾಲ(ದ ಕರ್ತವ್ಯ)ವಿಲ್ಲ. ಯಾವಾಗಲೂ ದೃಗ್ರೂಪನಾಗಿರುವ (ನನಗೆ) ರಾತ್ರಿಯೂ ಇಲ್ಲ, ಹಗಲೂ ಇಲ್ಲ.[3]

**ಸರ್ವಮೂರ್ತಿವಿಯುಕ್ತಂ ಯದ್ಯಥಾ ಖಂ ಸೂಕ್ಷ್ಮಮದ್ವಯಮ್ |**
**ತೇನಾಪ್ಯಸ್ಮಿ ವಿನಾಭೂತಂ ಬ್ರಹ್ಮೈವಾಹಂ ತಥಾದ್ವಯಮ್ || ೨೧**

೨೧. " ಯಾವ ಆಕಾರವೂ ಇಲ್ಲದ ಆಕಾಶವು ಹೇಗೆ ಸೂಕ್ಷ್ಮವೂ ಅದ್ವಯವೂ ಆಗಿರುವದೋ ಹಾಗೆ ನಾನು ಆ (ಆಕಾಶವು)ಕೂಡ ಇಲ್ಲದ[4] ಅದ್ವಿತೀಯಬ್ರಹ್ಮವೇ ಆಗಿರುವೆನು.

**ಮಮಾತ್ಮಾ ಸ್ವತ ಆತ್ಮೇತಿ ಭೇದೋ ವ್ಯೋಮ್ನೋ ಯಥಾ ಭವೇತ್|**
**ಏಕಸ್ಯ ಸುಷಿಭೇದೇನ ತಥಾ ಮಮ ವಿಕಲ್ಪಿತಃ || ೨೨ ||**

---

1. ಯಾವನಲ್ಲಿ ಮನಸ್ಸನ್ನು ನಿಲ್ಲಿಸಿದರೆ ಸಮಾಧಿಯಾಗುವದೋ ಆವನು ನಿತ್ಯ ಸಮಾಧಿಸ್ವರೂಪನು ; ಯಾವನ ಜ್ಞಾನವನ್ನು ಸಂಪಾದಿಸಿಕೊಂಡರೆ ಮುಕ್ತಿಯಾಗುವದೋ ಅವನು ನಿತ್ಯಮುಕ್ತನು. ಅಂಥ ಈಶ್ವರಸ್ವರೂಪವು ನನ್ನದು ಎಂದು ಭಾವ.

2. ಶ್ವೇ. ೬–೧೧ರ ಅಭಿಪ್ರಾಯವಿದು.

3. ರಾತ್ರಿಯೂ ಇಲ್ಲದೆ ಹಗಲೂ ಇಲ್ಲದೆ ಸಂಧ್ಯಾಕಾಲವೆಲ್ಲಿದ್ದೀತು ?

4. ಅದಕ್ಕಿಂತಲೂ ಸೂಕ್ಷ್ಮವಾದ

೨೨. "ನನ್ನ ಆತ್ಮನು ಸ್ವರೂಪದಿಂದಲೇ ಆತ್ಮನಾದ್ದರಿಂದ ಒಂದೇ ಆಕಾಶಕ್ಕೆ ಛಿದ್ರಭೇದದಿಂದ ಹೇಗೆ ಭೇದವಾಗಿರುವದೋ ಹಾಗೆ ನನಗೂ ವಿಕಲ್ಪಿತ ವಾಗಿರುತ್ತದೆ.[1]

**ಭೇದೋಽಭೇದಸ್ತಥಾ ಚೈಕೋ ನಾನಾ ಚೇತಿ ವಿಕಲ್ಪಿತಃ ।**
**ಜ್ಞೇಯಂ ಜ್ಞಾತಾ ಗತಿರ್ಗನ್ತಾ ಮಯ್ಯೇಕಸ್ಮಿನ್ ಕುತೋ ಭವೇತ್ ॥**

೨೩. ಭೇದ, ಅಭೇದ ; ಒಬ್ಬನು, ಅನೇಕರು ; ಅರಿಯಲ್ಪಡತಕ್ಕದ್ದು, ಅರಿಯುವವನು ; ಹೋಗುವಿಕೆ, ಹೋಗುವವನು– ಎಂದು ವಿಕಲ್ಪಿತವಾಗಿರುವ (ದ್ವೈತವು) ನನ್ನೊಬ್ಬನಲ್ಲಿ ಹೇಗೆ ಇದ್ದೀತು ?

**ನ ಮೇ ಹೇಯಂ ನಚಾದೇಯಮವಿಕಾರೀ ಯತೋ ಹ್ಯಹಮ್ ।**
**ಸದಾ ಮುಕ್ತಸ್ತಥಾ ಶುದ್ಧಃ ಸದಾ ಬುದ್ಧೋಽಗುಣೋಽದ್ವಯಃ ॥ ೨೪**

೨೪. "ನನಗೆ ಬಿಡತಕ್ಕದ್ದಾಗಲಿ ತೆಗೆದುಕೊಳ್ಳತಕ್ಕದ್ದಾಗಲಿ ಇರುವದಿಲ್ಲ ಏಕೆಂದರೆ ನಾನು ಅವಿಕಾರಿಯಾಗಿರುತ್ತೇನೆ ; ಯಾವಾಗಲೂ ಮುಕ್ತನು, ಶುದ್ಧನು, ಯಾವಾಗಲೂ ಚೈತನ್ಯಸ್ವರೂಪನು, ನಿರ್ಗುಣನು, ಅದ್ವಯನು.[2]"

## ಆತ್ಮಸ್ವರೂಪಜ್ಞಾನಕ್ಕೆ ಫಲ

**ಇತ್ಯೇವಂ ಸರ್ವದಾತ್ಮಾನಂ ವಿದ್ಯಾತ್ಸರ್ವಂ ಸಮಾಹಿತಃ ।**
**ವಿದಿತ್ವಾ ಮಾಂ ಸ್ವದೇಹಸ್ಥಂ ಋಷಿರ್ಮುಕ್ತೋ ಧ್ರುವೋ ಭವೇತ್ ॥**
**ಕೃತಕೃತ್ಯಶ್ಚ ಸಿದ್ಧಶ್ಚ ಯೋಗೀ ಬ್ರಾಹ್ಮಣ ಏವ ಚ ।**
**ಯ ಏವಂ ವೇದ ತತ್ತ್ವಾರ್ಥಮನ್ಯಥಾ ಹ್ಯಾತ್ಮಹಾ ಭವೇತ್ ॥ ೨೬ ॥**

---

1. ಆಕಾಶದಲ್ಲಿ ಭೇದವೆಂಬುದು ಬರಿಯ ವಿಕಲ್ಪವೇ ; ಏಕೆಂದರೆ ಎಲ್ಲಾ ಭೂತ ಗಳೂ ಆಕಾಶಮಯವಾಗಿರುವದರಿಂದ ಆಕಾಶಕ್ಕೆ ಭೇದಕವಾದ ಮತ್ತೊಂದು ವಸ್ತುವೇ ನಿಜವಾಗಿರುವದಿಲ್ಲ. ಇದರಂತೆ ಆತ್ಮನಿಂದಲೇ ಆಕಾಶಾದಿಗಳುಂಟಾಗಿರುವದರಿಂದ ಆತ್ಮ ಭೇದವೂ ಬರಿಯ ವಿಕಲ್ಪವೇ. ಆಕಾಶದಲ್ಲಿ ಭೇದವಿರುವಂತೆ ವ್ಯವಹಾರದಲ್ಲಿ ಉಪಾಧಿವಶ ದಿಂದ ಕಲ್ಪಿಸಿರುತ್ತಾರೆ ; ಆತ್ಮನಲ್ಲಿಯೂ ಹಾಗೆಯೇ.

2. ತನಗೆ ಎರಡನೆಯದೆನಿಸಿರುವ ವಸ್ತುವೇ ಇಲ್ಲವ್ದರಿಂದ ಬಿಡತಕ್ಕದ್ದು ಮುಂತಾ ದವುಗಳಿಲ್ಲ. ತನ್ನನ್ನು ವಿಕಾರವನ್ನು ಮಾಡುವ ಅಂಥ ಕಟ್ಟಿಗೆ ಸಿಕ್ಕಿಸುವ, ಅದನ್ನು ಬೆಳ ಗುವ, ಘೂಹ ಅದರ ಗುಣವೆನಿಸುವ ಪದಾರ್ಥವಿಲ್ಲ.

೨೫-೨೬. ಹೀಗೆಂದು ಯಾವಾಗಲೂ ಆತ್ಮನನ್ನು ಸರ್ವವೂ ಎಂದು ಸಮಾಧಾನಚಿತ್ತದಿಂದ ತಿಳಿದುಕೊಳ್ಳಬೇಕು. ತನ್ನ ದೇಹದಲ್ಲಿರುವ ನನ್ನನ್ನು ಅರಿತುಕೊಂಡು ಋಷಿಯೂ[1] ಮುಕ್ತನೂ[2] ಧ್ರುವನೂ[3] ಆಗುವನು. ಯಾವನು ಹೀಗೆಂದು ತತ್ತ್ವಾರ್ಥವನ್ನು ಅರಿತುಕೊಂಡಿರುವನೋ ಅವನು ಕೃತಕೃತ್ಯನೂ ಸಿದ್ಧನೂ ಯೋಗಿಯೂ ಬ್ರಾಹ್ಮಣನೂ[4] (ಆಗಿರುತ್ತಾನೆ). ಹಾಗಿಲ್ಲದವನು ಆತ್ಮಹತ್ಯೆಯನ್ನೇ ಮಾಡಿದವನಾಗುವನು[5]

## ವೇದಾಂತಕ್ಕೆ ಅಧಿಕಾರಿಗಳು

**ವೇದಾರ್ಥೋ ನಿಶ್ಚಿತೋ ಹ್ಯೇಷ ಸಮಾಸೇನ ಮಯೋದಿತಃ |**
**ಸಂನ್ಯಾಸಿಭ್ಯಃ ಪ್ರವಕ್ತವ್ಯಃ ಶಾನ್ತೇಭ್ಯಃ ಶಿಷ್ಟಬುದ್ಧಿನಾ ॥ ೨೭ ॥**

೨೭. ನಾನು ಸಂಗ್ರಹವಾಗಿ ಹೇಳಿರುವ ಇದೇ ನಿಶ್ಚಿತವಾದ ವೇದಾರ್ಥವು. ಇದನ್ನು ಶಿಷ್ಟಬುದ್ಧಿಯಾದವನು ಶಾಂತರಾದ ಸಂನ್ಯಾಸಿಗಳಿಗೆ ಹೇಳಬೇಕು.

——:0:——

# ನಿರ್ವಿಕಲ್ಪಾತ್ಮಪ್ರಕರಣದ ಸಾರ

೧-೫. ಆತ್ಮನಿಗೆ ಚಕ್ಷುರಾದೀಂದ್ರಿಯಗಳಿಲ್ಲದ್ದರಿಂದ ಅವನಿಗೆ ನೋಟ, ಕೇಳುವಿಕೆ-ಮುಂತಾದ ಧರ್ಮಗಳಿಲ್ಲ ; ಪ್ರಾಣವಿಲ್ಲದ್ದರಿಂದ ಕರ್ಮಸಾಮಾನ್ಯವೇ ಇಲ್ಲ ; ಮನಸ್ಸಿಲ್ಲದ್ದರಿಂದ ಜ್ಞಾನಸಾಮಾನ್ಯವೂ ಇಲ್ಲ. ಅವನು ಅಶರೀರನು, ಅಪ್ರಾಣನು, ಅಮನಸ್ಕನು ; ಆದ್ದರಿಂದ ಮುಪ್ಪು ಸಾವು, ಹಸಿವು ಬಾಯಾರಿಕೆ, ಶೋಕ ಮೋಹ-ಎಂಬ ದೋಷಗಳು ಅವನಲ್ಲಿಲ್ಲ. ನಿತ್ಯವಿಜ್ಞಾನಸ್ವರೂಪನಾಗಿರುವದರಿಂದ ಅವನು ಮನಸ್ಸಿನ ಧರ್ಮಗಳಿಂದ ಜ್ಞಾನಾಜ್ಞಾನಗಳಿಗೆ ಆಶ್ರಯನೂ ಅಲ್ಲ, ವಿಷಯನೂ ಅಲ್ಲ.

೬-೮. ಆತ್ಮನಲ್ಲಿ ಅನಿತ್ಯವಾದ ದೃಷ್ಟಿಯೇ ಮುಂತಾದ ಧರ್ಮಗಳಿಲ್ಲದಿದ್ದರೂ ನಿತ್ಯವಾದ ದೃಷ್ಟಿ ಮುಂತಾದವುಗಳ ಸ್ವರೂಪವೇ ಅವನು. ಆ ನಿತ್ಯದೃಷ್ಟಿಸ್ವರೂಪನಾದ ಅವನಿಗೆ ಅನಿತ್ಯವಾದ ದೃಷ್ಟ್ಯಾದಿಗಳು ತಮ್ಮತಮ್ಮ ವಿಷಯಸಮೇತವಾಗಿಯೇ ವಿಷಯವಾಗಿರುತ್ತವೆ. ಕನಸಿನಲ್ಲಿರುವ ವಾಸನಾಮಯವಾದ ವೃತ್ತಿಗಳೂ ಹೀಗೆಯೇ ಅವನಿಗೆ ವಿಷಯವಾಗಿರುತ್ತವೆ. ಆದ್ದರಿಂದ ಆತ್ಮನು ಜಾಗ್ರತ್ಸ್ವಪ್ನಗಳ ಸಂಪರ್ಕವಿಲ್ಲದ ನಿತ್ಯಶುದ್ಧವಾದ ಚೈತನ್ಯರೂಪನೂ ಅದ್ವಿತೀಯನೂ ಆಗಿರುತ್ತಾನೆ.

---

1. ತತ್ತ್ವವನ್ನು ಬಲ್ಲವನು.
2. ಅವಿದ್ಯಾಕೃತಬಂಧಗಳಿಲ್ಲದವನು.
3. ನಿತ್ಯವಾದ ಆತ್ಮತತ್ತ್ವವು.
4. ಬ್ರಹ್ಮವನ್ನು ಬಲ್ಲವನು.
5. ಈ. ಭಾ. ೩ನ್ನು ನೋಡಿ.

೯-೧೦. ಆತ್ಮನ ದೃಷ್ಟಿಯು ಹೀಗೆ ನಿತ್ಯವಾಗಿದ್ದರೂ ಅನಿತ್ಯವಾದ ಮನಸ್ಸಿನ ವೃತ್ತಿಗಳಿಂದ ಆ ಸ್ವರೂಪವನ್ನು ವಿಂಗಡಿಸಿಕೊಳ್ಳದೆ ಇರುವದರಿಂದ ಜನರಿಗೆ ತಾವು ಅನಿತ್ಯವಾದ ದೃಷ್ಟಿಯುಳ್ಳವರೆಂಮೂ ಸಂಸಾರಿಗಳೆಂದೂ ತಪ್ಪುತಿಳಿವಳಿಕೆಯುಂಟಾಗಿರುತ್ತದೆ.

೧೧-೨೪. ಆದ್ದರಿಂದ ಮುಮುಕ್ಷುವಾದವನು ಶ್ರುತ್ಯುಕ್ತವಾದ ಆತ್ಮನ ನಿತ್ಯಶುದ್ಧಬುದ್ಧಮುಕ್ತಸ್ವಭಾವವನ್ನು ಹೀಗೆಂದು ಯಾವಾಗಲೂ ಅನುಸಂಧಾನಮಾಡುತ್ತಿರಬೇಕು: "ನನಗೆ ಚಕ್ಷುರಾದಿಗಳು ಇಲ್ಲವೆಂದು ಬೃಹದಾರಣ್ಯಕದಲ್ಲಿ ಹೇಳಿದೆ. ನಾನು ಹುಟ್ಟಿಲ್ಲದವನೆಂದೂ ಪ್ರಾಣಮನಸ್ಸುಗಳಿಲ್ಲದವನೆಂದೂ ಮುಂಡಕದಲ್ಲಿದೆ. ಶಬ್ದಾದಿಗಳು ಯಾವವೂ ನನ್ನ ಧರ್ಮವಲ್ಲವೆಂದು ಕಾಠಕದಲ್ಲಿದೆ. ಆದ್ದರಿಂದ ನನ್ನ ಸ್ವರೂಪದಲ್ಲಿ ಯಾವದೊಂದು ವಿಕಾರವೂ ಇರುವದಿಲ್ಲ. ಮನಸ್ಸಿನ ಚಾಂಚಲ್ಯವನ್ನು ಕಳೆಯುವದಕ್ಕಾಗಿ ಮಾಡಬೇಕಾದ ಯೋಗಾದಿಗಳೂ ನನ್ನ ನಿಜವಾದ ಸ್ವರೂಪದ ದೃಷ್ಟಿಯಿಂದ ನೋಡಿದಾಗ ಬೇಕಾಗುವದಿಲ್ಲ. ಯಾವ ತತ್ತ್ವವನ್ನು ಧ್ಯಾನಮಾಡಿದರೆ ಜನರು ಕೃತಕೃತ್ಯರಾಗುವರೋ ಆ ತತ್ತ್ವವೇ ನನ್ನ ನಿಜವಾದ ಸ್ವರೂಪವು. ನಾನು ಅಜವೂ ಅಜರವೂ ಅಮೃತವೂ ಆಗಿರುವ ಬ್ರಹ್ಮವೇ; ಸರ್ವಭೂತಗಳಲ್ಲಿರುವ ಜ್ಞಾತೃವಿನ ನಿಜಸ್ವರೂಪವೂ ನಾನೇ. ನಾನು ಸರ್ವಸಾಕ್ಷಿಯೂ ನಿರ್ಗುಣವೂ ಆಗಿರುವ ಚೈತನ್ಯಸ್ವರೂಪನು. ಆಕಾಶವು ಮಿಕ್ಕ ಎಲ್ಲಾ ಭೂತಗಳನ್ನೂ ವ್ಯಾಪಿಸಿಕೊಂಡಿರುವ ಸೂಕ್ಷ್ಮವಸ್ತುವಷ್ಟೆ, ನಾನು ಅದಕ್ಕಿಂತಲೂ ಸೂಕ್ಷ್ಮನೂ ವ್ಯಾಪಕನೂ ಆಗಿರುತ್ತೇನೆ. ನನ್ನ ಸ್ವರೂಪವೇ ಆತ್ಮನೆಂಬುದು; ಮಿಕ್ಕದ್ದೆಲ್ಲವೂ ಉಪಾಧಿಯ ಅಪೇಕ್ಷೆಯಿಂದ ಈ ನನ್ನ ಸ್ವರೂಪದಲ್ಲಿ ಕಲ್ಪಿತವಾಗಿರುತ್ತದೆ. ಇದು ಇದಕ್ಕಿಂತ ಭಿನ್ನವು, ಅಥವಾ ಅಭಿನ್ನವು; ತತ್ತ್ವವು ಒಂದು, ಅಥವಾ ಅನೇಕವು; ಇದು ಜ್ಞೇಯವು, ನಾನು ಜ್ಞಾತೃವು; ಇದು ಗತಿ, ನಾನು ಗಂತೃ- ಮುಂತಾಗಿರುವ ದ್ವೈತವು ಯಾವದೂ ಪರಮಾರ್ಥವಾಗಿರುವದಿಲ್ಲ. ನಾನು ಹಾನೋಪಾದಾನರಹಿತನಾದ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದ ಅದ್ವಿತೀಯಪರಮಾತ್ಮನು."

೨೫-೨೭. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನೇ ಕೃತಕೃತ್ಯನು, ಸಿದ್ಧನು, ಯೋಗಿಯು. ಇದನ್ನು ಅರಿತುಕೊಳ್ಳದೆ ಇರುವವನು ಆತ್ಮಹತ್ಯೆಯನ್ನು ಮಾಡಿಕೊಂಡವನಾಗುತ್ತಾನೆ. ಇದೇ ಸರ್ವವೇದಾಂತಸಿದ್ಧಾಂತಸಂಗ್ರಹವು. ಶಮಾದಿಗುಣಸಂಪನ್ನರಾದ ಸಂನ್ಯಾಸಿಗಳು ಇದಕ್ಕೆ ಮುಖ್ಯಾಧಿಕಾರಿಗಳು.



# ೧೪. ಕೂಟಸ್ಥಾತ್ಮ*

## ಆತ್ಮನು ದ್ರಷ್ಟೃ, ಅಂತಃಕರಣವು ದೃಶ್ಯ

**ಸ್ವಪ್ನಸ್ಮೃತ್ಯೋರ್ಘಟಾದೇರ್ಹಿ ರೂಪಾಭಾಸಃ ಪ್ರದೃಶ್ಯತೇ ।**
**ಪುರಾ ನೂನಂ ತದಾಕಾರಾ ಧೀರ್ದೃಷ್ಟೇತ್ಯನುಮೀಯತೇ ॥ ೧ ॥**

೧. ಕನಸುನೆನಹುಗಳಲ್ಲಿ ಗಡಿಗೆಯೇ ಮುಂತಾದವುಗಳ ರೂಪದಂತಿರುವ (ವೃತ್ತಿಯು) ಕಾಣಬರುತ್ತದೆ. (ಆದ್ದರಿಂದ) ಮುಂಚೆ[1] ಆ ಆಕಾರವಾಗಿರುವ ಬುದ್ಧಿ(ವೃತ್ತಿ)ಯನ್ನು ನೋಡಿದ್ದೆವು ಎಂದು ಅನುಮಾನಿಸಬಹುದಾಗಿದೆ.

**ಭಿಕ್ಷಾಮಟನ್ ಯಥಾ ಸ್ವಪ್ನೇ ದೇಹೋ ನ ಸ ಸ್ವಯಮ್ ।**
**ಜಾಗ್ರದ್ದೃಶ್ಯಾತ್ ತಥಾ ದೇಹಾದ್ ದ್ರಷ್ಟೃತ್ವಾದನ್ಯ ಏವ ಸಃ ॥ ೨ ॥**

೨. ಕನಸಿನಲ್ಲಿ ಭಿಕ್ಷಾಟನೆಮಾಡುತ್ತಿರುವ ಆ ದೇಹವು ಹೇಗೆ ತಾನಲ್ಲವೋ, ಅದರಂತೆ ಎಚ್ಚರದಲ್ಲಿ ಕಾಣುವ ದೇಹಕ್ಕಿಂತ ತಾನು (ಅದನ್ನು) ನೋಡುವವನಾಗಿರುವದರಿಂದ ಬೇರೆಯೇ.

**ಮೂಷಾಸಿಕ್ತಂ ಯಥಾ ತಾಮ್ರಂ ತನ್ನಿಭಂ ಜಾಯತೇ ತಥಾ ।**
**ರೂಪಾದೀನ್ ವ್ಯಾಪ್ನುವಚ್ಚಿತ್ತಂ ತನ್ನಿಭಂ ದೃಶ್ಯತೇ ಧ್ರುವಮ್ ॥ ೩ ॥**
**ವ್ಯಞ್ಜಕೋ ವಾ ಯಥಾಲೋಕೋ ವ್ಯಙ್ಗ್ಯಸ್ಯಾಕಾರತಾಮಿಯಾತ್ ।**
**ಪದಾರ್ಥವ್ಯಞ್ಜಕತ್ವಾದ್ಧೀರರ್ಥಾಕಾರಾ ಪ್ರದೃಶ್ಯತೇ ॥ ೪ ॥**

೩-೪. (ಕರಗಿಸಿ) ಮೂಸೆಯಲ್ಲಿ ಹೊಯ್ದ ತಾಮ್ರವು ಹೇಗೆ ಅದರಂತೆ[2] ಆಗುವದೋ (ಹಾಗೆ) ರೂಪವೇ ಮುಂತಾದವುಗಳನ್ನು ವ್ಯಾಪಿಸುವ ಚಿತ್ತವು ಅವುಗಳಂತೆಯೇ ಕಾಣುತ್ತಿರುವದೆಂಬುದು ನಿಶ್ಚಯವು[3]. ಅಥವಾ (ವಸ್ತುವನ್ನು) ವ್ಯಕ್ತಗೊಳಿಸುವ ಬೆಳಕು ಹೇಗೆ (ತಾನು) ಬೆಳಗಿಸುವ (ವಸ್ತುವಿನ) ಆಕಾರವನ್ನು ತಳೆಯುವದೋ, ಹಾಗೆ ಸರ್ವವಸ್ತುಗಳನ್ನೂ ತೋರಿಸುವದರಿಂದ

---

* ಇದನ್ನು ವ್ಯಾಖ್ಯಾನಕಾರರು ಸ್ವಪ್ನಸ್ಮೃತಿಪ್ರಕರಣವೆಂದು ಕರೆದಿರುತ್ತಾರೆ.

1. ಎಚ್ಚರದಲ್ಲಿ, ಅಥವಾ ಅನುಭವದಲ್ಲಿ ಎಂದರ್ಥ. ಸ್ಮೃತಿಯನ್ನು ಇಲ್ಲಿ ಮನೋರಥಕ್ಕೂ ಭ್ರಾಂತಿಗೂ ಉಪಲಕ್ಷಣವಾಗಿ ಉಪಯೋಗಿಸಿದೆ.

2. ಮೂಸೆಯಂತೆ.

3. ಕಾಣುತ್ತಿದೆ ಎಂದು ಅನುಮಾನಿಸಬಹುದು _ಎಂದು ಅಭಿಪ್ರಾಯ. 'ಧ್ರುವಮ್' ಎಂಬುದು ಇದು ಅನುಮಾನವೆಂಬುದನ್ನು ಸೂಚಿಸುವ ಮಾತು.

ಅಂತಃಕರಣವು ಎಲ್ಲಾ ವಸ್ತುಗಳನ್ನೂ ವ್ಯಕ್ತಪಡಿಸತಕ್ಕದ್ದಾದ್ದರಿಂದ (ಆಯಾ) ವಸ್ತುವಿನ ಆಕಾರವುಳ್ಳದ್ದಾಗಿ ತೋರುತ್ತದೆ[1].

**ಧೀರೇವಾರ್ಥಸ್ವರೂಪಾ ಹಿ ಪುಂಸಾ ದೃಷ್ಟಾ ಪುರಾಪಿ ಚ ।**
**ನ ಚೇತ್ ಸ್ವಪ್ನೇ ಕಥಂ ಪಶ್ಯೇತ್ ಸ್ಮರತೋ ವಾಕೃತಿಃ ಕುತಃ ॥ ೫ ॥**

೫. ಅಂತಃಕರಣವೇ ಮೊದಲೂ ವಿಷಯದ ರೂಪವಾಗಿ ಮನುಷ್ಯನಿಗೆ ತೋರಿರಬೇಕು. ಇಲ್ಲದಿದ್ದರೆ ಕನಸಿನಲ್ಲಿ ಹೇಗೆ ಕಂಡಾನು ? ನೆನಸಿಕೊಂಡವನಿಗೆ ಆಕಾರವಾದರೂ ಎಲ್ಲಿಂದ (ಬರಬೇಕು)[2] ?

**ವ್ಯಞ್ಜಕತ್ವಂ ತದೇವಾಸ್ಯಾ ರೂಪಾದ್ಯಾಕಾರದೃಶ್ಯತಾ ।**
**ದ್ರಷ್ಟೃತ್ವಂ ಚ ದೃಶೇಸ್ತದ್ವದ್ವ್ಯಾಪ್ತಿಃ ಸ್ಯಾದ್ಧಿಯ ಉದ್ಭವೇ ॥ ೬ ॥**

೬. ಆ ಅಂತಃಕರಣವು ರೂಪವೇ ಮುಂತಾದವುಗಳ ಆಕಾರವನ್ನು ತಳೆಯುವದೇ ಇದರ ವ್ಯಂಜಕತ್ವವು[3]. ಮತ್ತು (ಈ) ಅಂತಃಕರಣದ ವೃತ್ತಿಯು ಹುಟ್ಟುವಾಗ ಅದನ್ನು ವ್ಯಾಪಿಸಿಕೊಳ್ಳುವದೇ ಆತ್ಮನ ದ್ರಷ್ಟೃತ್ವವು[4].

## ಎಲ್ಲಾ ಜೀವರುಗಳಿಗೂ ಒಬ್ಬನೇ ಆತ್ಮನು

**ಚಿನ್ಮಾತ್ರಜ್ಯೋತಿಷಾ ಸರ್ವಾಃ ಸರ್ವದೇಹೇಷು ಬುದ್ಧಯಃ ।**
**ಮಯಾ ಯಸ್ಮಾತ್ ಪ್ರಕಾಶ್ಯನ್ತೇ ಸರ್ವಸ್ಯಾತ್ಮಾ ತತೋ ಹ್ಯಹಮ್ ॥**

---

1. ಅಂತಃಕರಣವು ವ್ಯಂಜಕವಾಗುತ್ತದೆ, ವಸ್ತುಗಳನ್ನು ತಿಳಿಸುತ್ತದೆ ಎನ್ನುವಾಗ ಆಯಾ ವಿಷಯದ ಆಕಾರವನ್ನು ತಾಳಿಯೇ ತಿಳಿಸುತ್ತದೆ.

2. ಕನಸುನೆನಸುಗಳಲ್ಲಿ ವಿಷಯವಿಲ್ಲದಿದ್ದರೂ ವಿಷಯದ ಆಕಾರದಲ್ಲಿ ತೋರುವದರಿಂದ ವಿಷಯದ ಜ್ಞಾನವಾಗುವಾಗಲೂ ಅಂತಃಕರಣವು ವಿಷಯಾಕಾರವಾಗಿ ಪರಿಣಮಿಸಿರಬೇಕು ಎಂದು ಅನುಮಾನಮಾಡಬಹುದು. ಆದ್ದರಿಂದ ಪ್ರತ್ಯಕ್ಷಪರೋಕ್ಷಜ್ಞಾನಗಳಿಗೆ ಅಂತಃಕರಣದ ಪರಿಣಾಮಭೇದವೇ ಕಾರಣವೆನ್ನಬೇಕಾಯಿತು.

3. ವಸ್ತುವನ್ನು ನೇರಾಗಿ ಬೆಳಗುವದೇನೂ ಆದರ ಕಾರ್ಯವಲ್ಲ ಎಂದು ಭಾವ. ಅಂತಃಕರಣದಲ್ಲಿ ಚಿದಾಭಾಸವಿರುತ್ತಿದ್ದರೂ ಅದು ಚಿತ್ತಿನ ಆಭಾಸವೇ ಆಗಿರುವದರಿಂದ ಅದನ್ನು ಇಲ್ಲಿ ಲೆಕ್ಕಕ್ಕೆ ಹಿಡಿದಿಲ್ಲ.

4. ನೋಡುವದೆಂಬ ವ್ಯಾಪಾರರೂಪವಾದ ಕ್ರಿಯೆಯೇನೂ ಆತ್ಮನಲ್ಲಿ ಆಗುವದಿಲ್ಲ. ಆದ್ದರಿಂದ ಆತ್ಮನು ಕೂಟಸ್ಥನೇ. ಅಂತಃಕರಣವು ಚಿದ್ವ್ಯಾಪ್ತವಾಗಿ ಚಿದಾಭಾಸವಾಗಿ ವಸ್ತುವನ್ನು ಬೆಳಗುತ್ತದೆಯಾದರೂ ಅದಕ್ಕೆ ವಸ್ತುವಿನಾಕಾರವಾಗಿ ಪರಿಣಮಿಸುವ ವ್ಯಾಪಾರವೇ ಮುಖ್ಯವಾದ ಕೆಲಸ.

೭. ಕೇವಲ ಚಿದ್ರೂಪವಾದ ಬೆಳಕಿನಿಂದ ಎಲ್ಲಾ ದೇಹಗಳಲ್ಲಿಯೂ ಇರುವ ಬುದ್ಧಿಗಳೆಲ್ಲವನ್ನೂ ನಾನೇ ಬೆಳಗುತ್ತಿರುವೆನಷ್ಟೆ[1] ; ಆದ್ದರಿಂದ ನಾನು ಎಲ್ಲರಿಗೂ ಆತ್ಮನೇ.

## ಆತ್ಮನು ಕ್ರಿಯಾಕಾರಕಫಲವಿಲಕ್ಷಣನು

**ಕರಣಂ ಕರ್ಮ ಕರ್ತಾ ಚ ಕ್ರಿಯಾ ಸ್ವಪ್ನೇ ಫಲಂ ಚ ಧೀಃ ।**
**ಜಾಗ್ರತ್ಯೇವಂ ಯತೋ ದೃಷ್ಟಾ ದ್ರಷ್ಟಾ ತಸ್ಮಾದತೋ ಹ್ಯಹಮ್ ॥ ೮ ॥**

೮. ಸ್ವಪ್ನದಲ್ಲಿ, ಕರಣವು, ಕರ್ಮ, ಕರ್ತೃ, ಕ್ರಿಯೆ, ಫಲ[2]– ಎಲ್ಲವೂ ಅಂತಃಕರಣವೇ. ಎಚ್ಚರದಲ್ಲಿಯೂ (ಅದು) ಹೀಗೆಯೇ ಕಾಣುತ್ತದೆಯಷ್ಟೆ ; ಆದ್ದರಿಂದ ದ್ರಷ್ಟೃವಾದ[3] ಆತ್ಮನು ಅದಕ್ಕಿಂತ ವಿಲಕ್ಷಣನು.

## ಆತ್ಮನು ಹೇಯೋಪಾದೇಯರಹಿತನು

**ಬುದ್ಧ್ಯಾದೀನಾಮನಾತ್ಮತ್ವಂ ಹೇಯೋಪಾದೇಯರೂಪತಃ ।**
**ಹಾನೋಪಾದಾನಕರ್ತಾತ್ಮಾ ನ ತ್ಯಾಜ್ಯೋ ನ ಚ ಗೃಹ್ಯತೇ ॥ ೯ ॥**

೯. ಬುದ್ಧಿಯೇ ಮುಂತಾದವುಗಳು ಬಿಡಲ್ಪಡುವ ಮತ್ತು ತೆಗೆದುಕೊಳ್ಳಲ್ಪಡುವ ರೂಪವಾಗಿರುವದರಿಂದ ಅನಾತ್ಮವೆನಿಸಿರುವವು. ಆದರೆ ಬಿಡುವದು, ತೆಗೆದುಕೊಳ್ಳುವದು– ( ಇವೆರಡಕ್ಕೂ ) ಕರ್ತೃವಾಗಿರುವದರಿಂದ ಆತ್ಮನು ಬಿಡಲ್ಪಡತಕ್ಕವನೂ ಅಲ್ಲ, ತೆಗೆದುಕೊಳ್ಳಲ್ಪಡುವವನೂ ಅಲ್ಲ.

**ಸಬಾಹ್ಯಾಭ್ಯನ್ತರೇ ಶುದ್ಧೇ ಪ್ರಜ್ಞಾನೈಕರಸೇ ಘನೇ ।**
**ಬಾಹ್ಯಮಭ್ಯನ್ತರಂ ಚಾನ್ಯತ್ ಕಥಂ ಹೇಯಂ ಪ್ರಕಲ್ಪ್ಯತೇ ॥ ೧೦ ॥**

೧೦. ಒಳಗೂ ಹೊರಗೂ ಶುದ್ಧನಾಗಿ ಪ್ರಜ್ಞಾನೈಕರಸವಾದ ಗಟ್ಟಿಯಾದ ಆತ್ಮವಲ್ಲಿ ಒಳಗಿನ ಅಥವಾ ಹೊರಗಿನ ಹೇಯವನ್ನು ಹೇಗೆ ಕಲ್ಪಿಸುವದು ?

---

1. ಅಂತಃಕರಣವನ್ನು ಬೆಳಗುವ ಸಾಕ್ಷಿಸ್ವರೂಪವಾದ ಚೈತನ್ಯವು ಒಂದೊಂದು ಅಂತಃಕರಣಕ್ಕೆ ಒಂದೊಂದು ಇರುವದೆಂಬುವನ್ನು ಕಲ್ಪಿಸುವದಕ್ಕೂ ಆಗುವದಿಲ್ಲ.

2. ಫಲವೆಂದರೆ ಕೊನೆಯಲ್ಲಿ ಅರಿತೆನೆಂಬಾಕಾರದ ವೃತ್ತಿಯಾಗುವದು ; ಅದು ಚೈತನ್ಯವ್ಯಾಪ್ತವಾಗಿರುವದರಿಂದ ಚಿದಾಭಾಸವಾಗಿರುತ್ತದೆ. ಆದರೆ ನಿಜವಾಗಿ ಅರಿವಿನ ರೂಪದ ಫಲವೆಂದರೆ ಕೂಟಸ್ಥವಾದ ಆತ್ಮಚೈತನ್ಯವೇ. ಉಪ. ಗದ್ಯ. ೫೧, ೫೩, ೫೮ ನೋಡಿ.

3. ಕ್ರಿಯಾಕಾರಕಫಲಗಳೆಲ್ಲವನ್ನೂ ಬೆಳಗುವ ಸಾಕ್ಷಿಯಾದ.

## ಆತ್ಮಜ್ಞಾನಿಗೆ ಕರ್ತವ್ಯವಿಲ್ಲ

**ಯ ಆತ್ಮಾ ನೇತಿ ನೇತೀತಿ ಪರಾಪೋಹೇನ ಶೇಷಿತಃ ।**
**ಸ ಚೇದ್ಬ್ರಹ್ಮವಿದಾತ್ಮೇಷ್ಟೋ ಯತೇತಾತಃ ಪರಂ ಕಥಮ್ ॥ ೧೧ ॥**

೧೧. 'ನೇತಿ ನೇತಿ' (ಅದಲ್ಲ, ಅದಲ್ಲ) ಎಂದು ಮಿಕ್ಕದ್ದೆಲ್ಲವನ್ನೂ ತಳ್ಳಿಹಾಕಿ ಉಳಿಸಿಕೊಂಡಿರುವ ಆತ್ಮನೇ ಬ್ರಹ್ಮಜ್ಞಾನಿಯ ಆತ್ಮನೆಂದಾದಮೇಲೆ ಅಲ್ಲಿಂದ ಮುಂದಕ್ಕೆ ಅವನು ಹೇಗೆತಾನೆ (ಕರ್ಮವನ್ನು ಮಾಡುವದಕ್ಕೆ) ಯತ್ನಿಸುವನು[1] ?

**ಅಶನಾಯಾದ್ಯತಿಕ್ರಾಂತಂ ಬ್ರಹ್ಮೈವಾಸ್ಮಿ ನಿರಂತರಮ್ ।**
**ಕಾರ್ಯವಾನ್ ಸ್ಯಾಂ ಕಥಂ ಚಾಹಂ ವಿಮೃಶೇದೇವಮಂಜಸಾ॥೧೨॥**

೧೨. "ಹಸಿವು ಮುಂತಾದವುಗಳನ್ನು[2] ಮೀರಿರುವ ನಿರಂತರವಾದ[3] ಬ್ರಹ್ಮವೇ ನಾನಾಗಿರುವೆನು. (ಹೀಗಿರುವಲ್ಲಿ) ಕಾರ್ಯವುಳ್ಳವನು ಹೇಗಾದೇನು?" ಎಂದೀ ಪರಿಯಲ್ಲಿ ಚೆನ್ನಾಗಿ ವಿಮರ್ಶೆಮಾಡಬೇಕು[4].

**ಪಾರಗಸ್ತು ಯಥಾ ನದ್ಯಾಸ್ತತ್ಸ್ಥಃ ಪಾರಂ ಯಿಯಾಸತಿ ।**
**ಆತ್ಮಜ್ಞಶ್ಚೇತ್ ತಥಾ ಕಾರ್ಯಂ ಕರ್ತುಮನ್ಯದಿಹೇಚ್ಛತಿ ॥ ೧೩ ॥**

೧೩. ನದಿಯ ದಡವನ್ನು ಮುಟ್ಟಿದವನು ಅಲ್ಲಿಯೇ ಇದ್ದುಕೊಂಡು ದಡವನ್ನು ಬಯಸುವನೆಂಬುದು ಹೇಗೋ ಆತ್ಮಜ್ಞನೆನಿಸಿಕೊಂಡವನಾದರೆ ಮತ್ತೇನಾದರೂ ಕಾರ್ಯವನ್ನು ಮಾಡಬೇಕೆಂದು ಇಚ್ಛಿಸುತ್ತಾನೆಂಬುದೂ ಹಾಗೆಯೇ[5].

**ಆತ್ಮಜ್ಞಸ್ಯಾಪಿ ಯಸ್ಯ ಸ್ಯಾದ್ಧಾನೋಪಾದಾನತಾ ಯದಿ ।**
**ನ ಮೋಕ್ಷಾರ್ಹಃ ಸ ವಿಜ್ಞೇಯೋ ವಾನ್ತೋಽಸೌ ಬ್ರಹ್ಮಣಾ ಧ್ರುವಮ್॥**

---

1. ಕರ್ತೃತ್ವಾದಿಕಾರಕರೂಪವಾದ ವಿಶೇಷಗಳಿದ್ದವನು ಕರ್ಮವನ್ನು ಮಾಡುವದಕ್ಕೆ ಯತ್ನಿಸಬಹುದು. ನಿರ್ವಿಶೇಷನಿಗೆ ಕರ್ಮವು ಎಲ್ಲಿಂದ ಬಂದೀತು ?
2. ಹಸಿವು, ಬಾಯಾರಿಕೆ, ಮುಪ್ಪು, ಮರಣ, ಶೋಕ, ಮೋಹ- ಇವುಗಳನ್ನು.
3. ಭೇದವಿಲ್ಲದ ಎಂದರ್ಥ ; ಬ್ರಹ್ಮಕ್ಕೂ ಜೀವನಿಗೂ ಎಳ್ಳಷ್ಟೂ ಭೇದವಿಲ್ಲ.
4. ದೋಷವುಳ್ಳವನು ಅದನ್ನು ಹೋಗಲಾಡಿಸಿಕೊಳ್ಳುವದಕ್ಕೆ ಯತ್ನಿಸಬಹುದು.
5. ತಾನು ಪಡೆಯಬೇಕಾಗಿರುವ ಫಲವು ಹೊಸದಾಗಿ ಸಿಕ್ಕತಕ್ಕದ್ದಾಗಿರಬೇಕು; ಅದು ಪ್ರಾಪ್ತವಾಗಿಯೇ ಇದ್ದರೆ ಅದಕ್ಕಾಗಿ ಮಾಡತಕ್ಕದ್ದು ಏನೂ ಉಳಿದಿರುವದಿಲ್ಲ. ಅದ್ವಿತೀಯನಾದ ಪರಮಾತ್ಮನು ನಿತ್ಯಪ್ರಾಪ್ತನಾಗಿ ತನ್ನ ಸ್ವರೂಪನೇ ಆಗಿರುವದರಿಂದ ಅವನ ಪ್ರಾಪ್ತಿಗಾಗಿ ಪ್ರಯತ್ನವನ್ನು ಮಾಡತಕ್ಕದ್ದು ಏನೂ ಇರುವದಿಲ್ಲ.

೧೪. ಆತ್ಮಜ್ಞನಾದರೂ ಯಾವನಿಗೆ ಬಿಡತಕ್ಕದ್ದೂ ತೆಗೆದುಕೊಳ್ಳ ತಕ್ಕದ್ದೂ ಇರುವದೆಂದಾಗುವದೋ ಅವನು ಮೋಕ್ಷಕ್ಕೆ ತಕ್ಕವನಲ್ಲವೆಂದು ತಿಳಿಯಬೇಕು[1]; ಅವನು ನಿಶ್ಚಯವಾಗಿಯೂ ಬ್ರಹ್ಮನು ಓಕರಿಸಿದವನು[2].

**ಸಾದಿತ್ಯಂ ಹಿ ಜಗತ್ಪ್ರಾಣಸ್ತಸ್ಮಾನ್ನಾಹರ್ನಿಶೈವ ವಾ ।**
**ಪ್ರಾಣಜ್ಞಸ್ಯಾಪಿ ನ ಸ್ಯಾತಾಂ ಕುತೋ ಬ್ರಹ್ಮವಿದೋಽದ್ವಯೇ ॥ ೧೫ ॥**

೧೫. ಸೂರ್ಯಸಹಿತವಾದ ಜಗತ್ತೆಲ್ಲವೂ ಪ್ರಾಣನಾಗಿರುವದು. ಆದ್ದರಿಂದ ಪ್ರಾಣೋಪಾಸಕನಿಗೆ ಕೂಡ ಹಗಲಾಗಲಿ ರಾತ್ರಿಯಾಗಲಿ ಇರುವದಿಲ್ಲ. ಹೀಗಿರುವಲ್ಲಿ ಬ್ರಹ್ಮಜ್ಞಾನಿಗೆ ಅದ್ವಯನಾದ (ಅವನ ಆತ್ಮ)ನಲ್ಲಿ ಅವು ಹೇಗೆ ಇದ್ದಾವು[3] ?

**ನ ಸ್ಮರತ್ಯಾತ್ಮನೋ ಹ್ಯಾತ್ಮಾ ವಿಸ್ಮರೇದ್ವಾಪ್ಯಲುಪ್ತಚಿತ್ ।**
**ಮನೋಽಪಿ ಸ್ಮರತೀತ್ಯೇತಜ್ಜ್ಞಾನಮಜ್ಞಾನಹೇತುಜಮ್ ॥ ೧೬ ॥**

೧೬. ಲೋಪವಿಲ್ಲದ ಚೈತನ್ಯರೂಪನಾದ ಆತ್ಮನು ತನ್ನ ಸ್ವರೂಪವನ್ನು ನೆನಪಿಗೆ ತಂದುಕೊಳ್ಳುವದೆಂಬುದಾಗಲಿ ಮರೆಯುವದೆಂಬುದಾಗಲಿ ಇಲ್ಲ. ಮನಸ್ಸು ಆತ್ಮನನ್ನು ಸ್ಮರಿಸುತ್ತದೆ ಎಂಬ ತಿಳಿವಳಿಕೆಯೂ ತಪ್ಪುತಿಳಿವಳಿಕೆ ಎಂಬ ಕಾರಣದಿಂದಾದದ್ದು[4].

**ಜ್ಞಾತುರ್ಜ್ಞೇಯಃ ಪರೋ ಹ್ಯಾತ್ಮಾ ಸೋಽವಿದ್ಯಾಕಲ್ಪಿತಃ ಸ್ಮೃತಃ ।**
**ಅಪೋಢೇ ವಿದ್ಯಯಾ ತಸ್ಮಿನ್ ರಜ್ಜ್ವಾಂ ಸರ್ಪ ಇವಾದ್ವಯಃ ॥೧೭॥**

---

1. ಕರ್ತೃತ್ವವು ಸದಾ ಇರುವದಾದರೆ ದುಃಖದಿಂದ ಬಿಡುಗಡೆಯು ಎಂದಿಗೂ ಆಗಲಾರದು.

2. ನರಕದೊಳಗೆ ತೊಳಲುತ್ತಿರಲೆಂದು ಬ್ರಹ್ಮನು ಓಕರಿಸಿದ ಕ್ರಿಮಿಯೇ.

3. ಸೂರ್ಯಾಂತರ್ಗತನಾದ ಪ್ರಾಣನನ್ನು ಎಂದರೆ ಹಿರಣ್ಯಗರ್ಭನನ್ನು ಉಪಾಸನೆ ಮಾಡುವವನೇ ಕಾಲಾತೀತನಾಗಿರುವನು. ಅದ್ವಿತೀಯನಾದ ಬ್ರಹ್ಮವು ತನ್ನ ಆತ್ಮನೆಂದು ಅರಿತುಕೊಂಡಿರುವ ಜ್ಞಾನಿಗೆ ಕಾಲದ ಸೋಂಕು ಎಲ್ಲಿಂದ ಬರುವದು ?

4. ಆತ್ಮನು ಮನಸ್ಸಿಗೆ ವಿಷಯನಲ್ಲವಾದ್ದರಿಂದ ಅದು ಆತ್ಮನನ್ನು ಚಿಂತಿಸಲಾರದು. ಆತ್ಮನು ತನಗೆ ತಾನು ಪರೋಕ್ಷನಾಗಲಾರನಾದ್ದರಿಂದ ಆತ್ಮನನ್ನು ಚಿಂತಿಸದೇಕಾದ ಅವಶ್ಯಕತೆಯಿರುವದಿಲ್ಲ. ಆದ್ದರಿಂದ ಜ್ಞಾನಿಗೆ ಆತ್ಮಚಿಂತನೆಯ ಆವಶ್ಯಕತೆಯೂ ಇಲ್ಲ ಎಂದು ಭಾವ.

೧೭. ಅರಿಯುವಾತನಿಗೆ ಜ್ಞೇಯನೆನಿಸುವ ಪರಮಾತ್ಮನೆಂಬವನು ಅವಿದ್ಯಾಕಲ್ಪಿತನೆನಿಸಿರುವನು. ಹಗ್ಗದಲ್ಲಿ ಹಾವಿನಂತಿರುವ ಆ (ಕಲ್ಪಿತರೂಪ) ವನ್ನು ಜ್ಞಾನದಿಂದ ಕಳೆಯಲಾಗಿ ಅದ್ವಯನೇ ಆಗಿರುತ್ತಾನೆ[1].

**ಕರ್ತೃಕರ್ಮಫಲಾಭಾವಾತ್ ಸಬಾಹ್ಯಾಭ್ಯಂತರಂ ಹ್ಯಜಮ್ |**
**ಮಮಾಹಂ ವೇತಿ[2] ಯೋ ಭಾವಃ ಕಸ್ಮಿನ್[3] ಕಸ್ಯ ಕುತೋ ಭವೇತ್||**

೧೮. ಕರ್ತೃ, ಕರ್ಮ, ಫಲ- (ಯಾವದೂ) ಇಲ್ಲದ್ದರಿಂದ ಒಳಗೂ ಹೊರಗೂ ಜನ್ಮರಹಿತವಾದ ( ಆತ್ಮತತ್ತ್ವವೊಂದೇ ಇರುತ್ತದೆ ). ನಾನು ನನ್ನದು ಎಂಬ ಭಾವವಿದೆಯಲ್ಲ, (ಅದು) ಯಾರಲ್ಲಿ ಯಾರಿಗೆ ಏತರಿಂದ ಆದೀತು[4] ?

**ಆತ್ಮಾ ಹ್ಯಾತ್ಮೀಯ ಇತ್ಯೇಷ ಭಾವೋಽವಿದ್ಯಾಪ್ರಕಲ್ಪಿತಃ ।**
**ಆತ್ಮೈಕತ್ವೇ ಹ್ಯಸೌ ನಾಸ್ತಿ ಬೀಜಾಭಾವೇ ಕುತಃ ಫಲಮ್ ॥ ೧೯ ॥**

೧೯. ಏಕೆಂದರೆ ತಾನು ತನ್ನದು ಎಂಬೀ ಭಾವವು ಅವಿದ್ಯೆಯಿಂದ ಕಲ್ಪಿತವಾಗಿರುತ್ತದೆ. ಆತ್ಮನು ಒಬ್ಬನೇ ಆಗಿದ್ದರೆ ಅದು[5] ಇರುವದಿಲ್ಲ. ಬೀಜವೇ ಇಲ್ಲದಿದ್ದರೆ ಫಲವು ಎಲ್ಲಿಂದ ಬರಬೇಕು[6] ?

**ದ್ರಷ್ಟೃ ಶ್ರೋತೃ ತಥಾ ಮಂತೃ ವಿಜ್ಞಾತ್ರೇವ ತದಕ್ಷರಮ್ |**
**ದ್ರಷ್ಟ್ರಾದ್ಯನ್ಯನ್ನ ತದ್ಯಸ್ಮಾತ್ ತಸ್ಮಾದ್ದ್ರಷ್ಟಾಹಮಕ್ಷರಮ್ ॥ ೨೦ ॥**

---

1. ಆತ್ಮನನ್ನು ಅರಿಯಬೇಕು, ಉಪಾಸನೆಮಾಡಬೇಕು- ಎಂಬ ಭಾವನೆಯು ಅವಿದ್ಯೆಯಿಂದಾದದ್ದು ; ಏಕೆಂದರೆ ತನಗಿಂತ ಬೇರೆಯಾಗಿರುವ ಜ್ಞೇಯ ಅಥವಾ ಉಪಾಸ್ಯವು ನಿಜವಾಗಿ ಇರುವದಿಲ್ಲ. ಆದ್ದರಿಂದ ಜ್ಞಾನದಿಂದ ಅಜ್ಞಾನವು ಹೋದರೆ ಜ್ಞೇಯತ್ವವಾಗಲಿ ಉಪಾಸ್ಯತ್ವವಾಗಲಿ ಉಳಿದುಕೊಳ್ಳುವದಿಲ್ಲ.

2. 'ವೇತ್ತಿ' ಎಂಬ ಮೈ॥ ಸಿ॥ ಪಾಠವು ತಪ್ಪು.

3. 'ತಸ್ಮಿನ್' ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

4. ಭಾವಸ್ತಸ್ಮಿನ್ ಎಂದಿದ್ದರೆ 'ಆ ಆತ್ಮತತ್ತ್ವದಲ್ಲಿ ಯಾರಿಗೆ ಏತರಿಂದ ಆಗುವದು?' ಎಂದು ಅರ್ಥಮಾಡಬಹುದು. ವ್ಯಾಖ್ಯಾನದಲ್ಲಿ 'ಭಾವೋಽತಸ್ಮಿನ್' ಎಂಬ ಪಾಠವನ್ನಿಟ್ಟುಕೊಂಡು 'ಹಾಗಿಲ್ಲದ ಆತ್ಮನಲ್ಲಿ' ಎಂದು ಅರ್ಥವನ್ನು ಮಾಡಿದೆ. ಇಲ್ಲಿ ತತ್ ಎಂಬ ಶಬ್ದದಿಂದ ಯಾವದನ್ನು ಪರಾಮರ್ಶಿಸಿದೆ ಎಂಬುದು ಸ್ಪಷ್ಟವಾಗುವದಿಲ್ಲ.

5. ಅದು ಎಂದರೆ ಅವಿದ್ಯೆ ಎಂದಾಗಲಿ ಆತ್ಮಾತ್ಮೀಯಭಾವವೆಂದಾಗಲಿ ಅರ್ಥವನ್ನು ಮಾಡಬಹುದು.

6. ಬೀಜವಾದ ಅವಿದ್ಯೆಯಿಲ್ಲದಾಗ ನಾನು ನನ್ನದು_ಎಂಬ ಫಲವು ಹೇಗಾದೀತು ?

೨೦. ಆ ಅಕ್ಷರವು[1] ದ್ರಷ್ಟೃ, ಶ್ರೋತೃ, ಮಂತೃ, ವಿಜ್ಞಾತೃವೇ.[2] ಅದಕ್ಕಿಂತ ಬೇರೆಯಾಗಿ ದ್ರಷ್ಟೃವೇ ಮುಂತಾದದ್ದು ಬೇರೊಂದು ಇರುವದಿಲ್ಲ. ಆದ್ದರಿಂದ ದ್ರಷ್ಟೃವಾದ ನಾನು ಅಕ್ಷರವೇ ಆಗಿರುತ್ತೇನೆ.[3]

**ಸ್ಥಾವರಂ ಜಙ್ಗಮಂ ಚೈವ ದ್ರಷ್ಟೃತ್ವಾದಿಕ್ರಿಯಾಯುತಮ್ ।**
**ಸರ್ವಮಕ್ಷರಮೇವಾತಃ ಸರ್ವಸ್ಯಾತ್ಮಾಕ್ಷರಂ ತ್ವಹಮ್ ॥ ೨೧ ॥**

೨೧. ದ್ರಷ್ಟೃತ್ವವೇ ಮುಂತಾದ ಕ್ರಿಯೆಯಿಂದ ಕೂಡಿದ ಸ್ಥಾವರವೂ ಜಂಗಮವೂ ಎಲ್ಲವೂ ಅಕ್ಷರವೇ[4] ಆದ್ದರಿಂದ ನಾನು ಎಲ್ಲಕ್ಕೂ ಆತ್ಮನಾದ ಅಕ್ಷರವೇ ಆಗಿರುತ್ತೇನೆ.

**ಅಕಾರ್ಯಶೇಷಮಾತ್ಮಾನಮಕ್ರಿಯಾತ್ಮಕ್ರಿಯಾಫಲಮ್ ।**
**ನಿರ್ಮಮಂ ನಿರಹಙ್ಕಾರಂ ಯಃ ಪಶ್ಯತಿ ಸ ಪಶ್ಯತಿ ॥ ೨೨ ॥**

೨೨. ಆತ್ಮನು ಕಾರ್ಯಶೇಷನಲ್ಲವೆಂದೂ[5] ಕ್ರಿಯಾಕಾರಕಫಲರಹಿತನೂ ನಾನುನನ್ನದೆಂಬುದಿಲ್ಲದವನೂ ಆದ (ಪರಮಾತ್ಮನನ್ನು) ಯಾವನು ಬಲ್ಲನೋ ಅವನೇ ಬಲ್ಲವನು.[6]

## ಆತ್ಮನು ಅಹಂಕರ್ತೃವಲ್ಲದ್ದರಿಂದ ನಿಷ್ಕ್ರಿಯನು

**ಮಮಾಹಙ್ಕಾರಯತ್ನೇಚ್ಛಾಃ ಶೂನ್ಯಾ ಏವ ಸ್ವಭಾವತಃ ।**
**ಆತ್ಮನೀತಿ ಯದಿ ಜ್ಞಾತಮಾಧ್ವಂ ಸ್ವಸ್ಥಾಃ ಕಿಮೀಹಿತೈಃ ॥ ೨೩ ॥**

೨೩. ಆತ್ಮನಲ್ಲಿ ನಾನು, ನನ್ನದು, ಯತ್ನ, ಇಚ್ಛೆ- (ಇವು ಯಾವವೂ) ಸ್ವಭಾವದಿಂದ ಇಲ್ಲವೆಂದು ತಿಳಿಯಿತಾದರೆ ಸ್ವಸ್ಥರಾಗಿ ಕುಳಿತುಕೊಳ್ಳಿ. ಕರ್ಮಗಳಿಂದ ಏನು ?

---

1. ನಿರ್ವಿಶೇಷವಾದ ಪರಮಾತ್ಮತತ್ತ್ವವು.

2. ದ್ರಷ್ಟವ್ಯವಲ್ಲ, ಶ್ರೋತವ್ಯವಲ್ಲ, ಮಂತವ್ಯವಲ್ಲ, ವಿಜ್ಞಾತವ್ಯವಲ್ಲ. (ಬೃ. ೩-೮-೧೧)

3. ಪರಮಾತ್ಮನಿಗಿಂತ ಬೇರೆಯಾದ ದ್ರಷ್ಟೃವಿಲ್ಲವೆಂದು ಶ್ರುತಿ (ಬೃ. ೩-೮-೧೧) ಹೇಳುತ್ತಿದೆಯಾದ್ದರಿಂದ ದ್ರಷ್ಟೃವಾದ ನಾನು ಪರಮಾತ್ಮನೇ ಆಗಿರಬೇಕು. ಇಲ್ಲದಿದ್ದರೆ ಒಂದೊಂದು ದೇಹದಲ್ಲಿಯೂ ಇಬ್ಬರು ದ್ರಷ್ಟೃಗಳಿರುವರೆಂದಾಗುತ್ತದೆ ಎಂದರ್ಥ.

4. ಅಕ್ಷರನಾದ ಪರಮಾತ್ಮನಲ್ಲಿಯೇ ಕಲ್ಪಿತವಾಗಿರುತ್ತದೆ.

5. ಕಾರ್ಯಕ್ಕೆ ಅಂಗವಾಗಿ ಉಪಯೋಗಿಸುವ ವಸ್ತುವಲ್ಲ.

6. ಆತ್ಮನಿಗೂ ಕರ್ತೃತ್ವವುಂಟೆಂದು ತಿಳಿದವನು ನಿಜವಾಗಿ ತಿಳಿದವನಲ್ಲವೆಂದರ್ಥ. ಗೀ ೨-೧೯, ೨-೨೧.

**ಯೋಽಹಙ್ಕರ್ತಾರಮಾತ್ಮಾನಂ ತಥಾ ವೇತ್ತಾರಮೇವ ಚ ।**
**ವೇತ್ತಿ ನಾತ್ಮಜ್ಞ ಏವಾಸೌ ಯೋಽನ್ಯಥಾಜ್ಞಃ ಸ ಆತ್ಮವಿತ್ ॥ ೨೪ ॥**

೨೪. ಆತ್ಮನು ಅಹಂಕರ್ತೃವೆಂದೂ ಜ್ಞಾತೃವೆಂದೂ ಯಾವನು ತಿಳಿದುಕೊಂಡಿರುವನೋ ಅವನು ಆತ್ಮಜ್ಞಾನಿಯೇ ಅಲ್ಲ. ಯಾವನು ಇದಕ್ಕೆ ಬೇರೆಯಾಗಿ[1] ತಿಳಿದಿರುವನೋ ಅವನೇ ಆತ್ಮಜ್ಞಾನಿಯು.

**ಯಥಾನ್ಯತ್ವೇಽಪಿ ತಾದಾತ್ಮ್ಯಂ ದೇಹಾದಿಷ್ವಾತ್ಮನೋ ಮತಮ್ ।**
**ತಥಾ ಕರ್ತುರವಿಜ್ಞಾನಾತ್ ಫಲಕರ್ಮಾತ್ಮತಾತ್ಮನಃ ॥ ೨೫ ॥**

೨೫. ಹೇಗೆ ಆತ್ಮನು (ದೇಹಾದಿಗಳಿಗಿಂತ) ಬೇರೆಯಾಗಿದ್ದರೂ ದೇಹಾದಿಗಳಲ್ಲಿ ಅವೇ ತಾನೆಂಬ (ಬುದ್ಧಿ)ಯುಂಟಾಗಿರುವದೋ ಅದರಂತೆ ಅಕರ್ತೃವಾದ (ಪರಮಾತ್ಮಸ್ವರೂಪವನ್ನು) ತಿಳಿಯದ್ದರಿಂದ[2] ಆತ್ಮನು ಕ್ರಿಯಾಫಲಾತ್ಮನೆಂಬ (ತಿಳಿವಳಿಕೆಯುಂಟಾಗಿರುತ್ತದೆ).

**ದೃಷ್ಟಿಃ ಶ್ರುತಿರ್ಮತಿರ್ಜ್ಞಾತಿಃ ಸ್ವಪ್ನೇ ದೃಷ್ಟಾ ಜನೈಃ ಸದಾ ।**
**ತಾಸಾಮಾತ್ಮಸ್ವರೂಪತ್ವಾದತಃ ಪ್ರತ್ಯಕ್ಷತಾತ್ಮನಃ ॥ ೨೬ ॥**

೨೬. ನೋಡುವದು, ಕೇಳುವದು, ಆಲೋಚಿಸುವದು, ಅರಿಯುವದು, ಇವೆಲ್ಲವನ್ನೂ ಸ್ವಪ್ನದಲ್ಲಿ ಜನರು ಯಾವಾಗಲೂ ನೋಡುತ್ತಿರುವರು. ಅವುಗಳ ಸ್ವರೂಪವೇ ಆಗಿರುವದರಿಂದ ಆತ್ಮನು ಪ್ರತ್ಯಕ್ಷನಾಗಿರುತ್ತಾನೆ[3].

---

1. ಅಹಂಕರ್ತೃವಲ್ಲ, ಜ್ಞಾತೃವಲ್ಲ, ತತ್ಸಾಕ್ಷಿಯು- ಎಂದು ಆತ್ಮನನ್ನು ತಿಳಿದವನೇ ನಿಜವಾದ ಜ್ಞಾನಿಯು. ಅವನಿಗೆ ಕರ್ತವ್ಯವಿರಲಾರದು.

2. ದೇಹವೇ ತಾನೆಂದು ವ್ಯವಹರಿಸುವಾಗಲೂ ದೇಹಕ್ಕಿಂತ ವ್ಯತಿರಿಕ್ತನಾದ ಆತ್ಮನಿರುವನೆಂದು ಕರ್ತೃರೂಪನಾದ ಆತ್ಮನನ್ನು ಒಪ್ಪಿರುವವರು ಹೇಳುತ್ತಾರೆ. ಅದರಂತೆ ಕರ್ತೃಭೋಕ್ತೃವು ತಾನೆಂದು ವ್ಯವಹರಿಸುವಾಗಲೂ ಪರಮಾರ್ಥವಾಗಿ ಆತ್ಮನು ಅಕರ್ತೃವೇ ಆಗಿರುತ್ತಾನೆ. ಅದನ್ನು ಅರಿತವನಿಗೆ ಕರ್ತವ್ಯವಿರಲಾರದು.

3. ಯಾವ ದೃಷ್ಟಿಯಿಂದ ಆತ್ಮನು ದ್ರಷ್ಟೃವೆನಿಸುವನೋ ಆ ದೃಷ್ಟಿಯು ವಿಷಯವಾಗಿ ಕನಸಿನಲ್ಲಿ ಬೆಳಗುತ್ತದೆ. ಆ ದೃಷ್ಟಿಯ ತಿರುಳೇ ಆಗಿರುವ ಆತ್ಮಚೈತನ್ಯವು ಆತ್ಮನ ಸ್ವರೂಪವಾಗಿಯೂ ಕಾಣಬರುತ್ತದೆ. ಆದ್ದರಿಂದ ಜ್ಞಾತೃವಿಗಿಂತ ಬೇರೆಯಾಗಿರುವ ಆತ್ಮಸ್ವರೂಪವಿಲ್ಲವೆಂಬ ಮಾತು ಅನುಭವವಿರುದ್ಧ. ಅಕರ್ತೃವೂ ಅಜ್ಞಾತೃವೂ ಆದ ಆತ್ಮನನ್ನು ಬಲ್ಲವನಿಗೆ ಯಾವ ಕರ್ತವ್ಯವೂ ಇಲ್ಲವೆಂದು ಇದರಿಂದ ಏರ್ಪಡುತ್ತದೆ.

## ಆತ್ಮಜ್ಞನಿಗೆ ಕಾರ್ಯವಿಲ್ಲವೆಂಬುದಕ್ಕೆ ಕೆಲವು ಕಾರಣಗಳು

**ಪರಲೋಕಭಯಂ ಯಸ್ಯ ನಾಸ್ತಿ ಮೃತ್ಯುಭಯಂ ತಥಾ ।**
**ತಸ್ಯಾತ್ಮಜ್ಞಸ್ಯ ಶೋಚ್ಯಾಃ ಸ್ಯುಃ ಸಬ್ರಹ್ಮೇಂದ್ರಾ ಅಪೀಶ್ವರಾಃ ॥ ೨೭ ॥**

೨೭. ಯಾವನಿಗೆ ಪರಲೋಕದ ಅಂಜಿಕೆಯಿಲ್ಲವೋ ಮರಣದ ಅಂಜಿಕೆಯೂ (ಇಲ್ಲವೋ), ಆ ಆತ್ಮಜ್ಞಾನಿಗೆ ಬ್ರಹ್ಮೇಂದ್ರರೇ ಮುಂತಾದ ಈಶ್ವರರು ಕೂಡ[1] ಶೋಚನೀಯರಾಗಿರುವರು.

**ಈಶ್ವರತ್ವೇನ ಕಿಂ ತಸ್ಯ ಬ್ರಹ್ಮೇಂದ್ರತ್ವೇನ ವಾ ಪುನಃ ।**
**ತೃಷ್ಣಾ ಚೇತ್ ಸರ್ವತಶ್ಛಿನ್ನಾ ಸರ್ವದೈನ್ಯೋದ್ಭವಾಶುಭಾ ॥ ೨೮ ॥**

೨೮. ಎಲ್ಲಾ ಬಗೆಯ ದೈನ್ಯವುಂಟಾಗುವದಕ್ಕೂ ಕಾರಣವಾಗಿರುವ ಅಮಂಗಲವಾದ ಬಯಕೆ ಎಂಬುದೊಂದು ಎಲ್ಲಾ ವಿಧದಿಂದಲೂ ಕತ್ತರಿಸಿ ಹೋದರೆ[2] ಅಂಥವನಿಗೆ ಈಶ್ವರತ್ವದಿಂದ ಆಗಬೇಕಾದದ್ದೇನು, ಬ್ರಹ್ಮೇಂದ್ರರ ಸ್ಥಾನದಿಂದಾದರೂ ಆಗಬೇಕಾದದ್ದೇನು ?

**ಅಹಮಿತ್ಯಾತ್ಮಧೀರ್ಯಾ ಚ ಮಮೇತ್ಯಾತ್ಮೀಯಧೀರಪಿ ।**
**ಅರ್ಥಶೂನ್ಯೇ ಯದಾ ಯಸ್ಯ ಸ ಆತ್ಮಜ್ಞೋ ಭವೇತ್ ತದಾ ॥ ೨೯ ॥**

೨೯. ನಾನು ಎಂಬ ಆತ್ಮಬುದ್ಧಿಯೆಂಬುದೂ ನನ್ನದು ಎಂಬ ಆತ್ಮೀಯಬುದ್ಧಿಯೆಂಬುದೂ ಯಾವಾಗ ಯಾವನಿಗೆ ಅರ್ಥವಿಲ್ಲದವುಗಳೆಂದಾಗುವವೋ[3] ಆಗಲೇ ಅವನು ಆತ್ಮಜ್ಞನಾಗುವನು.

**ಬುದ್ಧ್ಯಾದೌ ಸತ್ಯಸಾಧೌ ಚ ತಥಾ ಸತ್ಯವಿಶೇಷತಾ ।**
**ಯಸ್ಯ ಚೇದಾತ್ಮನೋ ಜ್ಞಾತಾ ತಸ್ಯ ಕಾರ್ಯಂ ಕಥಂ ಭವೇತ್ ॥೩೦॥**

---

1. ಬ್ರಹ್ಮ, ಇಂದ್ರ –ಮುಂತಾದವರು ಈಶ್ವರರು, ಧರ್ಮಜ್ಞಾನವೈರಾಗ್ಯವೇ ಮುಂತಾದವುಗಳಿಂದ ಸ್ವತಂತ್ರರೆನಿಸಿಕೊಂಡವರು. ಆದರೆ ಅವರಿಗೂ ತಮ್ಮ ಪದವಿಯು ಯಾವಾಗ ನಾಶವಾಗುವದೋ ಎಂಬ ಅಂಜಿಕೆಯುಂಟು. ಆತ್ಮಜ್ಞನಿಗೆ ಧರ್ಮಾಧರ್ಮಗಳ ಫಲದ ವಿಷಯದಿಂದಲಾಗಲಿ ಮರಣನಿಮಿತ್ತದಿಂದಲಾಗಲಿ ಅಂಜಿಕೆಯಿರುವದಿಲ್ಲ.

2. ತೃಷ್ಣೆಯೇ ಕರ್ಮಕ್ಕೆ ನಿಮಿತ್ತವು. ಜ್ಞಾನಿಗೆ ಯಾವ ಉತ್ತಮಪದವಿಯ ಆಶೆಯೂ ಇರುವದಿಲ್ಲ.

3. ನಾನು, ನನ್ನದು– ಎಂಬ ಪದಾರ್ಥಗಳೇ ಇಲ್ಲ, ಅದ್ವಿತೀಯನಾದ ಆತ್ಮನು ನಾನು– ಎಂಬ ಅರಿವೇ ಆತ್ಮಜ್ಞಾನವು. ೯ನೆಯ ಶ್ಲೋಕವನ್ನು ನೋಡಿ.

೩೦. ಬುದ್ಧಿಯೇ ಮುಂತಾದ ಉಪಾಧಿಯು ಇದ್ದರೂ ಇಲ್ಲದಿದ್ದರೂ ಆತ್ಮನಲ್ಲಿ ಯಾವ ವಿಶೇಷವೂ ಇಲ್ಲವೆಂದು[1] ಯಾವನಿಗೆ ತಿಳಿದಿತೋ ಅವನಿಗೆ ಕಾರ್ಯವೆಂಬುದು ಹೇಗೆ ಇದ್ದೀತು ?

**ಪ್ರಸನ್ನೇ ವಿಮಲೇ ವ್ಯೋಮ್ನಿ ಪ್ರಜ್ಞಾನೈಕರಸೇಽದ್ವಯೇ |**
**ಉತ್ಪನ್ನಾತ್ಮಧಿಯೋ ಬ್ರೂತ ಕಿಮನ್ಯತ್ಕಾರ್ಯಮಿಷ್ಯತೇ ॥ ೩೧ ॥**

೩೧. ಸ್ವಚ್ಛವಾದ ಯಾವ ಕಲ್ಮಷವೂ ಇಲ್ಲದ ಆಕಾಶದಂತಿರುವ ಪ್ರಜ್ಞಾನೈಕರಸವಾದ ಅದ್ವಯ(ತತ್ತ್ವವೇ) ತಾನೆಂಬ ಬುದ್ಧಿಯು ಯಾವನಿಗೆ ಉಂಟಾಗಿರುವದೋ ಅವನಿಗೆ[2] ಮತ್ತೆಯಾವ ಕಾರ್ಯವನ್ನು ಒಪ್ಪಬೇಕು ? ಹೇಳಿರಿ.

**ಆತ್ಮಾನಂ ಸರ್ವಭೂತಸ್ಥಮಮಿತ್ರಂ ಚಾತ್ಮನೋಽಪಿ ಯಃ ।**
**ಪಶ್ಯನ್ನಿಚ್ಛತ್ಯಸೌ ನೂನಂ ಶೀತೀಕರ್ತುಂ ವಿಭಾವಸುಮ್ ॥ ೩೨ ॥**

೩೨. ತಾನು ಸರ್ವಭೂತಗಳಲ್ಲಿಯೂ ಇರುವವನೆಂದೂ ತನಗೆ ಶತ್ರುವು ಇರುವನೆಂದೂ ಯಾವನು ಕಾಣುವನೋ ಅವನು ನಿಜವಾಗಿ ಸೂರ್ಯನನ್ನು ತಣ್ಣಗೆಮಾಡುವದಕ್ಕೆ ಹಾರೈಸುತ್ತಾನೆ[3].

**ಪ್ರಜ್ಞಾಪ್ರಾಣಾನುಕಾರ್ಯಾತ್ಮಾ ಛಾಯೇವಾಕ್ಷಾದಿಗೋಚರಃ ।**
**ಧ್ಯಾಯತೀವೇತಿ ಚೋಕ್ತೋ ಹಿ ಶುದ್ಧೋ ಮುಕ್ತಃ ಸ್ವತೋ ಹಿ ಸಃ ॥**
**ಅಪ್ರಾಣಸ್ಯಾಮನಸ್ಕಸ್ಯ ತಥಾಸಂಸರ್ಗಿಣೋ ದೃಶೇಃ ।**
**ವ್ಯೋಮವದ್ವ್ಯಾಪಿನೋ ಹ್ಯಸ್ಯ ಕಥಂ ಕಾರ್ಯಂ ಭವೇನ್ಮಮ ॥ ೩೪ ॥**

೩೩–೩೪. ಪ್ರಜ್ಞೆ, ಪ್ರಾಣ –ಇವುಗಳನ್ನು ಅನುಸರಿಸುವ[4] ಆತ್ಮನು ಪ್ರತಿಬಿಂಬದಂತೆ ಪ್ರತ್ಯಕ್ಷಾದಿಗಳಿಗೆ ಗೋಚರನಾಗಿರುತ್ತಾನೆ. ''ಧ್ಯಾಯತೀವ''

---

1. ಬುದ್ಧ್ಯಾದ್ಯುಪಾಧಿಗಳಿರುವಾಗ ಕರ್ತೃತ್ವವಿದ್ದು ಅವು ಇಲ್ಲದಾಗ ಅದು ಹೋಗುವದಿಲ್ಲ. ಉಪಾಧಿಯಿಂದ ತೋರುವ ಕೆಂಪು ಬಣ್ಣವು ಸ್ಫಟಿಕದಲ್ಲಿ ಯಾವಾಗಲೂ ನಿಜವಾಗಿರುವದೇ ಇಲ್ಲ ; ಇದರಂತೆ ಆತ್ಮನಲ್ಲಿ ಕರ್ತೃತ್ವವು ನಿಜವಾಗಿ ಇರುವದೇ ಇಲ್ಲ.

2. ಕಲ್ಮಷವಿದ್ದವನು ಅದನ್ನು ಕಳೆದುಕೊಳ್ಳುವದಕ್ಕೆ ಯತ್ನಿಸಬೇಕು. ಅಜ್ಞಾನವಿದ್ದವನು ಅದನ್ನು ಕಳೆದುಕೊಳ್ಳುವದಕ್ಕೆ ಯತ್ನಿಸಬೇಕು. ಆತ್ಮನಲ್ಲಿ ಇವೆರಡೂ ಇಲ್ಲ.

3. ಶತ್ರುಮಿತ್ರಾದಿಭಾವವಿರುವವನಿಗೆ ಸರ್ವರ ಆತ್ಮನೂ ತಾನೆಂಬ ಭಾವನೆಯಿರುವದಿಲ್ಲ ; ಆ ಭಾವನೆಯಿರುವವನಿಗೆ ಶತ್ರುಮಿತ್ರಾದಿಕಲ್ಪನೆಗೆ ಅವಕಾಶವಿರುವದಿಲ್ಲ.

4. ಜ್ಞಾನ, ಕ್ರಿಯೆ- ಎಂಬ ಅಂತಃಕರಣಶಕ್ತಿಗಳನ್ನು ಅನುಸರಿಸುವ, ಆ ಉಪಾಧಿಗಳುಳ್ಳ.

(ಯೋಚಿಸುವಂತೆ ಕಾಣುತ್ತಾನೆ) ಎಂದು (ಶ್ರುತಿಯಲ್ಲಿ) ಹೇಳಿರುವಾತನು[1] ತಾನೇ ಶುದ್ಧನೂ ಮುಕ್ತನೂ ಆಗಿರುತ್ತಾನಲ್ಲವೆ ? ಪ್ರಾಣವಿಲ್ಲದವನೂ ಮನಸ್ಸಿಲ್ಲದವನೂ ಮತ್ತೊಂದರ ಸಂಬಂಧವಿಲ್ಲದವನೂ ಆಗಿ ಆಕಾಶದಂತೆ ವ್ಯಾಪಿಯೂ ಆಗಿರುವ ಚೈತನ್ಯರೂಪನಾದ ಈ ನನಗೆ ಕಾರ್ಯವು ಹೇಗೆ ಇದ್ದೀತು ?

**ಅಸಮಾಧಿಂ ನ ಪಶ್ಯಾಮಿ ನಿರ್ವಿಕಾರಸ್ಯ ಸರ್ವದಾ ।**
**ಬ್ರಹ್ಮಣೋ ಮೇ ವಿಶುದ್ಧಸ್ಯ ಶೋಧ್ಯಂ ನಾನ್ಯದ್ವಿಪಾಪ್ಮನಃ ॥ ೩೫ ॥**
**ಗನ್ತವ್ಯಂ ಚ ತಥಾ ನೈವ ಸರ್ವಗಸ್ಯಾಚಲಸ್ಯ ಚ ।**
**ನೋರ್ಧ್ವಂ ನಾಧಸ್ತಿರೋ ವಾಪಿ ನಿಷ್ಕಲಸ್ಯಾಗುಣತ್ವತಃ ॥ ೩೬ ॥**
**ಚಿನ್ಮಾತ್ರಜ್ಯೋತಿಷೋ ನಿತ್ಯಂ ತಮಸ್ತಸ್ಮಾನ್ನ[2] ವಿದ್ಯತೇ ।**
**ಕಥಂ ಕಾರ್ಯಂ ಮಮೈವಾದ್ಯ ನಿತ್ಯಮುಕ್ತಸ್ಯ ಶಿಷ್ಯತೇ ॥ ೩೭ ॥**

೩೫-೩೭. ಯಾವಾಗಲೂ ನಿರ್ವಿಕಾರನಾಗಿರುವ ನನಗೆ ವಿಕ್ಷೇಪವೆಂಬುದೇ ಕಾಣಿಸುವದಿಲ್ಲ. ಪಾಪರಹಿತವಾದ ಬ್ರಹ್ಮವೇ ಆಗಿರುವ ಅತಿಶುದ್ಧನಾದ ನನಗೆ ಆಗಬೇಕಾಗಿರುವ ಮತ್ತೊಂದು ಶೋಧ್ಯ(ಮಲ)ವನ್ನೂ (ಕಾಣೆನು)[3]. ಎಲ್ಲವನ್ನೂ ವ್ಯಾಪಿಸಿಕೊಂಡು ಅಚಲನಾಗಿರುವ (ನನಗೆ) ಹೋಗಿ ಸೇರಬೇಕಾದದ್ದು ಇರುವದೇ ಇಲ್ಲ. ನಿರವಯವನಾಗಿರುವ (ನಾನು) ನಿರ್ಗುಣನಾಗಿರುವದರಿಂದ (ನನಗೆ) ಮೇಲೆ, ಕೆಳಗೆ, ಅಥವಾ ಅಡ್ಡಡ್ಡಲಾಗಿ (ಏನೊಂದೂ ಇರುವ)ದಿಲ್ಲ[4]. ಚಿನ್ಮಾತ್ರಜ್ಯೋತಿಯಾಗಿರುವ (ನನಗೆ) ಆದ್ದರಿಂದ ಅಜ್ಞಾನವು ಇರುವದಿಲ್ಲ[5]. (ಹೀಗಿರುವಲ್ಲಿ) ನಿತ್ಯಮುಕ್ತನಾಗಿರುವ ನನಗೆ ಈ ಕಾರ್ಯವು ಹೇಗೆ ಉಳಿದುಕೊಂಡಿದ್ದೀತು ?

---

1. "ಧ್ಯಾಯತೀವ ಲೇಲಾಯತೀವ" (ಬೃ. ೪-೩-೭) ಎಂಬ ಶ್ರುತಿಯಲ್ಲಿ ಆತ್ಮನಿಗೆ ಜ್ಞಾನೇಂದ್ರಿಯದ ಮತ್ತು ಕರ್ಮೇಂದ್ರಿಯದ ವ್ಯಾಪಾರವು ಇರುವಂತೆ ಉಪಾಧಿವಶದಿಂದ ತೋರುತ್ತದೆ ಎಂದು ಹೇಳಿದೆ.

2. 'ತಸ್ಮಿನ್' ಎಂಬ ಪಾಠವು ಅಚ್ಚಿನ ತಪ್ಪು.

3. ಮಲವನ್ನು ಕಳೆಯುವದಕ್ಕೆ ನಿಷ್ಕಾಮಕರ್ಮವೂ ವಿಕ್ಷೇಪವನ್ನು ಕಳೆದುಕೊಳ್ಳುವದಕ್ಕೆ ಧ್ಯಾನವೂ ಸಾಧನಗಳು ; ಮಲವಿಕ್ಷೇಪಗಳಿಲ್ಲದ ಆತ್ಮನಿಗೆ ಆ ಸಾಧನಗಳೂ ಬೇಕಿರುವದಿಲ್ಲ.

4. ಛಾಂ. ೭-೨೫-೧ರ ಅಭಿಪ್ರಾಯವಿದು.

5. ಅನಂತವಾದ ಜ್ಞಾನಸ್ವರೂಪಕ್ಕೆ ಅಜ್ಞಾನವೆಲ್ಲಿಯದು ?

**ಅಮನಸ್ಕಸ್ಯ ಕಾ ಚಿನ್ತಾ ಕ್ರಿಯಾ ವಾನಿನ್ದ್ರಿಯಸ್ಯ ಕಾ |**
**ಅಪ್ರಾಣೋ ಹ್ಯಮನಾಃ ಶುಭ್ರ ಇತಿ ಸತ್ಯಂ ಶ್ರುತೇರ್ವಚಃ || ೩೮ ||**
**ಅಕಾಲತ್ವಾದದೇಶತ್ವಾದದಿಕ್ತ್ವಾದನಿಮಿತ್ತತಃ |**
**ಆತ್ಮನೋ ನೈವ ಕಾಲಾದೇರಪೇಕ್ಷಾ ಧ್ಯಾಯತಃ ಸದಾ || ೩೯ ||**

೩೮-೩೯. ಮನಸ್ಸಿಲ್ಲದವನಿಗೆ ಧ್ಯಾನವೆಂಬರೆ ಯಾವದು ? ಇಂದ್ರಿಯ ಗಳಿಲ್ಲದವನಿಗೆ ಕ್ರಿಯೆ ಯಾವದು ? "ಅಪ್ರಾಣೋ ಹ್ಯಮನಾಃ ಶುಭ್ರಃ" (ಪ್ರಾಣ ವಿಲ್ಲದವನು, ಮನಸ್ಸಿಲ್ಲದವನು, ಶುಭ್ರನು ಮು೦. ೨-೧-೨) ಎಂಬ ಶ್ರುತಿಯ ವಚನವು ಸತ್ಯವಾಗಿರುತ್ತದೆ[1]. ಕಾಲವಿಲ್ಲದವನಾದ್ದರಿಂದಲೂ, ದೇಶವಿಲ್ಲದವ ನಾದ್ದರಿಂದಲೂ ದಿಕ್ಕುಗಳಿಲ್ಲದವನಾದ್ದರಿಂದಲೂ ನಿಮಿತ್ತಗಳಿಲ್ಲದವನಾದ್ದ ರಿಂದಲೂ ಯಾವಾಗಲೂ ಧ್ಯಾನಮಾಡುತ್ತಿರುವ ಆತ್ಮನಿಗೆ ಕಾಲಾದಿಗಳ ಅಪೇಕ್ಷೆ ಇರುವದಿಲ್ಲ[2].

**ಯಸ್ಮಿನ್ ದೇವಾಶ್ಚ ವೇದಾಶ್ಚ ಪವಿತ್ರಂ ಕೃತ್ಸ್ನಮೇಕತಾಮ್ |**
**ವ್ರಜೇತ್ತನ್ಮಾನಸಂ ತೀರ್ಥಂ ಯಸ್ಮಿನ್ ಸ್ನಾತ್ವಾಮೃತೋ ಭವೇತ್ ||೪೦**

೪೦. ಯಾವ ತೀರ್ಥದಲ್ಲಿ ದೇವತೆಗಳೂ ವೇದಗಳೂ ಎಲ್ಲವೂ ಒಂದಾಗು ವವೋ ಆ ಮಾನತೀರ್ಥಕ್ಕೆ ಹೋಗಬೇಕು. ಅದರಲ್ಲಿ ಸ್ನಾನಮಾಡಿದರೆ ಅಮೃತ ನಾಗುತ್ತಾನೆ.

## ಪ್ರಕರಣಾರ್ಥಸಂಕ್ಷೇಪ

**ನ ಚಾಸ್ತಿ ಶಬ್ದಾದಿರನನ್ಯವೇದನಃ**
**ಪರಸ್ಪರೇಣಾಪಿ ನ ಚೈವ ದೃಶ್ಯತೇ |**
**ಪರೇಣ ದೃಶ್ಯಾಸ್ತು ಯಥಾ ರಸಾದಯಃ**
**ತಥೈವ ದೃಶ್ಯತ್ವತ ಏವ ದೈಹಿಕಾಃ || ೪೧ ||**

1. ಒಂದೊಂದು ದೇಹದಲ್ಲಿಯೂ ಪ್ರಾಣಮನಇಂದ್ರಿಯವಿಷಯಗಳಿಂದ ಕೂಡಿರು ವಂತೆ ಕಾಣುತ್ತಿದ್ದರೂ ಪರಮಾರ್ಥದೃಷ್ಟಿಯಲ್ಲಿ ಹಾಗಿಲ್ಲ. ಆದ್ದರಿಂದ ಆತ್ಮನಿಗೆ ಕ್ರಿಯೆಯಿಲ್ಲ.

2. ಇಲ್ಲಿ ಧ್ಯಾನವೆಂದರೆ ಜ್ಞಾನಪೂರ್ವಕವಾದ ಚಿಂತನೆ. ಕರ್ಮಗಳಿಗೆ ಕಾಲಾದಿ ಗಳ ಆವಶ್ಯಕತೆಯಿದೆ; ಅವುಗಳನ್ನು ಕರ್ತೃವು ಯಾವಾಗಲೂ ಮಾಡುತ್ತಿರುವದಿಲ್ಲ. ಆದರೆ ಬ್ರಹ್ಮಜ್ಞಾನವು ಯಾವ ಕಾಲಾದಿಗಳಿಗೂ ಕಟ್ಟುಬಿದ್ದಿರುವದಿಲ್ಲ. ಆದ್ದರಿಂದ ಆ ಜ್ಞಾನವಿಲ್ಲದ ಕಾಲದಲ್ಲಿ ಕರ್ತವ್ಯವುಂಟಾಗಬಹುದು ಎನ್ನುವದಕ್ಕೆ ಆಗುವದಿಲ್ಲ.

೪೧. ಮತ್ತೊಂದರಿಂದ ಅರಿಯಲ್ಪಡದ ಶಬ್ದಾದಿಗಳು ಇಲ್ಲ[1]. ಅವು ಒಂದರಿಂದೊಂದು ಅರಿಯಲ್ಪಡುವದೂ ಇಲ್ಲ. ಹೊರಗಿನ ಪೃಥ್ವಿಯೇ ಮುಂತಾದವು ಹೇಗೆ ಮತ್ತೊಂದಕ್ಕೆ ಕಾಣುವವಾಗಿರುವವೋ, ಅದರಂತೆಯೇ ದೇಹದಲ್ಲಿರುವ (ಪೃಥ್ವ್ಯಾದಿಗಳೂ) ದೃಶ್ಯವಾಗಿರುವದರಿಂದ (ಮತ್ತೊಂದಕ್ಕೆ ಕಾಣತಕ್ಕವಾಗಿವೆ)[2].

**ಅಹಂಮಮೇತ್ಯೇಷಣಯತ್ನವಿಕ್ರಿಯಾ-**
**ಸುಖಾದಯಸ್ತದ್ವದಿಹ ಪ್ರದೃಶ್ಯತಃ ।**
**ದೃಶ್ಯತ್ವಯೋಗಾಚ್ಚ ಪರಸ್ಪರೇಣ ತೇ**
**ನ ದೃಶ್ಯತಾಂ ಯಾಂತಿ ತತಃ ಪರೋ ಭವಾನ್ ॥ ೪೨ ॥**

೪೨. ಇಲ್ಲಿ ನಾನು[3], ನನ್ನದು –ಎಂದು ತೋರುವ ಬಯಕೆ, ಯತ್ನ, ಕ್ರಿಯೆ, ಸುಖ –ಮುಂತಾದವುಗಳೂ[4] ದೃಶ್ಯವಾಗಿರುವದರಿಂದ ಇವುಗಳಂತೆಯೇ (ಮತ್ತೊಂದಕ್ಕೆ ಕಾಣತಕ್ಕವುಗಳಾಗಿವೆ). ದೃಶ್ಯತ್ವವಿರುವದರಿಂದಲೇ ಅವು ಒಂದಕ್ಕೊಂದು ದೃಶ್ಯವಾಗಲಾರವು. (ಆದ್ದರಿಂದ) ಅವುಗಳಿಗಿಂತ ನೀವು ಬೇರೆಯೇ.

**ಅಹಂಕ್ರಿಯಾದ್ಯಾ ಹಿ ಸಮಸ್ತವಿಕ್ರಿಯಾ**
**ಸಕರ್ತೃಕಾ ಕರ್ಮಫಲೇನ ಸಂಹತಾ ।**
**ಚಿತಿಸ್ವರೂಪೇಣ ಸಮಸ್ತತೋಽರ್ಕವತ್**
**ಪ್ರಕಾಶ್ಯಮಾನಾಽಸಿತತಾಽಽತ್ಮನೋ ಹ್ಯತಃ ॥ ೪೩ ॥**

೪೩. ಅಹಂಕಾರವೇ ಮುಂತಾದ ಕರ್ತೃವಿನಿಂದೊಡಗೂಡಿದ ಕ್ರಿಯಾಫಲಗಳಿಂದೊಡಗೂಡಿರುವ ಸಮಸ್ತವಿಕಾರವೂ ಚೈತನ್ಯರೂಪನಾದ (ಆತ್ಮ)ನಿಂದ – ಸೂರ್ಯನಿಂದ (ಎಲ್ಲವೂ ಬೆಳಗುವ ಹಾಗೆ) –ಎಲ್ಲೆಲ್ಲಿಯೂ ಬೆಳಗಲ್ಪಡುತ್ತದೆಯಲ್ಲವೆ[5] ? ಆದ್ದರಿಂದ ಆತ್ಮನು ಬದ್ಧನಲ್ಲವೆಂದೇ ಆಯಿತು.

---

1. ಅವು ಸ್ವತಃಸಿದ್ಧವಲ್ಲ,

2. ಪೃಥ್ವಿಯೇ ಮುಂತಾದ ಭೂತಗಳು ದೇಹದಲ್ಲಿ ಮಾಂಸವೇ ಮುಂತಾದ ರೂಪದಿಂದ ಇದ್ದಮಾತ್ರಕ್ಕೆ ಅವು ಸ್ವತಃಸಿದ್ಧವೆನ್ನುವದಕ್ಕೆ ಬರುವದಿಲ್ಲ ; ಅವೂ ಆತ್ಮದೃಶ್ಯಗಳೇ.

3. ಅಹಂಕಾರವು. ಈ ಪದ್ಯದ ಮೂರನೆಯ ಪಾದದ ಛಂದವನ್ನು ಸರಿಯಾಗಿಲ್ಲವೆಂದು ಕಾಣುತ್ತದೆ.

4. ನನ್ನದು ಎಂದು ತೋರುವ ದೃಶ್ಯಗಳಲ್ಲಿ ಕೆಲವನ್ನು ಇಲ್ಲಿ ತಿಳಿಸಿದೆ.

5. ಅಹಂಕಾರವೇ ಮುಂತಾದದ್ದು ಸಂಹತವಾಗಿರುವವಲ್ಲದೆ, ಆತ್ಮನಿಂದ ಪ್ರಕಾಶ್ಯವೂ ಆಗಿರುತ್ತದೆ. ಆದ್ದರಿಂದ ಆತ್ಮನು ಅವುಗಳಿಗಿಂತ ವಿಲಕ್ಷಣನು.

ದೃಶಿಸ್ವರೂಪೇಣ ಹಿ ಸರ್ವದೇಹಿನಾಂ
ವಿಯದ್ಯಥಾ ವ್ಯಾಪ್ಯ ಮನಾಂಸ್ಯವಸ್ಥಿತಃ ।
ಅತೋ ನ ತಸ್ಮಾದಪರೋಽಸ್ತಿ ವೇದಿತಾ
ಪರೋಽಪಿ ತಸ್ಮಾದತ ಏಕ ಈಶ್ವರಃ ॥ ೪೪ ॥

೪೪. ಆತ್ಮನು ದೃಗ್ರೂಪದಿಂದ ಶರೀರಿಗಳೆಲ್ಲರ ಮನಸ್ಸನ್ನೂ ಆಕಾಶದಂತೆ ವ್ಯಾಪಿಸಿಕೊಂಡು ಇರುತ್ತಾನೆ. ಆದ್ದರಿಂದ ಅವನಿಗಿಂತ ಹೆಚ್ಚಿನ ಅರಿಯುವಾತನಾಗಲಿ, ಕಡಿಮೆಯ ಅರಿವಾತನಾಗಲಿ, ಇಲ್ಲವೇ ಇಲ್ಲ[1]. ಆದ್ದರಿಂದ ಅವನು ಒಬ್ಬನು, ಈಶ್ವರನು[2].

ಶರೀರಬುದ್ಧ್ಯೋರ್ಯದಿ ಚಾನ್ಯದೃಶ್ಯತಾ
ನಿರಾತ್ಮವಾದಾಃ ಸುನಿರಾಕೃತಾ ಮಯಾ ।
ಪರಶ್ಚ ಸಿದ್ಧೋ[3] ಹ್ಯವಿಶುದ್ಧಿಕರ್ಮತಃ
ಸುನಿರ್ಮಲಃ ಸರ್ವಗತೋಽಸಿತೋಽದ್ವಯಃ ॥ ೪೫ ॥

೪೫. ಶರೀರ, ಅಂತಃಕರಣ – ಇವೆರಡೂ (ತಮಗಿಂತ) ಬೇರೆಯಾಗಿರುವವನಿಗೆ ದೃಶ್ಯವೆಂಬುದು (ನಿಜ)ವಾದರೆ ನಿರಾತ್ಮವಾದಗಳನ್ನೆಲ್ಲ[4] ನಾನು ಸುಲಭವಾಗಿಯೇ ನಿರಾಕರಿಸಿದಂತಾಯಿತು. ಅಶುದ್ಧಿಯಾಗಲಿ ಕರ್ಮವಾಗಲಿ ಇಲ್ಲದೆ ಅತ್ಯಂತನಿರ್ಮಲನಾಗಿ, ಸರ್ವಗತನಾಗಿ, ಬಂಧರಹಿತನಾಗಿ, ಅದ್ವಯನಾಗಿರುವ ಆ ಮತ್ತೊಬ್ಬನಾದ ಆತ್ಮನೂ ಸಿದ್ಧನಾದನು[5].

ಘಟಾದಿರೂಪಂ ಯದಿ ತೇನ ಗೃಹ್ಯತೇ
ಮನಃಪ್ರವೃತ್ತಂ ಬಹುಧಾ ಸ್ವವೃತ್ತಿಭಿಃ ।
ಅಶುದ್ಧ್ಯಚಿದ್ರೂಪವಿಕಾರದೋಷತಾ
ಮತೇರ್ಯಥಾ ವಾರಯಿತುಂ ನ ಪಾರ್ಯತೇ ॥ ೪೬ ॥

---

1. ಎಲ್ಲವನ್ನೂ ಬೆಳಗುತ್ತಿರುವ ಸಾಕ್ಷಿಯು ಒಬ್ಬನೇ, ಇದನ್ನು ೭–೨೮ರಲ್ಲಿ ತಿಳಿಸಿದ್ದಾಗಿದೆ.

2. ಪರಮೇಶ್ವರನಿಗಿಂತ ಬೇರೆಯಾದ ದ್ರಷ್ಟೃವಿಲ್ಲ ಎಂಬ ಬೃ. ೩–೭–೨೩ರ ಅರ್ಥವನ್ನು ಇಲ್ಲಿ ಸೂಚಿಸಿದೆ.

3. 'ಶುದ್ಧೋ' ಎಂಬ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

4. ಚಾರ್ವಾಕ, ಬೌದ್ಧ ಮುಂತಾದವರ ವಾದಗಳನ್ನೆಲ್ಲ.

5 ನಿರ್ವಿಶೇಷಾತ್ಮನೂ ಸಿದ್ಧನಾಗುವನು ಎಂದಭಿಪ್ರಾಯ. ಸ್ಥೂಲಸೂಕ್ಷ್ಮದೇಹಗಳಿಗಿಂತ ಬೇರೆಯಾದ ಸಾಕ್ಷಿಯೇ ಪರಮಾತ್ಮನು.

೪೬. ಗಡಿಗೆಯೇ ಮುಂತಾದವುಗಳ ರೂಪದಲ್ಲಿ ಬಲುಬಗೆಯಾಗಿ ಪ್ರವರ್ತಿಸುತ್ತಿರುವ ಮನಸ್ಸನ್ನು ಆ (ಆತ್ಮನು) ತನ್ನ ವೃತ್ತಿಗಳಿಂದಲೇ ಅರಿಯುವ ನೆಂದರೆ.[1] ಮನಸ್ಸಿನಂತೆಯೇ (ಆತ್ಮನಿಗೂ) ಅಶುದ್ಧಿ, ಅಚಿದ್ರೂಪ, ವಿಕಾರ –ಎಂಬ ದೋಷಗಳು (ಇರಬೇಕಾಗುವದರಿಂದ ಅದನ್ನು) ನಿವಾರಿಸುವದಕ್ಕೆ ಆಗುವದೇ ಇಲ್ಲ[2].

ಯಥಾ ವಿಶುದ್ಧಂ ಗಗನಂ ನಿರನ್ತರಂ
　ನ ಸಜ್ಜತೇ ನಾಪಿ ಚ ಲಿಪ್ಯತೇ ತಥಾ ।
ಸಮಸ್ತಭೂತೇಷು ಸದೈವ ತೇಷ್ವಯಂ
　ಸಮಃ ಸದಾತ್ಮಾ ಹ್ಯಜರೋಽಮರೋಽಭಯಃ　　॥ ೪೭ ॥

೪೭. ಅತಿಶುದ್ಧವಾಗಿ ಕಡಿವಡೆಯದೆ ವ್ಯಾಪಿಸಿಕೊಂಡಿರುವ ಆಕಾಶವು ಹೇಗೆ ಒಂದರ ಸಂಗವೂ ಇಲ್ಲದಿರುವದೋ ಏತರ ಅಂಟೂ ಇಲ್ಲದೆ ಇರುವದೋ, ಅದರಂತೆ ಸದ್ರೂಪನಾಗಿ, ಮುಪ್ಪಿಲ್ಲದೆ, ಸಾವಿಲ್ಲದೆ, ಅಂಜಿಕೆಯಿಲ್ಲದೆ ಇರುವ ಈ (ಆತ್ಮನು) ಯಾವಾಗಲೂ ಸಮಸ್ತಭೂತಗಳಲ್ಲಿಯೂ ಒಂದೇ ಸಮನಾಗಿರುವನು[3].

ಅಮೂರ್ತಮೂರ್ತಾನಿ ಚ ಕರ್ಮವಾಸನಾ
　ದೃಶಿಸ್ವರೂಪಸ್ಯ ಬಹಿಃ ಪ್ರಕಲ್ಪಿತಾ ।
ಅವಿದ್ಯಯಾ ಹ್ಯಾತ್ಮನಿ ಮೂಢದೃಷ್ಟಿಭಿ-
　ರ್ಅಪೋಹ್ಯ ನೇತೀತ್ಯವಶೇಷಿತೋ ದೃಶಿಃ　　॥ ೪೮ ॥

೪೮. ಮೂರ್ತಾಮೂರ್ತಗಳೆರಡೂ ಕರ್ಮವಾಸನೆಯೂ ದೃಗ್ರೂಪ ನಾದ ಆತ್ಮನಿಗೆ ಹೊರಚ್ಚಾಗಿದ್ದರೂ ಮೂಢದೃಷ್ಟಿಯ (ಜನ)ರು (ಅವನ್ನು) ಆತ್ಮನಲ್ಲಿ ಅವಿದ್ಯೆಯಿಂದ ಕಲ್ಪಿಸಿರುವರು. (ಶ್ರುತಿಯು) "ನೇತಿ" (ಬೃ. ೨-೩-೬) ಎಂದು (ಅವನ್ನು) ಅಲ್ಲಗಳೆದು ದೃಗ್ರೂಪ(ನಾದ ಆತ್ಮ)ನನ್ನೇ ಉಳಿಸಿರುತ್ತದೆ[4].

---

1. ಮನಸ್ಸು ಗಡಿಗೆಯೇ ಮುಂತಾದ ಆಕಾರವನ್ನು ಪಡೆದುಕೊಂಡೇ ಆಯಾ ವೃತ್ತಿಯಿಂದ ಆ ಗಡಿಗೆಯೇ ಮುಂತಾದವನ್ನು ಗ್ರಹಿಸುತ್ತದೆಯಷ್ಟೆ. ಹಾಗೆಯೇ ಆಯಾ ವೃತ್ತಿಗಳ ಆಕಾರವನ್ನು ಪಡೆದೇ ಆತ್ಮನು ಅವನ್ನು ಗ್ರಹಿಸುತ್ತಾನೆ ಎಂದಾದರೆ ಎಂದರ್ಥ.

2. ಇದನ್ನು ೭-೩ರಲ್ಲಿ ತೋರಿಸಿಕೊಟ್ಟಿದೆ.

3. ಈ ಅಭಿಪ್ರಾಯವು ಹಿಂದೆ ೯-೫, ೧೧-೬ -ಮುಂತಾದ ಕಡೆಗಳಲ್ಲಿ ಆಗಲೇ ಬಂದಿದೆ.

4. ಅಜ್ಞಾನದಿಂದ ಕಲ್ಪಿತವಾಗಿರುವದನ್ನೇ ಶಾಸ್ತ್ರವು ಅಲ್ಲಗಳೆದಿರುತ್ತದೆ. ದೃಗ್ರೂಪನಾದ ಆತ್ಮನು ಯಾವಾಗಲೂ ಅದ್ವಿತೀಯನೇ.

**ಪ್ರಬೋಧರೂಪಂ ಮನಸೋಽರ್ಥಯೋಗಜಂ**
**ಸ್ಮೃತೌ ಚ ಸುಪ್ತಸ್ಯ ಚ ದೃಶ್ಯತೇಽರ್ಥವತ್ ||**
**ತಥೈವ ದೇಹಪ್ರತಿಮಾ ತತಃ[1] ಪೃಥಗ್**
**ವಿಭೋಃ ಶರೀರಂ ಚ ಮನಶ್ಚ ದೃಶ್ಯತಃ ॥ ೪೯ ॥**

೪೯. ಇಂದ್ರಿಯಾರ್ಥಸಂಬಂಧದಿಂದಾಗುವ ಮನಸ್ಸಿನ ಎಚ್ಚರದ (ವೃತ್ತಿಯ) ರೂಪವು ಸ್ಮೃತಿಯಲ್ಲಿಯೂ ಸ್ವಪ್ನದಲ್ಲಿಯೂ ವಿಷಯದಂತೆ ಕಾಣಿಸುತ್ತದೆ[2]. ಮತ್ತು ದೇಹದ ವಾಸನಾರೂಪವೂ ಹಾಗೆಯೇ ಕಾಣುತ್ತದೆ. ಆದ್ದರಿಂದ ಶರೀರವೂ ಮನಸ್ಸೂ ದೃಶ್ಯವಾಗಿರುವದರಿಂದ ದೃಗ್ರೂಪನಾದ ಆತ್ಮನಿಗಿಂತ ಬೇರೆಯೇ[4].

**ಸ್ವಭಾವಶುದ್ಧೇ ಗಗನೇ ಘನಾದಿಕೇ ।**
**ಮಲೇಽಪಯಾತೇ ಸತಿ ಚಾವಿಶೇಷತಾ ॥**
**ಯಥಾ ಚ ತದ್ವಚ್ಛ್ರುತಿವಾರಿತದ್ವಯೇ ।**
**ಸದಾವಿಶೇಷೋ ಗಗನೋಪಮೇ ದೃಶೌ ॥ ೫೦ ॥**

೫೦. ಹೇಗೆ ಸ್ವಭಾವದಿಂದಲೇ ಶುದ್ಧವಾಗಿರುವ ಆಕಾಶದಲ್ಲಿ ಮೋಡವೇ ಮುಂತಾದ ಮಲವಿದ್ದರೂ ಹೋದರೂ ಯಾವ ವಿಶೇಷವೂ ಉಂಟಾಗುವದಿಲ್ಲವೋ ಅದರಂತೆ ಆಕಾಶಸಮಾನವಾಗಿರುವ ದೃಗ್ರೂಪಾತ್ಮನಲ್ಲಿ (ದ್ವೈತವಿದ್ದರೂ) ಶ್ರುತಿಯು ದ್ವೈತವನ್ನು ಅಲ್ಲಗಳೆದರೂ ಯಾವಾಗಲೂ ಯಾವ ವಿಶೇಷವೂ ಉಂಟಾಗಿರುವದಿಲ್ಲ[5].



---

1. ಇಲ್ಲಿ "ಪ್ರತಿಮಾನತಃ" ಎಂಬ ಮೈ॥ ಪಾಠಕ್ಕಿಂತ 'ದೇಹಪ್ರತಿಮಾ' (ದೇಹ ವಾಸನಾ) – ಎಂಬ ಬೋಧನಿಧಿಯ ಪಾಠವೇ ಮೇಲು. ಆ ಪಾಠವನ್ನು ಅನುಸರಿಸಿ 'ತತಃ' ಎಂದೂ ತಿದ್ದಿಕೊಂಡಿದೆ.

2. ಎಚ್ಚರದಲ್ಲಿ ವಿಷಯವಿರುವದು, ಕನಸುನೆನಸುಗಳಲ್ಲಿ ಇಲ್ಲದಿರುವದು – ಎಂಬ ಹೆಚ್ಚುಕಡಿಮೆಯಿದ್ದರೂ ಮನಸ್ಸು ಎರಡರಲ್ಲಿಯೂ ಸವಿಷಯವಾಗಿಯೇ ಕಾಣುತ್ತದೆ.

3. ದೇಹದಂತೆ ಕಾಣುವ ವಾಸನೆಯನ್ನೇ 'ದೇಹಪ್ರತಿಮಾ' ಎಂದಿದೆ. ಎಚ್ಚರದ ದೇಹ, ಮನಸ್ಸು, ಇಂದ್ರಿಯ, ವಿಷಯ– ಎಲ್ಲವನ್ನೂ ಬಿಟ್ಟು ವಾಸನಾಮಯವಾದ ದೇಹಾದಿಗಳನ್ನು ನೋಡುವದೂ ಅದೇ ಆತ್ಮನು.

4. ಆದ್ದರಿಂದ ನಿಜವಾದ ದೇಹಾದಿಗಳಿಗಿಂತಲೂ ವಾಸನಾಮಯವಾದ ದೇಹಾದಿಗಳಿಗಿಂತಲೂ ಬೇರೆಯೇ.

5. ಈಗ ನಿಜವಾಗಿ ದ್ವೈತವಿರುವವೆಂದೂ ಶ್ರುತಿವಾಕ್ಯದ ಜ್ಞಾನವಾದಬಳಿಕ ಅದ್ವೈತಸ್ಥಿತಿಯು ಬರುವದೆಂದೂ ತಿಳಿಯಬಾರದು. ಆತ್ಮನು ಯಾವಾಗಲೂ ನಿರ್ವಿಶೇಷನೇ ಎಂದರ್ಥ.

# ಕೂಟಸ್ಥಾತ್ಮಪ್ರಕರಣದ ಸಾರ

೧-೬. ಸ್ವಪ್ನದಲ್ಲಿಯೂ ಸ್ಮೃತಿಯಲ್ಲಿಯೂ ವಿಷಯಗಳಿಲ್ಲದಿದ್ದರೂ ಎಚ್ಚರದಲ್ಲಿರುವ ವಿಷಯಗಳ ಆಕಾರವಾಗಿಯೇ ಮನಸ್ಸಿನ ವೃತ್ತಿಗಳು ಉಂಟಾಗುತ್ತವೆ ಎಂಬುದು ನಮ್ಮ ಅನುಭವದಲ್ಲಿದೆ. ಆದ್ದರಿಂದ ಎಚ್ಚರದಲ್ಲಿಯೂ ವಿಷಯಾಕಾರವಾದ ವೃತ್ತಿಗಳು ಆತ್ಮನಿಗೆ ವಿಷಯವಾಗಿರುವವೆಂದು ಹೇಳಬೇಕು. ಮನಸ್ಸು ವಿಷಯಗಳನ್ನು ತೋರಿಸಿಕೊಡುವ ದೆಂದರೆ ವಿಷಯಾಕಾರವಾದ ವೃತ್ತಿಗಳನ್ನು ಪಡೆಯುವದೇ; ಆತ್ಮನು ದ್ರಷ್ಟೃವೆಂದರೆ ಆ ವೃತ್ತಿಗಳನ್ನು ವ್ಯಾಪಿಸಿಕೊಂಡಿರುವದೇ.

೭-೧೦. ಚಿನ್ಮಾತ್ರನಾಗಿರುವ ಆತ್ಮನು ಸಮಸ್ತಅಂತಃಕರಣಗಳನ್ನೂ ಬೆಳಗುತ್ತಿರು ವದರಿಂದ ಎಲ್ಲರಿಗೂ ಅವನೊಬ್ಬನೇ ಆತ್ಮನು. ಮನಸ್ಸು ಕನಸಿನಂತೆ ಎಚ್ಚರದಲ್ಲಿಯೂ ಕರ್ತೃಕರಣಕರ್ಮಫಲಗಳಾಗಿ ಪರಿಣಮಿಸುತ್ತಿರುವದರಿಂದ ಅದನ್ನು ಬೆಳಗುವ ಆತ್ಮನು ಈ ಯಾವ ಸ್ವರೂಪದವನೂ ಅಲ್ಲ; ಅವನು ಅಂತಃಕರಣದಂತೆ ಹೇಯನಲ್ಲ, ಉಪದೇಯನಲ್ಲ. ಹೊರಗೂ ಒಳಗೂ ನಿರ್ವಿಕಾರನಾಗಿರುವದರಿಂದ ಅವನಲ್ಲಿ ಹೇಯವಾದದ್ದು ಅಥವಾ ಉಪಾದೇಯವಾದದ್ದು ಯಾವದೂ ಇರುವಂತಿಲ್ಲ.

೧೧-೨೩. ಇಂಥ ಆತ್ಮನನ್ನು ಅರಿತುಕೊಂಡವನು ಹಸಿವು ಮುಂತಾದ ದೋಷ ಗಳಿಲ್ಲದ ಆತ್ಮನು ತಾನೆಂದು ಅರಿತಿರುವದರಿಂದ ಅವನಿಗೆ ಯಾವ ಕರ್ತವ್ಯವೂ ಇರುವದಿಲ್ಲ. ತನ್ನನ್ನು ತಾನು ಅರಿತುಕೊಳ್ಳಬೇಕಾದದ್ದಾಗಲಿ ಚಿಂತಿಸುತ್ತಿರಬೇಕಾದದ್ದಾಗಲಿ ಇರುವದಿಲ್ಲ; ಜ್ಞೇಯವಾದದ್ದೆಲ್ಲ ತನಗಿಂತ ಭಿನ್ನವಾಗಿರುವದರಿಂದ ಅವಿದ್ಯಾಕಲ್ಪಿತವಾಗಿರುತ್ತವೆ. ಜ್ಞಾನಿಗೆ ಅವಿದ್ಯೆಯಿಲ್ಲದ್ದರಿಂದ ನಾನು, ನನ್ನದು – ಎಂಬ ಭಾವನೆಯೂ ಇರುವದಿಲ್ಲ. ಈ ಆತ್ಮನಿ ಗಿಂತ ಬೇರೆಯಾಗಿ ದ್ರಷ್ಟೃವಾದವನು ಮತ್ತೊಬ್ಬನು ಇರುವದಿಲ್ಲವೆಂದು ಶ್ರುತಿಯಲ್ಲಿದೆ; ಆದ್ದರಿಂದ ಆತ್ಮಜ್ಞಾನಿಯು ದ್ರಷ್ಟೃವಾದ ಎಲ್ಲಾ ಪ್ರಾಣಿಗಳಿಗೂ ಆತ್ಮನು. ಅಂತೂ ನನ್ನ ಆತ್ಮನು ಕ್ರಿಯಾಕಾರಕಫಲಗಳಿಗಿಂತ ಬೇರೆ, ನಾನುನನ್ನದೆಂಬುದಿಲ್ಲದವನು" ಎಂದು ಯಾವನು ಅರಿತುಕೊಂಡಿರುವನೋ ಅವನೇ ನಿಜವಾಗಿ ಅರಿತವನು.

೨೪-೪೦. ಆತ್ಮಜ್ಞಾನಿಗೆ ಯಾವ ಕರ್ತವ್ಯವೂ ಇಲ್ಲವೆಂಬುದಕ್ಕೆ ಆತ್ಮನು ನಿಷ್ಕ್ರಿಯ ನೆಂಬುದೇ ಕಾರಣ. ನಿತ್ಯಾಪರೋಕ್ಷವಾಗಿರುವ ಚೈತನ್ಯವೇ ತನ್ನ ಆತ್ಮನೆಂದು ಅವನು ಅರಿತುಕೊಂಡಿರುತ್ತಾನೆ. ಪರಲೋಕದಲ್ಲಿ ತನಗಾಗುವ ದುಃಖದ ಅಂಜಿಕೆಯಾಗಲಿ ಪಡೆದುಕೊಳ್ಳಬೇಕಾಗಿರುವ ಬ್ರಹ್ಮತ್ವ, ಇಂದ್ರತ್ವ – ಮುಂತಾದವುಗಳ ಆಶೆಯಾಗಲಿ ಅವರಿಗೆ ಇರುವದಿಲ್ಲ. ನಾನು, ನನ್ನದು –ಎಂಬ ಮಾತುಗಳಿಗೆ ಅವನ ಪಾಲಿಗೆ ಅರ್ಥವೇ ಇರುವದಿಲ್ಲ. ಅಂತಃಕರಣವು ಇದ್ದರೂ ಇಲ್ಲದಿದ್ದರೂ ತನ್ನ ಸ್ವರೂಪವು ಒಂದೇ ಆಗಿರುವವೆಂದೂ ತಾನು ಅದ್ವಿತೀಯಚಿದೈಕರಸವಾಗಿರುವೆನೆಂದೂ ಅರಿತಿರುವನು. ತನ್ನ ಆತ್ಮನು ಸರ್ವಭೂತ ಗಳಲ್ಲಿಯೂ ಸಕಲಭೂತಗಳೂ ತನ್ನಲ್ಲಿಯೂ ಇರುವವೆಂದು ನಿಶ್ಚಯಿಸಿಕೊಂಡಿರುವದರಿಂದ ಅವನು ಕೃತಕೃತ್ಯನು, ಅವಾಪ್ತಕಾಮನು, ನಿತ್ಯಶುದ್ಧಮುಕ್ತಸ್ವಭಾವದವನು. ಪ್ರಾಣ

ವಾಗಲಿ ಮನಸ್ಸಾಗಲಿ ಇಲ್ಲದ ಆತ್ಮನೇ ತಾನೆಂದು ಅರಿತುಕೊಂಡಿರುವದರಿಂದ ಅವನು ಮಾಡತಕ್ಕ ಕ್ರಿಯೆಯಾಗಲಿ ಪಡೆಯತಕ್ಕ ಜ್ಞಾನವಾಗಲಿ ಸಮಾಧಿಯಾಗಲಿ ಕಳೆದುಕೊಳ್ಳತಕ್ಕ ದೋಷವಾಗಲಿ ಇರುವದಿಲ್ಲ. ಅವನು ಮನೋರಹಿತನಾದ್ದರಿಂದ ಮಾಡಬೇಕಾದ ಧ್ಯಾನವಿಲ್ಲ, ಅಪ್ರಾಣನಾದ್ದರಿಂದ ಕ್ರಿಯೆಯಿಲ್ಲ. ಅವನು ದೇವತೆಗಳಿಗೂ ವೇದಗಳಿಗೂ ಮೂಲವಾದ ಆತ್ಮನೆಂಬ ಮಾನಸತೀರ್ಥದಲ್ಲಿ ಮಿಂದಿರುವದರಿಂದ ನಿತ್ಯಶುದ್ಧನೂ ಅಮೃತನೂ ಆಗಿರುವನು.

೪೧–೫೦. ಶಬ್ದಾದಿಗಳೂ ಅಹಂಕಾರಮಮಕಾರಗಳೂ ದೃಶ್ಯವಾಗಿರುವದರಿಂದ ಸ್ವತಃಸಿದ್ಧವಲ್ಲ; ಅವುಗಳನ್ನು ಬೆಳಗುವ ಆತ್ಮನು ಸ್ವತಃಸಿದ್ಧನು. ಆದ್ದರಿಂದಲೇ ನಿತ್ಯಮುಕ್ತನು, ಅದ್ವಿತೀಯನು; ಶೂನ್ಯರೂಪನಲ್ಲ. ಅವನು ನಿರ್ವಿಕಾರನು, ಎಲ್ಲೆಲ್ಲಿಯೂ ಸಮವಾಗಿ ನಿರ್ದೋಷನಾಗಿರುವನು–ಎಂದು ತಿಳಿಯಬೇಕು. ಈ ಆತ್ಮರೂಪದಲ್ಲಿ ಕಲ್ಪಿತವಾದ ದ್ವೈತವನ್ನೇ ಶ್ರುತಿಯು ಅಲ್ಲಗಳೆಯುತ್ತದೆ. ಆತ್ಮಸ್ವರೂಪದಲ್ಲಿ ದ್ವೈತಕಲ್ಪನೆಯಿಂದಲಾಗಲಿ ಜ್ಞಾನದಿಂದ ದ್ವೈತವನ್ನು ತೊಲಗಿಸಿಕೊಳ್ಳುವದರಿಂದಾಗಲಿ ಯಾವ ವಿಶೇಷವೂ ಆಗುವದಿಲ್ಲ. ಆಕಾಶಕ್ಕೆ ಯಾವ ಕಲ್ಮಷವೂ ಅಂಟದೆ ಇರುವಂತೆ ಆತ್ಮನ ಶುದ್ಧರೂಪಕ್ಕೆ ಎಂದಿಗೂ ಯಾವ ದೋಷವೂ ಹತ್ತುವಂತೆ ಇಲ್ಲ.

——:೦:——

# ೧೫. ನಿಷ್ಕ್ರಿಯಾತ್ಮಪ್ರಕರಣ[1]

## ಆತ್ಮಕ್ಕಿಂತ ಬೇರೆಯಾದದ್ದನ್ನು ಚಿಂತಿಸಬಾರದು

**ನಾನ್ಯದನ್ಯದ್ಭವೇದ್ ಯಸ್ಮಾನ್ನಾನ್ಯತ್ ಕಿಂಚಿದ್ವಿಚಿನ್ತಯೇತ್ |**
**ಅನ್ಯಸ್ಯಾನ್ಯಭಾವೇ ಹಿ ನಾಶಸ್ತಸ್ಯ ಧ್ರುವೋ ಭವೇತ್ ॥ ೧ ॥**

೧. ಒಂದು (ವಸ್ತು) ಮತ್ತೊಂದಾಗಲಾರದಾದ್ದರಿಂದ[2] ಮತ್ತೊಂದನ್ನು (ತಾನೆಂದು) ಧ್ಯಾನಿಸಬಾರದು. ಏಕೆಂದರೆ ಒಂದು ಮತ್ತೊಂದಾಗುವದಾದರೆ ಅವಕ್ಕೆ ನಾಶವು ತಪ್ಪದೆ ಆಗುವದು.

## ಆತ್ಮನು ಮನಸ್ಸಿಗಿಂತ ಭಿನ್ನನು

**ಸ್ಮರತೋ ದೃಶ್ಯತೇ ದೃಷ್ಟಂ ಪಟೇ ಚಿತ್ರಮಿವಾರ್ಪಿತಮ್ ।**
**ಯತ್ರ ಯೇನ ಚ ತೌ ಜ್ಞೇಯೌ ಸತ್ತ್ವಕ್ಷೇತ್ರಜ್ಞಸಂಜ್ಞಕೌ ॥ ೨ ॥**

೨. ಹಿಂದೆ ಕಂಡದ್ದನ್ನು ಸ್ಮರಿಸಿಕೊಳ್ಳುವವನಿಗೆ[3] ಬಟ್ಟೆಯಲ್ಲಿ ತೋರಿಸಿರುವ ಚಿತ್ರವಂತೆ (ಅದು) ಎಲ್ಲಿ[4] ಯಾವಾತನಿಗೆ[5] ಕಾಣುವದೋ ಆ ಸತ್ತ್ವ ಕ್ಷೇತ್ರಜ್ಞರನ್ನು (ವಿಂಗಡಿಸಿ) ತಿಳಿದುಕೊಳ್ಳಬೇಕು.

**ಫಲಾನ್ತಂ ಚಾನುಭೂತಂ ಯದ್ಯುಕ್ತಂ[6] ಕರ್ತ್ರಾದಿಕಾರಕೈಃ |**
**ಸ್ಮರ್ಯಮಾಣಂ ಹಿ ಕರ್ಮಸ್ಥಂ ಪೂರ್ವಂ ಕರ್ಮೈವ ತಚ್ಛ್ರಿತಃ[7] ॥೩॥**

---

1. ಇದಕ್ಕೆ ವ್ಯಾಖ್ಯಾನದಲ್ಲಿ ನಾನ್ಯದನ್ಯತ್ಪ್ರಕರಣವೆಂಬ ಹೆಸರು ; ಈಗಿನ ಹೆಸರು ನಾವು ಕೊಟ್ಟದ್ದು.

2. ಮತ್ತೊಂದು ವಸ್ತುವಾಗಿ ಪರಿಣಮಿಸಲಾರದು. ವಸ್ತುವಿನ ನಿಜವಾದ ಸ್ವರೂಪವೆಂದರೆ ಇದ್ದಂತೆಯೇ ಇರತಕ್ಕದ್ದು.

3. ಕನಸುಕಾಣುವವರಿಗೆ ಎಂದೂ ಸೇರಿಸಿಕೊಳ್ಳಬೇಕು. ಹಿಂದಿನ ಪ್ರಕರಣದ ಒಂದನೆಯ ಶ್ಲೋಕವನ್ನು ನೋಡಿ.

4. ಅಂತಃಕರಣದಲ್ಲಿ.

5. ಆತ್ಮನಿಗೆ ಎಂದರ್ಥ. ಕನಸುನೆನಸುಗಳಲ್ಲಿಯೂ ಎಚ್ಚರದಲ್ಲಿಯೂ ಅಂತಃಕರಣವು ವಿಷಯುವೇ ಆಗಿರುತ್ತದೆ - ಎಂಬುದನ್ನು ಹಿಂದಿನ ಪ್ರಕರಣದಲ್ಲಿಯೇ ತಿಳಿಸಿದ್ದಾಗಿದೆ.

6. 'ಯದ್ಯುತಂ' ಎಂಬ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

7. 'ತತ್ಸ್ತತಃ' ಎಂಬ ಬೋಧನಿಧಿಯ ಪಾಠಕ್ಕಿಂತ ಇದೇ ಮೇಲು.

೩. ಕರ್ತೃ ಮುಂತಾದ ಕಾರಕಗಳಿಂದೊಡಗೂಡಿ ಫಲಾಂತವಾಗಿ ಯಾವದು ಅನುಭವಿಸಲ್ಪಟ್ಟು ನೆನಸಿಕೊಂಡಾಗ ಯಾವದು ಕರ್ಮರೂಪವಾಗಿರುವದೋ ಅದು ಮೊದಲು ಚೈತನ್ಯಕ್ಕೆ ಕರ್ಮವೇ ಆಗಿರುತ್ತದೆ[1].

**ದ್ರಷ್ಟುಶ್ಚಾನ್ಯದ್ಭವೇದ್ದೃಶ್ಯಂ ದೃಶ್ಯತ್ವಾದ್ ಘಟವತ್ ಸದಾ ।**
**ದೃಶ್ಯಾದ್ ದ್ರಷ್ಟಾಸಜಾತೀಯೋ ನ ಧೀವತ್ ಸಾಕ್ಷಿತಾಽನ್ಯಥಾ ॥ ೪ ॥**

೪. ದ್ರಷ್ಟೃವಿಗಿಂತ ದೃಶ್ಯವು ಬೇರೆಯಾಗಿರಬೇಕು[2]; ಏಕೆಂದರೆ ಅದು ಗಡಿಗೆಯಂತೆ ಯಾವಾಗಲೂ ದೃಶ್ಯವಾಗಿರುತ್ತದೆ. ದೃಶ್ಯಕಿಂತ ದ್ರಷ್ಟೃವೂ ವಿಲಕ್ಷಣಸ್ವರೂಪನಾಗಿರುತ್ತಾನೆ; ಹಾಗಿಲ್ಲದೆ ಇದ್ದರೆ ಅಂತಃಕರಣದಂತೆ ಅವನಿಗೂ ಸಾಕ್ಷಿತ್ವವು ಇರಬಾರದಾಗುವದು[3].

## ಆತ್ಮನಿಗೆ ಜಾತ್ಯಾದಿಗಳಿಲ್ಲದ್ದರಿಂದ ಕ್ರಿಯೆಗಳನ್ನು ಬಿಡಬೇಕು

**ಸ್ವಾತ್ಮಬುದ್ಧಿಮುಪೇಕ್ಷ್ಯಾಸೌ ವಿಧೀನಾಂ ಸ್ಯಾತ್ ಪ್ರಯೋಜಕಃ ।**
**ಜಾತ್ಯಾದಿಃ ಶವವತ್ ತೇನ ತದ್ವನ್ನಾನಾತ್ಮತಾಽನ್ಯಥಾ ॥ ೫ ॥**

೫. ತಾನು ತನ್ನದು ಎಂಬ ಬುದ್ಧಿಯನ್ನು ಅಪೇಕ್ಷಿಸಿಕೊಂಡೇ ಈ ಜಾತಿ ಮುಂತಾದದ್ದು ಶವದಂತೆ ವಿಧಿಗಳಿಗೆ ಪ್ರವರ್ತಕವಾಗಿರುತ್ತದೆ[4]. ಆದ್ದರಿಂದ (ಇದೂ) ಅದರಂತೆ (ಅನಾತ್ಮವೇ). ಇಲ್ಲದಿದ್ದರೆ ನಾನಾತ್ಮವಾದವು (ಉಂಟಾದೀತು)[5].

---

1. ಕರ್ತೃ, ಕ್ರಿಯಾ, ಕರ್ಮ, ಫಲ – ಇದಿಷ್ಟು ಸ್ಮೃತಿಯ ಕಾಲಕ್ಕೆ ಕರ್ಮವು; ಆದ್ದರಿಂದ ಮೊದಲು ಅನುಭವಕಾಲಕ್ಕೂ ಕರ್ಮವೇ.

2. ವಿಲಕ್ಷಣವಾಗಿರಬೇಕೆಂದು ಅರ್ಥ; ಸ್ವತಂತ್ರವಾಗಿ ಬೇರೆಯಾಗಿದೆ ಎಂದಲ್ಲ.

3. ಅಂತಃಕರಣದಂತೆಯೇ ಪರಿಣಾಮಿತ್ವಾದಿಗಳು ಇದ್ದರೆ ಸಾಕ್ಷಿಯಾಗಲಾರದು; ಏಕೆಂದರೆ ಸಾಕ್ಷಿಯು ಪರಿಣಾಮಿಯಾದರೆ ಆ ಪರಿಣಾಮವು ನಿಸ್ಸಾಕ್ಷಿಕವಾಗುವದು.

4. ಶವವು ನನ್ನ ತಂದೆಯದು, ಮಗನದು ಎಂದು ಮುಂತಾದ ಅಭಿಮಾನದಿಂದ ಅದರ ಉತ್ತರಕ್ರಿಯೆಗೆ ಪ್ರವರ್ತಿಸುತ್ತಾರೆ. ಇದರಂತೆ ಜಾತಿ, ಆಶ್ರಮ –ಮುಂತಾದದ್ದು ನನ್ನದು ಎಂಬ ಅಭಿಮಾನವೇ ಕರ್ಮದಲ್ಲಿ ತೊಡಗುವದಕ್ಕೆ ಕಾರಣ.

5. ಹಾಗಿಲ್ಲದೆ ಆತ್ಮನಿಗೇ ಜಾತ್ಯಾದಿಗಳು ಸೇರಿವೆ ಎಂದರೆ ಆತ್ಮರು ಅನೇಕವೆಂದಾಗುವದು. ಅದು ಶ್ರುತಿವಿರುದ್ಧ ಎಂದಭಿಪ್ರಾಯ. 'ಅನಾತ್ಮತೋಽನ್ಯಥಾ' ಎಂಬ ಬೋಧನಿಧಿಯ ಪಾಠಕ್ಕೆ ಕಾರಣವಿಲ್ಲ.

## ಸಶರೀರತ್ವವು ಕರ್ಮದಿಂದಾದದ್ದಾದ್ದರಿಂದ ಕರ್ಮವನ್ನು ಬಿಡಬೇಕು

**ನ ಪ್ರಿಯಾಪ್ರಿಯ ಇತ್ಯುಕ್ತೇರ್ನಾದೇಹತ್ವಂ ಕ್ರಿಯಾಫಲಮ್ ।**
**ದೇಹಯೋಗಃ ಕ್ರಿಯಾಹೇತುಸ್ತಸ್ಮಾದ್ವಿದ್ವಾನ್ ಕ್ರಿಯಾಸ್ತ್ಯಜೇತ್ ॥**

೬. "ಪ್ರಿಯಾಪ್ರಿಯಗಳು (ಸೋಂಕುವದಿಲ್ಲ)" (ಛಾಂ. ೮-೧೨-೧) ಎಂದು (ಶ್ರುತಿಯಲ್ಲಿ) ಹೇಳಿರುವದರಿಂದ ಅದೇಹತ್ವವು ಕ್ರಿಯಾಫಲವಲ್ಲ[1]. ದೇಹಸಂಬಂಧಕ್ಕೆ ಕ್ರಿಯೆಯೇ ಕಾರಣವು[2]. ಆದ್ದರಿಂದ ತಿಳಿದವನು ಕ್ರಿಯೆಗಳನ್ನು ಬಿಡಬೇಕು.

**ಕರ್ಮಸ್ವಾತ್ಮಾ ಸ್ವತನ್ತ್ರಶ್ಚೇನ್ನಿವೃತ್ತೌ ಚ ತಥೇಷ್ಯತಾಮ್ ।**
**ಅದೇಹತ್ವೇ ಫಲೇಽಕಾರ್ಯೇ ಜ್ಞಾತೇ ಕುರ್ಯಾತ್ ಕಥಂ ಕ್ರಿಯಾಃ॥**

೭. ಆತ್ಮನು ಕರ್ಮಗಳನ್ನು (ಮಾಡುವ)ದರಲ್ಲಿ ಸ್ವತಂತ್ರನಾದರೆ ನಿವೃತ್ತಿಯಲ್ಲಿಯೂ ಹಾಗೆಯೇ (ಸ್ವತಂತ್ರ)ನೆಂದು ಒಪ್ಪಬೇಕು. ಅದೇಹತ್ವವೆಂಬ ಫಲವು ಕಾರ್ಯವಲ್ಲವೆಂದು[3] ತಿಳಿದಮೇಲೆ ಕರ್ಮಗಳನ್ನು ಹೇಗೆತಾನೆ ಮಾಡಿಯಾನು ?

**ಜಾತ್ಯಾದೀನ್ ಸಂಪರಿತ್ಯಜ್ಯ ನಿಮಿತ್ತಂ ಕರ್ಮಣಾಂ ಬುಧಃ ।**
**ಕರ್ಮಹೇತುವಿರುದ್ಧಂ ಯತ್ ಸ್ವರೂಪಂ ಶಾಸ್ತ್ರತಃ ಸ್ಮರೇತ್ ॥ ೮ ॥**

೮. ವಿವೇಕಿಯಾದವನು ಕರ್ಮಗಳಿಗೆ ನಿಮಿತ್ತವಾಗಿರುವ ಜಾತಿಯೇ ಮುಂತಾದವುಗಳನ್ನು[4] ಬಿಟ್ಟು ಕರ್ಮಹೇತುವಿಗೇ ವಿರುದ್ಧವಾಗಿರುವ[5] ಶಾಸ್ತ್ರಸಿದ್ಧವಾದ ಸ್ವರೂಪವನ್ನು ಸ್ಮರಿಸುತ್ತಿರಬೇಕು.

---

1. ದೇಹವಿದ್ದರೆ ಪ್ರಿಯಾಪ್ರಿಯಗಳು ಇದ್ದೇ ಇರುವವು; ಅದೇಹವಾಗಿರುವ ಜ್ಞಾನಿಗೆ ಪ್ರಿಯಾಪ್ರಿಯಗಳು ಸೋಂಕುವದಿಲ್ಲ - ಎಂದು ಶ್ರುತಿಯು ಹೇಳುತ್ತಿರುವದರಿಂದ ಅದೇಹತ್ವವು ಸ್ವಾಭಾವಿಕವಾಗಿರುತ್ತದೆ.

2. ಅಜ್ಞಾನದಿಂದ ಕರ್ಮವನ್ನು ಮಾಡಿದರೆ ಕರ್ಮಫಲವಾದ ದೇಹವನ್ನು ಪಡೆಯುವನು.

3. ಅಜ್ಞಾನದಿಂದ ಮಾತ್ರವೇ ದೇಹವು ತೋರುವದರಿಂದ ಅದೇಹತ್ವವು ಸ್ವಾಭಾವಿಕವೆಂದು.

4. ವರ್ಣಾಶ್ರಮಾದ್ಯಭಿಮಾನವನ್ನು ಎಂದರ್ಥ. ಕರ್ಮಸಂನ್ಯಾಸವನ್ನು ಮಾಡಬೇಕು ಎಂದಭಿಪ್ರಾಯ.

5. ಕರ್ಮಕ್ಕೆ ಕಾರಣವಾಗಿ ಅವಿದ್ಯಾಕಾಮಗಳು ಇರುವದಕ್ಕೆ ಅವಕಾಶವೇ ಇಲ್ಲದ.

## ಆತ್ಮಸ್ವರೂಪ

**ಆತ್ಮೈಕಃ ಸರ್ವಭೂತೇಷು ತಾನಿ ತಸ್ಮಿಂಶ್ಚ ಖೇ ಯಥಾ |**
**ಪರ್ಯಗಾದ್ ವ್ಯೋಮವತ್ ಸರ್ವಂ ಶುಕ್ರಂ ದೀಪ್ತಿಮದಿಷ್ಯತೇ ||೯||**
**ವ್ರಣಸ್ನಾಯ್ವೋರಭಾವೇನ ಸ್ಥೂಲಂ ದೇಹಂ ನಿವಾರಯೇತ್ |**
**ಶುದ್ಧಾಪಾಪತಯಾ ರೂಪಂ ಲಿಙ್ಗಂ ಚಾಕಾಯಮಿತ್ಯುತ || ೧೦ ||**

೯–೧೦. ಒಬ್ಬನೇ ಆತ್ಮನು ಸರ್ವಭೂತಗಳಲ್ಲಿಯೂ (ಇರುತ್ತಾನೆ) : ಅವುಗಳೂ ಅವನಲ್ಲಿ ಆಕಾಶದಲ್ಲಿರುವಂತೆ[1] ಇರುತ್ತವೆ. ಆಕಾಶದಂತೆ ಎಲ್ಲವನ್ನೂ (ಅವನು) ವ್ಯಾಪಿಸಿಕೊಂಡಿರುತ್ತಾನೆ, ಶುಕ್ರನಾಗಿರುತ್ತಾನೆ ಎಂದರೆ ಪ್ರಕಾಶಯುಕ್ತನಾಗಿರುತ್ತಾನೆ. ವ್ರಣ, ಸ್ನಾಯು –ಇವುಗಳಿಲ್ಲವೆಂದಿರುವದರಿಂದ ಸ್ಥೂಲದೇಹವನ್ನು ಅಲ್ಲಗಳೆಯಬೇಕು. 'ಶುದ್ಧ', 'ಅಪಾಪ' – ಎಂದಿರುವದರಿಂದ ಯಾವ (ವಾಸನೆಯೂ) ಲೇಪವೂ (ಇಲ್ಲವೆಂದು ಭಾವಿಸಬೇಕು). ಮತ್ತು 'ಅಕಾಯ'ನೆಂದಿರುವದರಿಂದ ಲಿಂಗಶರೀರವನ್ನು (ಅಲ್ಲಗಳೆಯಬೇಕು)[2].

**ವಾಸುದೇವೋ ಯಥಾಶ್ವತ್ಥೇ ಸ್ವದೇಹೇ ಚಾಬ್ರವೀತ್ ಸಮಮ್ ||**
**ತದ್ವದ್ವೇತ್ತಿ ಯ ಆತ್ಮಾನಂ ಸ ಬ್ರಹ್ಮವಿದುತ್ತಮಃ || ೧೧ ||**

೧೧. ವಾಸುದೇವನು ಅಶ್ವತ್ಥದಲ್ಲಿಯೂ ತನ್ನ ದೇಹದಲ್ಲಿಯೂ ತಾನು ಸಮನಾಗಿರುವೆನೆಂದು ಹೇಗೆ ಹೇಳಿರುವನೋ ಅದರಂತೆ ತಾನೂ (ಇರುವೆನೆಂದು)[3] ಯಾವನು ಅರಿತುಕೊಂಡಿರುವನೋ ಅವನೇ ಬ್ರಹ್ಮಜ್ಞಾನಿಗಳಲ್ಲಿ ಉತ್ತಮನು.

---

1. ಆಕಾಶದಲ್ಲಿ ಏನಿದ್ದರೂ ಅದರ ಲೇಪವು ಆಕಾಶಕ್ಕಿರುವದಿಲ್ಲ ; ಅದರಂತೆ ಭೂತಗಳು ಆತ್ಮನಲ್ಲಿದ್ದರೂ ಅವನಿಗೆ ಅವುಗಳ ದೋಷವು ಸೋಂಕುವದಿಲ್ಲ ಎಂದು ಭಾವ.

2. ಹಿಂದಿನ ಶ್ಲೋಕದಲ್ಲಿ ಪೂರ್ವಾರ್ಧ ಈಶಾವಾಸ್ಯ ೬ನೆಯ ಮಂತ್ರದ ಅರ್ಥವನ್ನು ಹೇಳಿ ಉತ್ತರಾರ್ಧದಲ್ಲಿಯೂ ಈ ಶ್ಲೋಕದಲ್ಲಿಯೂ "ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂ ಶುದ್ಧಮಪಾಪವಿದ್ಧಮ್" ಎಂಬ ಈಶಾವಾಸ್ಯ (೮) ವಾಕ್ಯದ ಅರ್ಥವನ್ನು ವಿವರಿಸಿದೆ. ಇಂಥ ಶಾಸ್ತ್ರಸಿದ್ಧವಾದ ಸ್ವರೂಪವನ್ನು ಸ್ಮರಿಸುತ್ತಿರಬೇಕು. ಈ ಸ್ವರೂಪದ ಜ್ಞಾನವು ಕರ್ಮಕ್ಕೆ ಅತ್ಯಂತವಿರುದ್ಧವಾಗಿರುತ್ತದೆ.

3. ಬ್ರಹ್ಮಾದಿಸ್ತಂಬಪರ್ಯಂತನಾದ ಭೂತಗಳಲ್ಲೆಲ್ಲ ಸಮನಾಗಿರುವನೆಂದು.

**ಯಥಾ ಹ್ಯನ್ಯಶರೀರೇಷು ಮಮಾಹನ್ತಾ ನ ಚೇಷ್ಯತೇ |**
**ಅಸ್ಮಿಂಶ್ಚಾಪಿ ತಥಾ ದೇಹೇ ಧೀಸಾಕ್ಷಿತ್ವಾವಿಶೇಷತಃ || ೧೨ ||**

೧೨. ಮಿಕ್ಕ ಶರೀರಗಳಲ್ಲಿ ನನಗೆ ಹೇಗೆ ನಾನು ಎಂಬ ಭಾವವು ಇರುವದಿಲ್ಲವೋ, ಅದರಂತೆ ಈ ದೇಹದಲ್ಲಿಯೂ ಇರುವದಿಲ್ಲ. ಏಕೆಂದರೆ (ಇಲ್ಲಿಯೂ) ಅಂತಃಕರಣಕ್ಕೆ ಸಾಕ್ಷಿಯಾಗಿರುತ್ತೇನೆ[1].

**ರೂಪಸಂಸ್ಕಾರತುಲ್ಯಾಧೀ ರಾಗದ್ವೇಷೌ ಭಯಂ ಚ ಯತ್ |**
**ಗೃಹ್ಯತೇ ಧೀಶ್ರಯಂ ತಸ್ಮಾಜ್ಜ್ಞಾತಾ ಶುದ್ಧೋಽಭಯಃ ಸದಾ ||| ೧೩ |||**

೧೩. ರೂಪದ ಸಂಸ್ಕಾರವು ಯಾವ ಉಪಾಧಿಯಲ್ಲಿರುವದೋ ಆ ಉಪಾಧಿಯಾದ ಅಂತಃಕರಣದಲ್ಲಿಯೇ ರಾಗದ್ವೇಷಾದಿಗಳ ಭಯವೂ ಕಾಣಬರುತ್ತದೆಯಾದ್ದರಿಂದ ಜ್ಞಾತೃವಾದ ಆತ್ಮನು ಯಾವಾಗಲೂ ಶುದ್ಧನಾಗಿಯೂ ಭಯರಹಿತನಾಗಿಯೂ (ಇರುವನು)[2].

**ಯನ್ಮನಾಸ್ತನ್ಮಯೋಽನ್ಯತ್ವೇ ನಾತ್ಮತ್ವಾಪ್ತೌ ಕ್ರಿಯಾತ್ಮನಿ ।**
**ಆತ್ಮತ್ವೇ ಚಾನಪೇಕ್ಷತ್ವಾತ್ ಸಾಪೇಕ್ಷಂ ಹಿ ನ ತತ್ಸ್ವಯಮ್ || ೧೪ ||**

೧೪. (ಪಡೆಯತಕ್ಕದ್ದು,) ಮತ್ತೊಂದಾದರೆ, ಯಾವದರ ಮನಸ್ಸುಳ್ಳವನಾಗಿರುವನೋ ಆ ಸ್ವರೂಪದವನಾಗುತ್ತಾನೆ[3]. ಆದರೆ ಆತ್ಮತ್ವವನ್ನು ಪಡೆಯುವದಕ್ಕೆ ತನ್ನಲ್ಲಿ ಯಾವ ಕ್ರಿಯೆಯೂ ಬೇಕಿರುವದಿಲ್ಲ ; ಏಕೆಂದರೆ ತಾನು ತಾನೇ

---

1. ಮತ್ತೊಬ್ಬರ ಶರೀರವನ್ನು ನಾನು ಎಂದು ಯಾರೂ ತಿಳಿದುಕೊಳ್ಳುವದಿಲ್ಲ. ಎಲ್ಲಾ ಶರೀರಗಳೂ ಸಾಕ್ಷಿಗೆ ವಿಷಯವಾಗಿರುವಂತೆ ತಮ್ಮತಮ್ಮ ಶರೀರವೂ ವಿಷಯವಾಗಿರುತ್ತದೆ. ಆದ್ದರಿಂದ ಅದೂ ತಾನಲ್ಲವೆಂದು ತಿಳಿಯಬೇಕು ಎಂದರ್ಥ.

2. ಈ ಶ್ಲೋಕವು ಉ. ಸಾ. ಗದ್ಯ ೨೫ರಲ್ಲಿಯೂ ಉದಾಹೃತವಾಗಿರುತ್ತದೆ. ಇದು ಯಾವ ಗ್ರಂಥದಿಂದ ತೆಗೆದುಕೊಂಡದ್ದೆಂಬುದು ತಿಳಿಯದು. ಅಂತಃಕರಣದ ಧರ್ಮವು ಯಾವದೊಂದೂ ಆತ್ಮನಿಗೆ ಸೇರಿದ್ದಲ್ಲವಾದ್ದರಿಂದ ಆತ್ಮನು ನಿರ್ಗುಣನೂ ಅದ್ವಯನೂ ಆಗಿರುತ್ತಾನೆ ಎಂಬುದನ್ನು ಪ್ರತಿಪಾದಿಸುವದೇ ಶ್ಲೋಕದ ಗುರಿ.

3. ಸಾಧಕನು ಯಾವ ಭಾವನೆಯಿಂದ ಕೂಡಿರುವನೋ ಆ ಸ್ವರೂಪವನ್ನು ಪಡೆಯುತ್ತಾನೆ -ಎಂಬ ನಿಯಮವಿದೆ, ಛಾಂ. ೩-೧೪-೧ ನೋಡಿ.

ಆಗುವದಕ್ಕೆ ಮತ್ತೊಂದರ ಅಪೇಕ್ಷೆಯಿರುವದಿಲ್ಲ. ಸಾಪೇಕ್ಷವಾಗಿದ್ದರೆ[1] ಅದು ತಾನೇ ಆಗಲಾರದು.

**ಖಮಿವೈಕರಸಾ ಜ್ಞಪ್ತಿರವಿಭಕ್ತಾಜರಾಮಲಾ ।**
**ಚಕ್ಷುರಾದ್ಯುಪಧಾನಾ ಸಾ ವಿಪರೀತಾ ವಿಭಾವ್ಯತೇ ॥ ೧೫ ॥**

೧೫. ಚೈತನ್ಯವು ಆಕಾಶದಂತೆ ಒಂದೇ ತೆರನಾಗಿ, ವಿಭಾಗವಿಲ್ಲದೆ, ಮುಪ್ಪಿಲ್ಲದೆ ನಿರ್ಮಲನಾಗಿರುತ್ತದೆ[2]. ಚಕ್ಷುರಿಂದ್ರಿಯವೇ ಮುಂತಾದ ಉಪಾಧಿಗಳಿಂದ ಅದು ಇದಕ್ಕಿಂತ ವಿಪರೀತವಾಗಿರುವಂತೆ ತೋರುತ್ತದೆ[3].

**ದೃಶ್ಯತ್ವಾದಹಮಿತ್ಯೇಷೋ ನಾತ್ಮಧರ್ಮೋ ಘಟಾದಿವತ್ ।**
**ತಥಾನ್ಯೇ ಪ್ರತ್ಯಯಾ ಜ್ಞೇಯಾ ದೋಷಾಶ್ಚಾಮಲೋ ಹ್ಯತಃ ॥ ೧೬ ॥**

೧೬. ನಾನು ಎಂಬುದು ಘಟಾದಿಗಳಂತೆ ದೃಶ್ಯವಾಗಿರುವದರಿಂದ ಆತ್ಮನ ಧರ್ಮವಲ್ಲ. ಇದರಂತೆ ಮಿಕ್ಕ ಪ್ರತ್ಯಯಗಳನ್ನೂ ದೋಷಗಳನ್ನೂ ತಿಳಿಯಬೇಕು[4]. ಆದ್ದರಿಂದ ಆತ್ಮನು ನಿರ್ಮಲನಾಗಿರುತ್ತಾನೆ.

**ಸರ್ವಪ್ರತ್ಯಯಸಾಕ್ಷಿತ್ವಾದವಿಕಾರೀ ಚ ಸರ್ವಗಃ ।**
**ವಿಕ್ರಿಯೇತ ಯದಿ ದ್ರಷ್ಟಾ ಬುದ್ಧ್ಯಾದೀವಾಲ್ಪವಿದ್ ಭವೇತ್ ॥ ೧೭ ॥**

೧೭. ಎಲ್ಲಾ ಪ್ರತ್ಯಯಗಳಿಗೂ ಸಾಕ್ಷಿಯಾಗಿರುವದರಿಂದ ಸರ್ವವ್ಯಾಪಿಯಾಗಿರುವ (ಆತ್ಮನು) ವಿಕಾರರಹಿತನೂ ಆಗಿರುತ್ತಾನೆ. ದ್ರಷ್ಟೃವೂ ವಿಕಾರವನ್ನು ಹೊಂದುವದಾದರೆ ಬುದ್ಧಿ ಮುಂತಾದದ್ದರಂತೆ ಅಲ್ಪಜ್ಞನಾಗಬೇಕಾದೀತು[5].

---

1. ಮತ್ತೊಂದು ಕ್ರಿಯೆಯ ಫಲವಾಗಿ ಪಡೆಯತಕ್ಕದ್ದಾಗಿದ್ದರೆ.

2. ಇಲ್ಲಿ 'ಅಜರಾಮರಾ' ಎಂಬ ಪಾಠವಿದ್ದರೆ 'ಮುಪ್ಪಿಲ್ಲದೆ, ಸಾವಿಲ್ಲದೆ' ಎಂದು ಕನ್ನಡಿಸಿಕೊಳ್ಳಬೇಕಾಗುವದು.

3. "ಮಾಯೆಯಿಂದ, ಎಂದರೆ ಇಂದ್ರಿಯಜ್ಞಾನಗಳಿಂದ ಆತ್ಮನು ಬಹುರೂಪನಾಗಿ ಕಾಣುತ್ತಾನೆ" ಎಂದು (ಬೃ. ೨-೫-೧೯) ಶ್ರುತಿಯಿದೆ. ಇಂದ್ರಿಯಗಳಿಂದ ನೋಡುವಾಗ ಆತ್ಮನು ವಿವಿಧವಾಗಿರುವಂತೆಯೂ, ಬೇರೆಬೇರೆಯಾಗಿ ವಿಂಗಡವಾಗಿಯೂ, ಮುಪ್ಪುಸಾವುಗಳಿರುವುದಾಗಿಯೂ ಕಾಣುತ್ತದೆ. ಆದರೆ ಅದು ಪರಮಾರ್ಥವಲ್ಲ.

4. ಎಲ್ಲವೂ ದೃಶ್ಯವಾಗಿರುವದರಿಂದ ಆತ್ಮಧರ್ಮವಲ್ಲವೆಂದೇ ತಿಳಿಯಬೇಕು ಎಂದರ್ಥ.

5. ಅಂತಃಕರಣವೂ ಇಂದ್ರಿಯಗಳೂ ವಿಷಯವನ್ನು ಅರಿಯುವದಕ್ಕೆ ವಿಕಾರವನ್ನು ಹೊಂದುವಂತೆ ಆತ್ಮನು ಹೊಂದುವದಿಲ್ಲ; ಆದ್ದರಿಂದಲೇ ಅವನ ಜ್ಞಾನವು ಪರಿಚ್ಛಿನ್ನವಲ್ಲ.

**ನ ದೃಷ್ಟಿರ್ಲುಪ್ಯತೇ ದ್ರಷ್ಟುಶ್ಚಕ್ಷುರಾದೇರ್ಯಥೈವ ತತ್ ।**
**ನ ಹಿ ದ್ರಷ್ಟುರಿತಿ ಹ್ಯುಕ್ತಂ ತಸ್ಮಾದ್ ದ್ರಷ್ಟಾ ಸದೈವ ದೃಕ್ ॥ ೧೮ ॥**

೧೮. ಚಕ್ಷುರಾದಿಗಳ ನೋಟಕ್ಕೆ ಲೋಪವಿರುವಂತೆ[1] ದ್ರಷ್ಟೃವಾದ ಆತ್ಮನ ದೃಷ್ಟಿಗೆ (ಎಂದಿಗೂ) ಲೋಪವಿರುವದಿಲ್ಲ[2]. "ದ್ರಷ್ಟೃವಿನ ದೃಷ್ಟಿಗೆ ಲೋಪವಿರುವದಿಲ್ಲ"[3] (ಬೃ. ೪-೩-೨೩) ಎಂದು (ಶ್ರುತಿಯಲ್ಲಿ) ಹೇಳಿದೆಯಲ್ಲವೆ? ಆದ್ದರಿಂದ ದ್ರಷ್ಟೃವು ಯಾವಾಗಲೂ ದೃಗ್ರೂಪನೇ.

## ಜ್ಞಾತೃವಾದ್ದರಿಂದ ಜ್ಞೇಯಕ್ಕಿಂತಲೂ ಕರಣಕ್ಕಿಂತಲೂ ಬೇರೆ

**ಸಂಘಾತೋ ವಾಸ್ಮಿ ಭೂತಾನಾಂ ಕರಣಾನಾಂ ತಥೈವ ಚ ।**
**ವ್ಯಸ್ತಂ ವಾನ್ಯತಮಂ ವಾಸ್ಮಿ ಕೋ ವಾಸ್ಮೀತಿ ವಿಚಾರಯೇತ್ ॥ ೧೯ ॥**

೧೯. ನಾನು ಭೂತಗಳ ಮತ್ತು ಕರಣಗಳ ಸಂಘಾತವೋ ಅಥವಾ ಅವುಗಳಲ್ಲಿ ಒಂದೊಂದಾಗಿರುವ ಬಿಡಿಯೊ[4] ಯಾರಾದೇನು? -ಎಂದು ವಿಚಾರ ಮಾಡಬೇಕು.

**ವ್ಯಸ್ತಂ ನಾಹಂ ಸಮಸ್ತಂ ವಾ ಭೂತಮಿಂದ್ರಿಯಮೇವ ವಾ ।**
**ಜ್ಞೇಯತ್ವಾತ್ ಕರಣತ್ವಾಚ್ಚ ಜ್ಞಾತಾನ್ಯೋಽಸ್ಮಾದ್ ಘಟಾದಿವತ್ ॥**

೨೦. ನಾನು ಬಿಡಿಯಾದ ಅಥವಾ ಒಟ್ಟಾದ ಭೂತವೂ ಅಲ್ಲ, ಇಂದ್ರಿಯವೂ ಅಲ್ಲ. ಏಕೆಂದರೆ (ಭೂತವೂ ಕರಣವೂ) ಗಡಿಗೆಯೇ ಮುಂತಾದವು ಜ್ಞೇಯವಾಗಿವೆ, ಮತ್ತು ಕರಣವಾಗಿವೆ. ಇದಕ್ಕಿಂತ ಬೇರೆಯಾಗಿರುವ[5] ಜ್ಞಾತೃವೇ ನಾನು[6].

---

1. ಒಂದು ಸಲ ನೋಡುವದು ಇನ್ನೊಂದು ಸಲ ನೋಡದಿರುವದು -ಇದೇ ಚಕ್ಷುರಾದಿಗಳ ಸ್ವಭಾವ.

2. ಸುಷುಪ್ತಿಯಲ್ಲಿ ಕೂಡ ಸಾಕ್ಷಿಚೈತನ್ಯವು ಹಾಗೆಯೇ ಇರುತ್ತದೆ.

3. ಸುಷುಪ್ತಿಯಲ್ಲಿ ಎರಡನೆಯದಿಲ್ಲವಾದ್ದರಿಂದ ಅರಿವಾಗುವದಿಲ್ಲವೇ ಹೊರತು ಚೈತನ್ಯಶಕ್ತಿಯ ಲೋಪದಿಂದಲ್ಲ ಎಂಬುದು ಶ್ರುತಿಯ ಅಭಿಪ್ರಾಯ.

4. ದೇಹಕರಣಗಳ ಒಟ್ಟೊ, ಅಥವಾ ಅವುಗಳಲ್ಲಿ ಒಂದೊ, ಅಥವಾ ಮತ್ತೊಬ್ಬನೊ, -ಎಂಬುದನ್ನು ವಿಚಾರಮಾಡಿದರೆ ಇವೆಲ್ಲಕ್ಕಿಂತಲೂ ಬೇರೆಯಾದವನು ಎಂಬುದು ಸಿದ್ಧವಾಗುತ್ತದೆ -ಎಂದು ಭಾವ.

5. ಭೂತ, ಭೌತಿಕಶರೀರ, ಇಂದ್ರಿಯಗಳು -ಇವುಗಳಿಗಿಂತ ವಿಲಕ್ಷಣನಾಗಿರುವ.

6. ಶರೀರಾದಿಗಳು ಜ್ಞೇಯ; ಇಂದ್ರಿಯಗಳು ಜ್ಞೇಯ ಮತ್ತು ಕರಣ. ಗಡಿಗೆಗಿಂತ ಅದನ್ನು ಅರಿಯುವವನು ವಿಲಕ್ಷಣನಾಗಿರುವಂತೆ ಇವೆರಡನ್ನೂ ಅರಿಯುವ ನಾನು ಇವುಗಳಿಗಿಂತ ವಿಲಕ್ಷಣನು.

## ಅವಸ್ಥಾತ್ರಯಸಾಕ್ಷಿ

**ಆತ್ಮಾಗ್ನೇರಿನ್ಧನಾ ಬುದ್ಧಿರವಿದ್ಯಾಕಾಮಕರ್ಮಭಿಃ ।**
**ದೀಪಿತಾ ಪ್ರಜ್ವಲತ್ಯೇಷಾ ದ್ವಾರೈಃ ಶ್ರೋತ್ರಾದಿಭಿಃ ಸದಾ ॥ ೨೧ ॥**

೨೧. ಆತ್ಮನೆಂಬ ಬೆಂಕಿಗೆ ಕಟ್ಟಿಗೆಯಾಗಿರುವ ಈ ಬುದ್ಧಿಯು ಅವಿದ್ಯಾ ಕಾಮಕರ್ಮಗಳಿಂದ ಶ್ರೋತ್ರಾದಿದ್ವಾರಗಳಿಂದ ಹೊತ್ತಿಕೊಂಡು ಯಾವಾಗಲೂ ಧಗಧಗಿಸುತ್ತಿರುವದು[1].

**ದಕ್ಷಿಣಾಕ್ಷಿಪ್ರಧಾನೇಷು ಯದಾ ಬುದ್ಧಿರ್ವಿಚೇಷ್ಟತೇ ।**
**ವಿಷಯೈರ್ಹವಿಷಾ ದೀಪ್ತಾ ಆತ್ಮಾಗ್ನಿಃ ಸ್ಥೂಲಭುಕ್ತದಾ ॥ ೨೨ ॥**

೨೨. ಬಲಗಣ್ಣೇ ಮುಂತಾದ (ಇಂದ್ರಿಯಗಳಲ್ಲಿ) ಅಂತಃಕರಣವು ವಿಷಯಗಳೆಂಬ ಹವಿಸ್ಸಿನಿಂದ ಹೊತ್ತಿಕೊಂಡು ಯಾವಾಗ ವ್ಯಾಪಾರಮಾಡುವದೋ ಆಗ ಆತ್ಮಾಗ್ನಿಯು ಸ್ಥೂಲಭೋಕ್ತೃ(ವೆನಿಸುತ್ತದೆ)[2].

**ಹೂಯನ್ತೇ ತು ಹವೀಂಷೀತಿ ರೂಪಾದಿಗ್ರಹಣೇ ಸ್ಮರನ್ ।**
**ಅರಾಗದ್ವೇಷ ಆತ್ಮಾಗ್ನೌ ಜಾಗ್ರದ್ದೋಷೈರ್ನ ಲಿಪ್ಯತೇ ॥ ೨೩ ॥**

೨೩. ರೂಪವೇ ಮುಂತಾದದ್ದನ್ನು ಗ್ರಹಿಸುವಾಗ ಹವಿಸ್ಸುಗಳು ಆತ್ಮಾಗ್ನಿಯಲ್ಲಿ ಹೋಮವಾಗುತ್ತಿವೆ ಎಂದು ಸ್ಮರಿಸುತ್ತಾ ರಾಗದ್ವೇಷಗಳಿಲ್ಲದೆ ಇರುವವನು ಜಾಗ್ರದ್ದೋಷಗಳಿಂದ[3] ಲಿಪ್ತನಾಗುವದಿಲ್ಲ.

**ಮಾನಸೇ ತು ಗೃಹೇ ವ್ಯಕ್ತಃ ಸೋಽವಿದ್ಯಾಕರ್ಮವಾಸನಾಮ್ ।**
**ಪಶ್ಯಂಸ್ತೈಜಸ ಆತ್ಮೋಕ್ತಃ ಸ್ವಯಂಜ್ಯೋತಿಃ ಪ್ರಕಾಶಿತಾ[4] ॥ ೨೪ ॥**

---

1. ಅಂತಃಕರಣವು ಚಿದ್ವ್ಯಾಪ್ತವಾಗಿ ಚಿದಾಭಾಸವಾಗಿ ಕಾಣುತ್ತಿರುತ್ತದೆ. ನಿಜವಾದ ಚೈತನ್ಯವು ಆತ್ಮನೇ.

2. ಮಾಂಡೂಕ್ಯೋಪನಿಷತ್ತಿನ ೩ನೆಯ ಮಂತ್ರದ ಅಭಿಪ್ರಾಯವಿದು.

3. ಇಂದ್ರಿಯಗಳಿಂದ ವಿಷಯಭೋಗಗಳನ್ನು ಮಾಡುವದರಿಂದಾಗುವ ದೋಷಗಳಿಂದ.

4. ಪೂರ್ವಾರ್ಧದಲ್ಲಿ 'ಕರ್ಮವಾಸನಾಃ' ಎಂದೂ ಉತ್ತರಾರ್ಧದಲ್ಲಿ 'ಪ್ರಕಾಶಿತಾಃ' ಎಂದೂ ಬೋಧನಿಧಿಯ ಪಾಠ. ಆಗ 'ಬೆಳಗಿದ ವಾಸನೆಗಳನ್ನು ಕಾಣುವವನಾಗಿ' ಎಂದು ಕನ್ನಡಿಸಬೇಕಾಗುವದು.

೨೪. ಆತ್ಮನು ಮಾನಸವೆಂಬ ಗೃಹದಲ್ಲಿ ತೋರುವಾಗಲಾದರೆ ಅವಿದ್ಯಾ ಕಾಮಕರ್ಮವಾಸನೆಯನ್ನು ನೋಡುವವನಾಗಿ ಸ್ವಯಂಜ್ಯೋತಿಯಾಗಿ[1] ಬೆಳಗುತ್ತಾ ತೈಜಸನೆನಿಸುತ್ತಾನೆ[2].

**ವಿಷಯಾ ವಾಸನಾ ವಾಪಿ ಚೋದ್ಯನ್ತೇ ನೈವ ಕರ್ಮಭಿಃ |**
**ಯದಾ ಬುದ್ಧೌ ತದಾ ಜ್ಞೇಯಃ ಪ್ರಾಜ್ಞ ಆತ್ಮಾ ಹ್ಯನನ್ಯದೃಕ್ ||೨೫||**

೨೫. ವಿಷಯಗಳಾಗಲಿ ವಾಸನೆಗಳಾಗಲಿ ಅಂತಃಕರಣದಲ್ಲಿ ಯಾವಾಗ ಕರ್ಮಗಳಿಂದ ಪ್ರೇರಿತವಾಗುವದಿಲ್ಲವೋ[3], ಆಗ ಆತ್ಮನು ಮತ್ತೊಂದನ್ನು ಕಾಣದ[4] ಪ್ರಾಜ್ಞನು ಎಂದರಿಯಬೇಕು.

**ಮನೋಬುದ್ಧೀನ್ದ್ರಿಯಾಣಾಂ ಯಾ ಅವಸ್ಥಾಃ ಕರ್ಮಚೋದಿತಾಃ ।**
**ಚೈತನ್ಯೇನೈವ ಭಾಸ್ಯನ್ತೇ ರವಿಣೇವ ಘಟಾದಯಃ || ೨೬ ||**

೨೬. ಮನಸ್ಸು, ಬುದ್ಧಿ, ಇಂದ್ರಿಯಗಳು –ಇವುಗಳ ಕರ್ಮಚೋದಿತವಾದ ಅವಸ್ಥೆಗಳುಂಟಷ್ಟೆ, ಅವು ಸೂರ್ಯನಿಂದ ಘಟಾದಿಗಳು ಬೆಳಗುವಂತೆ ಚೈತನ್ಯದಿಂದಲೇ ಬೆಳಗುತ್ತಿರುವವು.

## ಆತ್ಮನು ಬುದ್ಧಿವ್ಯಾಪಾರಗಳ ಕರ್ತೃವಲ್ಲ

**ತತ್ರೈವಂ ಸತಿ ಬುದ್ಧೀರ್ಜ್ಞ ಆತ್ಮಭಾಸಾವಭಾಸಯನ್ |**
**ಕರ್ತಾ ತಾಸಾಂ ಯದರ್ಥಾಸ್ತಾ ಮೂಢೈರೇವಾಭಿಧೀಯತೇ ॥ ೨೭ ||**

೨೭. ಇಲ್ಲಿ ಹೀಗಿರುವಲ್ಲಿ ಬುದ್ಧಿ(ವೃತ್ತಿ)ಗಳು ಯಾವ (ಆತ್ಮನಿ)ಗಾಗಿರುವವೋ[5] (ಆ) ಜ್ಞಾತೃವಾದ[6] (ಆತ್ಮನು) ತನ್ನ ಬೆಳಕಿನಿಂದ (ಅವುಗಳನ್ನು) ಬೆಳಗಿಸುತ್ತಿರುವಲ್ಲಿ, ಅವುಗಳ ಕರ್ತೃವೆಂದು ಮೂಢರಿಂದ ಮಾತ್ರ ಹೇಳಲ್ಪಡುತ್ತಾನೆ[7].

---

1. ಹೊರಗಿನ ಸೂರ್ಯಾದಿಗಳ ಸಹಾಯವಿಲ್ಲದ್ದರಿಂದ ಇಲ್ಲಿ ಸ್ವಯಂಜ್ಯೋತಿಷ್ಟ್ವವು ಸ್ಫುಟವಾಗಿ ತೋರುತ್ತದೆ ಎಂದು ಭಾವ.

2. ಇದು ಮಾಂಡೂಕ್ಯದ ೪ನೆಯ ಮಂತ್ರದ ಅಭಿಪ್ರಾಯ.

3. ಜಾಗ್ರತ್ಸ್ವಪ್ನಗಳಲ್ಲಿ ಆಗುವ ವಿಷಯಭೋಗವೂ ವಾಸನಾಭೋಗವೂ ಧರ್ಮಾಧರ್ಮಗಳ ಫಲವು - ಎಂದು ಭಾವ.

4. ತಾನೊಬ್ಬನೇ ಚೈತನ್ಯದಿಂದಿರುವ, ವಿಶೇಷಜ್ಞಾನವಿಲ್ಲದ.

5. ಅಂತಃಕರಣವೃತ್ತಿಗಳು ಒಂದಕ್ಕೊಂದು ಸೇರಿ ಆತ್ಮನಿಗೋಸ್ಕರವಾಗಿ ಕೆಲಸ ಮಾಡುವ ಅಚೇತನವಸ್ತುಗಳಾಗಿರುತ್ತವೆ. ಉ. ಸಾ. ಗ. ೪೧, ೪೬, ೬೬.

6. ಆತ್ಮನು ಜ್ಞಾತೃವೆಂದರೆ ಜ್ಞಾನಸ್ವರೂಪನೇ, ಜ್ಞಾನವೆಂಬ ಕ್ರಿಯೆಯೇನೂ ಅವನಲ್ಲಿ ಆಗುವದಿಲ್ಲ, ಜ್ಞಾನವೆಂಬುದು ಅವನ ಧರ್ಮವಲ್ಲ. ಉ. ಸಾ. ಗ. ೫೧.

7. ಅಂತಃಕರಣದ ಧರ್ಮಗಳನ್ನು ಆತ್ಮನಲ್ಲಿ ಅಧ್ಯಾಸಮಾಡಿ ಆತ್ಮನೇ ಅವುಗಳ ಕರ್ತೃ ಎಂದು ಅಜ್ಞರು ಎಣಿಸುತ್ತಾರೆ.

**ಸರ್ವಜ್ಞೋಽಪ್ಯತ ಏವ ಸ್ಯಾತ್ ಸ್ವೇನ ಭಾಸಾವಭಾಸಯನ್ ।**
**ಸರ್ವಂ ಸರ್ವಕ್ರಿಯಾಹೇತೋಃ ಸರ್ವಕೃತ್ತ್ವಂ ತಥಾತ್ಮನಃ ॥ ೨೮ ॥**

೨೮. ಆದ್ದರಿಂದಲೇ ಎಲ್ಲವನ್ನೂ ತನ್ನ ಬೆಳಕಿನಿಂದ ಬೆಳಗುವ ಆತ್ಮನು ಸರ್ವಜ್ಞನಾಗಿರುವನು[1]. ಸರ್ವಕ್ರಿಯೆಗಳಿಗೂ ಕಾರಣನಾಗಿರುವದರಿಂದ ಆತ್ಮನಿಗೆ ಸರ್ವಕರ್ತೃತ್ವವೂ ಹೊಂದುತ್ತದೆ[2].

## ಆತ್ಮನ ನಿರುಪಾಧಿಕಸ್ವರೂಪ

**ಸೋಪಾಧಿಶ್ಚೈವಮಾತ್ಮೋಕ್ತೋ ನಿರುಪಾಖ್ಯೋಽನುಪಾಧಿಕಃ ।**
**ನಿಷ್ಕಲೋ ನಿರ್ಗುಣಃ ಶುದ್ಧಸ್ತಂ ಮನೋ ವಾಕ್ಚ ನಾಪ್ನುತಃ ॥೨೯॥**

೨೯. ಈ ರೀತಿಯಲ್ಲಿ ಸೋಪಾಧಿಕನಾದ[3] ಆತ್ಮನನ್ನು ತಿಳಿಸಿದ್ದಾಯಿತು. ನಿರುಪಾಧಿಕನಾದ ಆತ್ಮನು ಹೀಗೆಂದು ವರ್ಣಿಸುವದಕ್ಕೆ ಆಗುವವನಲ್ಲ. (ಅವನು) ನಿಷ್ಕಲನು[4], ನಿರ್ಗುಣನು[5], ಶುದ್ಧನು. ಅವನನ್ನು ಮನಸ್ಸೂ ವಾಕ್ಕೂ ಮುಟ್ಟಲಾರವು[6].

**ಚೇತನೋಽಚೇತನೋ ವಾಪಿ ಕರ್ತಾಕರ್ತಾ ಗತೋಽಗತಃ ।**
**ಬದ್ಧೋ ಮುಕ್ತಸ್ತಥಾ ಚೈಕೋ ನೈತಃ ಶುದ್ಧೋಽನ್ಯಥೇತಿ ವಾ ॥೩೦॥**
**ಅಪ್ರಾಪ್ಯೈವ ನಿವರ್ತನ್ತೇ ವಾಚೋ ಧೀಭಿಃ ಸಹೈವ ತು ।**
**ನಿರ್ಗುಣತ್ವಾತ್ ಕ್ರಿಯಾಭಾವಾದ್ವಿಶೇಷಾಣಾಮಭಾವತಃ ॥ ೩೧ ॥**

---

1. ಕರ್ತೃವಲ್ಲದ್ದರಿಂದ ವಿಕಾರವಿಲ್ಲದೆ ಎಲ್ಲಾ ವೃತ್ತಿಗಳನ್ನೂ ಬೆಳಗುತ್ತಿರುವನಾಗಿ ಸರ್ವಜ್ಞನು.

2. ಆತ್ಮನ ಸನ್ನಿಧಿಯಲ್ಲಿ ಅಂತಃಕರಣದ ಎಲ್ಲಾ ಕ್ರಿಯೆಗಳೂ ಆಗುವದರಿಂದ ಸರ್ವಕರ್ತೃವು. ಆತ್ಮನಲ್ಲಿ ಜ್ಞಾನೇಂದ್ರಿಯಧರ್ಮಗಳಾಗಲಿ ಕರ್ಮೇಂದ್ರಿಯಧರ್ಮಗಳಾಗಲಿ ಇರುವದಿಲ್ಲವೆಂಬುವದನ್ನು ಹಿಂದೆ ಅನೇಕ ಸಲ ಪ್ರತಿಪಾದಿಸಿದೆ. ಇಲ್ಲಿ ಜಾಗ್ರತ್ಸ್ವಪ್ನಗಳಲ್ಲಿ ಮನೋಬುದ್ಧೀಂದ್ರಿಯಗಳ ಸಂಬಂಧವು ಆತ್ಮನಿಗೆ ಇಲ್ಲವೆಂಬುವದನ್ನು ತಿಳಿಸುವದಕ್ಕಾಗಿ ಮತ್ತೆ ಇವನ್ನು ಪ್ರಸ್ತಾಪಿಸಿದೆ.

3. ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ –ಮುಂತಾದ ಉಪಾಧಿಗಳಿಂದ ಹೇಳುವ ಆತ್ಮನ ಸ್ವರೂಪವನ್ನು ಹಿಂದೆ ಹೇಳಿದೆ.

4. ಯಾವ ಉಪಾಧಿಯೂ ಇಲ್ಲದ ಆತ್ಮನ ರೂಪವನ್ನು ವರ್ಣಿಸುವದಕ್ಕೆ ಏತಕ್ಕೆ ಆಗುವದಿಲ್ಲ ? –ಎಂಬುವಕ್ಕೆ ಈಗ ಕಾರಣವನ್ನು ಕೊಡುತ್ತಾರೆ. ನಿಷ್ಕಲನು ಎಂದರೆ ಪ್ರಾಣ, ಶ್ರದ್ಧೆ –ಮುಂತಾದ (ಪ್ರ. ೬–೪) ಕಲೆಗಳು ಯಾವವೂ ಇಲ್ಲದವನು. ಕಲೆಗಳೆಲ್ಲ ಅನಾತ್ಮ.

5. ಯಾವ ಧರ್ಮವೂ ಇಲ್ಲದವನು. ಧರ್ಮಗಳೆಲ್ಲ ಉಪಾಧಿಗಳಿಗೆ ಸೇರಿದವು.

6. ಮನಸ್ಸಾಗಲಿ ಇಂದ್ರಿಯಗಳಾಗಲಿ ವಿಷಯೀಕರಿಸಲಾರವು. ತೈ. ಭಾ. ೨–೪ನ್ನು ನೋಡಿ.

೩೦-೩೧. ಚೇತನನು, ಅಚೇತನನು; ಕರ್ತನು, ಅಕರ್ತನು; ವ್ಯಾಪಕನು, ಅವ್ಯಾಪಕನು; ಬದ್ಧನು, ಮುಕ್ತನು; ಹಾಗೆಯೇ ಒಬ್ಬನು, ಅನೇಕರು[1]; ಶುದ್ಧನು, ಅಥವಾ ಬೇರೆ ಸ್ವರೂಪದವನು –ಎಂಬುದೇ ಮುಂತಾದ ಮಾತುಗಳು ಬುದ್ಧಿಗಳೊಡನೆಯೇ (ಆ ಆತ್ಮನನ್ನು) ಮುಟ್ಟಲಾರದೆ ಹಿಂದಿರುಗುತ್ತವೆ. ಏಕೆಂದರೆ ಆತ್ಮನು ನಿರ್ಗುಣನು, ಅವನಲ್ಲಿ ಕ್ರಿಯೆಯಿಲ್ಲ; ಯಾವ ವಿಶೇಷಗಳೂ ಇಲ್ಲ[2].

**ವ್ಯಾಪಕಂ ಸರ್ವತೋ ವ್ಯೋಮ ಮೂರ್ತೈಃ ಸರ್ವೈರ್ವಿಯೋಜಿತಮ್**
**ಯಥಾ ತದ್ವದಿಹಾತ್ಮಾನಂ ವಿದ್ಯಾಚ್ಛುದ್ಧಂ ಪರಂ ಪದಮ್ ॥೩೨॥**

೩೨. ಸರ್ವಗತವಾದ ಆಕಾಶವು ಹೇಗೆ ಯಾವ ಮೂರ್ತ(ವಸ್ತುಗಳ) ಧರ್ಮಗಳ ಸಂಬಂಧವೂ ಇಲ್ಲದಿರುವದೋ[3] ಅದರಂತೆ ಇಲ್ಲಿಯೂ ಆತ್ಮನು ಶುದ್ಧನೆಂದೂ ಪರಮಪದವೆಂದೂ ತಿಳಿಯಬೇಕು.

**ದೃಷ್ಟಂ ಹಿತ್ವಾ ಸ್ಮೃತಿಂ ತಸ್ಮಿನ್ ಸರ್ವಗ್ರಸ್ಯ ತಮಸ್ತ್ಯಜೇತ್ ।**
**ಸರ್ವದೃಗ್ಜ್ಯೋತಿಷಾ ಯುಕ್ತೋ ದಿನಕೃಚ್ಛಾರ್ವರಂ ಯಥಾ ॥೩೩॥**

೩೩. ಅನುಭವವನ್ನು ಬಿಟ್ಟು[4], ಅದರಲ್ಲಿ ನೆನಪನ್ನೂ ಬಿಟ್ಟು[5], ಎಲ್ಲವನ್ನೂ ನೋಡುತ್ತಿರುವ ಜ್ಯೋತಿಯಿಂದ ಕೂಡಿದವನಾಗಿ ಸೂರ್ಯನು ಕತ್ತಲೆಯನ್ನು ನುಂಗುವಂತೆ ಎಲ್ಲವನ್ನೂ ನುಂಗಿ ಅಜ್ಞಾನವನ್ನು ಬಿಟ್ಟುಬಿಡಬೇಕು[6].

**ರೂಪಸ್ಮೃತ್ಯಂಧಕಾರಾರ್ಥಾಃ ಪ್ರತ್ಯಯಾ ಯಸ್ಯ ಗೋಚರಾಃ ।**
**ಸ ಏವಾತ್ಮಾ ಸಮೋ ದ್ರಷ್ಟಾ ಸರ್ವಭೂತೇಷು ಸರ್ವಗಃ ॥೩೪॥**

---

1. ಇವೆಲ್ಲ ವಾದಿಗಳು ಆತ್ಮನಲ್ಲಿ ಮಾಡುತ್ತಿರುವ ವಿಕಲ್ಪಗಳು.

2. ಜಾತಿ, ದ್ರವ್ಯ, ಗುಣ, ಕ್ರಿಯಾ, ಸಂಬಂಧವೇ ಮುಂತಾದ ವಿಶೇಷಗಳೇ ವಾಕ್ಕಿಗೆ ವಿಷಯ. ಅವು ಯಾವವೂ ಆತ್ಮನಲ್ಲಿಲ್ಲ.

3. ಗೀ. ೧೩-೩೨ರ ಅಭಿಪ್ರಾಯವಿದು.

4. ಇಂದ್ರಿಯಗಳಿಂದಾಗಲಿ ಅನುಭವವು, ಎಂದರೆ ಜಾಗ್ರದವಸ್ಥೆಯು, ತನ್ನದಲ್ಲವೆಂದು ಅರಿತುಕೊಂಡು.

5. ಕನಸಿನಲ್ಲಿ ಆಗುವ ವಾಸನಾನುಭವವನ್ನು ಬಿಟ್ಟು ಎಂದರೆ ತನ್ನ ಸ್ವರೂಪಕ್ಕೆ ಸೇರಿದ್ದಲ್ಲವೆಂದು ಎಂದರ್ಥ. ಕನಸಿನ ನೆನಪು ಎಚ್ಚರದಲ್ಲಾಗುವದರಿಂದ ಅದನ್ನು 'ಸ್ಮೃತಿ' ಎಂದಿದೆ.

6. ತನಿನಿದ್ರೆಯಲ್ಲಿ ಏನೂ ಅರಿಯಲಿಲ್ಲ ಎಂದು ಅಜ್ಞಾನವನ್ನು ಜನರು ಕಲ್ಪಿಸುತ್ತಾರೆ. ಅಲ್ಲಿ ಏನೂ ಅರಿಯಲಿಲ್ಲವೆಂಬುದನ್ನು ಏತರಿಂದ ಅರಿತೆವೋ ಆ ಚೈತನ್ಯಪ್ರಕಾಶವೇ ತನ್ನ ಸ್ವರೂಪವೆಂದು ತಿಳಿದು ಅಜ್ಞಾನರೂಪವಾದ ಸುಷುಪ್ತಿಯೂ ತನ್ನ ಧರ್ಮವಲ್ಲವೆಂದು ತಿಳಿಯಬೇಕು ಎಂದರ್ಥ. ಉ. ಸಾ. ಗ. ೫೬.

೩೪. ರೂಪ, ಸ್ಮೃತಿ, ಅಂಧಕಾರ- ಎಂಬ ಪ್ರತ್ಯಯಗಳು[1] ಯಾವನಿಗೆ ವಿಷಯವಾಗಿರುವವೋ ಅವನೇ ಆತ್ಮನು, ಸರ್ವಭೂತಗಳಲ್ಲಿಯೂ ಸಮನಾಗಿರುವ ಸರ್ವವ್ಯಾಪಿಯಾಗಿರುವ ದ್ರಷ್ಟೃ[2].

**ಆತ್ಮಬುದ್ಧಿಮನಶ್ಚಕ್ಷುರ್ವಿಷಯಾಲೋಕಸಙ್ಗಮಾತ್।**
**ವಿಚಿತ್ರೋ ಜಾಯತೇ ಬುದ್ಧೇಃ ಪ್ರತ್ಯಯೋ ಜ್ಞಾನಲಕ್ಷಣಃ ॥೩೫॥**
**ವಿವಿಚ್ಯಾಸ್ಮಾತ್ ಸ್ವಮಾತ್ಮಾನಂ ವಿನ್ದ್ಯಾಚ್ಛುದ್ಧಂ ಪರಂ ಪದಮ್।**
**ದ್ರಷ್ಟಾರಂ ಸರ್ವಭೂತಸ್ಥಂ ಸಮಂ ಸರ್ವಭಯಾತಿಗಮ್ ॥೩೬॥**
**ಸಮಸ್ತಂ ಸರ್ವಗಂ ಶಾನ್ತಂ ವಿಮಲಂ ವ್ಯೋಮವತ್ ಸ್ಥಿತಮ್।**
**ನಿಷ್ಕಲಂ ನಿಷ್ಕ್ರಿಯಂ ಸರ್ವಂ ನಿತ್ಯಂ ದ್ವಂದ್ವೈರ್ವಿವರ್ಜಿತಮ್ ॥೩೭॥**

೩೫-೩೭. ಆತ್ಮ, ಬುದ್ಧಿ, ಮನಸ್ಸು, ಚಕ್ಷುರಿಂದ್ರಿಯ, ವಿಷಯ, ಬೆಳಕು -ಇವುಗಳ ಸೇರುವಿಕೆಯಿಂದ ಜ್ಞಾನದಂತಿರುವ[3] ವಿಚಿತ್ರವಾದ ಬುದ್ಧಿಯ ಪ್ರತ್ಯಯವು ಉಂಟಾಗುತ್ತಿರುವದು. ಶುದ್ಧನೂ ಪರಮಪದವೂ ಸರ್ವಭೂತಗಳಲ್ಲಿಯೂ ಇರುವವನೂ ಸಮನೂ ಸರ್ವಭಯಗಳನ್ನು ಮೀರಿರುವವನೂ ಆದ ದ್ರಷ್ಟೃವಾದ, ಎಲ್ಲದರ ಒಟ್ಟಾಗಿರುವ, ಸರ್ವವ್ಯಾಪಿಯಾದ, ಶಾಂತನಾದ, ನಿರ್ಮಲನಾದ, ಆಕಾಶದಂತಿರುವ, ನಿಷ್ಕಲನಾದ, ನಿಷ್ಕ್ರಿಯನಾದ ಎಲ್ಲವೂ ಆಗಿರುವ, ನಿತ್ಯನಾಗಿರುವ ದ್ವಂದ್ವಗಳಿಂದ ಬಿಡಲ್ಪಟ್ಟಿರುವ[4] ತನ್ನ ಆತ್ಮನನ್ನು ವಿಂಗಡಿಸಿಕೊಂಡು ಅರಿಯಬೇಕು.

## ಆತ್ಮನು ಜ್ಞೇಯನಲ್ಲ

**ಸರ್ವಪ್ರತ್ಯಯಸಾಕ್ಷೀ ಜ್ಞಃ ಕಥಂ ಜ್ಞೇಯೋ ಮಯೇತ್ಯತ।**
**ವಿಮೃಶ್ಯೈವಂ ವಿಜಾನೀಯಾತ್ ಜ್ಞಾನಕರ್ಮ ನ ವೇತ್ತಿ ವಾ ॥೩೮॥**

---

1. ಜಾಗ್ರತ್ ಸ್ವಪ್ನ ಸುಷುಪ್ತಿಗಳು. ಇವುಗಳನ್ನು ಹಿಂದಿನ ಶ್ಲೋಕದಲ್ಲಿ "ದೃಷ್ಟ, ಸ್ಮೃತಿ, ತಮಃ" ಎಂದು ಕರೆದಿದೆ. ಆತ್ಮನು ಈ ಮೂರೂ ಅಲ್ಲದ ತುರೀಯನು; ಅದೇ ನಿರುಪಾಧಿಕರೂಪವು.

2. ಅವಸ್ಥೆಗಳು ದೃಶ್ಯವಾಗಿರುವದರಿಂದ ದ್ರಷ್ಟೃವಾದ ಆತ್ಮನ ಧರ್ಮವಲ್ಲ.

3. ಚೈತನ್ಯದ ಆಭಾಸದಿಂದೊಡಗೂಡಿರುವದರಿಂದ ಪ್ರತ್ಯಯವು ಜ್ಞಾನದಂತೆ ತೋರುತ್ತಿರುವದು ಎಂದು ಭಾವ. 'ಅಜ್ಞಾನಲಕ್ಷಣಃ' ಎಂದು ವ್ಯಾಖ್ಯಾನದಲ್ಲಿ ಬಿಡಿಸಿರುವದು ಸರಿಯಲ್ಲ.

4. ಶೀತೋಷ್ಣ ಸುಖದುಃಖ ಮುಂತಾದ ದ್ವಂದ್ವಗಳಿಲ್ಲದ ಎಂದರ್ಥ. ಇದುವರೆಗೆ ಹೇಳಿರುವ ವಿಶೇಷಣಗಳು ಅಂತಃಕರಣದಲ್ಲಿ ಆಗುವ ಜ್ಞಾನದಂತಿರುವ ಪ್ರತ್ಯಯಕ್ಕೂ ಜ್ಞಾನಸ್ವರೂಪವೇ ಆಗಿರುವ ಆತ್ಮನಿಗೂ ಇರುವ ವೈಲಕ್ಷಣ್ಯವನ್ನು ಸೂಚಿಸುವವು.

೩೮. ಎಲ್ಲಾ ಪ್ರತ್ಯಯಗಳಿಗೂ ಸಾಕ್ಷಿಯಾಗಿರುವ ಜ್ಞನನ್ನು[1] ನಾನು ಹೇಗ ಅರಿತೇನು[2]? ಎಂದು ಹೀಗೆ ವಿಮರ್ಶೆಮಾಡಿ ಅವನು ಜ್ಞಾನಕ್ಕೆ ಕರ್ಮವೊ ಅಲ್ಲವೊ ಎಂಬುದನ್ನು ಅರಿತುಕೊಳ್ಳಬೇಕು[3].

**ಅದೃಷ್ಟಂ ದ್ರಷ್ಟೃ ನಿಜ್ಞಾತಂ ದಭ್ರಮಿತ್ಯಾದಿಶಾಸನಾತ್ ।**
**ನೈವ ಜ್ಞೇಯಂ ಮಯಾನ್ಯೈರ್ವಾ ಪರಂ ಬ್ರಹ್ಮ ಕಥಂಚನ ॥ ೩೯ ॥**

೩೯. "ನೋಡಲ್ಪಡದೆ ಇರತಕ್ಕದ್ದು, ನೋಡತಕ್ಕದ್ದು; ಅರಿಯಲ್ಪಡದೆ ಇರತಕ್ಕದ್ದು, (ತಾನು ಅರಿಯತಕ್ಕದ್ದು)" (ಬೃ. ೩-೮-೧೧) "ಸ್ವಲ್ಪವೇ (ನೀನು ಅರಿತಿರುವೆ)" (ಕೇ. ೨-೧)-ಎಂದು ಮುಂತಾಗಿರುವ ಶಾಸ್ತ್ರವಿರುವದರಿಂದ ಪರಬ್ರಹ್ಮವನ್ನು ಅರಿಯುವದು ನನ್ನಿಂದಾಗಲಿ ಮತ್ತೊಬ್ಬರಿಂದಾಗಲಿ[4] ಹೇಗೂ ಆಗಲೇ ಆರದು.

## ಆತ್ಮಜ್ಞಾನವು ನಿತ್ಯಸಿದ್ಧ

**ಸ್ವರೂಪಾವ್ಯವಧಾನಾಭ್ಯಾಂ ಜ್ಞಾನಾಲೋಕಸ್ವಭಾವತಃ ।**
**ಅನ್ಯಜ್ಞಾನಾನಪೇಕ್ಷತ್ವಾತ್ ಜ್ಞಾತಂ ಚೈವ[5] ಸದಾ ಮಯಾ ॥ ೪೦ ॥**

---

1. ನಿತ್ಯಚೈತನ್ಯಸ್ವರೂಪನನ್ನು ಎಂದರ್ಥ. ಸೂ. ಭಾ. ೨-೩-೧೮ ನ್ನು ನೋಡಿ.

2. ಎಲ್ಲವನ್ನೂ ಅರಿಯುವ ಚೈತನ್ಯರೂಪನಾದ ಆತ್ಮನನ್ನು ಏತರಿಂದ ಅರಿತಾನು? ಎಂಬ ಬೃ. ೨-೪-೧೪ರ ಅಭಿಪ್ರಾಯವಿದು.

3. ಇಲ್ಲಿ "ಜ್ಞಾತಂ ಬ್ರಹ್ಮ" ಎಂಬ ಬೋಧನಿಧಿಯ ಪಾಠವು ಬೇಕಿಲ್ಲ. ಜ್ಞೇಯನೆಂದು ನಮಗೆ ತೋರಿದರೂ ಜ್ಞೇಯನಲ್ಲವೆಂದೇ ನಿಶ್ಚಯಿಸಬೇಕು- ಎಂದು ಅಭಿಪ್ರಾಯ. ಪ್ರಕರಣದಿಂದ ವಾಕ್ಯಾರ್ಥವು ಇದೇ ಎಂದು ನಿಶ್ಚಯವಾಗುತ್ತದೆ.

4. ನಾನು ಅರಿಯಲಾರೆ ಎಂದರೆ ಜ್ಞಾತೃವಿನ ಅಶಕ್ತಿಯನ್ನು ತಿಳಿಸಿದಂತೆ ಆದೀತು ಎಂದು "ಮತ್ತೊಬ್ಬರಿಂದಾಗಲಿ" ಎಂದಿದೆ. ಆತ್ಮಸ್ವರೂಪವು ಎಲ್ಲವನ್ನೂ ಬೆಳಗತಕ್ಕದ್ದು ನಿತ್ಯಚೈತನ್ಯವು; ಅದನ್ನು ಬೆಳಗತಕ್ಕದ್ದು ಮತ್ತೊಂದಿಲ್ಲ, ಮತ್ತೊಂದು ಬೆಳಕಿನಿಂದ ಆಗತಕ್ಕ ಅತಿಶಯವೂ ಇಲ್ಲ ಎಂದು ಭಾವ.

5. ಇಲ್ಲಿ 'ಜ್ಞಾತಂ ಬ್ರಹ್ಮ' ಎಂಬ ಬೋಧನಿಧಿಯ ಪಾಠವೂ ಇರಬಹುದು.

೪೦. ಸ್ವರೂಪವೇ ಆಗಿರುವದರಿಂದ ವ್ಯವಧಾನವು[1] ಇಲ್ಲದಿರುವದರಿಂದಲೂ ಜ್ಞಾನಪ್ರಕಾಶದ ಸ್ವಭಾವದ್ದಾದ್ದರಿಂದ ಮತ್ತೊಂದು ಜ್ಞಾನವನ್ನು ಬಯಸುವದಿಲ್ಲವಾದ್ದರಿಂದಲೂ (ಬ್ರಹ್ಮವು) ಯಾವಾಗಲೂ ನನಗೆ ಜ್ಞಾತವೇ ಆಗಿರುತ್ತದೆ[2].

**ನಾನ್ಯೇನ ಜ್ಯೋತಿಷಾ ಕಾರ್ಯಂ ರವೇರಾತ್ಮಪ್ರಕಾಶನೇ ।**
**ಸ್ವಬೋಧಾನ್ನಾನ್ಯಬೋಧೇಚ್ಛಾ ಬೋಧಸ್ಯಾತ್ಮಪ್ರಕಾಶನೇ ॥ ೪೧ ॥**

೪೧. ಸೂರ್ಯನಿಗೆ ತನ್ನನ್ನು ಬೆಳಗುವದಕ್ಕೆ ಮತ್ತೊಂದು ಬೆಳಕಿನಿಂದಾಗಬೇಕಾದದ್ದು ಇರುವದಿಲ್ಲ. ಜ್ಞಾನಕ್ಕೆ ತನ್ನನ್ನು ಬೆಳಗುವದಕ್ಕೆ ತನ್ನ ಜ್ಞಾನಸ್ವರೂಪಕ್ಕಿಂತ ಬೇರೊಂದು ಜ್ಞಾನದ ಬಯಕೆಯಿರುವದಿಲ್ಲ.

**ನ ತಸ್ಯೈವಾನ್ಯತೋಽಪೇಕ್ಷಾ ಸ್ವರೂಪಂ ಯಸ್ಯ ಯದ್ಭವೇತ್ ।**
**ಪ್ರಕಾಶಾನ್ತರದೃಶ್ಯೋ ನ ಪ್ರಕಾಶೋ ಹ್ಯಸ್ತಿ ಕಶ್ಚನ ॥ ೪೨ ॥**

೪೨. ಯಾವದಕ್ಕೆ ಯಾವದು ಸ್ವರೂಪವೋ ಅದಕ್ಕೇ ಮತ್ತೊಂದರ ಬಯಕೆಯಿರುವದಿಲ್ಲ. ಏಕೆಂದರೆ ಮತ್ತೊಂದು ಬೆಳಕಿನಿಂದ ಕಾಣಬೇಕಾಗಿರುವ ಬೆಳಕು ಯಾವದೊಂದೂ ಇರುವದಿಲ್ಲ.

## ಆತ್ಮಜ್ಞಾನಕ್ಕೆ ಆತ್ಮನು ಕರ್ತನೆಂಬುದೂ ಸರಿಯಲ್ಲ

**ವ್ಯಕ್ತಿಃ ಸ್ಯಾದಪ್ರಕಾಶಸ್ಯ ಪ್ರಕಾಶಾತ್ಮಸಮಾಗಮಾತ್ ।**
**ಪ್ರಕಾಶಸ್ತ್ವರ್ಕಕಾರ್ಯಃ ಸ್ಯಾದಿತಿ ಮಿಥ್ಯಾ ವಚೋ ಹ್ಯತಃ ॥ ೪೩ ॥**

೪೩. ಬೆಳಕಿಲ್ಲದ ವಸ್ತುವಿಗೆ ಬೆಳಕಿನ ಸ್ವರೂಪದ ವಸ್ತುವಿನ ಸಂಬಂಧದಿಂದ (ಅದು) ತೋರಿಕೊಳ್ಳುವದಾಗಬಹುದು. ಆದ್ದರಿಂದ ಬೆಳಕೆಂಬುದು ಸೂರ್ಯನ ಕಾರ್ಯವಾಗಿದೆ ಎಂಬುದು ಸುಳ್ಳುಮಾತು[3].

---

1. ಜ್ಞಾತೃವಿಗೂ ಜ್ಞೇಯಕ್ಕೂ ನಡುವೆಯಿದ್ದು ಜ್ಞೇಯವನ್ನು ಮರೆಮಾಡಿರುವದು.

2. ನಿತ್ಯಸಿದ್ಧವಾಗಿರುತ್ತದೆ ; ಅದರ ಮರೆಯನ್ನು ತೆಗೆದುಹಾಕಿ ಅದಕ್ಕೆ ಮತ್ತೊಂದು ಜ್ಞಾನದ ಸಂಬಂಧವನ್ನು ಮಾಡಿ ಅರಿಯಬೇಕಾದದ್ದಿಲ್ಲ ಎಂಬ ಭಾವ. ಆತ್ಮನು ಪ್ರಮೆಯ ಸ್ವರೂಪವೇ ಹೊರತು ಪ್ರಮಾಣದಿಂದಾಗುವ ಪ್ರಮೆಗೆ ಆಶ್ರಯನಲ್ಲ ಎಂದು ಉ. ಸಾ. ಗದ್ಯ ೫೮, ೫೯, ೬೦ರಲ್ಲಿ ಹೇಳಿದ್ದರ ಅಭಿಪ್ರಾಯವು ಇದೇ.

3. ಸೂರ್ಯನು ಬೆಳಕೆಂಬುದನ್ನು ಉಂಟುಮಾಡಿರುವದಿಲ್ಲ, ಬೆಳಕೇ. ಇದರಂತೆ ಆತ್ಮನು ಜ್ಞಾನಸ್ವರೂಪನೇ, ಜ್ಞಾನವೆಂಬ ಕ್ರಿಯೆಗೆ ಕರ್ತೃವಲ್ಲ. ಉ. ಸಾ. ಗದ್ಯ ೫೪.

**ಯತೋಽಭೂತ್ವಾ ಭವೇದ್ಯಚ್ಚ ತಸ್ಯ ತತ್ ಕಾರ್ಯಮಿಷ್ಯತೇ |**
**ಸ್ವರೂಪತ್ವಾದಭೂತ್ವಾ ನ ಪ್ರಕಾಶೋ ಜಾಯತೇ ರವೇಃ || ೪೪ ||**

೪೪. ಯಾವದು ಮೊದಲು ಇಲ್ಲದಿದ್ದು[1] ಯಾವದರಿಂದ ಉಂಟಾಗುವದೋ ಅದು ಅದರ ಕಾರ್ಯವೆನಿಸುತ್ತದೆ. ಪ್ರಕಾಶವು (ಸೂರ್ಯನ) ಸ್ವರೂಪವೇ ಆಗಿರುವದರಿಂದ ಪ್ರಕಾಶವು ಮೊದಲು ಇಲ್ಲದಿದ್ದು ಸೂರ್ಯನಿಂದ (ಹೊಸದಾಗಿ) ಉಂಟಾಗುವದಿಲ್ಲ[2].

**ಸತ್ತಾಮಾತ್ರೇ ಪ್ರಕಾಶಸ್ಯ ಕರ್ತಾದಿತ್ಯಾದಿರಿಷ್ಯತೇ |**
**ಘಟಾದಿವ್ಯಕ್ತಿತೋ ಯದ್ವತ್ ತದ್ವದ್ಬೋಧಾತ್ಮನೀಷ್ಯತಾಮ್ || ೪೫ ||**

೪೫. ಕೇವಲ ತನ್ನ ಇರುವಿಕೆಯಿಂದಲೇ ಗಡಿಗೆಯೇ ಮುಂತಾದವು ತೋರಿಕೊಳ್ಳುವದರಿಂದ ಹೇಗೆ ಸೂರ್ಯನೇ ಮುಂತಾದದ್ದು ಬೆಳಕಿನ ಕರ್ತೃವೆನಿಸುವದೋ[3] ಅದರಂತೆ ಜ್ಞಾನಸ್ವರೂಪನಾದ ಆತ್ಮನಲ್ಲಿಯೂ (ಜ್ಞಾನಕರ್ತೃತ್ವವನ್ನು) ತಿಳಿಯಬೇಕು.

**ಬಿಲಾತ್ ಸರ್ಪಸ್ಯ ನಿರ್ಯಾಣೇ ಸೂರ್ಯೋ ಯದ್ವತ್ ಪ್ರಕಾಶಕಃ |**
**ಪ್ರಯತ್ನೇನ ವಿನಾ ತದ್ವಜ್ಜ್ಞಾತಾತ್ಮಾ ಬೋಧರೂಪತಃ || ೪೬ ||**
**ದಗ್ಧೃವಮುಷ್ಣಃ ಸತ್ತಾಯಾಂ ತದ್ವದ್ಬೋಧಾತ್ಮನೀಷ್ಯತಾಮ್ ।**
**ಸತ್ಯೇವ ಯದುಪಾಧೌ ತು ಜ್ಞಾತೇ ಸರ್ಪ ಇವೋತ್ಥಿತೇ || ೪೭ ||**
**ಜ್ಞಾತಾಯತ್ನೋಽಪಿ ತದ್ವಜ್ಜ್ಞಃ ಕರ್ತಾ ಭ್ರಾಮಕವದ್ಭವೇತ್ ||೪೭½||**

೪೬-೪೭½. ಬಿಲದಿಂದ ಹಾವು ಹೊರಕ್ಕೆ ಬಂದರೆ ಸೂರ್ಯನು ಹೇಗೆ ಯಾವ ಪ್ರಯತ್ನವೂ ಇಲ್ಲದೆ (ಅದನ್ನು) ಬೆಳಗುವವನಾಗುತ್ತಾನೋ ಅದರಂತೆ

1. ಕಾಣದಿದ್ದು, ಅವ್ಯಕ್ತವಾಗಿದ್ದು ಎಂದರ್ಥ; ಆದ್ದರಿಂದ ಸತ್ಕಾರ್ಯವಾದಕ್ಕೆ ಇದು ವಿರುದ್ಧವಲ್ಲ.

2. ಆದ್ದರಿಂದ ಬೆಳಕು ಸೂರ್ಯನ ಕಾರ್ಯವಲ್ಲ; ಅದರಂತೆ ಜ್ಞಾನವೂ ಆತ್ಮನ ಕಾರ್ಯವಲ್ಲ – ಎಂದು ಭಾವ.

3. ಸೂರ್ಯನು ತಾನು ಇದ್ದಂತೆಯೇ ಇದ್ದು ಪ್ರಕಾಶಕರ್ತನೆನಿಸುವಂತೆ ಆತ್ಮನೂ ಇದ್ದಂತೆ ಇದ್ದು ಗೌಣವೃತ್ತಿಯಿಂದ ಜ್ಞಾತೃವೆನಿಸುತ್ತಾನೆ ಎಂದರ್ಥ. ಮುಂದಿನ ಶ್ಲೋಕದಲ್ಲಿ ಇದನ್ನೇ ವಿವರಿಸಿದೆ. ಉ. ಸಾ. ಗದ್ಯದಲ್ಲಿಯೂ ಇದನ್ನು ತಿಳಿಸಿದೆ.

ಆತ್ಮನು ಜ್ಞಾನರೂಪನಾಗಿರುವದರಿಂದ ಜ್ಞಾತೃವೆನಿಸುತ್ತಾನೆ. ಹೇಗೆ ಬಿಸಿಯಾದ (ಬೆಂಕಿಯು)[1] ತನ್ನ ಇರುವಿಕೆಯಿಂದಲೇ ಸುಡುವದೆನಿಸುವದೋ ಅದರಂತೆ ಜ್ಞಾನರೂಪಾತ್ಮನಲ್ಲಿಯೂ (ಜ್ಞಾನಕರ್ತೃತ್ವವನ್ನು) ತಿಳಿಯಬೇಕು. ಏಕೆಂದರೆ ಸರ್ಪವು ಮೇಲಕ್ಕೆ ಬಂದಂತೆ ಉಪಾಧಿಯು ಜ್ಞಾತವಾದರೇ ಆ (ಸೂರ್ಯನಂತೆ) ಆತ್ಮನು ಯಾವ ಪ್ರಯತ್ನವೂ ಇಲ್ಲದವನಾದರೂ ಜ್ಞಾತೃವಾಗುತ್ತಾನೆ[2], ಸೂಜಿಕಲ್ಲಿನಂತೆ ಕರ್ತೃವಾಗುತ್ತಾನೆ[3].

**ಸ್ವರೂಪೇಣ ಸ್ವಯಂ ನಾತ್ಮಾ ಜ್ಞೇಯೋಽಜ್ಞೇಯೋಽಥವಾ ತತಃ ।**
**ವಿದಿವಿದಿತಾಭ್ಯಾಂ ತದನ್ಯದೇವೇತಿ ಶಾಸನಾತ್ ।**
**ಬನ್ಧಮೋಕ್ಷಾದಯೋ ಭಾವಾಸ್ತದ್ವದಾತ್ಮನಿ ಕಲ್ಪಿತಾಃ ॥ ೪೯ ॥**

೪೮–೪೯. ಆದ್ದರಿಂದ ಆತ್ಮನು ತನ್ನ ಸ್ವರೂಪದಿಂದ ಜ್ಞೇಯನೂ ಅಲ್ಲ ಅಜ್ಞೇಯನೂ ಅಲ್ಲ[4]. ಆ (ಬ್ರಹ್ಮವು) ವಿದಿತ, ಅವಿದಿತ –ಈ ಎರಡಕ್ಕಿಂತಲೂ ಬೇರೆಯ (ಸ್ವಭಾವದ್ದೇ) ಎಂದು (ಕೇ. ೧–೪) ಶ್ರುತಿಯಲ್ಲಿ ಹೇಳಿರುವದರಿಂದ (ಹೀಗೆಂದು ತಿಳಿಯಬೇಕು). ಇದರಂತೆ ಬಂಧ, ಮೋಕ್ಷ–ಮುಂತಾದ ಧರ್ಮಗಳೂ ಆತ್ಮನಲ್ಲಿ ಕಲ್ಪಿತವಾಗಿರುತ್ತವೆ[5].

**ನಾಹೋರಾತ್ರೇ ಯಥಾ ಸೂರ್ಯೇ ಪ್ರಭಾರೂಪಾವಿಶೇಷತಃ ।**
**ಬೋಧರೂಪಾವಿಶೇಷಾನ್ನ ಬೋಧಾಬೋಧೌ ತಥಾತ್ಮನಿ ॥ ೫೦ ॥**

---

1. ಬೆಂಕಿಯು ಎಂದು ವ್ಯಾಖ್ಯಾನದಂತೆ ಅಧ್ಯಾಹಾರಮಾಡಿಕೊಳ್ಳಬೇಕು. ಸೂರ್ಯನು ಎಂದು ಹಿಂದಿನ ವಾಕ್ಯದಿಂದ ಸೇರಿಸಿಕೊಂಡರೂ ಸಾಗುತ್ತದೆ. ಏಕೆಂದರೆ ಸೂರ್ಯನು ಸುಡುತ್ತಾನೆ.

2. ಜ್ಞಾನವೆಂಬ ಕ್ರಿಯೆಯನ್ನುಂಟುಮಾಡುವ ಪ್ರಯತ್ನವಿಲ್ಲದಿದ್ದರೂ ಸ್ವರೂಪದಿಂದಲೇ ಜ್ಞಾನಾತ್ಮಕನಾಗಿ ಜ್ಞಾತೃವೆನಿಸುತ್ತಾನೆ. ಜ್ಞೇಯವಾದ ಅನಾತ್ಮವಿರುವ ಜಾಗ್ರತ್ಸ್ವಪ್ನಗಳಲ್ಲಿ ಜ್ಞಾತೃವೆಂದೂ ಸುಷುಪ್ತಿಯಲ್ಲಿ ಅಜ್ಞಾತೃವೆಂದೂ ಕರೆಯಿಸಿಕೊಳ್ಳುತ್ತಾನೆ.

3. ಯಾವ ವ್ಯಾಪಾರವೂ ಇಲ್ಲದೆ ಗೌಣವಾಗಿ ಕರ್ತೃವೆನಿನಬಹುದು ಎಂದರ್ಥ.

4. ಸ್ವಯಂಪ್ರಕಾಶಸ್ವರೂಪನಾಗಿರುವದರಿಂದ ಅವನಲ್ಲಿ ಜ್ಞಾತೃತ್ವವೆಂಬ ಧರ್ಮವಿಲ್ಲದಿರುವಂತೆ ಜ್ಞೇಯತ್ವವೂ ಇರುವದಿಲ್ಲ.

5. ಜ್ಞೇಯವಾದ ನಾಮರೂಪಗಳನ್ನು ಸಂಬಂಧಿಸದೆ ಆತ್ಮನಿಗೆ ಬಂಧಾದಿಗಳನ್ನೂ ಕಲ್ಪಿಸುವದಕ್ಕೆ ಬರುವದಿಲ್ಲ ಎಂದು ಭಾವ.

೫೦. ಯಾವಾಗಲೂ ಪ್ರಕಾಶರೂಪವೇ ಆಗಿರುವ ಸೂರ್ಯನಲ್ಲಿ ಹಗಲು ರಾತ್ರಿಗಳು ಹೇಗೆ ಇರುವದಿಲ್ಲವೋ ಹಾಗೆ ಜ್ಞಾನಸ್ವರೂಪವೇ ಆಗಿರುವ ಆತ್ಮನಲ್ಲಿ ಜ್ಞಾನಾಜ್ಞಾನಗಳಿರುವದಿಲ್ಲ[1].

## ಆತ್ಮಜ್ಞಾನದ ಫಲ

**ಯಥೋಕ್ತಂ ಬ್ರಹ್ಮ ಯೋ ವೇದ ಹಾನೋಪಾದಾನವರ್ಜಿತಮ್ ।**
**ಯಥೋಕ್ತೇನ ವಿಧಾನೇನ ಸ ಸತ್ಯಂ ನೈವ ಜಾಯತೇ ॥ ೫೧ ॥**

೫೧. ಬಿಡುವದಾಗಲಿ ತೆಗೆದುಕೊಳ್ಳುವದಾಗಲಿ (ಯಾವದೂ) ಇಲ್ಲದ[2] ಈ ಮೇಲೆ ಹೇಳಿದ ಬ್ರಹ್ಮವನ್ನು ಮೇಲೆ ಹೇಳಿದ ರೀತಿಯಿಂದ[3] ಯಾವನು ಅರಿತುಕೊಳ್ಳುವನೋ ಅವನು ನಿಜವಾಗಿಯೂ ಹುಟ್ಟುವದಿಲ್ಲ[4].

**ಜನ್ಮಮೃತ್ಯುಪ್ರವಾಹೇಷು ಪತಿತೋ ನೈವ ಶಕ್ನುಯಾತ್ ।**
**ಇತ ಉದ್ಧರ್ತುಮಾತ್ಮಾನಂ ಜ್ಞಾನಾದನ್ಯೇನ ಕೇನಚಿತ್ ॥ ೫೨ ॥**

೫೨. ಹುಟ್ಟುಸಾವುಗಳ ಪ್ರವಾಹದಲ್ಲಿ ಬಿದ್ದಿರುವಾತನು ಇದಕ್ಕಿಂತ ಬೇರೆ ಯಾವ ಜ್ಞಾನದಿಂದಲೂ[5] ತನ್ನನ್ನು (ತಾನು) ಉದ್ಧಾರಮಾಡಿಕೊಳ್ಳಲಾರನು.

**ಭಿದ್ಯತೇ ಹೃದಯಗ್ರನ್ಥಿಶ್ಛಿದ್ಯನ್ತೇ ಸರ್ವಸಂಶಯಾಃ ।**
**ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಇತಿ ಶ್ರುತೇ ॥ ೫೩ ॥**

1. ಆತ್ಮನು ನಿತ್ಯಜ್ಞಾನಸ್ವರೂಪನು; ಅವನಲ್ಲಿ ಅಂತಃಕರಣದ ಧರ್ಮಗಳಾದ ಜ್ಞಾನಾಜ್ಞಾನಗಳಿಲ್ಲ.

2. ಅನಾತ್ಮವಾದರೆ ಬಿಡುವದಕ್ಕಾಗಲಿ ತೆಗೆದುಕೊಳ್ಳುವದಕ್ಕಾಗಲಿ ಶಕ್ಯವಾಗಿರುತ್ತದೆ. ಆದರೆ ತನ್ನನ್ನು ತಾನು ಬಿಡುವದೂ ಆಗುವದಿಲ್ಲ, ತೆಗೆದುಕೊಳ್ಳುವದೂ ಆಗುವದಿಲ್ಲ. ಏಕೆಂದರೆ ಮೊದಲೇ ತಾನು ಸಿದ್ಧವಾಗಿದ್ದರೆ ಬಿಡುವದೂ ತೆಗೆದುಕೊಳ್ಳುವದೂ ಆಗುತ್ತದೆ.

3. ಆತ್ಮನಲ್ಲಿ ಜ್ಞಾನಾಜ್ಞಾನಗಳಿಲ್ಲ, ಜ್ಞೇಯತ್ವಾಜ್ಞೇಯತ್ವಗಳಿಲ್ಲ, ಜ್ಞಾತೃತ್ವಾಜ್ಞಾತೃತ್ವಗಳೂ ಇಲ್ಲ; ಅವನು ನಿತ್ಯಶುದ್ಧಚೈತನ್ಯಸ್ವರೂಪನಾಗಿರುತ್ತಾನೆ -ಎಂದು.

4. ಅವನದು ಹುಟ್ಟುವದೇ ಮುಂತಾದ ವಿಕಾರಗಳಿಲ್ಲದ ಸ್ವಭಾವವಾಗಿರುತ್ತದೆ. ಅವನು ಹುಟ್ಟುವದಿಲ್ಲ ಎಂದರೆ ಅಜ್ಞಾನವನ್ನು ಕಳೆದುಕೊಂಡು ತನಗೆ ಹುಟ್ಟೇ ಇಲ್ಲವೆಂದು ಅರಿತುಕೊಳ್ಳುತ್ತಾನೆ ಎಂದರ್ಥ.

5. ಅದ್ವೈತಜ್ಞಾನವನ್ನು ಬಿಟ್ಟು ಮಿಕ್ಕ ಜ್ಞಾನದಿಂದ ಎಂದರ್ಥ.

೫೩. "ಆ (ಪರಾವರನಾದ ಪರಮಾತ್ಮನನ್ನು) ಕಂಡುಕೊಂಡರೆ ಹೃದಯಗ್ರಂಥಿಗಳು ಬಿಚ್ಚಿಕೊಳ್ಳುವವು[1], ಸಂಶಯಗಳೆಲ್ಲ ಕತ್ತರಿಸಿಹೋಗುವವು; ಈತನ ಕರ್ಮಗಳೂ ಕ್ಷಯವಾಗುವವು" (ಮುಂ. ೨-೨-೮) ಎಂಬ ಶ್ರುತಿಪ್ರಮಾಣದಿಂದ (ಇದು ಸಿದ್ಧವಾಗುತ್ತದೆ)[2].

ಮಮಾಹಮಿತ್ಯೇತದಪೋಹ್ಯ ಸರ್ವತೋ
ವಿಮುಕ್ತದೇಹಂ ಪದಮಮ್ಬರೋಪಮಮ್ ॥
ಸುದೃಷ್ಟಶಾಸ್ತ್ರಾನುಮಿತಿಭ್ಯ ಈರಿತಂ
ವಿಮುಚ್ಯತೇಽಸ್ಮಿನ್ ಯದಿ ನಿಶ್ಚಿತೋ ನರಃ ॥ ೫೪ ॥

೫೪. ಯಾವ ದೇಹವೂ ಇಲ್ಲದ[3], ಆಕಾಶದಂತಿರುವ[4] ಸ್ಥಾನವನ್ನು[5] ಚೆನ್ನಾಗಿ ವಿಚಾರಮಾಡಿದ ಶಾಸ್ತ್ರ ಮತ್ತು ಅನುಮಾನ -ಇವುಗಳ (ಬಲ)ದಿಂದ[6] ಹೇಳಿರುತ್ತದೆ. ಎಲ್ಲದರಲ್ಲಿಯೂ[7] ನಾನುನನ್ನದೆಂಬಿದನ್ನು ಬಿಟ್ಟು ಈ (ಆತ್ಮತತ್ತ್ವ)ದಲ್ಲಿಯೇ ಮನುಷ್ಯನು ನಿಶ್ಚಯವುಳ್ಳವನಾದರೆ[8] ವಿಮುಕ್ತನಾಗುವನು.

---:o:---

1. ಗಂಟುಹಾಕಿಕೊಂಡಿರುವ ಕಾಮಗಳು ಬಿಚ್ಚಿಕೊಳ್ಳುವವು.

2. ಆತ್ಮಜ್ಞಾನದಿಂದ ಅವಿದ್ಯಾಕಾಮಕರ್ಮಗಳು ನಾಶವಾಗುವವು ಎಂದು ಶ್ರುತಿ ಹೇಳಿರುವದರಿಂದ ಜನ್ಮಮರಣನಾಶಕ್ಕೆ ಈ ಜ್ಞಾನವೇ ಉಪಾಯವೆಂದು ಏರ್ಪಡುತ್ತದೆ.

3. ಸ್ಥೂಲಸೂಕ್ಷ್ಮದೇಹರಹಿತವಾದ.

4. ಸರ್ವಗತವೂ ಸೂಕ್ಷ್ಮವೂ ನಿತ್ಯವೂ ಆದ.

5. ಬ್ರಹ್ಮವನ್ನು.

6. ಅನುಮಾನವು ಸ್ವತಂತ್ರಪ್ರಮಾಣವಲ್ಲ; ಶಾಸ್ತ್ರಪ್ರಮಾಣದಿಂದಲೂ ಅದಕ್ಕನುಸಾರವಾದ ಯುಕ್ತಿಯಿಂದಲೂ ಎಂದರ್ಥ.

7. ಅನಾತ್ಮದಲ್ಲೆಲ್ಲ.

8. ನಾನೇ ಅದೆಂಬ ನಿಷ್ಠೆಯನ್ನು ಪಡೆದುಕೊಂಡರೆ.

# ನಿಷ್ಕ್ರಿಯಾತ್ಮಪ್ರಕರಣದ ಸಾರ

೧. ಮುಕ್ತನಾಗುವದಕ್ಕೆ ತಾನು ಮತ್ತೊಂದು ತತ್ತ್ವವಾಗಿ ಪರಿಣಮಿಸಬೇಕೆಂದು ಭಾವಿಸಬಾರದು. ಒಂದು ವಸ್ತು ಮತ್ತೊಂದಾಗಲಾರದು, ಆದರೂ ಅದರ ಸ್ವರೂಪಕ್ಕೆ ನಾಶವುಂಟಾಗಬೇಕಾಗುವದು. ಆದ್ದರಿಂದ ಮೋಕ್ಷಕ್ಕಾಗಿ ಸ್ವರೂಪಜ್ಞಾನವನ್ನೇ ಸಂಪಾದಿಸಿಕೊಳ್ಳಬೇಕು.

೨-೯. ಆತ್ಮನು ಎಚ್ಚರದಲ್ಲಿಯೂ ಕನಸಿನಲ್ಲಿಯೂ ತನಗೆ ವಿಷಯವಾಗಿ ಕಾಣಿಸುವ ಮನಸ್ಸಿಗಿಂತ ಭಿನ್ನನು; ವರ್ಣಾಶ್ರಮಗಳಿಲ್ಲದವನು. ಆದ್ದರಿಂದ ಅಜ್ಞಾನದಿಂದ ಕರ್ಮ ವನ್ನು ಮಾಡಿ ಶರೀರವನ್ನು ಧರಿಸುವವನ್ನು ಬಿಟ್ಟು ಆತ್ಮಜ್ಞಾನವನ್ನು ಸಂಪಾದಿಸಿಕೊಂಡು ಮುಕ್ತನಾಗಬೇಕು.

೧೦-೧೩. ಆತ್ಮನು ಸರ್ವಭೂತಗಳಲ್ಲಿಯೂ ಒಬ್ಬನೇ ಎಂದೂ ಸ್ಥೂಲಸೂಕ್ಷ್ಮ ದೇಹಗಳಿಲ್ಲದವನೆಂದೂ ಶ್ರುತಿಸ್ಮೃತಿಗಳಿಂದ ಸಿದ್ಧವಾಗಿರುತ್ತದೆ. ಆದ್ದರಿಂದ ಶರೀರದಲ್ಲಿಯೂ ಮನಸ್ಸಿನಲ್ಲಿಯೂ ನಾನೆಂಬ ಅಭಿಮಾನವನ್ನು ಬಿಟ್ಟು ಆತ್ಮಸ್ವರೂಪದಲ್ಲಿ ನಿಲ್ಲಬೇಕು.

೧೪-೨೮. ಆತ್ಮಸ್ವರೂಪವು ಮತ್ತೊಂದು ಕರ್ಮದ ಅಪೇಕ್ಷೆಯಿಂದ ಬರತಕ್ಕದ್ದಲ್ಲ. ಅದು ನಿತ್ಯಸಿದ್ಧವಾಗಿರುತ್ತದೆ. ಆ ಸ್ವರೂಪವು ಆಕಾಶದಂತೆ ಅಖಂಡೈಕರಸವಾಗಿ ಸರ್ವ ಭೂತಗಳಲ್ಲಿಯೂ ಅವಿಭಕ್ತವಾಗಿದ್ದರೂ ಇಂದ್ರಿಯಜ್ಞಾನಗಳಿಂದ ಬೇರೆಬೇರೆಯಾಗಿ ಅನೇಕ ವಾಗಿರುವಂತೆ ಕಾಣಿಸುತ್ತಿರುವದು. ನಾನು ಎಂಬುದಾಗಲಿ ಮತ್ತೆ ಯಾವ ಪ್ರತ್ಯಯಗಳಾಗಲಿ ರಾಗದ್ವೇಷಾದಿಗಳಾಗಲಿ ಆತ್ಮಧರ್ಮವಲ್ಲ; ಏಕೆಂದರೆ ಅದು ದೃಶ್ಯವಾಗಿರುತ್ತದೆ. ಆತ್ಮನು ಈ ಎಲ್ಲವನ್ನೂ ನೋಡುತ್ತಿರುವ ಸಾಕ್ಷಿಯಾಗಿರುವದರಿಂದ ನಿರ್ವಿಕಾರನಾಗಿರುತ್ತಾನೆ. ಅವ ನಿಗೆ ದೇಹ, ಕರಣ, ಇವುಗಳ ಸಂಘಾತ, ಮನೋಬುದ್ಧಿಗಳು, ಇವುಗಳ ಅವಸ್ಥೆಗಳು –ಇವು ಯಾವವೂ ಸೇರಿರುವದಿಲ್ಲ; ಅವೆಲ್ಲವೂ ದೃಶ್ಯವೇ. ಆತ್ಮನನ್ನು ಸರ್ವಜ್ಞನೆಂದೂ ಸರ್ವಕರ್ತೃವೆಂದೂ ಹೇಳುವದು ಈ ಉಪಾಧಿಗಳಿಂದಲೇ.

೨೯-೫೦. ಆತ್ಮನ ನಿರುಪಾಧಿಕವಾದ ಸ್ವರೂಪವು ವಾಙ್ಮನಸ್ಸುಗಳಿಗೆ ಅಗೋಚರ ವಾಗಿರುತ್ತದೆ. ಅದನ್ನು ಚೇತನ, ಅಚೇತನ –ಎಂದು ಮುಂತಾಗಿ ವಿಕಲ್ಪಿಸುವದಕ್ಕೆ ಆಗು ವದಿಲ್ಲ. ಅವನು ಅವಸ್ಥಾತ್ರಯರಹಿತನು, ಅವಸ್ಥಾತ್ರಯಸಾಕ್ಷಿಯು, ಅಂತಃಕರಣದ ಲ್ಲುಂಟಾಗುವ ಯಾವ ಪ್ರತ್ಯಯಕ್ಕೂ ವಿಷಯನಲ್ಲ. ಅವನನ್ನು ಅರಿಯಬೇಕಾದದ್ದಿರುವ ದಿಲ್ಲ, ನಿತ್ಯಸಿದ್ಧಚೈತನ್ಯರೂಪನಾಗಿರುತ್ತಾನೆ. ಆತ್ಮನು ಜ್ಞಾನಕರ್ತೃವೂ ಅಲ್ಲ, ಸೂರ್ಯನು ಪ್ರಕಾಶಕನೆನ್ನುವಂತೆಯೂ ಅಗ್ನಿಯು ದಗ್ಧೃವೆನ್ನುವಂತೆಯೂ ಅವನನ್ನು ಜ್ಞಾತೃವೆಂದು ಗೌಣವೃತ್ತಿಯಿಂದ ಕರೆಯಬಹುದು. ಆತ್ಮನಲ್ಲಿ ಜ್ಞಾನಾಜ್ಞಾನಗಳಿಲ್ಲ; ಅವನು ಜ್ಞೇಯವೂ ಅಲ್ಲ, ಅಜ್ಞೇಯನೂ ಅಲ್ಲ.

೫೧-೫೫. ಇಂಥ ನಿರುಪಾಧಿಕಬ್ರಹ್ಮವೇ ತಾನೆಂದು ಯಾವನು ಅರಿತುಕೊಳ್ಳುವನೋ ಅವನಿಗೆ ಜನನಮರಣಗಳ ಸಂಸಾರವಿಲ್ಲ. ಏಕೆಂದರೆ ಅವಿದ್ಯಾಕಾಮಕರ್ಮಗಳೆಲ್ಲ ಆ ಜ್ಞಾನದಿಂದ ನಾಶವಾಗಿಬಿಡುತ್ತವೆ. ಈ ಉಪದೇಶವು ಶಾಸ್ತ್ರಯುಕ್ತ್ಯನುಭವಗಳಿಗೆ ಹೊಂದುಗಡೆಯಾಗಿರುವದರಿಂದ ಇಲ್ಲಿ ಹೇಳಿದ ಆತ್ಮಸ್ವರೂಪದಲ್ಲಿ ನೆಲೆನಿಂತವನು ಮುಕ್ತ ನಾಗುವನು.



# ೧೬. ಸ್ವಯಂಜ್ಯೋತಿ[1]

## ಸ್ವಯಂಜ್ಯೋತಿಯಾದ ಆತ್ಮನು ಅನಾತ್ಮವನ್ನು ಬೆಳಗುತ್ತಿದಾನೆ

**ಪಾರ್ಥಿವಃ ಕಠಿನೋ ಧಾತುರ್ದ್ರವೋ ದೇಹೇ ಸ್ಮೃತೋಽಮ್ಮಯಃ ।**
**ಪಕ್ತಿಚೇಷ್ಟಾವಕಾಶಾಃ ಸ್ಯುರ್ವಹ್ನಿವಾಯ್ವಮ್ಬರೋದ್ಭವಾಃ ॥ ೧ ॥**

೧. ದೇಹದಲ್ಲಿ ಗಟ್ಟಿಯಾಗಿರುವ ಧಾತು ಪೃಥ್ವಿಯ ವಿಕಾರವು; ನೀರಾಗಿರುವದು ಅಪ್ಪಿನ ವಿಕಾರವೆನಿಸುವದು. ಪಚನ, ಚಲನ, ಅವಕಾಶ –ಇವು (ಕ್ರಮವಾಗಿ) ಅಗ್ನಿ, ವಾಯು, ಆಕಾಶ –ಇವುಗಳಿಂದಾಗಿರುತ್ತವೆ[2].

**ಘ್ರಾಣಾದೀನಿ ತದರ್ಥಾಶ್ಚ ಪೃಥಿವ್ಯಾದಿಗುಣಾಃ ಕ್ರಮಾತ್ ।**
**ರೂಪಾಲೋಕವದಿಷ್ಟಂ ಹಿ ಸಜಾತೀಯಾರ್ಥಮಿನ್ದ್ರಿಯಮ್ ॥ ೨ ॥**

೨. ಘ್ರಾಣವೇ ಮುಂತಾದವು ಕ್ರಮವಾಗಿ ಪೃಥಿವಿಯೇ ಮುಂತಾದವುಗಳ ಗುಣವುಳ್ಳವಾಗಿರುತ್ತವೆ. ರೂಪವನ್ನು (ತೋರುವ) ಬೆಳಕಿನಂತೆ[3] ಇಂದ್ರಿಯವು ಸಜಾತೀಯವಾದ ವಿಷಯವುಳ್ಳದ್ದು ಎಂಬುದೇ ಇಷ್ಟವಾಗಿರುತ್ತದೆ.

**ಬುದ್ಧ್ಯರ್ಥಾನ್ಯಾಹುರೇತಾನಿ ವಾಕ್ಪಾಣ್ಯಾದೀನಿ ಕರ್ಮಣೇ ।**
**ತದ್ವಿಕಲ್ಪಾರ್ಥಮನ್ತಃಸ್ಥಂ ಮನ ಏಕಾದಶಂ ಭವೇತ್ ॥ ೩ ॥**
**ನಿಶ್ಚಯಾರ್ಥಾ ಭವೇದ್ ಬುದ್ಧಿಸ್ತಾಂ ಸರ್ವಾರ್ಥಾನುಭಾವಿನೀಮ್ ।**
**ಜ್ಞಾತಾತ್ಮೋಕ್ತಃ ಸ್ವರೂಪೇಣ ಜ್ಯೋತಿಷಾ ವ್ಯಞ್ಜಯನ್ ಸದಾ ॥ ೪**

೩–೪. ಇವು ಜ್ಞಾನಕ್ಕಾಗಿರುವ ಇಂದ್ರಿಯಗಳೆನ್ನುವರು. ವಾಕ್ಕು, ಪಾಣಿ –ಮುಂತಾದವು ಕರ್ಮಕ್ಕಾಗಿ (ಇರುವ ಇಂದ್ರಿಯಗಳು). ಅವುಗಳನ್ನು ವಿಕಲ್ಪಿಸುವದಕ್ಕೆ ಒಳಗಿರುವ ಮನಸ್ಸು ಹನ್ನೊಂದನೆಯದಾಗಿರುವದು. ನಿಶ್ಚಯಕ್ಕಾಗಿರುವದು ಬುದ್ಧಿಯು[4]. ಎಲ್ಲಾ ವಿಷಯಗಳನ್ನೂ ಅನುಭವಿಸುವ ಆ ಬುದ್ಧಿಯನ್ನು ಯಾವಾಗಲೂ ತನ್ನ ಸ್ವರೂಪವಾದ ಬೆಳಕಿನಿಂದ[5] ತೋರಿಸುತ್ತಿರುವ ಆತ್ಮನೇ ಜ್ಞಾತೃವೆನಿಸುತ್ತಾನೆ.

1. ಇದನ್ನು ವ್ಯಾಖ್ಯಾನದಲ್ಲಿ ಪಾರ್ಥಿವ ಪ್ರಕರಣವೆಂದು ಕರೆದಿದೆ.
2. 'ಪೈಷಿಕರಸಾದಿಗಳು' ಎಂದು ೧೪-೪೧ರಲ್ಲಿ ಹೇಳಿರುವ ಪೃಥಿವ್ಯಾದಿವಿಕಾರಗಳಿವು.
3. ಆಯಾ ಇಂದ್ರಿಯವು ಆಯಾ ವಿಷಯದ ಜಾತಿಗೇ ಸೇರಿದ್ದು –ಎಂದು ತಿಳಿಸುವದಕ್ಕೆ ರೂಪಾಲೋಕದ – ರೂಪವನ್ನು ತೋರಿಸುವ ಬೆಳಕಿನ – ದೃಷ್ಟಾಂತ.
4. ಬುದ್ಧ್ಯಂತವಾಗಿರುವದೆಲ್ಲವೂ ಭೌತಿಕವೇ, ಅನಾತ್ಮವೇ.
5. ಯಾವ ವಿಕಾರವನ್ನೂ ಹೊಂದದೆ ಇರುವ ಚೈತನ್ಯಪ್ರಕಾಶದಿಂದ ಎಂದರ್ಥ.

## ಆತ್ಮನಿಗೆ ಅಂತಃಕರಣಧರ್ಮಗಳ ಸಂಬಂಧವಿಲ್ಲ

**ವ್ಯಞ್ಜಕಸ್ತು ಯಥಾಲೋಕೋ ವ್ಯಙ್ಗ್ಯಸ್ಯಾಕಾರತಾಂ ಗತಃ |**
**ವ್ಯತಿಕೀರ್ಣೋಽಪ್ಯಸಙ್ಕೀರ್ಣಸ್ತದ್ವಜ್ಜ್ಞಃ ಪ್ರತ್ಯಯೈಃ ಸದಾ ॥ ೫ ॥**

೫. ತೋರಿಸುವ ಬೆಳಕು ತೋರಿಸಲ್ಪಡುವ (ವಿಷಯದ) ಆಕಾರವನ್ನು ಹೊಂದಿ ಅದರೊಡನೆ ಬೆರೆತುಕೊಂಡಿದ್ದರೂ ಹೇಗೆ (ನಿಜವಾಗಿ) ಬೆರೆತು ಕೊಂಡಿರುವದಿಲ್ಲವೋ[1] ಹಾಗೆ ಆತ್ಮನು ಪ್ರತ್ಯಯಗಳೊಡನೆ ಯಾವಾಗಲೂ (ಬೆರೆತುಕೊಂಡಿದ್ದರೂ ಬೆರೆತುಕೊಂಡಿರುವದಿಲ್ಲ).

**ಸ್ಥಿತೋ ದೀಪೋ ಯಥಾಯತ್ನಃ ಪ್ರಾಪ್ತಂ ಸರ್ವಂ ಪ್ರಕಾಶಯೇತ್ |**
**ಶಬ್ದಾದ್ಯಾಕಾರಬುದ್ಧೀರ್ಜ್ಞಃ ಪ್ರಾಪ್ತಾಸ್ತದ್ವತ್[2] ಪ್ರಪಶ್ಯತಿ ॥ ೬ ॥**

೬. ದೀಪವು ಇದ್ದಂತೆ ಇದ್ದುಕೊಂಡು ಯಾವ ಪ್ರಯತ್ನವೂ ಇಲ್ಲದೆ[3] (ಎದುರಿಗೆ) ಬಂದೊದಗಿದ್ದೆಲ್ಲವನ್ನೂ ಹೇಗೆ ಬೆಳಗುತ್ತದೆಯೋ ಅದರಂತೆ[4] ಶಬ್ದವೇ ಮುಂತಾದ ಆಕಾರದಲ್ಲಿರುವ ಬುದ್ಧಿಗಳು ಎದುರಿಗೆ ಬಂದಂತೆ ಆತ್ಮನು (ಅವುಗಳನ್ನು) ನೋಡುತ್ತಿರುತ್ತಾನೆ.

**ಶರೀರೇನ್ದ್ರಿಯಸಙ್ಘಾತೇ ಆತ್ಮತ್ವೇನ ಗತಾಂ ಧಿಯಮ್ |**
**ನಿತ್ಯಾತ್ಮಜ್ಯೋತಿಷಾ ದೀಪ್ತಾಂ ವಿಶಿಂಷನ್ತಿ ಸುಖಾದಯಃ ॥೭॥**

೭. ಶರೀರೇಂದ್ರಿಯಗಳ ಗುಂಪಿನಲ್ಲಿ ತಾನೆಂಬ ಬುದ್ಧಿಯು ಉಂಟಾಗಿರಲು ನಿತ್ಯವಾದ ಆತ್ಮಜ್ಯೋತಿಯಿಂದ ಬೆಳಗಲ್ಪಟ್ಟ ಆ (ಅಂತಃಕರಣಕ್ಕೆ) ಸುಖವೇ ಮುಂತಾದವು ವಿಶೇಷಣವಾಗಿರುತ್ತವೆ[5].

---

1. ವಿಷಯವನ್ನು ಬೆಳಗುವ ಬೆಳಕು ಅವನ್ನೆಲ್ಲ ಮುತ್ತಿಕೊಂಡಿದ್ದರೂ ಅವಕ್ಕಿಂತ ವ್ಯತಿರಿಕ್ತವಾಗಿ ತನ್ನ ಸ್ವರೂಪದಲ್ಲಿಯೇ ಇರುವಂತೆ ಚೈತನ್ಯಪ್ರಕಾಶವು ಅಂತಃಕರಣ ಪ್ರತ್ಯಯಗಳನ್ನು ಬೆಳಗುತ್ತಿದ್ದರೂ ಅವುಗಳಿಗಿಂತ ಬೇರೆಯೇ ಆಗಿರುತ್ತದೆ. ಅದರಲ್ಲಿ ಯಾವ ವಿಕಾರವೂ ಆಗಿರುವದಿಲ್ಲ.

2. 'ಪ್ರಾಪ್ತಾಃ ಸರ್ವಾಃ' ಎಂದು ಬೋಧನಿಧಿಯ ಪಾಠ.

3. ಸನ್ನಿಧಿಮಾತ್ರದಿಂದ ಎಂದರ್ಥ.

4. ಬೋಧನಿಧಿಯ ಪಾಠದಲ್ಲಿ 'ಎಲ್ಲಾ ಬುದ್ಧಿವೃತ್ತಿಗಳನ್ನೂ' ಎಂದು ಕನ್ನಡಿಸಬೇಕು. ಆಗ ತಥಾ ಎಂಬ ಮಾತು ಅಧ್ಯಾಹೃತವಾಗಿರುತ್ತದೆ. ಆತ್ಮನಿಗೆ ವೃತ್ತಿಗಳ ಆಕಾರವಾಗಬೇಕಾದ ಪ್ರಯತ್ನವು ಅವಶ್ಯವಾಗುವದಿಲ್ಲ ಎಂದರ್ಥ.

5. ಚಿದಾಭಾಸಯುಕ್ತವಾದ ಅಂತಃಕರಣದಲ್ಲಿ ಸುಖಾದಿವೃತ್ತಿಗಳು ಉಂಟಾಗುತ್ತವೆ.

**ಶಿರೋದುಃಖಾದಿನಾತ್ಮಾನಂ ದುಃಖ್ಯಸ್ಮೀತಿ ಹಿ ಪಶ್ಯತಿ ।**
**ದ್ರಷ್ಟಾನ್ಯೋ ದುಃಖಿನೋ ದೃಶ್ಯಾದ್ ದ್ರಷ್ಟೃತ್ವಾಚ್ಚ ನ ದುಃಖ್ಯಸೌ ॥**

೮. ತಲೆನೋವೇ ಮುಂತಾದವುಗಳಿಂದ[1] ತಾನೇ ದುಃಖಿ ಎಂದಲ್ಲವೆ, ತಿಳಿದುಕೊಳ್ಳುತ್ತಾನೆ? ದೃಶ್ಯನಾದ ದುಃಖಿಗಿಂತ ದ್ರಷ್ಟೃವಾದವನು ಬೇರೆಯೇ; ಅವನು ದ್ರಷ್ಟೃವಾಗಿರುವದರಿಂದ ದುಃಖಿಯಲ್ಲ.

**ದುಃಖೀ ಸ್ಯಾದ್ ದುಃಖ್ಯಹಂಮಾನಾದ್ ದುಃಖಿನೋ ದರ್ಶನಾನ್ನ ವಾ।**
**ಸಂಹತೇಽಙ್ಗಾದಿಭಿರ್ದ್ರಷ್ಟಾ ದುಃಖೀ ದುಃಖಸ್ಯ ನೈವ ಸಃ ॥ ೯ ॥**

೯. ದುಃಖಿಯು ನಾನು ಎಂಬ ಅಭಿಮಾನದಿಂದ ದುಃಖಿಯಾಗುತ್ತಾನೆ, ದುಃಖಿಯನ್ನು ನೋಡುವದರಿಂದ ಆಗುವದೇ ಇಲ್ಲ. ಶರೀರಾದಿಗಳೊಡನೆ ಸಂಹತವಾಗಿರುವ ದುಃಖವನ್ನು ನೋಡುವಾತನು ದುಃಖಿಯಲ್ಲವೇ ಅಲ್ಲ[2].

## ಆತ್ಮನು ತನಗೆ ತಾನೇ ವಿಷಯವಲ್ಲ

**ಚಕ್ಷುರ್ವತ್ ಕರ್ಮಕರ್ತೃತ್ವಂ ಸ್ಯಾಚ್ಚೇನ್ನಾನೇಕಮೇವ ತತ್ ।**
**ಸಂಹತಂ ಚ ತತೋ ನಾತ್ಮಾ ದ್ರಷ್ಟೃತ್ವಾತ್ ಕರ್ಮತಾಂ ವ್ರಜೇತ್ ॥**

೧೦. ಕಣ್ಣಿನಂತೆ[3] ಕರ್ಮಕರ್ತೃತ್ವವಾಗಬಹುದು ಎಂದರೆ ಹಾಗಲ್ಲ; ಏಕೆಂದರೆ ಅದು ಅನೇಕವೇ[4] ಆಗಿರುತ್ತದೆ, (ಮತ್ತೊಂದರೊಡನೆ) ಸಂಹತವಾಗಿಯೂ ಇರುತ್ತದೆ. ಆದ್ದರಿಂದ ದ್ರಷ್ಟೃವಾಗಿರುವದರಿಂದ ಆತ್ಮನು (ತನಗೆ ತಾನೇ) ಕರ್ಮವಾಗಲಾರನು[5].

1. ದೃಶ್ಯವಾದ ತಲೆಯೇ ಮುಂತಾದವುಗಳಲ್ಲಿರುವ ನೋವನ್ನು ತನ್ನಲ್ಲಿ ನೋವಿದೆ ಎಂದು ತಿಳಿಯುವದು ಅಧ್ಯಾರೋಪವು, ಪರಮಾರ್ಥವಲ್ಲ. ಉ. ಸಾ. ಗದ್ಯ ೨೪ನ್ನು ನೋಡಿ.

2. ದುಃಖಿಯನ್ನೂ ದುಃಖವನ್ನೂ ನೋಡುವ ಸಾಕ್ಷಿಯು ಅವುಗಳಿಗಿಂತ ಬೇರೆಯಾಗಿರುತ್ತಾನೆ.

3. ಕಣ್ಣು ಹೇಗೆ ತನಗಿಂತ ಬೇರೆಯಾದ ವಸ್ತುವನ್ನೂ ಅರಿಯುವದೋ ತನ್ನೊಳಗಿನ ನೋವನ್ನೂ ಅರಿಯುವದೋ ಹಾಗೆ.

4. ಸಾವಯವವೇ ಎಂದರ್ಥ.

5. ಕಣ್ಣು ದ್ರಷ್ಟೃವೆಂಬುದು ಉಪಚಾರಕ್ಕೆ; ಅದು ಸಾವಯವವೂ ಸಂಹತವೂ ಆಗಿರುವದರಿಂದ ದೃಶ್ಯವಾದ ಅನಾತ್ಮವಾಗಿರುತ್ತದೆ. ಆತ್ಮನು ಏಕನು, ಅಸಂಹತನು, ನಿತ್ಯದೃಗ್ರೂಪನು; ಆದ್ದರಿಂದ ಆವನು ತನಗಾಗಲಿ ಮತ್ತೊಂದಕ್ಕಾಗಲಿ ಕರ್ಮವಲ್ಲ.

**ಜ್ಞಾನಯತ್ನಾದ್ಯನೇಕತ್ವಮಾತ್ಮನೋಽಪಿ ಮತಂ ಯದಿ ।**
**ನೈಕಜ್ಞಾನಗುಣತ್ವಾತ್ತು ಜ್ಯೋತಿರ್ವತ್ತಸ್ಯ ಕರ್ಮತಾ ॥ ೧೧ ॥**
**ಜ್ಯೋತಿಷೋ ದ್ಯೋತಕತ್ವೇಽಪಿ ಯದ್ವನ್ನಾತ್ಮಪ್ರಕಾಶನಮ್ ।**
**ಭೇದೇಽಪ್ಯೇವಂ ಸಮತ್ವಾಜ್ಜ್ಞ ಆತ್ಮಾನಂ ನೈವ ಪಶ್ಯತಿ ॥ ೧೨ ॥**

೧೧–೧೨. ಜ್ಞಾನ, ಯತ್ನ – ಮುಂತಾದ ಗುಣಗಳಿಂದ ಆತ್ಮನೂ ಅನೇಕವಾಗಿರುತ್ತಾನೆಂದು ನಿಮ್ಮ ಮತವಾದರೆ[1] (ಅದು) ಸರಿಯಲ್ಲ. ಏಕೆಂದರೆ ಬೆಳಕಿನಂತೆ ಜ್ಞಾನವೆಂಬುದೊಂದೇ ಅವನ ಗುಣವಾದ್ದರಿಂದ ಅವನು ಕರ್ಮವಾಗಲಾರನು[2]; ಬೆಳಕು (ಪದಾರ್ಥಗಳನ್ನು) ಬೆಳಗತಕ್ಕದ್ದಾದರೂ ಹೇಗೆ ತನ್ನನ್ನು (ತಾನು) ಬೆಳಗದಿರುವದೋ ಅದರಂತೆ[3] ಆತ್ಮನಲ್ಲಿ ಭೇದವಿದ್ದರೂ (ಎರಡೂ) ಸಮವಾಗಿರುವದರಿಂದ ಆತ್ಮನು ತನ್ನನ್ನು ತಾನು ಬೆಳಗಲಾರನು[4].

**ಯದ್ಧರ್ಮಾ ಯಃ ಪದಾರ್ಥೋ ನ ತಸ್ಯೈವೇಯಾತ್ ಸ ಕರ್ಮತಾಮ್**
**ನ ಹ್ಯಾತ್ಮಾನಂ ದಹತ್ಯಗ್ನಿಸ್ತಥಾ ನೈವ ಪ್ರಕಾಶಯೇತ್ ॥ ೧೩ ॥**

೧೩. ಯಾವ ಪದಾರ್ಥವು ಯಾವ ಧರ್ಮವುಳ್ಳದ್ದೋ ಆ ಧರ್ಮಕ್ಕೇ ಅದು ವಿಷಯವಾಗಲಾರದು. ಬೆಂಕಿಯು ತನ್ನನ್ನೇ ತಾನು ಸುಡಲಾರದು, ಬೆಳಗಲೂ ಆರದು. ಅಲ್ಲವೇ[5]?

---

1. ಜ್ಞಾನಾದ್ಯನೇಕಗುಣಗಳು ಆತ್ಮನ ಧರ್ಮಗಳೆಂದು ವೈಶೇಷಿಕರ ಮತ.

2. ಮಿಕ್ಕದ್ದೆಲ್ಲವೂ ಅಂತಃಕರಣಧರ್ಮವೆಂದು ಭಾವ. ಜ್ಞಾನವು ಆತ್ಮನ ಗುಣವೆಂಬುದೂ ಸ್ವರೂಪವಾದ ಧರ್ಮವೆಂಬ ಅಭಿಪ್ರಾಯದಿಂದ. ಉ. ಸಾ. ಗದ್ಯ ೫೧.

3. ಬೆಳಕಿಗೆ ಬೆಳಕಿನ ಅವಶ್ಯಕತೆಯಿಲ್ಲದಿರುವಂತೆ ಆತ್ಮಚೈತನ್ಯಕ್ಕೆ ಜ್ಞಾನದಿಂದ ಆಗಬೇಕಾದ ಅತಿಶಯವಿರುವದಿಲ್ಲ.

4. ಎರಡು ದೀಪಗಳು ಒಂದನ್ನೊಂದು ಬೆಳಗುವವೆಂದು ಹೇಳುವದಕ್ಕೆ ಬರುವದಿಲ್ಲ; ಅದರಂತೆ ಆತ್ಮನಲ್ಲಿ ಅಂಶಗಳಿದ್ದರೂ ಅಥವಾ ಆತ್ಮರು ಇಬ್ಬರುಮೂವರಿದ್ದರೂ ಒಬ್ಬರನ್ನೊಬ್ಬರು ಅರಿಯುವಹಾಗಿಲ್ಲ. ಉ. ಸಾ. ಗದ್ಯ ೪೬.

5. ಇದರಂತೆ ಚೈತನ್ಯಸ್ವಭಾವನಾದ ಆತ್ಮನು ತನ್ನನ್ನು ತಾನೇ ಅರಿಯಲಾರನು. ಹಿಂದೆ ಹೇಳಿದ್ದು ಆತ್ಮನಿಗೆ ಜ್ಞಾನದ ಅವಶ್ಯಕತೆಯಿಲ್ಲನೆಂದು; ಈಗ ಹೇಳಿದ್ದು ಆತ್ಮನು ಜ್ಞಾನಕ್ಕೆ ವಿಷಯನಾಗುವ ದಾಗೆಯೇ ಇಲ್ಲವೆಂದು.

## ಬೌದ್ಧರ ಪ್ರಕ್ರಿಯೆಯ ವಿಮರ್ಶೆಯಿಂದಲೂ ಆತ್ಮಚೈತನ್ಯವು ಸಿದ್ಧವಾಗುತ್ತದೆ

**ಏತೇನೈವಾತ್ಮನಾತ್ಮಾನೋ[1] ಗ್ರಹೋ ಬುದ್ಧೇರ್ನಿರಾಕೃತಃ |**
**ಅಂಶೇಽಸ್ಯೈವಂ[2] ಸಮತ್ವಾದ್ಧಿ ನಿರ್ಭೇದತ್ವಾನ್ನ ಯುಜ್ಯತೇ || ೧೪ ||**

೧೪. ವಿಜ್ಞಾನವು ತನ್ನನ್ನು ತಾನೇ ಗ್ರಹಿಸುವದೆಂಬ ವಾದವನ್ನು ಇದರಿಂದಲೇ ತಳ್ಳಿಹಾಕಿದಂತೆ (ಆಯಿತು)[3]. (ವಿಜ್ಞಾನದಲ್ಲಿ) ಅಂಶ(ವಿದೆಯೆಂಬ ಪಕ್ಷ)ದಲ್ಲಿಯೂ ಸಮವಾಗಿರುವದರಿಂದ ಯಾವ ಭೇದವೂ ಇಲ್ಲದ್ದರಿಂದ (ಅವು ಒಂದಕ್ಕೊಂದು ವಿಷಯವೆಂಬುದು) ಯುಕ್ತವಾಗುವದಿಲ್ಲ[4].

**ಶೂನ್ಯತಾಪಿ ನ ಯುಕ್ತೈವಂ ಬುದ್ಧೇರನ್ಯೇನ ದೃಶ್ಯತಾ |**
**ಯುಕ್ತಾತೋ ಘಟವತ್ ತಸ್ಯಾಃ ಪ್ರಾಕ್‌ಸಿದ್ಧೇಶ್ಚ ವಿಕಲ್ಪತಃ || ೧೫ ||**
**ಅವಿಕಲ್ಪಂ ತದಸ್ತ್ಯೇವ ಯತ್ ಪೂರ್ವಂ ಸ್ಯಾದ್ವಿಕಲ್ಪತಃ |**
**ವಿಕಲ್ಪೋತ್ಪತ್ತಿಹೇತುತ್ವಾದ್ಯದ್ಯಸ್ಯೈವ ತು ಕಾರಣಮ್ || ೧೬ ||**

೧೫–೧೬. ಬುದ್ಧಿಯು ಶೂನ್ಯವೆಂಬುದೂ ಹೀಗೆಯೇ ಅಯುಕ್ತವು[5]. ಅದು ಘಟದಂತೆ ಮತ್ತೊಬ್ಬನಿಗೆ ವಿಷಯವೆಂಬುದೇ ಯುಕ್ತವು[6]. ಅದನ್ನು ವಿಕಲ್ಪಿಸುವ ಮೊದಲೇ (ಆ ಮತ್ತೊಬ್ಬನು) ಸಿದ್ಧವಾಗಿರುವದರಿಂದಲೂ (ಅದೇ ಯುಕ್ತ)[7]. ಯಾವ ಅವಿಕಲ್ಪವು ಯಾವ (ವಿಕಲ್ಪಕ್ಕೇ) ಕಾರಣವಾಗಿರು

1. ಆತ್ಮನೋ ಎಂಬುದಕ್ಕೆ ಆತ್ಮಾನೋ ಎಂದು ಬರೆದಿರುವದು ಛಂದಸ್ಸಿಗಾಗಿ.

2. 'ಅಂಶೋ' ಎಂಬುದು ತಪ್ಪು; 'ಅಂಶೇಽಭ್ಯುಪಗಮ್ಯಮಾನೇಽಪಿ' ಎಂದು ಬೋಧನಿಧಿಯ ವ್ಯಾಖ್ಯಾನ.

3. ತನ್ನನ್ನು ತಾನೇ ಗ್ರಹಿಸುವದೆಂಬುದು ಆತ್ಮನಿಗೆ ಹೇಗೆ ಅಯುಕ್ತವೋ ಹಾಗೆಯೇ ವಿಜ್ಞಾನಕ್ಕೂ ಅಯುಕ್ತ.

4. ಅಂಶಗಳೆರಡೂ ವಿಜ್ಞಾನವೇ ಆಗಿರುವದರಿಂದ ಅವುಗಳಲ್ಲಿ ಒಂದಕ್ಕಿಂತ ಮತ್ತೊಂದರಲ್ಲಿ ಯಾವ ಭೇದವೂ ಇರುವದಿಲ್ಲ. ಆದ್ದರಿಂದ ಅವುಗಳಲ್ಲಿ ಒಂದನ್ನೊಂದು ಬೆಳಗುವದೆಂಬುದು ಸರಿಯಲ್ಲ.

5. ಬುದ್ಧಿಯು ತನ್ನ ಶೂನ್ಯತ್ವವನ್ನು ತಾನೇ ಗ್ರಹಿಸಲಾರದು.

6. ಗಡಿಗೆಗೆ ಹೇಗೆ ತನಗಿಂತ ಬೇರೆಯಾದ ನೇತ್ರಾದಿಗಳು ವಿಷಯಿಯಾಗಿರುವವೋ ಹಾಗೆಯೇ ಬುದ್ಧಿಗಿಂತಲೂ ಅನ್ಯವಾದ ಆತ್ಮನೇ ಅದನ್ನು ಅರಿಯುವ ವಿಷಯಿ ಎಂಬುದು ಯುಕ್ತ.

7. ಬುದ್ಧಿಯು ಕ್ಷಣಿಕವು, ಶೂನ್ಯವು; ಅಥವಾ ಮತ್ತೊಂದು ಬಗೆ –ಎಂದು ವಿಕಲ್ಪಿಸುವವನು ಮೊದಲು ಸಿದ್ಧನಾಗಿದ್ದರೇ ಅಲ್ಲವೆ, ಶೂನ್ಯತ್ವಾದಿವಿಕಲ್ಪವು ಹೊಂದುವದು? –ಎಂದು ಭಾವ.

ತ್ತದೆಯೋ ಆ ವಿಕಲ್ಪಕ್ಕಿಂತ ಮೊದಲೇ ಇರಬೇಕಾಗಿರುವ ಆ ಅವಿಕಲ್ಪವು ಇದ್ದೇ ಇರುತ್ತದೆ[1].

**ಅಜ್ಞಾನಂ ಕಲ್ಪನಾಮೂಲಂ ಸಂಸಾರಸ್ಯ ನಿಯಾಮಕಮ್ ।**
**ಹಿತ್ವಾತ್ಮಾನಂ ಪರಂ ಬ್ರಹ್ಮ ವಿದ್ಯಾನ್ಮುಕ್ತಂ ಸದಾಭಯಮ್ ॥ ೧೭ ॥**

೧೭. ಕಲ್ಪನೆಗೆ ಮೂಲವಾಗಿ ಸಂಸಾರವನ್ನು ಗೊತ್ತುಪಡಿಸುತ್ತಿರುವ ಅಜ್ಞಾನವನ್ನು ಬಿಟ್ಟು[2], ಆತ್ಮನು ನಿತ್ಯಮುಕ್ತವೂ ನಿರ್ಭಯವೂ ಆಗಿರುವ ಪರಬ್ರಹ್ಮವೆಂದು ಅರಿತುಕೊಳ್ಳಬೇಕು.

**ಜಾಗ್ರತ್ಸ್ವಪ್ನೌ ತಯೋರ್ಬೀಜಂ ಸುಷುಪ್ತಾಖ್ಯಂ ತಮೋಮಯಮ್ ।**
**ಅನ್ಯೋನ್ಯಸ್ಮಿನ್ನಸತ್ತ್ವಾಚ್ಚ ನಾಸ್ತೀತ್ಯೇತತ್ತ್ರಯಂ ತ್ಯಜೇತ್ ॥ ೧೮ ॥**

೧೮. ಎಚ್ಚರಕನಸುಗಳೂ ಅವಕ್ಕೆ ಕಾರಣವಾಗಿರುವ ತಮೋಮಯವಾದ[3] ತನಿನಿದ್ರೆಯೆಂಬುದೂ ಒಂದರಲ್ಲೊಂದು ಇಲ್ಲದ್ದರಿಂದ[4] ಇವು ಮೂರೂ ಇಲ್ಲವೆಂದು ಬಿಡಬೇಕು[5].

## ಆತ್ಮನಲ್ಲಿ ಕರ್ತೃತ್ವದ ಅಧ್ಯಾಸವಾಗಿರುವ ರೀತಿ

**ಆತ್ಮಬುದ್ಧಿಮನಶ್ಚಕ್ಷುರಾಲೋಕಾರ್ಥಾದಿಸಙ್ಕರಾತ್ ।**
**ಭ್ರಾನ್ತಿಃ ಸ್ಯಾದಾತ್ಮಕರ್ಮೇತಿ ಕ್ರಿಯಾಣಾಂ ಸನ್ನಿಪಾತತಃ ॥ ೧೯ ॥**
**ನಿಮಿಷೋನ್ಮೀಲನೇ ಸ್ಥಾನೇ ವಾಯವ್ಯೇ ತೇ ನ ಚಕ್ಷುಷಃ ।**
**ಪ್ರಕಾಶತ್ವಾನ್ಮನಸ್ಯೇವಂ ಬುದ್ಧೌ ನ ಸ್ತಃ ಪ್ರಕಾಶತಃ ॥ ೨೦ ॥**

---

1. ಕಾರಣವು ಕಾರ್ಯಕ್ಕಿಂತ ಮೊದಲೇ ಇರಬೇಕು. ಇದರಂತೆ ವಿಕಲ್ಪಕ್ಕೆ ಕಾರಣವಾಗಿರುವ ಆತ್ಮನು ವಿಕಲ್ಪಕ್ಕಿಂತ ಮೊದಲೇ ಇರಬೇಕು. ಅವಿಕಲ್ಪಿತವಾದ ಆಸ್ಪದವು ಇಲ್ಲದಿದ್ದರೆ ವಿಕಲ್ಪಗಳೇ ಇರುವದಿಲ್ಲ ಎಂದು ಭಾವ.

2. ವಿಕಲ್ಪಗಳೆಲ್ಲ ಅಜ್ಞಾನದಿಂದ, ಎಂದರೆ ತಪ್ಪುತಿಳಿವಳಿಕೆಯಿಂದ, ತೋರುತ್ತವೆ.

3. ತನಿನಿದ್ರೆಯು ಅಜ್ಞಾನಮಯ, ಎಚ್ಚರಕನಸುಗಳು ಅನ್ಯಥಾಜ್ಞಾನಮಯ.

4. ಎಚ್ಚರದಲ್ಲಿ ಇನ್ನೆರಡು ಅವಸ್ಥೆಗಳಿಲ್ಲ; ಕನಸಿನಲ್ಲಿಯೂ ಇನ್ನೆರಡು ಅವಸ್ಥೆಗಳಿಲ್ಲ; ಸುಷುಪ್ತಿಯಲ್ಲಿಯೂ ಹೀಗೆಯೇ. ಒಂದಿರುವಾಗ ಮಿಕ್ಕವು ಎಲ್ಲಿಯೂ ಇಲ್ಲ.

5. ಇಲ್ಲ ಎಂದರೆ ಬರಿಯ ತೋರಿಕೆಯೇ, ತಮ್ಮ ರೂಪದಿಂದ ನಿಜವಲ್ಲ ಎಂದರ್ಥ. ಆತ್ಮನು ಈ ಮೂರು ವಿಕಲ್ಪಗಳಿಗೂ ಆಧಾರವಾಗಿರುವದರಿಂದ ಅವಶ್ಯವಾಗಿರುತ್ತಾನೆ ಎಂದು ೧೬ನೆಯ ಶ್ಲೋಕದಲ್ಲಿಯೇ ಹೇಳಿರುತ್ತದೆ. ಹೀಗೆ ಚೈತನ್ಯರೂಪನಾದ ಆತ್ಮನು ತನಗೆ ತಾನು ವಿಷಯನಲ್ಲದೆ ಇದ್ದರೂ ಸ್ವಯಂಜ್ಯೋತಿಯಾಗಿ ಸಿದ್ಧನಾಗುತ್ತಾನೆ ಎಂದಾಯಿತು.

**ಸಙ್ಕಲ್ಪಾಧ್ಯವಸಾಯೌ ತು ಮನೋಬುದ್ಧ್ಯೋರ್ಯಥಾ ಕ್ರಮಾತ್।**
**ನೇತರೇತರಧರ್ಮತ್ವಂ ಸರ್ವಂ ಚಾತ್ಮನಿ ಕಲ್ಪಿತಮ್ ॥ ೨೦ ॥**

೧೯-೨೦. ದೇಹ, ಬುದ್ಧಿ, ಮನಸ್ಸು, ಚಕ್ಷುರಿಂದ್ರಿಯ, ಬೆಳಕು, ವಿಷಯ –ಇವೇ ಮುಂತಾದವುಗಳ ಸೇರುವಿಕೆಯಿಂದ ಕ್ರಿಯೆಗಳು ಒಟ್ಟು ಸೇರಿಕೊಂಡು (ಇದು) 'ಆತ್ಮನ ಕ್ರಿಯೆ' ಎಂಬ ಭ್ರಾಂತಿಯಾಗುವದು[1]. (ಒಂದಾನೊಂದು) ಸ್ಥಾನದಲ್ಲಿ ಕಣ್ಣುತೆರೆಯುವದು, ಮುಚ್ಚುವದು – (ಎಂಬ ಕ್ರಿಯೆಗಳಾಗುವವಲ್ಲ), ಅವು ಪ್ರಾಣದ (ಧರ್ಮವೇ ಹೊರತು) ಚಕ್ಷುರಿಂದ್ರಿಯದ (ಧರ್ಮ)ವಲ್ಲ ; ಏಕೆಂದರೆ (ಆ ಇಂದ್ರಿಯವು) ಪ್ರಕಾಶ(ರೂಪ)ವಾಗಿರುತ್ತದೆ. ಇದರಂತೆ ಮನಸ್ಸಿನಲ್ಲಿಯೂ ಬುದ್ಧಿಯಲ್ಲಿಯೂ (ಇವು) ಇರುವದಿಲ್ಲ ; ಏಕೆಂದರೆ (ಇವೂ) ಪ್ರಕಾಶ(ರೂಪ)ವಾಗಿರುತ್ತವೆ. ಸಂಕಲ್ಪ, ನಿಶ್ಚಯ – (ಇವು)ಗಳಾದರೋ ಯಥಾಕ್ರಮವಾಗಿ ಮನಸ್ಸು, ಬುದ್ಧಿ – ಇವುಗಳಿಗೆ ಸೇರಿದವುಗಳು ; (ಅವಕ್ಕೆ ಒಂದರ ಧರ್ಮವು ಮತ್ತೊಂದಕ್ಕೆ ಇಲ್ಲ. ಇದೆಲ್ಲವೂ ಆತ್ಮನಲ್ಲಿ ಕಲ್ಪಿತವಾಗಿರುತ್ತದೆ[2].

## ಆತ್ಮನ ವಿಷಯದಲ್ಲಿ ವಾದಿವಿಕಲ್ಪಗಳು

**ಸ್ಥಾನಾವಚ್ಛೇದದೃಷ್ಟಿಃ ಸ್ಯಾದಿನ್ದ್ರಿಯಾಣಾಂ ತದಾತ್ಮತಾಮ್ ।**
**ಗತಾ ಧೀಸ್ತಾಂ ಹಿ ಪಶ್ಯಞ್ಜ್ಞೋ ದೇಹಮಾತ್ರ ಇವೇಷ್ಯತೇ ॥ ೨೧ ॥**

೨೧. ಇಂದ್ರಿಯಗಳಿಗೆ ಒಂದೊಂದು ಸ್ಥಾನಕ್ಕೆ ಕಟ್ಟುಬಿದ್ದ ದೃಷ್ಟಿ ಇರುತ್ತದೆ. ಬುದ್ಧಿಯು ಅವುಗಳ ತಾದಾತ್ಮ್ಯವನ್ನು ಹೊಂದಿರುತ್ತದೆ. ಆ ಬುದ್ಧಿಯನ್ನು ನೋಡುವ ಆತ್ಮನು ದೇಹಪರಿಮಾಣವುಳ್ಳವನಾಗಿಯೇ ತೋರುತ್ತಾನೆ[3].

**ಕ್ಷಣಿಕಂ ಹಿ ತದತ್ಯರ್ಥಂ ಧರ್ಮಮಾತ್ರಂ ನಿರನ್ತರಮ್ ।**
**ಸಾದೃಶ್ಯಾದ್ ದೀಪವತ್ತದ್ಧೀಸ್ತಚ್ಛಾನ್ತಿಃ ಪುರುಷಾರ್ಥತಾ ॥ ೨೨ ॥**

---

1. ಗೀ. ಭಾ. ೧೮-೧೪ರಿಂದ ೧೬ರವರೆಗಿನ ಗ್ರಂಥವನ್ನು ನೋಡಿರಿ.

2. ಇಲ್ಲಿ ಪ್ರಾಣ, ಚಕ್ಷುರಿಂದ್ರಿಯ, ಆಲೋಕ, ಮನಸ್ಸು, ಬುದ್ಧಿ –ಇವುಗಳಿಗೆಲ್ಲ ಒಂದೊಂದು ಕೆಲಸವಿವೆ. ಆತ್ಮನಿಗೆ ಯಾವ ಕೆಲಸವೂ ಇಲ್ಲ. ಆದರೂ ಕಣ್ಣುಬಿಟ್ಟೆನು, ವಿಷಯವನ್ನು ಕಂಡೆನು, ಸಂಕಲ್ಪಿಸಿದೆನು, ನಿಶ್ಚಯಿಸಿದೆನು –ಎಂದು ಎಲ್ಲಾ ಧರ್ಮಗಳನ್ನೂ ಆತ್ಮನಲ್ಲಿ ಅಧ್ಯಾಸಮಾಡಿಕೊಳ್ಳುತ್ತಾರೆ ಎಂದು ಅರ್ಥ.

3. ಇಂದ್ರಿಯಸ್ಥಾನವು ಪರಿಚ್ಛಿನ್ನವಾಗಿದ್ದು ಅಂತಃಕರಣವು ಅದರ ತಾದಾತ್ಮ್ಯವನ್ನು ಅಧ್ಯಾಸಮಾಡಿಕೊಳ್ಳುತ್ತದೆ; ಅದನ್ನು ನೋಡುವ ಆತ್ಮನು ದೇಹಪರಿಮಾಣದವನು ಎಂಬುದು ಈ ಕಾರಣದಿಂದ ಭ್ರಾಂತಿಯಾಗಿರುತ್ತದೆ. ಇದು ಜೈನಮತಖಂಡನೆ.

**ಸ್ವಾಕಾರಾನ್ಯಾವಭಾಸಂ ಚ ಯೇಷಾಂ ರೂಪಾದಿ ವಿದ್ಯತೇ ।**
**ಯೇಷಾಂ ನಾಸ್ತಿ ತತಶ್ಚಾನ್ಯತ್ ಪೂರ್ವಾಸಙ್ಗತಿರುಚ್ಯತೇ ॥ ೨೪ ॥**

೨೩-೨೪. ವಸ್ತುಸಾಮಾನ್ಯವೇ ಅತ್ಯಂತಕ್ಷಣಿಕವಾಗಿದೆ. ಎಡೆಬಿಡದೆ ಉಂಟಾಗುತ್ತಿರುವದರಿಂದ ದೀಪದಲ್ಲಾಗುವಂತೆ ಸಾದೃಶ್ಯದಿಂದ ಅದೇ ಎಂಬ ಬುದ್ಧಿಯುಂಟಾಗುತ್ತದೆ ; ಆದರ ನಾಶವೇ ಪುರುಷಾರ್ಥವು (ಎಂಬುದು ಬೌದ್ಧರ ಮತವು). ತನ್ನ ಆಕಾರವಾದ ಮತ್ತೊಂದರಿಂದ ತೋರುವ ರೂಪಾದಿಗಳು ಯಾರ ಮತದಲ್ಲಿ ಉಂಟೋ, ಯಾರ ಮತದಲ್ಲಿ ಅದಕ್ಕಿಂತ ಬೇರೆಯಾದದ್ದು ಇಲ್ಲವೋ[1], ಅವರಿಬ್ಬರ ಮತದಲ್ಲಿಯೂ ಹಿಂದೆ ಹೇಳಿದ್ದು ಹೊಂದುವದಿಲ್ಲವೆಂಬುವದನ್ನು ತಿಳಿಸಲಾಗುತ್ತದೆ.

**ಬಾಹ್ಯಾಕಾರತ್ವತೋ ಜ್ಞಪ್ತೇಃ ಸ್ಮೃತ್ಯಭಾವಃ ಸದಾ ಕ್ಷಣಾತ್ ।**
**ಕ್ಷಣಿಕತ್ವಾಚ್ಚ ಸಂಸ್ಕಾರಂ ನೈವಾಧತ್ತೇ ಕ್ವಚಿತ್ತು ಧೀಃ ॥ ೨೫ ॥**

**ಆಧಾರಸ್ಯಾಸತ್ತ್ವಾಚ್ಚ ತುಲ್ಯತಾ ನಿರ್ನಿಮಿತ್ತತಃ ।**
**ಸ್ಥಾನೇ ವಾ ಕ್ಷಣಿಕತ್ವಸ್ಯ ಹಾನಂ ಸ್ಯಾನ್ನ ತದಿಷ್ಯತೇ ॥ ೨೬ ॥**

೨೫-೨೬. ವಿಜ್ಞಾನವು ಹೊರಗಿನ ವಿಷಯದ ಆಕಾರವಾಗಿರುವದರಿಂದಲೂ (ಅದು) ಯಾವಾಗಲೂ ಕ್ಷಣಿಕವೇ ಆಗಿರುವದರಿಂದಲೂ ಸ್ಮೃತಿಯೆಂಬುದಿಲ್ಲವಾಗುತ್ತದೆ. ಮತ್ತು ಕ್ಷಣಿಕವಾಗಿರುವದರಿಂದ ವಿಜ್ಞಾನವು ಎಲ್ಲಿಯೂ ಸಂಸ್ಕಾರವನ್ನುಂಟುಮಾಡಲಾರದು ; ಆಧಾರವೂ ಅಸತ್ಯವಾಗಿರುವದರಿಂದಲೂ (ಸಂಸ್ಕಾರವನ್ನುಂಟುಮಾಡಲಾರದು). ಆದ್ದರಿಂದ ಸಾದೃಶ್ಯವು ಯಾವ ನಿಮಿತ್ತವೂ ಇಲ್ಲದೆ ಆಗುವದೆಂದಾಯಿತು[2]. (ಅದು) ಸ್ಥಿರವಾಗಿದೆ ಎಂದರೋ ಕ್ಷಣಿಕವೆಂಬ (ಪ್ರತಿಜ್ಞೆಯನ್ನು) ಬಿಡಬೇಕಾಗುವದು ; ಅದನ್ನು (ನೀವು) ಒಪ್ಪುವದಿಲ್ಲ[3].

---

1. ಬೌದ್ಧರಲ್ಲಿ ಬಾಹ್ಯವಸ್ತುಸತ್ಯತ್ವವಾದಿಗಳೆಂದೂ ಬಾಹ್ಯವಸ್ತು ಅಸತ್ತೆಂಬವಾದಿಗಳೆಂದೂ ಎರಡು ಪಂಗಡದವರಿದಾರೆ. ಇಬ್ಬರ ಮತದಲ್ಲಿಯೂ ಮುಂದೆ ಹೇಳುವ ದೋಷವಿದೆ ಎಂದರ್ಥ.

2. ಬಾಹ್ಯವಸ್ತು ಇದ್ದರೆ ಅದೂ ಕ್ಷಣಿಕ, ವಿಜ್ಞಾನವೂ ಕ್ಷಣಿಕ ; ವಿಜ್ಞಾನದಿಂದಾದ ಅನುಭವವು ವಾಸನಾರೂಪವಾಗಿ ನಿಲ್ಲುವದಕ್ಕೆ ಆಧಾರವಾಗಿ ಯಾವ ಅಂತಃಕರಣವೂ ಇಲ್ಲ. ಆದ್ದರಿಂದ ಬೌದ್ಧಮತದಲ್ಲಿ ಅದೇ ಇದು ಎಂಬ ಸಾದೃಶ್ಯಜ್ಞಾನಕ್ಕೆ ಯಾವ ಕಾರಣವೂ ಇಲ್ಲ.

3. ಬಾಹ್ಯವಸ್ತು, ಅದರ ವಿಜ್ಞಾನ, ಅದರ ಆಧಾರ–ಇವು ಸ್ಥಿರವಾಗಿರುವವು ; ಆದ್ದರಿಂದ ಅಂತಃಕರಣದಲ್ಲಿ ವಾಸನೆಯುಂಟಾಗಬಹುದು ಎಂದರೆ ಎಲ್ಲವೂ ಕ್ಷಣಿಕವೆಂಬ ಮತವನ್ನೇ ಬಿಡಬೇಕಾಗುವದು.

**ಶಾನ್ತೇಶ್ಚಾಯತ್ನಸಿದ್ಧತ್ವಾತ್ ಸಾಧನೋಕ್ತಿರನರ್ಥಿಕಾ ।**
**ಐಕೈಕಸ್ಮಿನ್ ಸಮಾಪ್ತತ್ವಾಚ್ಛಾನ್ತೇರನ್ಯಾನಪೇಕ್ಷತಾ ॥ ೨೭ ॥**

**ಅಪೇಕ್ಷಾ ಯದಿ ಭಿನ್ನೇಽಪಿ ಪರಸನ್ತಾನ ಇಷ್ಯತಾಮ್ ।**
**ಸರ್ವಾರ್ಥೇ ಕ್ಷಣಿಕೇ ಕಸ್ಮಿಂಸ್ತಥಾಪ್ಯನ್ಯಾನಪೇಕ್ಷತಾ ॥ ೨೮ ॥**

**ತುಲ್ಯಕಾಲಸಮುದ್ಭೂತಾವಿತರೇತರಯೋಗಿನೌ ।**
**ಯೋಗಾಚ್ಚ ಸಂಸ್ಕೃತೋ ಯಸ್ತು ಸೋಽನ್ಯಂ ಹೀಕ್ಷಿತುಮರ್ಹತಿ ॥**

೨೭–೨೯. ಶಾಂತಿಯು (ಯಾವ) ಪ್ರಯತ್ನವೂ ಇಲ್ಲದೆ ಸಿದ್ಧವಾಗಿರುವದರಿಂದ[1] ಸಾಧನವನ್ನು ಹೇಳುವದು ವ್ಯರ್ಥವು. ಏಕೆಂದರೆ ಒಂದೊಂದು (ವಿಜ್ಞಾನದಿಂದಲೂ) ಶಾಂತಿಯು ಸಮಾಪ್ತವಾಗಿರುವದರಿಂದ ಅದಕ್ಕೆ ಮತ್ತೊಂದರ ಬಯಕೆಯಿರುವದಿಲ್ಲ. ತನಗಿಂತ ಬೇರೆಯಾದದ್ದರ ಬಯಕೆ ಇದೆ ಎಂದರೆ ಮತ್ತೊಂದು ವಿಜ್ಞಾನಸಂತಾನದ ಬಯಕೆಯಿದೆಯೆಂದೂ ಆಗಲಿ[2]! ಎಲ್ಲಾ ವಸ್ತುಗಳೂ ಕ್ಷಣಿಕವಾಗಿರುವಲ್ಲಿ (ಬಯಕೆ) ಏತರಲ್ಲಿ? ಆ ರೀತಿಯಿಂದಲೂ ಮತ್ತೊಂದರ ಬಯಕೆ ಇಲ್ಲವೆಂದೇ ಹೇಳಬೇಕು[3]. ಒಂದೇ ಕಾಲದಲ್ಲಿ ಉಂಟಾಗಿ ಒಂದಕ್ಕೊಂದು ಸಂಬಂಧಪಟ್ಟಿರುವ (ಎರಡ)ರಲ್ಲಿ ಯಾವದು ಮತ್ತೊಂದರ ಸಂಬಂಧದ ಸಂಸ್ಕೃತವಾಗಿರುವದೋ ಅದೇ ಅಲ್ಲವೆ, ಮತ್ತೊಂದನ್ನು ಬಯಸಬಹುದು[4]?

---

1. ವಿಜ್ಞಾನವು ಕ್ಷಣಿಕವಾಗಿರುವದರಿಂದ ತಾನೇ ನಾಶವನ್ನು ಹೊಂದುವದರಿಂದ ಎಂದರ್ಥ.

2. ತೃಷ್ಣಾತ್ಯಾಗರೂಪವಾದ ಒಂದು ವಿಜ್ಞಾನಕ್ಕೆ ಸಾಧನಾನುಷ್ಠಾನರೂಪವಾದ ಮತ್ತೊಂದು ವಿಜ್ಞಾನವು ಬೇಕು –ಎನ್ನುವದು ಸರಿಯಲ್ಲ; ಏಕೆಂದರೆ ಬೌದ್ಧಮತದಲ್ಲಿ ಎರಡೂ ಕ್ಷಣಿಕವಾಗಿರುವದರಿಂದ ಅವು ಒಂದೇ ಕಾಲದಲ್ಲಿರಲಾರವು. ಒಂದು ವಿಜ್ಞಾನದ ಸಂತಾನವು ಮತ್ತೊಂದರ ಸಂತಾನವನ್ನು ಬಯಸಬಹುದು; ವಿಜ್ಞಾನವು ಕ್ಷಣಿಕವಾದರೂ ಸಂತಾನವು ಕ್ಷಣಿಕವಲ್ಲ –ಎನ್ನುವದಾದರೆ ಬೌದ್ಧಮತದಲ್ಲಿ ಇಂಥ ಕಾರ್ಯಕ್ಕೆ ಇಂಥ ಕಾರಣವೇ ಬೇಕೆನ್ನುವ ನಿಯಮಕ್ಕೆ ಅವಕಾಶವಿಲ್ಲ. ಮೊಸರಾಗುವದಕ್ಕೆ ಹಾಲೇ ಬೇಕು, ಮರಳು ಬೇಡ – ಎಂಬ ನಿಯಮವು ಏಕೆ? ಮರಳೆಂಬ ಮತ್ತೊಂದು ವಿಜ್ಞಾನಸಂತಾನವು ಏತಕ್ಕೆ ಕಾರಣವಾಗಬಾರದು? –ಎಂಬ ಪ್ರಶ್ನೆಗೆ ಬೌದ್ಧರಲ್ಲಿ ಉತ್ತರವಿಲ್ಲ ಎಂದರ್ಥ.

3. ಒಂದರೊಡನೆ ಸಂಬಂಧವಾಗುವದರೊಳಗೇ ಮತ್ತೊಂದು ನಾಶವಾಗುವದರಿಂದ ಒಂದರ ಮತ್ತೊಂದರ ಬಯಕೆ ಇದೆ ಎನ್ನುವದಕ್ಕೇ ಅವಕಾಶವಿಲ್ಲ ಎಂದರ್ಥ.

4. ಆದರೆ ಕ್ಷಣಿಕವಿಜ್ಞಾನವಾದದಲ್ಲಿ ಯಾವ ಎರಡಕ್ಕೂ ಸಂಬಂಧವಿರುವ ಹಾಗಿಲ್ಲ.

**ಮೃಷಾಧ್ಯಾಸಸ್ತು ಯತ್ರ ಸ್ಯಾತ್ತನ್ನಾಶಸ್ತತ್ರ ನೋ ಮತಃ |**
**ಸರ್ವನಾಶೋ ಭವೇದ್ಯಸ್ಯ ಮೋಕ್ಷಃ ಕಸ್ಯ ಫಲಂ ವದ ॥ ೩೦ ॥**

೩೦. ಮಿಥ್ಯಾರೂಪವಾದ ಅಧ್ಯಾಸವು ಯಾವದರಲ್ಲಿ ಆಗಿರುವದೋ ಅದರಲ್ಲಿ ಅದರ ನಾಶವಾಗಬೇಕೆಂಬುದು ನಮ್ಮ ಮತವು[1]. ಯಾವನ ಮತದಲ್ಲಿ ಎಲ್ಲವೂ ನಾಶವಾಗುವದೋ ಅವನ ಮತದಲ್ಲಿ ಮೋಕ್ಷವು ಯಾರಿಗೆ ಫಲವು[2] ? ಹೇಳು.

## ಆತ್ಮನು ಇಲ್ಲವೆಂಬುದು ಸರಿಯಲ್ಲ

**ಅಸ್ತಿ ತಾವತ್ ಸ್ವಯಂ ನಾಮ ಜ್ಞಾನಂ ವಾತ್ಮಾನ್ಯದೇವ ವಾ ।**
**ಭಾವಾಭಾವಜ್ಞತಸ್ತಸ್ಯ ನಾಭಾವಸ್ತ್ವಧಿಗಮ್ಯತೇ ॥ ೩೧ ॥**

೩೧. ಆತ್ಮನು ಜ್ಞಾನರೂಪನಾಗಲಿ ಮತ್ತೊಂದೇ ಆಗಲಿ[3], ತಾನು ಎಂಬವನೊಬ್ಬನಂತೂ ಇರುತ್ತಾನೆ. ಇರುವದು, ಇಲ್ಲದ್ದು– ಎರಡನ್ನೂ ಅರಿಯುವದರಿಂದ ಅವನು ಇಲ್ಲವೆಂದೆಣಿಸುವದಕ್ಕೆ ಆಗುವದಿಲ್ಲ[4].

**ಯೇನಾಧಿಗಮ್ಯತೇಽಭಾವಸ್ತತ್ ಸತ್ಸ್ಯಾತ್ ತನ್ನ ಚೇದ್ ಭವೇತ್ ।**
**ಭಾವಾಭಾವಾನಭಿಜ್ಞತ್ವಂ ಲೋಕಸ್ಯ ಸ್ಯಾನ್ನ ಚೇಷ್ಯತೇ ॥ ೩೨ ॥**

೩೨. ಅಭಾವವು ಏತರಿಂದ ಅರಿಯಲ್ಪಡುತ್ತದೆಯೋ ಅದು ಇರಬೇಕು. ಅದು ಇಲ್ಲದಿದ್ದರೆ ಜನರು ಭಾವಾಭಾವಗಳನ್ನು ಅರಿಯದೆ ಇರಬೇಕಾಗುವದು. ಇದು (ಯಾರಿಗೂ) ಇಷ್ಟವಿಲ್ಲ.

**ಸದಸತ್ಸದಸಚ್ಚೇತಿ ವಿಕಲ್ಪಾತ್ ಪ್ರಾಗ್ಯದಿಷ್ಯತೇ ।**
**ತದದ್ವೈತಂ ಸಮತ್ವಾತ್ತು ನಿತ್ಯಂ ಚಾನ್ಯದ್ವಿಕಲ್ಪಿತಾತ್ ॥೩೩॥**

---

1. ನಾಶವಾಗುವ ತೋರಿಕೆಯು ವಸ್ತು, ಅದಕ್ಕೆ ಆಧಾರವಾಗಿರುವ ಸತ್ಯವಸ್ತುವಿನಲ್ಲಿ ನಾಶವಾಗುತ್ತದೆ– ಎಂಬುದು ವೇದಾಂತಿಗಳ ಮತ; ಆದ್ದರಿಂದ ಅಧ್ಯಸ್ತವಾದ ಬಂಧವು ನಾಶವಾಗಬಹುದು.

2. ಎಲ್ಲವೂ ಕ್ಷಣಿಕವು ಅಥವಾ ಶೂನ್ಯವು ಎಂಬ ಮತದಲ್ಲಿ ಬದ್ಧನೂ ಕ್ಷಣಿಕನು, ಅಥವಾ ಶೂನ್ಯವು ಎಂದಾಗುವದು ; ಆದ್ದರಿಂದ ಬಂಧಮೋಕ್ಷಗಳ ವ್ಯವಸ್ಥೆಯಿಲ್ಲದೆಹೋಗುವದು.

3. ಜ್ಞಾನಗುಣವುಳ್ಳವನೇ ಆಗಲಿ ಎಂದರ್ಥ.

4. ಅರಿಯುವದು ಜ್ಞಾನಸ್ವರೂಪನಾದ ಆತ್ಮನಿಗೂ ಜ್ಞಾತೃವಾದ ಆತ್ಮನಿಗೂ ಸಮಾನವು ; ಅರಿವು ಆತ್ಮನ ಅಸ್ತಿತ್ವಕ್ಕೆ ಹೇತುವೆಂಬುದು ಎರಡಕ್ಕೂ ಸಮಾನ. ಜ್ಞಾತೃವಾದ ಆತ್ಮನು ಕಲ್ಪಿತನೆಂಬ ಸಿದ್ಧಾಂತವನ್ನನುಸರಿಸಿ ಇಲ್ಲಿ ಎರಡನ್ನೂ ಹೇಳಿದೆ.

೩೩. ಇದೆ, ಇಲ್ಲ, ಇದ್ದೂ ಇಲ್ಲ– ಎಂಬ ವಿಕಲ್ಪಕ್ಕಿಂತ ಮೊದಲು ಯಾವದನ್ನು ಒಪ್ಪುವೆವೋ[1] ಅದು ಅದ್ವೈತವಾಗಿರಬೇಕು, ನಿತ್ಯವಾಗಿರಬೇಕು, ವಿಕಲ್ಪಿತವಾಗಿರುವದಕ್ಕಿಂತ ವಿಲಕ್ಷಣವಾಗಿರಬೇಕು ; ಏಕೆಂದರೆ ಅದು ಸಮವಾಗಿರುತ್ತದೆ[2].

**ವಿಕಲ್ಪೋದ್ಭವತೋಽಸತ್ತ್ವಂ ಸ್ವಪ್ನದೃಶ್ಯವದಿಷ್ಯತಾಮ್ |**
**ದ್ವೈತಸ್ಯ ಪ್ರಾಗಸತ್ತ್ವಾಚ್ಚ ಸದಸತ್ತ್ವಾದಿಕಲ್ಪನಾತ್ || ೩೪ ||**
**ವಾಚಾರಂಭಣಶಾಸ್ತ್ರಾಚ್ಚ ವಿಕಾರಾಣಾಂ ಹ್ಯಭಾವತಾ |**
**ಮೃತ್ಯೋಃ ಸ ಮೃತ್ಯುಮಿತ್ಯಾದೇರ್ಮಮ ಮಾಯೇತಿ ಚ ಸ್ಮೃತೇಃ ||**
**ವಿಶುದ್ಧಿಶ್ಚಾತ ಏವಾಸ್ಯ ವಿಕಲ್ಪಾಚ್ಚ ವಿಲಕ್ಷಣಃ |**
**ಉಪಾದೇಯೋ ನ ಹೇಯೋಽತ ಆತ್ಮಾ ನಾನ್ಯೈರಕಲ್ಪಿತಃ || ೩೬ ||**

೩೪–೩೬. ದ್ವೈತವು ವಿಕಲ್ಪವಾಗಿ ಹುಟ್ಟುವದರಿಂದಲೂ[3], ಇದೆ, ಇಲ್ಲ- ಎಂದು ಕಲ್ಪಿಸುವ ಮೊದಲು ಇಲ್ಲದ್ದರಿಂದಲೂ ಸ್ವಪ್ನದ ತೋರಿಕೆಯಂತೆ ಅದು ಮಿಥ್ಯೆಯೇ ಎಂದು ಒಪ್ಪಬೇಕು[4]. ವಾಚಾರಂಭಣವೆಂದು ಶಾಸ್ತ್ರದಲ್ಲಿ (ಛಾಂ.೬–೧–೪) ಹೇಳಿರುವದರಿಂದಲೂ "(ಯಾವನು ನಾನಾತ್ವವಿರುವಂತೆ ಕಾಣುತ್ತಾನೋ) ಅವನು ಮೃತ್ಯುವಿನ ಮೇಲೆ ಮೃತ್ಯುವನ್ನು ಸೇರುತ್ತಾನೆ" (ಬೃ. ೪–೪–೧೯) ಎಂದು ಮುಂತಾದ (ಶ್ರುತಿವಚನವಿರುವದರಿಂದಲೂ), "ನನ್ನ ಮಾಯೆಯು ದಾಟಲಶಕ್ಯವಾದದ್ದು" .(ಗೀ. ೭–೧೪) ಎಂಬ ಸ್ಮೃತಿಯಿಂದಲೂ ಕಾರ್ಯಗಳು ಇಲ್ಲವೆಂದು (ಏರ್ಪಡುತ್ತದೆ)[5]. ಆದ್ದರಿಂದಲೇ ಈ ಆತ್ಮನು

---

1. ವಿಕಲ್ಪಗಳು ಆಸ್ಪದವಿಲ್ಲದೆ ಆಗಲಾರವಾದ್ದರಿಂದ ಆ ಆಸ್ಪದರೂಪವಾದ ವಸ್ತು ಇದೆಯೆಂದು ಒಪ್ಪಬೇಕು – ಎಂಬುದು ಸಿದ್ಧಾಂತ.

2. ಎಲ್ಲಾ ವಿಕಲ್ಪಗಳಿಗೂ ಆಧಾರವಾದದ್ದನ್ನು ಮಾರ್ಪಡಿಸುವ ದ್ವಿತೀಯವಸ್ತು ವಿಲ್ಲದ್ದರಿಂದ ಅದು ಅದ್ವೈತವು, ನಿತ್ಯವು; ಆದ್ದರಿಂದ ಅನಿತ್ಯವಾದ ದ್ವೈತಕ್ಕಿಂತ ವಿಲಕ್ಷಣವು.

3. ನಿಜವಾಗಿ ಹುಟ್ಟುವದಿಲ್ಲ, ಅದು ಮಾಯೆಯಿಂದಾದ ಹುಸಿತೋರಿಕೆ.

4. ಸ್ವಪ್ನದ ತೋರಿಕೆಗಳು ತಾವು ಹುಟ್ಟುವದಕ್ಕೆ ಮೊದಲೂ ಆಮೇಲೂ ಇರುವದಿಲ್ಲ. ದ್ವೈತವೆಲ್ಲ ಹಾಗೆಯೇ.

5. ಈ ವಚನಗಳೆಲ್ಲ ದ್ವೈತವು ಹುಸಿತೋರಿಕೆ ಎಂದು ಹೇಳುತ್ತವೆ, ಇವುಗಳಿಗೆ ಬೆಂಬಲವಾದ ಯುಕ್ತಿಯನ್ನು ಹೇಳಿದ್ದಾಗಿದೆ.

ಪರಿಶುದ್ಧನೆಂದೂ (ಸಿದ್ಧವಾಗುತ್ತದೆ); ವಿಕಲ್ಪಕ್ಕಿಂತ ವಿಲಕ್ಷಣನಾಗಿರುವದರಿಂದ ಮತ್ತೊಬ್ಬರು ತೆಗೆದುಕೊಳ್ಳತಕ್ಕವನೂ ಅಲ್ಲ, ಬಿಡತಕ್ಕವನೂ ಅಲ್ಲ.

## ಆತ್ಮನಿಗೆ ಅಜ್ಞಾನವಿಲ್ಲ

**ಅಪ್ರಕಾಶೋ ಯಥಾದಿತ್ಯೇ ನಾಸ್ತಿ ಜ್ಯೋತಿಃಸ್ವಭಾವತಃ ।**
**ನಿತ್ಯಬೋಧಸ್ವರೂಪತ್ವಾನ್ನಾಜ್ಞಾನಂ ತದ್ವದಾತ್ಮನಿ ॥ ೩೭ ॥**
**ತಥಾ ವಿಕ್ರಿಯರೂಪತ್ವಾನ್ನಾವಸ್ಥಾನ್ತರಮಾತ್ಮನಃ ।**
**ಅವಸ್ಥಾನ್ತರವತ್ತ್ವೇ ಹಿ ನಾಶೋಽಸ್ಯ ಸ್ಯಾನ್ನ ಸಂಶಯಃ ॥ ೩೮ ॥**

೩೭-೩೮. ಸೂರ್ಯನು ಪ್ರಕಾಶಸ್ವರೂಪನೇ ಆಗಿರುವದರಿಂದ ಹೇಗೆ (ಅವನಲ್ಲಿ) ಅಪ್ರಕಾಶವೆಂಬುದಿರುವದಿಲ್ಲವೋ, ಅದರಂತೆ ನಿತ್ಯಚೈತನ್ಯಸ್ವರೂಪನಾಗಿರುವದರಿಂದ ಆತ್ಮನಲ್ಲಿ ಅಜ್ಞಾನವೆಂಬುದು ಇರುವದಿಲ್ಲ[1]. ಇದರಂತೆ ಆತ್ಮನು ಯಾವ ವಿಕಾರವೂ ಇಲ್ಲದವನಾದ್ದರಿಂದ (ಅವನಿಗೆ) ಮತ್ತೊಂದು ಅವಸ್ಥೆಯುಂಟೆಂದರೆ ಅವನಿಗೆ ನಾಶವೇ ಆಗಬೇಕಾಗುವದು, (ಇದರಲ್ಲಿ) ಸಂಶಯವಿಲ್ಲ[2].

## ಮೋಕ್ಷವು ನಿತ್ಯಸಿದ್ಧವಾದ ಆತ್ಮಸ್ವರೂಪವೇ

**ಮೋಕ್ಷೋಽವಸ್ಥಾನ್ತರಂ ಯಸ್ಯ ಕೃತಕಃ ಸ ಚಲೋ ಹ್ಯತಃ ।**
**ನ ಸಂಯೋಗೋ ವಿಯೋಗೋ ವಾ ಮೋಕ್ಷೋ ಯುಕ್ತಃ ಕಥಂಚನ ॥**
**ಸಂಯೋಗಸ್ಯಾಪ್ಯನಿತ್ಯತ್ವಾದ್ವಿಯೋಗಸ್ಯ ತಥೈವ ಚ ।**
**ಗಮನಾಗಮನೇ ಚೈವ ಸ್ವರೂಪಂ ತು ನ ಹೀಯತೇ ॥ ೪೦ ॥**

೩೯-೪೦. ಯಾವನ (ಮತದ)ಲ್ಲಿ ಮೋಕ್ಷವೆಂಬುದು ಮತ್ತೊಂದು ಅವಸ್ಥೆಯೋ (ಅವನ ಮತದಲ್ಲಿ) ಅದು ಕೃತಕವಾಗಿಯೂ ಆದ್ದರಿಂದ ಅನಿತ್ಯವಾಗಿಯೂ (ಇರಬೇಕಾಗುತ್ತದೆ)[3]. ಮೋಕ್ಷವು (ಯಾವದಾದರೊಂದರ)

---

1. ಬಂಧವು ಅಜ್ಞಾನಕೃತವೆಂದರೆ ಜ್ಞಾನಾಜ್ಞಾನಗಳಿಂದ ಆತ್ಮನಲ್ಲಿ ವಿಶೇಷಗಳುಂಟಾಗುವದಿಲ್ಲವೆ ? -ಎಂಬವರಿಗೆ ಇದು ಉತ್ತರ. ಅಜ್ಞಾನವು ಆತ್ಮನ ಧರ್ಮವೆಂಬುದೂ ಅಜ್ಞಾನವೇ; ಏಕೆಂದರೆ ಅಜ್ಞಾನವನ್ನು ಆತ್ಮನು ಬೆಳಗುತ್ತಿರುತ್ತಾನೆ. ಬೃ. ಭಾ. ೪-೪-೬, ಗೀ. ಭಾ. ೧೩-೨.

2. ಆತ್ಮನಿಗೆ ಅಜ್ಞಾನಾವಸ್ಥೆ, ಜ್ಞಾನಾವಸ್ಥೆ -ಎಂಬ ಎರಡು ಅವಸ್ಥೆಗಳನ್ನು ಕಲ್ಪಿಸಿದರೆ ಆತ್ಮನೇ ವಿಕಾರಿಯು, ನಾಶವುಳ್ಳವನು- ಎಂದಾಗುತ್ತದೆ.

3. ಮೋಕ್ಷವು ಅವಸ್ಥಾಂತರವಲ್ಲವೆಂಬ ವಿಷಯಕ್ಕೆ ಸೂ. ಭಾ. (೪-೩-೧೪) ನ್ನು ನೋಡಿ.

ಸಂಯೋಗವೆಂದಾಗಲಿ ವಿಯೋಗವೆಂದಾಗಲಿ ಹೇಳುವದು ಸರಿಯಲ್ಲ; ಏಕೆಂದರೆ ಸಂಯೋಗವೂ ವಿಯೋಗವೂ ಅನಿತ್ಯವಾಗಿರುತ್ತವೆ[1]. ಹೋಗುವದು ಅಥವಾ ಬರುವದು – ಇವೆರಡರಲ್ಲಿಯೂ ಸ್ವರೂಪವು ಬಿಟ್ಟುಹೋಗಲಾರದು[2].

**ಸ್ವರೂಪಸ್ಯಾನಿಮಿತ್ತತ್ವಾತ್ ಸನಿಮಿತ್ತಾ ಹಿ ಚಾಪರೇ ।**
**ಅನುಪಾತ್ತಂ ಸ್ವರೂಪಂ ಹಿ ಸ್ವೇನಾತ್ಯಕ್ತಂ ತಥೈವ ಚ ॥ ೪೧ ॥**
**ಸ್ವರೂಪತ್ವಾನ್ನ ಸರ್ವಸ್ಯ ತ್ಯಕ್ತುಂ ಶಕ್ಯೋ ಹ್ಯನನ್ಯತಃ ।**
**ಗೃಹೀತುಂ ವಾ ತತೋ ನಿತ್ಯೋ [ವಿಷಯತ್ವಾತ್ ಪೃಥಕ್ತ್ವತಃ][3] ॥೪೨॥**

೪೧–೪೨. ಏಕೆಂದರೆ ಸ್ವರೂಪವು ನಿಮಿತ್ತದಿಂದಾಗಿರುವದಿಲ್ಲ, ನಿಮಿತ್ತದಿಂದಾಗಿದ್ದರೆ ಬೇರೆಯಾಗಿರುತ್ತವೆ. ಸ್ವರೂಪವೆಂಬುದು ತಾನು ತೆಗೆದುಕೊಂಡದ್ದೂ ಅಲ್ಲ, ಬಿಟ್ಟದ್ದೂ ಅಲ್ಲ[4]. ಆದ್ದರಿಂದ ನಿತ್ಯವಾಗಿರುವ (ಆತ್ಮನು) ಸ್ವರೂಪವಾಗಿರುವದರಿಂದಲೇ (ತನಗಿಂತ) ಬೇರೆಯಲ್ಲವಾಗಿ ಯಾರೊಬ್ಬರೂ ಬಿಡುವದಕ್ಕಾಗಲಿ ತೆಗೆದುಕೊಳ್ಳುವದಕ್ಕಾಗಲಿ ಆಗುವದಿಲ್ಲ[5].

**.... .... .... ವಿಷಯತ್ವಾತ್ ಪೃಥಕ್ತ್ವತಃ ।**
**ಆತ್ಮಾರ್ಥತ್ವಾಚ್ಚ ಸರ್ವಸ್ಯ ನಿತ್ಯ ಆತ್ಮೈವ ಕೇವಲಃ ।**
**ತ್ಯಜೇತ್ ತಸ್ಮಾತ್ ಕ್ರಿಯಾಃ ಸರ್ವಾಃ ಸಾಧನೈಃ ಸಹ ಮೋಕ್ಷವಿತ್ ॥**

೪೩. ಎಲ್ಲವೂ ವಿಷಯವಾಗಿರುವದರಿಂದಲೂ ಬೇರೆಯಾಗಿರುವದರಿಂದಲೂ ಆತ್ಮನಿಗಾಗಿಯೇ ಇರುವದರಿಂದಲೂ[6] ಆತ್ಮನೊಬ್ಬನೇ ನಿತ್ಯನು. ಆದ್ದರಿಂದ ಮೋಕ್ಷಸ್ವರೂಪವನ್ನು ಬಲ್ಲವನು[7] ಎಲ್ಲಾ ಕರ್ಮಗಳನ್ನೂ ಅವುಗಳ ಸಾಧನಗಳೊಡನೆ ಬಿಟ್ಟುಬಿಡಬೇಕು.

---

1. ಸಂಯೋಗವು ವಿಯೋಗವಾಗುವವರೆಗೆ ಇರುತ್ತದೆ, ವಿಯೋಗವೂ ಸಂಯೋಗವಾಗುವವರೆಗೆ ಇರುತ್ತದೆ. ಆದ್ದರಿಂದ ಯಾವದಾದರೊಂದು ಗುಣದ ಸಂಯೋಗದಿಂದ ಅಥವಾ ದೋಷದ ವಿಯೋಗದಿಂದ ಮುಕ್ತಿಯಾಗಬೇಕೆನ್ನುವದು ಸರಿಯಲ್ಲ; ಏಕೆಂದರೆ ಆಗ ಅದು ಅನಿತ್ಯವೆಂದಾಗುವದು. ಸೂ. ಭಾ. ೧–೧–೪.

2. ಬರುವದನ್ನೂ ಹೋಗುವದನ್ನೂ ಆತ್ಮನು ನೋಡುತ್ತಿರುವದರಿಂದ ನಿತ್ಯನು.

3. ಈ ಪಾದವು ಮುಂದಿನ ವಾಕ್ಯಕ್ಕೆ ಅನ್ವಯಿಸುತ್ತದೆ. 'ಅವಿಷಯತ್ವಾತ್' ಎಂದು ಪದಚ್ಛೇದಮಾಡಿ ವ್ಯಾಖ್ಯಾನಕಾರರು ಆತ್ಮನಿಗೇ ಹೊಂದಿಸುವದಕ್ಕೆ ಪ್ರಯತ್ನಿಸಿರುತ್ತಾರೆ; 'ಪೃಥಕ್ತ್ವತಃ' ಎಂಬ ವಿಶೇಷಣವನ್ನು ಅವರು ಕೈಬಿಡಬೇಕಾಗಿ ಬಂದಿದೆ.

4. ತೆಗೆದುಕೊಳ್ಳುವದು ಅಥವಾ ಬಿಡುವದು ಸ್ವರೂಪವೇ ಅಲ್ಲ.

5. ಮತ್ತೊಂದನ್ನಲ್ಲವೆ ತೆಗೆದುಕೊಳ್ಳಬಹುದು; ಅಥವಾ ಬಿಡಬಹುದು?

6. ವಿಷಯವಾಗಿ, ತನಗಿಂತ ಬೇರೆಯಾಗಿ, ತನ್ನ ಪ್ರಯೋಜನಕ್ಕಾಗಿ ಇರುವದು ತನ್ನಷ್ಟು ನಿತ್ಯವಾಗಲಾರದೆಂದು ಭಾವ.

7. ಮೋಕ್ಷವು ನಿತ್ಯಸಿದ್ಧವಾಗಿರಬೇಕೆಂಬುದನ್ನು ಬಲ್ಲವನು.

**ಆತ್ಮಲಾಭಃ ಪರೋ ಲಾಭ ಇತಿ ಶಾಸ್ತ್ರೋಪಪತ್ತಯಃ ।**
**ಅಲಾಭೋಽನ್ಯಾತ್ಮಲಾಭಸ್ತು ತ್ಯಜೇತ್ತಸ್ಮಾದನಾತ್ಮತಾಮ್ ॥ ೪೪ ॥**

೪೪. ಆತ್ಮಲಾಭವೇ ಹೆಚ್ಚಿನ ಲಾಭವೆಂದು ಶಾಸ್ತ್ರಯುಕ್ತಿಗಳು ತಿಳಿಸುತ್ತವೆ; ಮತ್ತೊಂದು ರೂಪದ ಲಾಭವು ಲಾಭವೇ ಅಲ್ಲ[1]. ಆದ್ದರಿಂದ ಅನಾತ್ಮಸ್ವರೂಪ(ಚಿಂತೆಯನ್ನು) ಬಿಡಬೇಕು[2].

## ಸಾಂಖ್ಯಶಾಸ್ತ್ರದಂತೆ ಬಂಧಮೋಕ್ಷವ್ಯವಸ್ಥೆ ಇಲ್ಲ

**ಗುಣಾನಾಂ ಸಮಭಾವಸ್ಯ ಭ್ರಂಶೋ ನ ಹ್ಯುಪಪದ್ಯತೇ ।**
**ಅವಿದ್ಯಾದೇಃ ಪ್ರಸುಪ್ತತ್ವಾನ್ನ ಚಾನ್ಯೋ ಹೇತುರುಚ್ಯತೇ ॥ ೪೫ ॥**

೪೫. ಗುಣಗಳ ಸಮತೆಯು ತಪ್ಪುವದೆಂಬುದು ಹೊಂದುವದೇ ಇಲ್ಲ. ಏಕೆಂದರೆ ಅವಿದ್ಯೆಯೇ ಮುಂತಾದದ್ದು ನಿದ್ರಿಸಿರುತ್ತದೆ[3]; ಸಾಂಖ್ಯಸಿದ್ಧಾಂತದಲ್ಲಿ ಮತ್ತೊಂದು ಹೇತುವನ್ನು ಹೇಳಿಯೂ ಇಲ್ಲ[4].

**ಇತರೇತರಹೇತುತ್ವೇ ಪ್ರವೃತ್ತಿಃ ಸ್ಯಾತ್ ಸದಾ ನ ವಾ ।**
**ನಿಯಮೋ ನ ಪ್ರವೃತ್ತೀನಾಂ ಗುಣೇಷ್ವಾತ್ಮನಿ ವಾ ಭವೇತ್ ॥ ೪೬ ॥**

೪೬. ಒಂದಕ್ಕೊಂದು ಕಾರಣವೆಂದರೆ ಯಾವಾಗಲೂ ಪ್ರವೃತ್ತಿಯಾಗಬೇಕು, ಅಥವಾ ಆಗಬಾರದು. ಗುಣಗಳಲ್ಲಾಗಲಿ ಆತ್ಮನಲ್ಲಾಗಲಿ ಪ್ರವೃತ್ತಿಗಳಿಗೆ ನಿಯಮವಿರಲಾರದು[5].

---

1. ಆ. ಧ. ಸೂ. ೧-೨೨-೨, ಛಾಂ. ೮-೬-೭ ಮುಂತಾದ ಶಾಸ್ತ್ರಗಳು ಮಿಕ್ಕದ್ದೆಲ್ಲವೂ ಅನಿತ್ಯವಾದ್ದರಿಂದ ಅದರ ಲಾಭವು ನಿಜವಾದ ಲಾಭವಲ್ಲವೆಂಬ ಯುಕ್ತಿ.

2. ಏಕೆಂದರೆ ಕ್ಷಯ, ತನಗಿಂತ ಅತಿಶಯವುಳ್ಳದ್ದಾಗಿರುವಿಕೆ- ಇವುಗಳ ನಿಮಿತ್ತದಿಂದ ಅದು ದುಃಖಕ್ಕೆ ಕಾರಣವಾಗಿರುತ್ತದೆ.

3. ಆತ್ಮವಿಚಾರವನ್ನೇ ಮಾಡಬೇಕು.

4. ಸತ್ತ್ವ, ರಜಸ್ಸು, ತಮಸ್ಸು -ಎಂಬ ಗುಣಗಳ ಸಾಮ್ಯಾವಸ್ಥೆಯೇ ಪ್ರಧಾನವು; ಅದರ ಸಾಮ್ಯಾವಸ್ಥೆಯು ತಪ್ಪಿದರೆ ಮಹದಾದಿಪ್ರಪಂಚದ ಸೃಷ್ಟಿಯಾಗುತ್ತದೆ ಎಂಬುದು ಸಾಂಖ್ಯರ ಪ್ರಕ್ರಿಯೆ. ಸೃಷ್ಟಿಕಾಲದಲ್ಲಿ ನಿಮಿತ್ತವಾಗಬಹುದಾದ ಅವಿದ್ಯೆ, ಧರ್ಮಾಧರ್ಮಗಳು- ಯಾವವೂ ಪ್ರಲಯದಲ್ಲಿ ಕೆಲಸಮಾಡುತ್ತಿರುವದಿಲ್ಲವಾದ್ದರಿಂದ ಆಗ ಸಾಮ್ಯಾವಸ್ಥೆಯನ್ನು ತಪ್ಪಿಸುವ ಹೇತು ಯಾವದು ? -ಎಂದು ಆಕ್ಷೇಪ.

5. ಪುರುಷನು ಉದಾಸೀನನು, ಗುಣಗಳು ಅಚೇತನ. ತೊಡಗುವದು ಯಾವದು?

**ವಿಶೇಷೋ ಮುಕ್ತಬದ್ಧಾನಾಂ ತಾದರ್ಥ್ಯೇ ನ ಚ ಯುಜ್ಯತೇ |**
**ಅರ್ಥಾರ್ಥಿನೋಸ್ತ್ವಸಂಬನ್ಧೋ ನಾರ್ಥೀ ಜ್ಞೋ ನೇತರೋಽಪಿ ವಾ ||**

೪೭. (ಪ್ರಧಾನವು) ಆ (ಆತ್ಮನಿ)ಗಾಗಿ ಕೆಲಸಮಾಡುವದೆಂಬ (ಪಕ್ಷ) ದಲ್ಲಿ ಮುಕ್ತರಿಗೂ ಬದ್ಧರಿಗೂ ವಿಶೇಷವಿರುವದೆಂಬುದು ಹೊಂದುವದಿಲ್ಲ[1]. ಅರ್ಥ, ಅರ್ಥಿ –ಇವುಗಳಿಗೆ ಸಂಬಂಧವೇ ಇಲ್ಲ; ಏಕೆಂದರೆ ಆತ್ಮನು ಅರ್ಥಿಯಲ್ಲ, ಇನ್ನೊಂದೂ ಅಲ್ಲ[2].

**ಪ್ರಧಾನಸ್ಯ ಚ ಪಾರಾರ್ಥ್ಯಂ ಪುರುಷಸ್ಯಾವಿಕಾರತಃ |**
**ನ ಯುಕ್ತಂ ಸಾಙ್ಖ್ಯಶಾಸ್ತ್ರೇಽಪಿ ವಿಕಾರೇಽಪಿ ನ ಯುಜ್ಯತೇ ||೪೮||**
**ಸಮ್ಬನ್ಧಾನುಪಪತ್ತೇಶ್ಚ ಪ್ರಕೃತೇಃ ಪುರುಷಸ್ಯ ಚ |**
**ಮಿಥೋಽಯುಕ್ತಂ ತದರ್ಥತ್ವಂ ಪ್ರಧಾನಸ್ಯಾಚಿತಿತ್ವತಃ || ೪೯ ||**

೪೮–೪೯. ಸಾಂಖ್ಯಶಾಸ್ತ್ರದಲ್ಲಿಯೂ ಪುರುಷನು ವಿಕಾರರಹಿತನಾಗಿರುವದರಿಂದ ಪುರುಷನಿಗಾಗಿ ಪ್ರಧಾನವು ತೊಡಗುವದೆಂಬುದು ಹೊಂದುವದಿಲ್ಲ. ಪುರುಷನು ವಿಕಾರವನ್ನು ಹೊಂದುವನೆಂದರೂ (ಪ್ರಧಾನವು ಮತ್ತೊಬ್ಬರಿಗಾಗಿ ತೊಡಗುವದೆಂಬುದು) ಹೊಂದುವದಿಲ್ಲ. ಏಕೆಂದರೆ ಪ್ರಧಾನಕ್ಕೂ ಪುರುಷನಿಗೂ ಒಂದಕ್ಕೊಂದಕ್ಕೆ ಸಂಬಂಧವು ಹೊಂದುವದಿಲ್ಲವಾದ್ದರಿಂದಲೂ ಪ್ರಧಾನವು ಅಚೇತನವಾಗಿರುವದರಿಂದಲೂ ಆ (ಆತ್ಮ)ನಿಗಾಗಿ ( ಕೆಲಸಮಾಡುತ್ತದೆ ) ಎಂಬುದು ಸರಿಯಲ್ಲ[3].

**ಕ್ರಿಯೋತ್ಪತ್ತಾವಿನಾಶಿತ್ವಂ ಜ್ಞಾನಮಾತ್ರೇ ಚ ಪೂರ್ವವತ್ |**
**ನಿರ್ನಿಮಿತ್ತೇ ತ್ವನಿರ್ಮೋಕ್ಷಃ ಪ್ರಧಾನಸ್ಯ ಪ್ರಸಜ್ಯತೇ || ೫೦ ||**

---

1. ಪ್ರಧಾನವು ಪುರುಷನಿಗೆ ಬಂಧಮೋಕ್ಷಗಳನ್ನುಂಟುಮಾಡುವದಕ್ಕಾಗಿ ಪ್ರವರ್ತಿಸುತ್ತದೆ ಎಂಬ ಸಾಂಖ್ಯಪ್ರಕ್ರಿಯೆಯನ್ನು ಇನ್ನು ಮುಂದಿನ ನಾಲ್ಕು ಶ್ಲೋಕಗಳಲ್ಲಿ ಖಂಡಿಸಿದೆ. ಪ್ರಧಾನವು ಅಚೇತನವಾದ್ದರಿಂದ ಬದ್ಧಮುಕ್ತವಿಶೇಷವು ಅದಕ್ಕೆ ತಿಳಿಯದು, ಪುರುಷನು ನಿರ್ವಿಶೇಷನಾದ್ದರಿಂದಲೂ ಬದ್ಧಮುಕ್ತವಿಶೇಷವಿಲ್ಲ.

2. ಪುರುಷಾರ್ಥವು ಉದಾಸೀನನಾದ ಪುರುಷನಿಗಲ್ಲ, ಪ್ರಧಾನಕ್ಕೂ ಅಲ್ಲ.

3. ಚೇತನಾಚೇತನಗಳಿಗೆ ಸಂಬಂಧವು ಚೇತನವಲ್ಲ, ಅಚೇತನವೂ ಅಲ್ಲ. ಅಚೇತನವಾದ ಪ್ರಧಾನವು ಚೇತನವಾದ ಪುರುಷನನ್ನು ಮುಟ್ಟದೆ ಅವನಿಗಾಗಿ ಕೆಲಸಮಾಡುತ್ತದೆ– ಎಂಬ ಮಾತಿಗೆ ಅರ್ಥವೂ ಇಲ್ಲ.

೫೦. (ಪುರುಷನಲ್ಲಿ) ವಿಕ್ರಿಯೆಯುಂಟಾದರೆ[1] (ಅವನು) ನಾಶವಾಗುವವನೆಂದಾಗುತ್ತದೆ. (ಪುರುಷನು) ಜ್ಞಾನವಮಾತ್ರಸ್ವರೂಪನೆಂದರೆ ಹಿಂದೆ (ಹೇಳಿರು)ವಂತೆ (ದೋಷವು ಬರುತ್ತದೆ)[2]. ಪ್ರಧಾನದ (ವ್ಯಾಪಾರಕ್ಕೆ) ನಿಮಿತ್ತವೇ ಇಲ್ಲವೆಂದವರಂತೂ ಮೋಕ್ಷವೇ ಇಲ್ಲವೆಂದಾಗುತ್ತದೆ[3].

## ವೈಶೇಷಿಕಮತದಂತೆಯೂ ಬಂಧಮೋಕ್ಷವ್ಯವಸ್ಥೆಯಿಲ್ಲ

**ನ ಪ್ರಕಾಶ್ಯಂ ಯಥೋಷ್ಣತ್ವಂ ಜ್ಞಾನೇಽಪ್ಯೇವಂ ಸುಖಾದಯಃ ।**
**ಏಕನೀಡತ್ವತೋಽಗ್ರಾಹ್ಯಾಃ ಸ್ಯುಃ ಕಣಾದಾದಿವರ್ತ್ಮನಾಮ್ ॥ ೫೧ ॥**

೫೧. ಕಣಾದನೇ ಮೊದಲಾದವರ ಮಾರ್ಗವ(ನ್ನನುಸರಿಸುವವರ ಮತದಲ್ಲಿ ಜ್ಞಾನಸುಖಾದಿಗಳು) ಒಂದೇ ಆಶ್ರಯದಲ್ಲಿರುವದರಿಂದ[4] ಬಿಸಿಯು ಬೆಳಕಿಗೆ ವಿಷಯವಲ್ಲದಿರುವಂತೆ ಸುಖಾದಿಗಳು ಜ್ಞಾನದಿಂದ ಬೆಳಗುವಹಾಗಿಲ್ಲ[5].

**ಯುಗಪತ್ಸಮವೇತತ್ವಂ ಸುಖವಿಜ್ಞಾನಯೋರಪಿ ।**
**ಮನೋಯೋಗೈಕಹೇತುತ್ವಾದಗ್ರಾಹ್ಯತ್ವಂ ಸುಖಸ್ಯ ಚ ॥ ೫೨ ॥**

೫೨. ಸುಖಜ್ಞಾನಗಳೆರಡೂ ಒಂದೇ ಸಲಕ್ಕೆ ಸಮವೇತವಾಗಿವೆ ಎಂಬುದೂ (ಹೊಂದುವದಿಲ್ಲ)[6]. ಏಕೆಂದರೆ (ಇವೆರಡೂ) ಮನಸ್ಸಂಯೋಗ

---

1. ಪ್ರಧಾನವ್ಯಾಪಾರದಿಂದ ಭೋಕ್ತೃತ್ವವೆಂಬ ವಿಕಾರವುಂಟಾಗುವದಾದರೆ ಎಂದರ್ಥ.

2. ಪ್ರಧಾನವು ಪುರುಷನಿಗಾಗಿ ವ್ಯಾಪಾರಮಾಡುವದೆಂಬುದು ಸುಳ್ಳಾಗುತ್ತದೆ.

3. ಏಕೆಂದರೆ ಪುರುಷನಿಗೆ ಬಂಧವನ್ನುಂಟುಮಾಡುವದಕ್ಕೆ ತೊಡಗಿದ್ದ ಪ್ರಧಾನವು ನಿಲ್ಲುವದಕ್ಕೆ ಕಾರಣವೇ ಇರುವದಿಲ್ಲ ಎಂದರ್ಥ. ಈ ಶ್ಲೋಕದಲ್ಲಿ ಸಾಂಖ್ಯಮತದ ಖಂಡನೆಯನ್ನು ಸಂಗ್ರಹಿಸಿರುತ್ತದೆ.

4. ಆತ್ಮನೇ ಜ್ಞಾನಕ್ಕೂ ಸುಖಾದಿಗಳಿಗೂ ಆಶ್ರಯವಾಗಿರುವದರಿಂದ ಎಂದರ್ಥ.

5. ಬೆಂಕಿಯ ಬಿಸಿಯನ್ನು ಬೆಳಕು ತೋರಿಸುವದಿಲ್ಲ ; ಬೆಳಕನ್ನು ಬಿಸಿಯು ಸುಡುವದೂ ಇಲ್ಲ. ಆತ್ಮನ ಗುಣವಾದ ಜ್ಞಾನವು ಆತ್ಮನ ಗುಣವಾದ ಸುಖಾದಿಗಳನ್ನು ತಿಳಿಸುತ್ತದೆ ಎಂಬುದು ಹೇಗೆ ಸರಿಯಾದೀತು ?

6. ಸುಖಜ್ಞಾನಗಳೆರಡೂ ಆತ್ಮನಲ್ಲಿ ಸಮವಾಯಸಂಬಂಧದಿಂದ ಇರುವದರಿಂದ ಆ ಸುಖಜ್ಞಾನಗಳು ನಿತ್ಯವಾಗಿರಬೇಕಾಗುವದು, ದುಃಖವು ಜ್ಞಾನದೊಡನೆ ಇರಬಾರದಾಗುವದು.

ವೆಂಬ ಒಂದೇ ಕಾರಣದಿಂದ (ಉಂಟಾಗುತ್ತವೆ)[1]. ಸುಖವೂ ಅಗ್ರಾಹ್ಯ ವಾಗುತ್ತದೆ[2].

**ತಥಾನ್ಯೇಷಾಂ ಚ ಭಿನ್ನತ್ವಾದ್ಯುಗಪಜ್ಜನ್ಮ ನೇಷ್ಯತೇ ।**
**ಗುಣಾನಾಂ ಸಮವೇತತ್ವಂ ಜ್ಞಾನಂ ಚೇನ್ನ ವಿಶೇಷಣಾತ್ ॥ ೫೩ ॥**

**ಜ್ಞಾನೇನೈವ ವಿಶೇಷ್ಯತ್ವಾಜ್ಜ್ಞಾನಾವ್ಯಾಪ್ಯತ್ವಂ ಸ್ಮೃತೇಸ್ತಥಾ ।**
**ಸುಖಂ ಜ್ಞಾತಂ ಮಯೇತ್ಯೇವಂ ತವಾಜ್ಞಾನಾತ್ಮಕತ್ವತಃ ॥ ೫೪ ॥**

೫೩-೫೪. ಇದರಂತೆ ಮಿಕ್ಕವುಗಳೂ[3] ಬೇರೆಬೇರೆಯಾಗಿರುವವರಿಂದ ಒಂದೇ ಕಾಲದಲ್ಲಿ ಹುಟ್ಟುವದನ್ನು ಒಪ್ಪಲಾಗುವದಿಲ್ಲ. ಗುಣಗಳು ಆತ್ಮನೊಡನೆ ಸಮವಾಯಸಂಬಂಧವನ್ನು ಪಡೆಯುವದೇ ಜ್ಞಾನವು ಎಂದರೆ (ಅದೂ ಸರಿ) ಯಲ್ಲ. ಏಕೆಂದರೆ ವಿಶೇಷಣವಾಗುತ್ತದೆ; (ಅವುಗಳು) ಜ್ಞಾನದಿಂದ ಕೂಡಿಯೇ (ಹುಟ್ಟುವ)ದರಿಂದಲೂ[4] 'ಸುಖವನ್ನು ನಾನು ಅರಿತೆನು' ಎಂದಿಂತು ಜ್ಞಾನವ್ಯಾಪ್ತವಾಗಿ ಸ್ಮೃತಿಯಾಗುವದರಿಂದಲೂ[5] ನಿನ್ನ ಮತದಲ್ಲಿ ಆತ್ಮನು ಜ್ಞಾನಾತ್ಮಕನಲ್ಲದ್ದರಿಂದಲೂ[6] (ಈ ಅಭಿಪ್ರಾಯವು ಸರಿಯಲ್ಲ).

**ಸುಖಾದೇರ್ನಾತ್ಮಧರ್ಮತ್ವಮಾತ್ಮನಸ್ತೇಽವಿಕಾರತಃ ।**
**ಭೇದಾದನ್ಯಸ್ಯ ಕಸ್ಮಿನ್ನ ಮನಸೋ ವಾಽವಿಶೇಷತಃ ॥ ೫೫ ॥**

---

1. ಆತ್ಮಮನಃಸಂಯೋಗದಿಂದ ಜ್ಞಾನಸುಖಗಳೆರಡೂ ಹುಟ್ಟಿದರೆ ಮಿಕ್ಕ ಗುಣಗಳು ಏಕೆ ಹುಟ್ಟುವದಿಲ್ಲ ?

2. ಏಕೆಂದರೆ ಹಿಂದೆ ಹೇಳಿದಂತೆ ಜ್ಞಾನಸುಖಗಳೆರಡೂ ಒಂದೇ ಕಾಲದಲ್ಲಿ ಉಂಟಾಗಿರುವ ಆತ್ಮಗುಣಗಳು.

3. ದುಃಖ, ಇಚ್ಛೆ -ಮುಂತಾದ ಗುಣಗಳೂ.

4. ಸುಖದ ಸಂಬಂಧವೇ ಜ್ಞಾನವಲ್ಲ; ಏಕೆಂದರೆ ಸುಖವನ್ನು ಅರಿಯುತ್ತೇನೆ ಎಂದು ಜ್ಞಾನವ್ಯಾಪ್ತವಾಗಿಯೇ ಸುಖವು ತೋರುತ್ತದೆ.

5. ಸುಖವಿಲ್ಲದಾಗಲೂ ಜ್ಞಾನವಿರುವದರಿಂದಲೂ ಸುಖದ ಸಂಬಂಧವೇ ಜ್ಞಾನವಲ್ಲ.

6. ಆತ್ಮನು ಜ್ಞಾನಸ್ವರೂಪನೇ ಆಗಿದ್ದರೆ ಆತ್ಮನ ಸಂಬಂಧವೇ ಸುಖದ ಜ್ಞಾನವೆಂದು ಹೇಳಲೂ ಬಹುದಾಗಿತ್ತು.

೫೫. ಸುಖಾದಿಗಳು ಆತ್ಮನ ಧರ್ಮವಲ್ಲ, ಏಕೆಂದರೆ ನಿನ್ನ (ಮತದಲ್ಲಿ) ಆತ್ಮನು ಅವಿಕಾರಿಯಾಗಿರುತ್ತಾನೆ[1]. ಬೇರೆಬೇರೆಯಾಗಿರುವದರಿಂದ ಮತ್ತೊಬ್ಬನ ಧರ್ಮವೇಕಲ್ಲ[2] ? ಅಥವಾ ಮನಸ್ಸಿನ ಧರ್ಮವೇಕಲ್ಲ ? (ಆತ್ಮನಲ್ಲಿ) ಯಾವ ವಿಶೇಷವೂ ಇಲ್ಲವಲ್ಲ ![3]

**ಸ್ಯಾನ್ಮಾಲಾ ಅಪರಿಹಾರ್ಯಾ ತು ಜ್ಞಾನಂ ಚೇಜ್ಜ್ಞೇಯತಾಂ ವ್ರಜೇತ್**
**ಯುಗಪದ್ವಾಪಿ ಚೋತ್ಪತ್ತಿರಭ್ಯುಪೇತಾತ ಇಷ್ಯತೇ ॥ ೫೬ ॥**

೫೬. ಜ್ಞಾನವು ಜ್ಞೇಯತ್ವವನ್ನು ಹೊಂದಿದರೆ ಅನವಸ್ಥೆಯು ಅಪರಿಹಾರ್ಯವಾಗುವದು[4]. (ಎರಡು ಜ್ಞಾನಗಳೂ) ಒಂದೇ ಕಾಲದಲ್ಲಿ ಈ (ಆತ್ಮನಿಂದ) ಹುಟ್ಟುವವೆಂದು ಒಪ್ಪಿದಂತಾಗುವದು[5].

**ಅನವಸ್ಥಾನ್ತರತ್ವಾಚ್ಚ ಬನ್ಧೋ ನಾತ್ಮನಿ ವಿದ್ಯತೇ ।**
**ನಾಶುದ್ಧಿಶ್ಚಾಪ್ಯಸಙ್ಗತ್ವಾದಸಙ್ಗೋ ಹೀತಿ ಚ ಶ್ರುತೇಃ ॥ ೫೭ ॥**

**ಸೂಕ್ಷ್ಮತ್ವಾಗೋಚರೇಭ್ಯಶ್ಚ ನ ಲಿಪ್ಯತ ಇತಿ ಶ್ರುತೇಃ ॥ ೫೭[೧] ॥**

---

1. ವಿಭುವೂ ವ್ಯಾಪಕನೂ ನಿತ್ಯನೂ ಆಗಿರುವನೆಂದು ವೈಶೇಷಿಕರು ಒಪ್ಪಿರುವ ಆತ್ಮನಲ್ಲಿ ಯಾವ ವಿಕಾರವೂ ಆಗುವಂತಿಲ್ಲ. ಅವನಲ್ಲಿ ಸುಖಾದಿಗಳು ಬಂದುಹೋಗುತ್ತಿದ್ದರೆ ವಿಕಾರವು ಆಗಿಯೇತೀರಬೇಕು ; ಆದ್ದರಿಂದ ಸುಖಾದಿಗಳು ಆತ್ಮನ ಧರ್ಮವಲ್ಲ.

2. ಆತ್ಮನು ಬೇರೆ, ಗುಣಗಳು ಬೇರೆ, ಆತ್ಮರು ಬೇರೆಬೇರೆ, ಆತ್ಮರೆಲ್ಲರೂ ವಿಭು- ಎಂಬ ಮತದಲ್ಲಿ ಇದು ಇಂಥ ಆತ್ಮನ ಗುಣವು ಆ ಮತ್ತೊಬ್ಬನದಲ್ಲ- ಎಂಬುವದಕ್ಕೆ ಗಮಕವೇನೂ ಇಲ್ಲ.

3. ಆತ್ಮಮನಃಸಂಯೋಗದಿಂದ ಹುಟ್ಟುವ ಜ್ಞಾನವು ಮನಸ್ಸಿನದಲ್ಲ, ಆತ್ಮನದೇ ಎನ್ನುವದಕ್ಕೆ ಆತ್ಮನಲ್ಲಿ ಯಾವ ವಿಶೇಷವಿದೆ ?

4. ಜ್ಞಾನವು ಮತ್ತೊಂದು ಜ್ಞಾನಕ್ಕೆ ವಿಷಯವೆಂದರೆ ಅದೂ ಮತ್ತೊಂದಕ್ಕೆ ವಿಷಯವಾಗಬೇಕಾಗುವದು.

5. ಅನವಸ್ಥಾದೋಷವನ್ನು ತಪ್ಪಿಸಿಕೊಳ್ಳುವದಕ್ಕೆ ವಿಷಯಜ್ಞಾನವೂ ವಿಷಯಿಜ್ಞಾನವೂ ಒಂದೇ ಸಮಯಕ್ಕೆ ಆತ್ಮನಿಂದ ಹುಟ್ಟುವವು ಎನ್ನಬೇಕಾಗುವದು. ಆಗ ಆತ್ಮಮನಸ್ಸುಗಳಿಗೆ ಎರಡು ಸಂಯೋಗಗಳು ಏಕಕಾಲಕ್ಕೆ ಆಗುವವೆನ್ನಬೇಕಾಗುವದು ; ಅಥವಾ ಒಂದೇ ಸಂಯೋಗದಿಂದ ಎಲ್ಲಾ ಜ್ಞಾನಗಳೂ ಒಂದೇ ಕಾಲಕ್ಕೆ ಉಂಟಾಗುವವೆಂದು ಒಪ್ಪುವ ಅನಿಷ್ಟವು ಬಂದೊದಗುವದು.

೫೭–೫೭½. ಆತ್ಮನಿಗೆ ಮತ್ತೊಂದು ಅವಸ್ಥೆಯಿಲ್ಲದ್ದರಿಂದ[1] ಬಂಧವೆಂಬುದೇ ಇಲ್ಲ. ಆತ್ಮನಲ್ಲಿ ಅಶುದ್ಧಿಯೂ ಇಲ್ಲ[2]; ಏಕೆಂದರೆ "ಅಸಂಗನೇ" (ಬೃ. ೪–೩–೧೫) ಎಂಬ ಶ್ರುತಿ(ಪ್ರಮಾಣ)ದಿಂದ (ಆತ್ಮನು) ಅಸಂಗನಾಗಿರುತ್ತಾನೆ. ಸೂಕ್ಷ್ಮನಾಗಿರುವದರಿಂದಲೂ ಒಬ್ಬನೇ ಆಗಿರುವದರಿಂದಲೂ ಅವಿಷಯನಾಗಿರುವದರಿಂದಲೂ (ಅವನಲ್ಲಿ ಅಶುದ್ಧಿಯಿರುವದಿಲ್ಲ)[3] (ಅವನಿಗೆ) "ಅಂಟುವದಿಲ್ಲ" (ಕ. ೨–೨–೧೧) ಎಂಬ ಶ್ರುತಿಯಿಂದಲೂ (ಅಶುದ್ಧಿಯಿಲ್ಲ).

## ಸಿದ್ಧಾಂತದಲ್ಲಿ ಬಂಧಮೋಕ್ಷಗಳ ವ್ಯವಸ್ಥೆ ಹೇಗೆ?

**ಏವಂ ತರ್ಹಿ ನ ಮೋಕ್ಷೋಽಸ್ತಿ ಬನ್ಧಾಭಾವಾತ್ ಕಥಞ್ಚನ ॥ ೫೮ ॥**
**ಶಾಸ್ತ್ರಾನರ್ಥಕ್ಯಮೇವ ಸ್ಯಾನ್ನ ಬುದ್ಧೇರ್ಭ್ರಾನ್ತಿರಿಷ್ಯತೇ ।**
**ಬನ್ಧೋ ಮೋಕ್ಷಶ್ಚ ತನ್ನಾಶಃ ಸ ಯಥೋಕ್ತೋ ನ ಚಾನ್ಯಥಾ॥ ೫೯ ॥**

೫೮–೫೯. (ಆಕ್ಷೇಪ): ಹಾಗಾದರೆ ಬಂಧವೇ ಇಲ್ಲದ್ದರಿಂದ ಹೇಗೂ ಮೋಕ್ಷವೂ ಇಲ್ಲ. (ಆಗ) ಶಾಸ್ತ್ರವು ವ್ಯರ್ಥವೇ ಆಗುವದು. (ಪರಿಹಾರ): ಹಾಗಲ್ಲ. ಬುದ್ಧಿಯ ಭ್ರಾಂತಿಯೇ ಬಂಧವೆಂದು (ನಾವು) ಒಪ್ಪುತ್ತೇವೆ. ಮೋಕ್ಷವೆಂದರೆ ಅದರ ನಾಶವು. ಅದು ಹಿಂದೆ ಹೇಳಿದ (ರೀತಿಯದೇ ಹೊರತು) ಬೇರೆಯ ಪ್ರಕಾರದ್ದಲ್ಲ[4].

**ಬೋಧಾತ್ಮಜ್ಯೋತಿಷಾ ದೀಪ್ತಾ ಬೋಧಮಾತ್ಮನಿ ಮನ್ಯತೇ ।**
**ಬುದ್ಧಿರ್ನಾನ್ಯೋಽಸ್ತಿ ಬೋದ್ಧೇತಿ ಸೇಯಂ ಭ್ರಾನ್ತಿರ್ಹಿ ಧೀಗತಾ ॥**
**ಬೋಧಸ್ಯಾತ್ಮಸ್ವರೂಪತ್ವಾನ್ನಿತ್ಯಂ ತತ್ರೋಪಚರ್ಯತೇ ॥ ೬೦½ ॥**

---

1. ಜ್ಞಾನದಿಂದ ಮೋಕ್ಷವಾಗುವದು ಎಂಬ ಸಿದ್ಧಾಂತವನ್ನು ಖಂಡಿಸುವದಕ್ಕಾಗಿ ಜ್ಞಾನವು ಆತ್ಮನ ಧರ್ಮವಲ್ಲ ಎಂದು ತೋರಿಸಿಕೊಟ್ಟದ್ದಾಯಿತು. ಆತ್ಮನು ಬಂಧಾವಸ್ಥೆಯಿಂದ ಮೋಕ್ಷಾವಸ್ಥೆಗೆ ಮಾರ್ಪಡುವದೇ ಬಂಧಮೋಕ್ಷಗಳ ವ್ಯವಸ್ಥೆ ಎಂಬ ಮತವನ್ನು ಈಗ ಖಂಡಿಸುವದಕ್ಕೆ ಹೊರಟಿದೆ. ನಿರ್ವಿಕಾರನಾದ ಆತ್ಮನಿಗೆ ಅವಸ್ಥೆಯಿಲ್ಲ.

2. ಅಶುದ್ಧಿಯನ್ನು ತೆಗೆದುಹಾಕುವದೇ ಮೋಕ್ಷವು ಎಂದರೆ ಆ ಪಕ್ಷವು ಶ್ರುತಿ ವಿರುದ್ಧ.

3. ಸೂಕ್ಷ್ಮನಾಗಿರುವ ಆತ್ಮನಿಗೆ ಸ್ಥೂಲವಾದ ದ್ವೈತದ ಕಲಂಕವು ಹೊದ್ದಲಾರದು. ಅದ್ವಿತೀಯನಾದ್ದರಿಂದ ಅನೇಕಾತ್ಮಕವಾದ ದ್ವೈತಕಲಂಕವು ಅವನಿಗೆ ಹತ್ತಲಾರದು. ಯಾವ ದೋಷಕ್ಕೂ ವಿಷಯನಲ್ಲವಾದ್ದರಿಂದ ಎಲ್ಲವನ್ನೂ ನೋಡುವ ಸಾಕ್ಷಿಯಾದ್ದರಿಂದಲೂ ಅವನಲ್ಲಿ ಕಲಂಕವಿಲ್ಲ. ಹೀಗೆ ಬಂಧವೇ ಇಲ್ಲದ್ದರಿಂದ ಮೋಕ್ಷವೂ ಹೊಂದುವದಿಲ್ಲ ಎಂದರ್ಥ.

4. ಅಜ್ಞಾನದಿಂದ ಕಲ್ಪಿತ ಬಂಧವು, ಜ್ಞಾನದಿಂದ ಮೋಕ್ಷವು– ಎಂದು ೧೭ನೇ ಶ್ಲೋಕದಲ್ಲಿ ಹೇಳಿರುವದು ಎಂದರ್ಥ.

೬೦-೬೧½. ಚೈತನ್ಯರೂಪನಾದ ಆತ್ಮನ ಬೆಳಕಿನಿಂದ ಹೊಳೆಯುವ ಬುದ್ಧಿಯು ತನ್ನಲ್ಲಿ ಅರಿವಿದೆ, ಮತ್ತೊಬ್ಬ ಅರಿಯುವಾತನಿಲ್ಲ- ಎಂದು ತಿಳಿದುಕೊಂಡಿರುತ್ತದೆ.[1] ಈ ಭ್ರಾಂತಿಯು ಬುದ್ಧಿಗೇ ಸೇರಿದ್ದು; (ಆದರೂ) ಜ್ಞಾನವು ಯಾವಾಗಲೂ ಆತ್ಮನ ಸ್ವರೂಪವೇ ಆಗಿರುವದರಿಂದ, ಅವನಲ್ಲಿ (ಇದೆಯೆಂದು) ವ್ಯವಹರಿಸುತ್ತಾರೆ.[2]

**ಅವಿವೇಕೋಽಸ್ಯನಾದ್ಯೋಽಯಂ ಸಂಸಾರೋ ನಾನ್ಯ ಇಷ್ಯತೇ ॥೬೧॥**
**ಮೋಕ್ಷಸ್ತನ್ನಾಶ ಏವ ಸ್ಯಾನ್ನಾನ್ಯಥಾನುಪಪತ್ತಿತಃ ॥೬೧½॥**

೬೧-೬೧½. ಈ ಅನಾದ್ಯವಿವೇಕವೇ ಸಂಸಾರವೇ ಹೊರತು ಮತ್ತೆ ಬೇರೆ ಇಲ್ಲ. ಮೋಕ್ಷವು ಇದರ ನಾಶವೇ ಹೊರತು ಮತ್ತೊಂದು ರೀತಿಯಿಂದ ಹೊಂದುವದಿಲ್ಲ.[3]

**ಯೇಷಾಂ ವಸ್ತ್ವನ್ತರಾಪತ್ತಿರ್ಮೋಕ್ಷೋ ನಾಶಸ್ತು ತೈರ್ಮತಃ ॥೬೨॥**
**ಅವಸ್ಥಾನ್ತರಮಪ್ಯೇವಮವಿಕಾರಾನ್ನ ಯುಜ್ಯತೇ ।**
**ವಿಕಾರೇ[4]ಽವಯವಿತ್ವಂ ಸ್ಯಾತ್ತತೋ ನಾಶೋ ಘಟಾದಿವತ್ ॥ ೬೩ ॥**

೬೨-೬೩. ಯಾರ (ಮತದಲ್ಲಿ) ಮೋಕ್ಷವೆಂದರೆ ಮತ್ತೊಂದು ವಸ್ತುವಾಗಿ ಪರಿಣಮಿಸುವದೋ ಅವರ ಮತದಲ್ಲಿ ಮೋಕ್ಷವೆಂದರೆ (ಆತ್ಮನ) ನಾಶವೇ ಎಂದು ಅಭಿಪ್ರಾಯಪಟ್ಟಂತೆ (ಆಗುತ್ತದೆ). ಹೀಗೆಯೇ ಮತ್ತೊಂದು ಅವಸ್ಥೆ (ಯನ್ನು ಪಡೆಯುವ)ದೆಂಬುದೂ (ಆತ್ಮನು) ಅವಿಕಾರಿಯಾಗಿರುವದರಿಂದ ಯುಕ್ತವಾಗುವದಿಲ್ಲ. (ಆತ್ಮನಲ್ಲಿ) ವಿಕಾರ(ವಿದ್ದರೆ ಅವನು) ಅವಯವಗಳುಳ್ಳವನೆಂದೂ ಆಗುತ್ತದೆ, ಅದರಿಂದ ಗಡಿಗೆಯೇ ಮುಂತಾದವುಗಳಂತೆ (ಆತ್ಮನಿಗೆ) ನಾಶವೂ (ಉಂಟೆಂದಾಗುತ್ತದೆ).[5]

---

1. ಚಿದ್ರೂಪನಾದ ಆತ್ಮನು ನಿತ್ಯ, ಚಿದಾಭಾಸನಾದ ಅಂತಃಕರಣದ ವೃತ್ತಿರೂಪ ಜ್ಞಾನವು ಅನಿತ್ಯ. ಅಂತಃಕರಣವು ತಾನು ಜ್ಞಾತೃ ಎಂದು ತಿಳಿದುಕೊಂಡಿರುವ ಭ್ರಾಂತಿಯೇ ಬಂಧಕ್ಕೆ ಕಾರಣ.

2. ಭ್ರಾಂತಿಯೂ ಜ್ಞಾನರೂಪವಾಗಿಯೇ ತೋರುವದರಿಂದ ಆತ್ಮನ ಧರ್ಮವು ಎಂದು ಜನರು ತಪ್ಪಾಗಿ ತಿಳಿದುಕೊಳ್ಳುತ್ತಿದ್ದಾರೆ. ಹೀಗೆ ಆತ್ಮನಲ್ಲಿ ಕಲ್ಪಿತಬಂಧವಿರುತ್ತದೆ.

3. ಆತ್ಮನಲ್ಲಿ ಭ್ರಾಂತಿಯಿಲ್ಲ, ಅಂತಃಕರಣದಲ್ಲಿ ಚೈತನ್ಯವಿಲ್ಲ- ಎಂಬುದನ್ನು ವಿಂಗಡಿಸಿ ತಿಳಿದುಕೊಳ್ಳುವದರಿಂದ ಆತ್ಮಾನಾತ್ಮರ ಅವಿವೇಕವು ನಾಶವಾಗುವದು.

4. ವಿಕಾರೋ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

5. ಆದ್ದರಿಂದ ಮೋಕ್ಷವು ಅವಸ್ಥಾಂತರವೆಂಬುದನ್ನು ಎಂದಿಗೂ ಒಪ್ಪತಕ್ಕದ್ದಲ್ಲ.

## ವೇದಾಂತಸಮ್ಮತವಾದದ್ದೇ ಸರಿಯಾದ ಬಂಧಮೋಕ್ಷಗಳ ವ್ಯವಸ್ಥೆ

**ತಸ್ಮಾದ್ಭ್ರಾನ್ತಿರತೋಽನ್ಯಾ ಹಿ ಬನ್ಧಮೋಕ್ಷಾದಿಕಲ್ಪನಾಃ |**
**ಸಾಙ್ಖ್ಯಕಾಣಾದಬೌದ್ಧಾನಾಂ ಮೀಮಾಂಸಾರ್ಹತಕಲ್ಪನಾಃ ॥ ೬೪ ॥**
**ಶಾಸ್ತ್ರಯುಕ್ತಿವಿಹೀನತ್ವಾನ್ನಾದರ್ತವ್ಯಾಃ ಕದಾಚನ ।**
**ಶಕ್ಯನ್ತೇ ಶತಶೋ ವಕ್ತುಂ ದೋಷಾಸ್ತಾಸಾಂ ಸಹಸ್ರಶಃ ॥ ೬೫ ॥**

೬೪-೬೫. ಆದ್ದರಿಂದ ಭ್ರಾಂತಿಯೇ (ಬಂಧಮೋಕ್ಷಗಳು). ಇದಕ್ಕಿಂತ ಬೇರೆಯಾಗಿ ಸಾಂಖ್ಯರು, ಕಾಣಾದರು, ಬೌದ್ಧರು, ಮೀಮಾಂಸಕರು, ಜೈನರು[1]– ಇವರುಗಳು ಮಾಡಿಕೊಂಡಿರುವ ಬಂಧಮೋಕ್ಷಾದಿಕಲ್ಪನೆಗಳು ಶಾಸ್ತ್ರಯುಕ್ತಿಗಳಿಲ್ಲದ್ದರಿಂದ ಎಂದಿಗೂ ಅದನ್ನು ಒಪ್ಪಬಾರದು. ಅವುಗಳಲ್ಲಿ ನೂರಾರು ಸಾವಿರಾರು ದೋಷಗಳನ್ನು ಹೇಳಬಹುದಾಗಿರುತ್ತದೆ.

**ಅಪಿ ನಿನ್ದೋಪಪತ್ತೇಶ್ಚ ಯಾನ್ಯತೋಽನ್ಯಾನಿ ಚೇತ್ಯತಃ ।**
**ತ್ಯಕ್ತ್ವಾತೋ ಹ್ಯನ್ಯಶಾಸ್ತ್ರೋಕ್ತೀರ್ಮತಿಂ ಕುರ್ಯಾದ್ದೃಢಾಂ ಬುಧಃ**
**ಶ್ರದ್ಧಾಭಕ್ತೀ ಪುರಸ್ಕೃತ್ಯ ಹಿತ್ವಾ ಸರ್ವಮನಾರ್ಜವಮ್ ।**
**ವೇದಾನ್ತಸ್ಯೈವ ತತ್ತ್ವಾರ್ಥೇ ವ್ಯಾಸಸ್ಯಾಭಿಮತೌ ತಥಾ ॥ ೬೭ ॥**

೬೬–೬೭. "ಯಾನ್ಯತೋಽನ್ಯಾನಿ"[2] (?) ಇದಕ್ಕಿಂತ ಬೇರೆಯಾಗಿರುವ ಶಾಸ್ತ್ರಗಳನ್ನು (ಶಂಕೆಮಾಡಬೇಕು) ಎಂಬ ನಿಂದೆಯು ಹೊಂದುವವ

---

1. ಸಾಂಖ್ಯರು ನಿರ್ವಿಕಾರವಾದ ಆತ್ಮನಲ್ಲಿ ಭೋಕ್ತೃತ್ವವನ್ನೂ ಅಚೇತನವಾದ ಪ್ರಧಾನದಲ್ಲಿ ಕರ್ತೃತ್ವವನ್ನೂ ಒಪ್ಪಿರುವದು ಮುಖ್ಯದೋಷ. ಕಾಣಾದರು ಜ್ಞಾನವನ್ನೂ ಸುಖದುಃಖಗಳನ್ನೂ ಆತ್ಮನ ಗುಣವೆಂದು ಒಪ್ಪಿ ದುಃಖಾಭಾವವೇ ಮೋಕ್ಷವೆಂದು ಹೇಳುವದು ಮುಖ್ಯ ದೋಷ. ಬೌದ್ಧರು ಕ್ಷಣಿಕವಿಜ್ಞಾನವು ತನ್ನನ್ನು ತಾನೇ ಅರಿಯುವದೆಂದೂ ವಿಜ್ಞಾನದಲ್ಲಿರುವ ಕಲ್ಮಷವು ನಾಶವಾಗುವದು ಅಥವಾ ಶೂನ್ಯವಾಗುವದೇ ಮೋಕ್ಷವೆಂದೂ ಒಪ್ಪಿರುವದು ದೋಷ. ಮೀಮಾಂಸಕರು ಆತ್ಮನಲ್ಲಿ ಕರ್ತೃತ್ವಭೋಕ್ತೃತ್ವಗಳು ಪರಮಾರ್ಥವಾಗಿರುವವೆಂದು ಒಪ್ಪಿರುವದು ದೋಷ. ಇವೆಲ್ಲ ಶ್ರುತಿಯುಕ್ತಿವಿರುದ್ಧವಾಗಿವೆ.

2. ಈ ವಾಕ್ಯವು ಅಚ್ಚಿನ ಮನುಸ್ಮೃತಿಯಲ್ಲಿ ಕಾಣಬರುವದಿಲ್ಲ. ಪೂರ್ಣವಾಕ್ಯವನ್ನು ವ್ಯಾಖ್ಯಾನದಲ್ಲಿ ಹೀಗೆ ಕೊಟ್ಟಿದೆ :

**ಯಾನ್ಯತೋಽನ್ಯಾನಿ ಶಾಸ್ತ್ರಾಣಿ ಪೃಥಿವ್ಯಾಂ ವಿವಿಧಾನಿ ವೈ ।**
**ಶಙ್ಕನೀಯಾನಿ ವಿದ್ವದ್ಭಿರ್ಧರ್ಮಶುದ್ಧಿಮಭೀಪ್ಸುಭಿಃ ॥**

ರಿಂದಲೂ[1] ಇತರ ಮತಗಳನ್ನು ಒಪ್ಪತಕ್ಕದ್ದಲ್ಲ. ಆದ್ದರಿಂದ ವಿವೇಕಿಯಾದ ವನು ಮಿಕ್ಕ ಶಾಸ್ತ್ರವಚನಗಳನ್ನು ಬಿಟ್ಟು ವೇದಾಂತತತ್ತ್ವಾರ್ಥದಲ್ಲಿಯೇ[2] ಮತ್ತು ವ್ಯಾಸರ ಅಭಿಪ್ರಾಯದಲ್ಲಿಯೇ[3] ಶ್ರದ್ಧಾಭಕ್ತಿಪುರಸ್ಸರವಾಗಿ ಕೌಟಿಲ್ಯ ವನ್ನೆಲ್ಲ ಬಿಟ್ಟು[4] ಗಟ್ಟಿಮನಸ್ಸನ್ನು ಮಾಡಬೇಕು.

## ಉಪಸಂಹಾರ

**ಇತಿ ಪ್ರಣುನ್ನಾದ್ವಯವಾದಕಲ್ಪನಾ**
**ನಿರಾತ್ಮವಾದಾಶ್ಚ ತಥಾ ಹಿ ಯುಕ್ತಿತಃ ।**
**ವ್ಯಪೇತಶಙ್ಕಾಃ ಪರವಾದತಃ ಸ್ಥಿರಾ**
**ಮುಮುಕ್ಷವೋ ಜ್ಞಾನಪಥೇ ಸ್ಯುರಿತ್ಯತ ॥ ೬೪ ॥**

೬೪. ಮುಮುಕ್ಷುಗಳು ಬೇರೆ ವಾದಗಳ ಶಂಕೆಯಿಲ್ಲದೆ ಜ್ಞಾನಮಾರ್ಗ ದಲ್ಲಿಯೇ ಸ್ಥಿರವಾಗಿ ಇರಲಿ ಎಂದು, ಈ ರೀತಿಯಲ್ಲಿ ದ್ವೈತವಾದಗಳ ಕಲ್ಪನೆ ಗಳನ್ನು ಮತ್ತು ನಿರಾತ್ಮವಾದಗಳನ್ನೂ ಯುಕ್ತಿಯಿಂದ ಖಂಡಿಸಲಾಗಿದೆ.[5]

**ಸ್ವಸಾಕ್ಷಿಕಂ ಜ್ಞಾನಮತೀವ ನಿರ್ಮಲಂ**
**ವಿಕಲ್ಪನಾಭ್ಯೋ ವಿಪರೀತಮದ್ವಯಮ್**
**ಅವಾಪ್ಯ ಸಮ್ಯಗ್ಯದಿ ನಿಶ್ಚಿತೋ ಭವೇ-**
**ನ್ನಿರನ್ವಯೋ ನಿರ್ವೃತಿಮೇತಿ ಶಾಶ್ವತೀಮ್ ॥ ೬೫ ॥**

೬೫. ಸ್ವಸಾಕ್ಷಿಕವಾದ, ಅತಿಶುದ್ಧವಾದ, ಯಾವ ವಿಕಲ್ಪನೆಗಳೂ ಇಲ್ಲದ ಅದ್ವಯವಾದ ಜ್ಞಾನವನ್ನು ಪಡೆದು ಅದರಲ್ಲಿಯೇ ಚೆನ್ನಾಗಿ ನಿಶ್ಚಿತನಾದರೆ (ಅಜ್ಞಾನದ) ಸಂಬಂಧವೇ ಇಲ್ಲದ ಶಾಶ್ವತವಾದ ಆನಂದವನ್ನು ಹೊಂದುತ್ತಾನೆ.

---

1. ಶ್ರುತಿಗಳಿಗೂ ಶ್ರುತ್ಯನುಸಾರವಾದ ಸ್ಮೃತಿಗಳಿಗೂ ಯುಕ್ತಿಗಳಿಗೂ ವಿರುದ್ಧ ವಾಗಿರುವ ಸಾಂಖ್ಯಾದಿಮತಗಳನ್ನು ತಳ್ಳಿಹಾಕಬೇಕು ಎಂದು ಭಾವ.

2. ವೇದಾಂತತತ್ತ್ವಾರ್ಥವೆಂದರೆ ಆತ್ಮೈಕ್ಯವು; ಆತ್ಮನು ನಿತ್ಯಶುದ್ಧಬುದ್ಧಮುಕ್ತ ಸ್ವಭಾವನು ಎಂಬುದು.

3. ವ್ಯಾಸಪ್ರಣೀತವಾದ ವೇದಾಂತಸೂತ್ರಗಳಲ್ಲಿ ವೇದಾಂತತತ್ತ್ವವು ನಿರ್ಣೀತ ವಾಗಿದೆ; ಅವರು ಬರೆದಿರುವ ಗೀತೆಯಲ್ಲಿಯೂ ಇದೇ ಅಭಿಪ್ರಾಯವಿದೆ. ಆದ್ದರಿಂದ ಪ್ರಸ್ಥಾನತ್ರಯಕ್ಕೂ ಈ ವಿಷಯದಲ್ಲಿ ಏಕವಾಕ್ಯತೆಯಿದೆ ಎಂದು ಭಾವ.

4. ನಿರ್ವಂಚನೆಯಿಂದ ತತ್ತ್ವದಲ್ಲಿಯೇ ಆದರವುಳ್ಳದಾಗಿ.

5. ಅದ್ವೈತವನ್ನು ಶ್ರುತಿಯುಕ್ತ್ಯನುಭವಗಳಿಂದ ಸ್ಥಾಪಿಸಿದರೆ ದ್ವೈತವನ್ನು ಖಂಡಿಸಬೇಕಾದದ್ದೇ ಇಲ್ಲವಾದ್ದರಿಂದ ಪರಮತಖಂಡನೆಯು ಅಷ್ಟೇನೂ ಅವಶ್ಯವಲ್ಲ. ಆದರೂ ಅದ್ವೈತಗ್ರಂಥವನ್ನು ಓದುವದಕ್ಕೆ ಪರವಾದಗಳು ಯುಕ್ತಿಗಾಢವಾಗಿವೆ ಎಂದು ಅಜ್ಞಾನವು ಅಡ್ಡಿಯಾಗಿದ್ದರೆ ಮುಮುಕ್ಷುಗಳಿಗಾಗಿ ಆ ವಾದಗಳ ಅಸಾರತೆಯನ್ನು ಆಯಾ ಪ್ರಕ್ರಿಯೆಯನ್ನೇ ಅನುಸರಿಸಿ ಖಂಡಿಸುವದು ಪ್ರಯೋಜನಕರವಾಗಿರುತ್ತದೆ. ಈ ದೃಷ್ಟಿ ಯಿಂದ ಇಲ್ಲಿ ಸಾಂಖ್ಯಾದಿಮತಗಳನ್ನು ಖಂಡಿಸಿದೆ ಎಂದು ಭಾವ.

ಇದಂ ರಹಸ್ಯಂ ಪರಮಂ ಪರಾಯಣಂ
ವ್ಯಪೇತದೋಷೈರಭಿಮಾನವರ್ಜಿತೈಃ ।
ಸಮೀಕ್ಷ್ಯ ಕಾರ್ಯಾ ಮತಿರಾರ್ಜವೇ ಸದಾ
ನ ತತ್ತ್ವದೃಕ್ ಸ್ಯಾನ್ಯಮತಿರ್ಹಿ ಕಶ್ಚನ ॥ ೭೦ ॥

೭೦. ಉತ್ಕೃಷ್ಟವಾದ ಪರಮಗತಿಯಾಗಿರುವ ಈ ರಹಸ್ಯವನ್ನು ದೋಷಗಳನ್ನು ಕಳೆದುಕೊಂಡವರೂ ಅಭಿಮಾನವಿಲ್ಲದವರೂ ಚೆನ್ನಾಗಿ ಪರೀಕ್ಷಿಸಿ (ಸರ್ವತ್ರ)ಸಮವಾಗಿರುವ (ಬ್ರಹ್ಮ)ದಲ್ಲಿಯೇ ಯಾವಾಗಲೂ ಮನಸ್ಸನ್ನಿಡಬೇಕು. ಏಕೆಂದರೆ (ತನ್ನ) ಆತ್ಮನಿಗಿಂತ ಬೇರೆಯಾದದ್ದನ್ನು ಚಿಂತಿಸುವವನು ಯಾವನೂ ತತ್ತ್ವದರ್ಶಿಯಲ್ಲವೇ ಅಲ್ಲ.

ಅನೇಕಜನ್ಮಾಂತರಸಂಚಿತೈರ್ನರೋ
ವಿಮುಚ್ಯತೇಽಜ್ಞಾನನಿಮಿತ್ತಪಾತಕೈಃ ।
ಇದಂ ವಿದಿತ್ವಾ ಪರಮಂ ಹಿ ಪಾವನಂ
ನ ಲಿಪ್ಯತೇ ವ್ಯೋಮ ಇವೇಹ ಕರ್ಮಭಿಃ ॥ ೭೧ ॥

೭೧. ಈ ಪವಿತ್ರ(ತತ್ತ್ವ)ವನ್ನು ತಿಳಿದುಕೊಂಡರೆ ಹಿಂದಿನ ಅನೇಕ ಜನ್ಮಗಳಿಂದಲೂ ಕೂಡಿಹಾಕಿಕೊಂಡಿದ್ದ ಅಜ್ಞಾನದಿಂದಾದ ಪಾತಕಗಳಿಂದ ಮನುಷ್ಯನು ಬಿಡುಗಡೆಹೊಂದುತ್ತಾನೆ. ಆಕಾಶವು ಹೇಗೆ (ಕಲ್ಮಷಗಳ ಸೋಂಕಿಲ್ಲದೆ ಇರುವದೋ) ಹಾಗೆ ಕರ್ಮಗಳ ಅಂಟಿಲ್ಲದೆ ಇರುತ್ತಾನೆ.

ಪ್ರಶಾನ್ತಚಿತ್ತಾಯ ಜಿತೇನ್ದ್ರಿಯಾಯ ಚ
ಪ್ರಹೀಣದೋಷಾಯ ಯಥೋಕ್ತಕಾರಿಣೇ ।
ಗುಣಾನ್ವಿತಾಯಾನುಗತಾಯ ಸರ್ವದಾ
ಪ್ರದೇಯಮೇತತ್ ಸತತಂ ಮುಮುಕ್ಷವೇ ॥ ೭೨ ॥

೭೨. ಹೆಚ್ಚಿನ ಶಾಂತಿಯಿಂದ ಕೂಡಿದ ಚಿತ್ತವುಳ್ಳವನೂ ಇಂದ್ರಿಯಗಳನ್ನು ಗೆದ್ದುಕೊಂಡವನೂ ದೋಷಗಳನ್ನು[1] ನಾಶಗೊಳಿಸಿಕೊಂಡಿರುವಾತನೂ (ಶಾಸ್ತ್ರದಲ್ಲಿ) ಹೇಳಿರುವಂತೆ ನಡೆಯುವವನೂ ಗುಣಗಳಿಂದ[2] ಕೂಡಿದವನೂ ಯಾವಾಗಲೂ (ಗುರುವನ್ನು) ಅನುಸರಿಸಿರುವವನೂ ಆಗಿರುವ ಮುಮುಕ್ಷುವಿಗೆ ಇದನ್ನು ಕೊಡಬೇಕು[3].

---

1. ರಾಗದ್ವೇಷಮೋಹಾದಿಗಳನ್ನು.
2. ಅಮಾನಿತ್ವ, ಅದಂಭಿತ್ವ— ಮುಂತಾದವುಗಳಿಂದ.
3. ಇಲ್ಲಿ ಹೇಳಿರುವ ಜ್ಞಾನವನ್ನು ಉಪದೇಶಿಸಬೇಕು.

**ಪರಸ್ಯ ದೇಹೇ ನ ಯಥಾಭಿಮಾನಿತಾ**
**ಪರಸ್ಯ ತದ್ವತ್ ಪರಮಾರ್ಥಮೀಕ್ಷ್ಯ ಚ ।**
**ಇದಂ ಹಿ ವಿಜ್ಞಾನಮತೀವ ನಿರ್ಮಲಂ**
**ಸಂಪ್ರಾಪ್ಯ ಮುಕ್ತೋಽಥ ಭವೇಚ್ಚ ಸರ್ವತಃ ॥ ೭೩ ॥**

೭೩. ಒಬ್ಬನ ದೇಹದಲ್ಲಿ ಮತ್ತೊಬ್ಬನಿಗೆ ಹೇಗೆ ಅಭಿಮಾನವಿಲ್ಲವೋ ಹಾಗೆ (ನಿರಭಿಮಾನದಿಂದ) ಪರಮಾರ್ಥವನ್ನು ಕಂಡುಕೊಂಡು[1] ಈ ಅತಿಶುದ್ಧವಾದ ವಿಜ್ಞಾನವನ್ನು ಪಡೆದುಕೊಂಡರೆ ಕೂಡಲೇ ಎಲ್ಲದರಿಂದಲೂ ಮುಕ್ತನಾಗುವನು.

**ನ ಹೀಹ ಲಾಭೋಽಭ್ಯಧಿಕೋಽಸ್ತಿ ಕಶ್ಚನ**
**ಸ್ವರೂಪಲಾಭಾತ್ ಸ ಇತೋ ಹಿ ನಾನ್ಯತಃ ।**
**ನ ದೇಯಮಿನ್ದ್ರಾದಪಿ ರಾಜ್ಯತೋಽಧಿಕಂ**
**ಸ್ವರೂಪಲಾಭಂ ತ್ವಪರೀಕ್ಷ್ಯ ಯತ್ನತಃ ॥ ೭೪ ॥**

೭೪. ಸ್ವರೂಪದ ಲಾಭಕ್ಕಿಂತ ಹೆಚ್ಚಿನ ಲಾಭವೆಂಬುದು ಈ ಲೋಕದಲ್ಲಿ ಯಾವದೂ ಇಲ್ಲ. ಆ ಲಾಭವು ಈ (ಜ್ಞಾನದಿಂದಲೇ) ಹೊರತು ಮತ್ತೊಂದರಿಂದ (ಆಗುವಹಾ)ಗಿಲ್ಲ. ಆದ್ದರಿಂದ ಶಿಷ್ಯನನ್ನು ಪರೀಕ್ಷೆಮಾಡದೆ ಇಂದ್ರನ ರಾಜ್ಯಕ್ಕಿಂತಲೂ ಹೆಚ್ಚಾಗಿರುವ ಸ್ವರೂಪಲಾಭವನ್ನು ಕೊಡತಕ್ಕದ್ದಲ್ಲ.



1. ತನ್ನ ದೇಹದಲ್ಲಿಯೂ ತಾನೆಂಬ ಬುದ್ಧಿಯನ್ನು ಬಿಟ್ಟು ಪರಮಾತ್ಮನೇ ನಾನೆಂದು ಅರಿತುಕೊಂಡು.

# ಸ್ವಯಂಜ್ಯೋತಿಃಪ್ರಕರಣದ ಸಾರ

೧-೪. ಪಂಚಭೂತಮಯವಾಗಿರುವ ಶರೀರವನ್ನೂ ದಶೇಂದ್ರಿಯಗಳನ್ನೂ ಮನೋಬುದ್ಧಿಗಳನ್ನೂ ತನ್ನ ಸ್ವರೂಪವಾದ ಜ್ಯೋತಿಯಿಂದಲೇ ಬೆಳಗುತ್ತಿರುವದರಿಂದ ಆತ್ಮನು ಜ್ಞಾತೃವೆನಿಸಿರುತ್ತಾನೆ.

೫-೧೬. ಪ್ರಕಾಶವು ತಾನು ಬೆಳಗುವ ಎಲ್ಲದರೊಡನೆಯೂ ಬೆರೆತಿದ್ದರೂ ಬೆರೆಯದೆ ಇರುವಂತೆ, ದೀಪವು ಎಲ್ಲವನ್ನೂ ಯಾವ ವಿಶೇಷವ್ಯಾಪಾರವೂ ಇಲ್ಲದೆ ಬೆಳಗುವಂತೆ, ಆತ್ಮನು ಎಲ್ಲವನ್ನೂ ತಿಳಿಯುತ್ತಿರುತ್ತಾನೆ. ಶರೀರೇಂದ್ರಿಯಗಳಲ್ಲಿ ಅಭಿಮಾನವುಳ್ಳ ಚಿದ್ವ್ಯಾಪ್ತವಾದ ಚಿದಾಭಾಸವಾದ ಅಂತಃಕರಣಕ್ಕೇ ಸುಖಾದಿಗಳು ಸೇರಿರುತ್ತವೆ. ತಲೆನೋವು ಮುಂತಾದವು ವಿಶೇಷಸ್ಥಾನಗಳಲ್ಲಿರುವದರಿಂದ ಅವನ್ನು ಕಾಣುತ್ತಿರುವ ಆತ್ಮನಿಗೆ ಸೇರಿದವಲ್ಲ. ಕಣ್ಣು ತನ್ನ ನೋವನ್ನು ತಾನೇ ಅರಿಯುವಂತೆ ಆತ್ಮನು ತನ್ನ ದುಃಖವನ್ನು ತಾನೇ ಅರಿಯಲಿ, ಎಂದರೆ ಸಾವಯವನೆಂದಾಗುವದು. ಆತ್ಮನಲ್ಲಿ ಜ್ಞಾನವೊಂದೇ ಸ್ವಭಾವವಾಗಿರುತ್ತದೆ; ಮಿಕ್ಕವುಗಳೆಲ್ಲ ಆ ಜ್ಞಾನಕ್ಕೆ ವಿಷಯವಾಗಿರುತ್ತವೆ. ಅಂತಃಕರಣವು ಕೂಡ ತನ್ನನ್ನು ತಾನು ಅರಿಯಲಾರದು. ವಿಜ್ಞಾನವಾದವೂ ಶೂನ್ಯವಾದವೂ ಈ ಕಾರಣದಿಂದಲೇ ಸರಿಯಲ್ಲ; ಏಕೆಂದರೆ ವಿಜ್ಞಾನದ ವಿಕಲ್ಪಗಳನ್ನೂ ಶೂನ್ಯವನ್ನೂ ಅರಿಯುವದಕ್ಕೆ ನಿರ್ವಿಕಲ್ಪವಾದ ಆತ್ಮಚೈತನ್ಯವು ಬೇಕಾಗಿರುತ್ತದೆ.

೧೭-೧೮. ಅಜ್ಞಾನವೇ ಸರ್ವಕಲ್ಪನೆಗಳಿಗೂ ಮೂಲವು. ಜಾಗ್ರತ್ಸ್ವಪ್ನಸುಷುಪ್ತಿಗಳುಕೂಡ ಒಂದರಲ್ಲೊಂದಿಲ್ಲದ ಕಲ್ಪನೆಗಳೇ. ಆದ್ದರಿಂದ ಇವೆಲ್ಲವನ್ನೂ ನೋಡುತ್ತಿರುವ ಆತ್ಮನೇ ಬ್ರಹ್ಮವೆಂದು ತಿಳಿಯಬೇಕು.

೧೯-೨೨. ಜ್ಞಾನವು ಆತ್ಮನ ಕ್ರಿಯೆಯೆಂಬುದು ದೇಹ, ಬುದ್ಧಿ, ಮನಸ್ಸು, ಇಂದ್ರಿಯ-ಮುಂತಾದವುಗಳನ್ನು ವಿಂಗಡಿಸಿ ಅರಿತುಕೊಳ್ಳದೆ ಇರುವದರಿಂದಾಗುವ ಭ್ರಾಂತಿಯು. ಅವುಗಳಲ್ಲಿ ಒಂದರ ಧರ್ಮವು ಮತ್ತೊಂದಕ್ಕಿಲ್ಲ. ಅವೆಲ್ಲವೂ ಆತ್ಮನಲ್ಲಿ ಕಲ್ಪಿತವಾಗಿರುತ್ತವೆ. ಇಂದ್ರಿಯಗಳು ಶರೀರದಲ್ಲಿ ಕೆಲವು ಸ್ಥಾನವನ್ನು ಆಶ್ರಯಿಸಿಕೊಂಡು ಕೆಲಸ ಮಾಡುತ್ತವೆ; ಅಂತಃಕರಣದಿಂದ ಸಹಾಯವಿಲ್ಲದೆ ಅವುಗಳ ಜ್ಞಾನವಾಗುವಂತಿಲ್ಲ; ಅಂತಃಕರಣದ ಅಧ್ಯಾಸದಿಂದಲೇ ಆತ್ಮನು ಜ್ಞಾತೃವೆಂದೂ ದೇಹಕ್ಕೆ ಕಟ್ಟುಬಿದ್ದಿರುವನೆಂದೂ ತೋರುತ್ತದೆ.

೨೩-೨೬. ಬೌದ್ಧರು ವಸ್ತುಮಾತ್ರವೇ ಕ್ಷಣಿಕವೆನ್ನುವರು. ಅದೇ ಇದು ಎಂಬ ಬುದ್ಧಿಯು ಸಾದೃಶ್ಯದಿಂದ ಉಂಟಾಗುವದೆಂದೂ, ತನ್ನ ಆಕಾರವಾಗಿಯೂ ಮತ್ತೊಂದು ವಸ್ತುವಿನ ಆಕಾರವಾಗಿಯೂ ಇರುವ ಬುದ್ಧಿಯು ಶಾಂತವಾಗುವದೇ ಮೋಕ್ಷವೆಂದೂ ಅವರ ಮತವು. ಆದರೆ ಸ್ಮೃತಿಗೂ ಸಾದೃಶ್ಯಕ್ಕೂ ಸಂಸ್ಕಾರವು ನಿಮಿತ್ತವಾಗಿರುತ್ತದೆ; ಬೌದ್ಧಮತದಲ್ಲಿ ಎಲ್ಲವೂ ಕ್ಷಣಿಕವಾಗಿರುವದರಿಂದ ಎಲ್ಲಿಯೂ ಸಂಸ್ಕಾರವುಂಟಾಗುವದಕ್ಕೆ ಅವಕಾಶವಿಲ್ಲ. ಸಂಸ್ಕಾರದ ಆಧಾರವು ಸ್ಥಿರವೆಂದರೆ ಸಿದ್ಧಾಂತಕ್ಕೆ ಹಾನಿ ಬರುತ್ತದೆ.

೨೬-೩೦. ವಿಜ್ಞಾನದ ಶಾಂತಿಯು ಪುರುಷಾರ್ಥವೆಂಬುದೂ ಸರಿಯಲ್ಲ ; ಏಕೆಂದರೆ ಪ್ರತಿಯೊಂದು ವಿಜ್ಞಾನವೂ ಕ್ಷಣಿಕವಾಗಿರುವದರಿಂದ ತನಗೆತಾನೇ ಶಾಂತವಾಗುತ್ತಿರುತ್ತದೆ, ಅದಕ್ಕಾಗಿ ಯಾವ ಸಾಧನವೂ ಬೇಕಾಗಿರುವದಿಲ್ಲ. ವಿಜ್ಞಾನಕ್ಕಿಂತ ಬೇರೆಯಾಗಿ ವಿಜ್ಞಾನ ಸಂತಾನವಿದೆ ಎಂದು ಒಪ್ಪಿದರೂ ಎಲ್ಲವೂ ವಿಜ್ಞಾನಸಂತಾನವೇ ಆಗಿರುವಾಗ ಒಂದು ಕಾರ್ಯಕ್ಕೆ ಇಂಥ ಒಂದು ಕಾರಣವೇ ಬೇಕು ಎಂಬ ನಿಯಮವು ಸಿದ್ಧವಾಗುವದಿಲ್ಲ. ಎಲ್ಲವೂ ನಾಶವಾಗುವದೆಂಬ ಈ ಮತದಲ್ಲಿ ಪುರುಷಾರ್ಥವು ಯಾರಿಗೆ ?- ಎಂಬ ಪ್ರಶ್ನೆಗೂ ಉತ್ತರವಿರುವದಿಲ್ಲ.

೩೧-೩೮. ಎಲ್ಲವೂ ಶೂನ್ಯವೆಂದರೂ ಅದನ್ನು ಅರಿಯುವ ಆತ್ಮನನ್ನು ಒಪ್ಪಬೇಕಾಗುತ್ತದೆ. ಸದಸದಾದಿವಿಕಲ್ಪಗಳಿಗೆ ಆಧಾರವಾಗಿ ಅವಿಕಲ್ಪಿತವೊಂದು ಇರಲೇಬೇಕಾಗುವದರಿಂದ ಶೂನ್ಯವಾದಿಗಳೂ ಅದ್ವೈತವನ್ನು ಒಪ್ಪಬೇಕು. ವಿಕಲ್ಪಗಳು ಆದ್ಯಂತದಲ್ಲಿಲ್ಲವಾದ್ದರಿಂದಲೂ ವಾಚಾರಂಭಣಶ್ರುತಿಯಿಂದಲೂ ಅವು ಅಸತ್ತೆಂದೂ ಅವುಗಳಿಂದ ಅಸಂಗನಾದ ಆತ್ಮನಿಗೆ ಯಾವ ಕಲ್ಮಷವೂ ಆಗುವಂತಿಲ್ಲವೆಂದೂ ಒಪ್ಪಬೇಕು. ಆ ಆತ್ಮನು ಯಾವಾಗಲೂ ಚೈತನ್ಯಸ್ವರೂಪವೇ ಆಗಿರುವದರಿಂದಲೂ ಅವಿಕಾರನಾಗಿರುವದರಿಂದಲೂ ಅವನು ನಿತ್ಯಬುದ್ಧಸ್ವರೂಪನೆಂದೂ ನಿತ್ಯಮುಕ್ತಸ್ವರೂಪನೆಂದೂ ಒಪ್ಪಬೇಕು.

೩೯-೪೪. ಮೋಕ್ಷವು ಅವಸ್ಥಾಂತರವೆಂದಾಗಲಿ ಮತ್ತೊಂದು ವಸ್ತುವಿನ ಸಂಯೋಗವೆಂದಾಗಲಿ ಹೇಳಿದರೆ ಅದು ಕೃತಕವೂ ನಾಶವುಳ್ಳದ್ದೂ ಆಗುವದು. ಅದು ಆತ್ಮನ ಸ್ವರೂಪವೇ ಆದರೆ ಈಗಲೂ ಆ ಮುಕ್ತಿಯು ಇದ್ದೇ ಇರಬೇಕೆಂದು ಏರ್ಪಡುತ್ತದೆ. ಅದು ಸ್ವರೂಪವಾಗಿರುವದರಿಂದಲೇ ಅದನ್ನು ಮತ್ತೊಂದು ಸಾಧನದಿಂದ ಸಂಪಾದಿಸಿಕೊಳ್ಳಬೇಕಾದದ್ದು ಇರುವದಿಲ್ಲ ; ಅದು ತೆಗೆದುಕೊಳ್ಳತಕ್ಕದ್ದೂ ಅಲ್ಲ. ಬಿಡತಕ್ಕದ್ದೂ ಅಲ್ಲ. ಮಿಕ್ಕದ್ದೆಲ್ಲವೂ ಆತ್ಮನಿಗಾಗಿಯೇ ಇರುವದರಿಂದಲೂ ಆತ್ಮನು ತನಗಾಗಿ ತಾನು ಇರುವದರಿಂದಲೂ ಮುಮುಕ್ಷುವಾದವನು ಎಲ್ಲಾ ಕರ್ಮಗಳನ್ನೂ ಕರ್ಮಸಾಧನಗಳನ್ನೂ ಬಿಟ್ಟು ಆತ್ಮಜ್ಞಾನವನ್ನೇ ಸಂಪಾದಿಸಿಕೊಳ್ಳಬೇಕು. ಏಕೆಂದರೆ ಆತ್ಮಲಾಭವೇ ಎಲ್ಲಕ್ಕೂ ಹೆಚ್ಚಿನ ಲಾಭವು; ಮತ್ತೊಂದರ ಲಾಭವು ನಿಜವಾಗಿ ಲಾಭವೇ ಅಲ್ಲ.

೪೫-೫೦. ಪ್ರಧಾನವು ಪುರುಷನಿಗಾಗಿ ಪ್ರವರ್ತಿಸಿ ಭೋಗಮೋಕ್ಷಗಳನ್ನು ಮಾಡುತ್ತದೆ ಎಂಬ ಸಾಂಖ್ಯಮತವೂ ಸರಿಯಲ್ಲ. ಏಕೆಂದರೆ ಗುಣಸಾಮ್ಯವನ್ನು ಬಿಟ್ಟು ಪ್ರಧಾನವು ವೈಷಮ್ಯವನ್ನು ಪಡೆದಲ್ಲದೆ ಪ್ರವೃತ್ತಿಯಿಲ್ಲ; ಆ ವೈಷಮ್ಯಕ್ಕೆ ಕಾರಣವು ಪುರುಷನಲ್ಲಿಯೂ ಇಲ್ಲ, ಪ್ರಧಾನದಲ್ಲಿಯೂ ಇಲ್ಲ. ಪ್ರಧಾನವು ಪುರುಷನಿಗಾಗಿ ಕೆಲಸಮಾಡುತ್ತದೆ ಎಂಬುದೇ ಸರಿಯಲ್ಲ. ಏಕೆಂದರೆ ಪುರುಷನು ನಿರ್ವಿಕಾರನಾಗಿರುವದರಿಂದ ಅವನಿಗೆ ಪ್ರಧಾನದಿಂದಾಗಬೇಕಾದದ್ದೇ ಏನೂ ಇರುವದಿಲ್ಲ. ಈ ಸಿದ್ಧಾಂತದಲ್ಲಿ ಚಿದಚಿದ್ರೂಪರಾದ ಪ್ರಕೃತಿಪುರುಷರಿಗೆ ಸಂಬಂಧವೇ ಯಾವದೂ ಇರುವದಿಲ್ಲ ; ಪ್ರಧಾನವು ಪುರುಷನಿಗೋಸ್ಕರ ಪ್ರವರ್ತಿಸುವದೆಲ್ಲಿ ಬಂತು ? ಪ್ರಧಾನದಿಂದ ಪುರುಷನಲ್ಲಿ ಯಾವದಾದರೂ ವಿಕಾರವಾಗುವದೆಂದರೆ ಆತ್ಮನು ನಾಶವಾಗುವನೆಂದೂ ಕೂಟಸ್ಥಚೈತನ್ಯಸ್ವರೂಪನೆಂದರೆ ಮೊದಲೇ ಹೇಳಿರುವಂತೆ ಪ್ರಧಾನವು ಪುರುಷನಿಗಾಗಿ ಕೆಲಸಮಾಡುವದಕ್ಕೆ ಕಾರಣವಿಲ್ಲವೆಂದೂ ಪ್ರಧಾನವು ನಿಮಿತ್ತವನ್ನೇ ಬಯಸದಿದ್ದರೆ ಯಾವಾಗಲೂ ಪ್ರವರ್ತಿಸುತ್ತಲೇ ಇರುವದರಿಂದ ಬಂಧನಾಶಕ್ಕೆ ಕಾರಣವೇ ಇಲ್ಲವೆಂದೂ ಆಗುತ್ತದೆ.

೫೧-೫೭. ಆತ್ಮನಿಗೆ ಜ್ಞಾನಸುಖಾದಿಗಳು ಧರ್ಮವೆಂದು ಹೇಳುವ ತಾರ್ಕಿಕರ ಮತದಲ್ಲಿ ಸುಖದುಃಖಾದಿಗಳನ್ನು ಜ್ಞಾನವು ಅರಿಯುವದಕ್ಕೆ ಕಾರಣವಿಲ್ಲ; ಏಕೆಂದರೆ ಇವೆಲ್ಲ ಒಂದೇ ಧರ್ಮಿಗೆ ಸೇರಿರುತ್ತವೆ. ಆತ್ಮಮನಃಸಂಯೋಗದಿಂದಲೇ ಇವೆಲ್ಲವೂ ಉಂಟಾಗಬೇಕಾದ್ದರಿಂದ ಒಂದೇ ಕಾಲದಲ್ಲಿ ಎಲ್ಲವೂ ಉಂಟಾಗಬೇಕಾಗುವದು. ಜ್ಞಾನವು ಸುಖಾದಿಗಳಲ್ಲಿ ಒಂದೊಂದನ್ನು ಒಂದೊಂದು ಸಲ ಅರಿಯಬೇಕೆಂಬ ನಿಯಮಕ್ಕೆ ಕಾರಣ ವಿಲ್ಲದೆ ಹೋಗುವದು. ಸುಖಾದಿಗಳ ಸಂಬಂಧವೇ ಜ್ಞಾನವು ಎನ್ನುವದಕ್ಕೂ ಬರುವದಿಲ್ಲ; ಏಕೆಂದರೆ 'ಸುಖವನ್ನು ಅರಿಯುತ್ತೇನೆ' ಎಂಬ ಅನುಭವವೂ 'ಸುಖವನ್ನು ಅನುಭವಿಸಿದೆನು' ಎಂಬ ಸ್ಮೃತಿಯೂ ಜ್ಞಾನವೂ ಸುಖಾದಿಗಳೂ ಬೇರೆಬೇರೆ ಎಂದು ತೋರಿಸುತ್ತವೆ. ಆತ್ಮನೇ ಜ್ಞಾನವು ಎಂಬುದು ಈ ತಾರ್ಕಿಕರಿಗೆ ಒಪ್ಪಿಲ್ಲವಾದ್ದರಿಂದ ಅವರು ಆತ್ಮನೇ ಸುಖಾದಿಗಳನ್ನು ಬೆಳಗುತ್ತಾನೆ ಎನ್ನುವದಕ್ಕೆ ಬರುವದಿಲ್ಲ. ಇದಲ್ಲದೆ ಸುಖಾದಿಗಳು ಆತ್ಮನ ಧರ್ಮವಲ್ಲವೆಂಬುವದಕ್ಕೆ ಯುಕ್ತಿಯೂ ಇದೆ. ಏಕೆಂದರೆ ಆತ್ಮನು ನಿರ್ವಿಕಾರಿಯು. ಆತ್ಮರು ವಿಭುವಾಗಿ ಅನೇಕರಾಗಿರುವದರಿಂದ ಇಂಥ ಸುಖವು ಇಂಥವನದು ಎಂಬ ನಿಯಮವೂ ಆಗುವಂತಿಲ್ಲ; ಆತ್ಮಮನಃಸಂಯೋಗದಿಂದಾಗುವ ಸುಖವು ಆತ್ಮನದೇ. ಮನಸ್ಸಿನದಲ್ಲ ಎಂಬುದಕ್ಕೆ ಹೇತುವೂ ಇಲ್ಲ. ಇನ್ನು ಜ್ಞಾನವೂ ಸುಖಾದಿಗಳಂತೆ ಜ್ಞೇಯವೆಂದರೆ ಜ್ಞಾನಗಳ ಪರಂಪರೆಯನ್ನು ಒಪ್ಪಬೇಕಾಗುವದು. ಆತ್ಮನಿಗೆ ಅವಸ್ಥೆಯನ್ನಾಗಲಿ ಅಶುದ್ಧಿಯನ್ನಾಗಲಿ ಒಪ್ಪುವದು ಶ್ರುತಿವಿರುದ್ಧವಾಗಿರುವದರಿಂದಲೂ ಬಂಧಮೋಕ್ಷಗಳು ಸತ್ಯವೆಂದು ಒಪ್ಪಿರುವ ಈ ಮತವು ಸರಿಯಲ್ಲ.

೫೮-೭೪. ಹಾಗಾದರೆ ಬಂಧಮೋಕ್ಷಗಳ ವ್ಯವಸ್ಥೆ ಹೇಗೆ? ಎಂದರೆ ಅಂತಃಕರಣ ಮತ್ತು ಆತ್ಮ- ಇವರನ್ನು ವಿಂಗಡಿಸದೆ ಅಂತಃಕರಣದಲ್ಲುಂಟಾಗುವ ಭ್ರಾಂತಿಯೇ ಬಂಧವು, ಅದರ ನಾಶವೇ ಮೋಕ್ಷವು. ಬಂಧಮೋಕ್ಷಗಳು ನಿಜವಾಗಿರುವವೆಂಬ ಮತಗಳೆಲ್ಲ ಶ್ರುತಿಗೂ ಯುಕ್ತಿಗೂ ವಿರುದ್ಧವಾಗಿರುತ್ತವೆ. ಆದ್ದರಿಂದ ಅಜ್ಞಾನದಿಂದಾಗಿರುವ ಸ್ವರೂಪದ ಅಲಾಭವನ್ನು ಜ್ಞಾನದಿಂದ ಹೋಗಲಾಡಿಸಿಕೊಂಡು ಸ್ವರೂಪಲಾಭವೆಂಬ ಮೋಕ್ಷವನ್ನು ಪಡೆದುಕೊಳ್ಳುವದಕ್ಕೇ ಮುಮುಕ್ಷುಗಳು ತಕ್ಕ ಸಾಧನಗಳನ್ನು ಅಳವಡಿಸಿಕೊಂಡು ಪ್ರಯತ್ನಿಸಬೇಕು. ಈ ಪರಮರಹಸ್ಯವನ್ನು ಯೋಗ್ಯರಾದ ಶಿಷ್ಯರಿಗೇ ಆಚಾರ್ಯರು ಉಪದೇಶಿಸಬೇಕು.



# ೧೭. ಸಮ್ಯಜ್ಮತಿ

## ಮಂಗಲ

**ಆತ್ಮಾ ಜ್ಞೇಯಃ ಪರೋ ಹ್ಯಾತ್ಮಾ ಯಸ್ಮಾದನ್ಯನ್ನ ವಿದ್ಯತೇ ।**
**ಸರ್ವಜ್ಞಃ ಸರ್ವದೃಕ್ ಶುದ್ಧಸ್ತಸ್ಮೈ ಜ್ಞೇಯಾತ್ಮನೇ ನಮಃ ॥ ೧ ॥**

೧. ಆತ್ಮನೇ ತಿಳಿಯಲ್ಪಡತಕ್ಕವನು ; ಏಕೆಂದರೆ ಆತ್ಮನು ತನಗಿಂತ ಬೇರೊಂದಿಲ್ಲದ ಸರ್ವಜ್ಞನೂ ಸರ್ವದೃಗ್ರೂಪನೂ[1] ಶುದ್ಧನೂ ಆದ ಪರಮಾತ್ಮನೇ[2]. ಆ ಜ್ಞೇಯಾತ್ಮನಿಗೆ ನಮಸ್ಕಾರ !

**ಪದವಾಕ್ಯಪ್ರಮಾಣಜ್ಞೈರ್ದೀಪಭೂತೈಃ ಪ್ರಕಾಶಿತಮ್ ।**
**ಬ್ರಹ್ಮ ವೇದರಹಸ್ಯಂ ಯೈಸ್ತಾನ್ನಿತ್ಯಂ ಪ್ರಣತೋಽಸ್ಮ್ಯಹಮ್ ॥ ೨ ॥**

೨. ಪದವಾಕ್ಯಪ್ರಮಾಣಗಳನ್ನು[3] ಬಲ್ಲ, ಯಾರು ದೀಪದಂತೆ ವೇದ ರಹಸ್ಯವಾದ ಬ್ರಹ್ಮವನ್ನು ಬೆಳಗಿರುವರೋ ಅವರನ್ನು ನಾನು ನಿತ್ಯವೂ ನಮಸ್ಕರಿಸುತ್ತೇನೆ.

**ಯದ್ವಾಕ್ಸೂರ್ಯಾಂಶುಸಂಪಾತಪ್ರಣಷ್ಟಧ್ವಾನ್ತಕಲ್ಮಷಃ ।**
**ಪ್ರಣಮ್ಯ ತಾನ್ ಗುರೂನ್ ವಕ್ಷ್ಯೇ ಬ್ರಹ್ಮವಿದ್ಯಾವಿನಿಶ್ಚಯಮ್ ॥ ೩ ॥**

೩. ಯಾರ ವಾಕ್ಕೆಂಬ ಸೂರ್ಯನ ಕಿರಣಗಳು ಬಿದ್ದದ್ದರಿಂದ (ನನ್ನ) ಅಜ್ಞಾನದ ಕಲ್ಮಷವೆಲ್ಲವೂ ತೊಲಗಿತೋ[4] ಆ ಗುರುಗಳನ್ನು ನಮಸ್ಕರಿಸಿ ಬ್ರಹ್ಮ ವಿದ್ಯಾವಿನಿಶ್ಚಯವನ್ನು ಹೇಳುವೆನು.

---

1. ಸಾಕ್ಷಿರೂಪದಿಂದ ಎಲ್ಲವನ್ನೂ ಕಾಣುತ್ತಿರುವದರಿಂದ ಸರ್ವದೃಕ್ಕು ; ಎಲ್ಲವನ್ನೂ ಜ್ಞಾತೃವಾಗಿ ಅರಿಯುತ್ತಿರುವದರಿಂದ ಸರ್ವಜ್ಞನು- ಎಂದು ಈ ಎರಡು ವಿಶೇಷಣಗಳಿಗೆ ವಿಶೇಷವನ್ನು ಕಲ್ಪಿಸಬೇಕು.

2. ಪರಮಾತ್ಮನೇ ನಮ್ಮ ಆತ್ಮನು ; ಅವನಲ್ಲಿಯೇ ಎಲ್ಲವೂ ಕಲ್ಪಿತವಾಗಿರುವದು.

3. ವ್ಯಾಕರಣ, ಮೀಮಾಂಸ, ನ್ಯಾಯ- ಇವುಗಳನ್ನು ಎಂದರ್ಥ. ವೇದಾಂತ ವಾಕ್ಯಗಳ ಸರಿಯಾದ ಅರ್ಥವನ್ನು ಮಾಡುವದಕ್ಕೆ ಈ ಎಲ್ಲಾ ಶಾಸ್ತ್ರಗಳ ರಹಸ್ಯವೂ ತಿಳಿದಿರಬೇಕು.

4. ಸೂರ್ಯನ ಬೆಳಕಿನಿಂದ ಕತ್ತಲೆಯು ತೊಲಗಿದಂತೆ ಅಜ್ಞಾನವೆಂಬ ಕಲ್ಮಷವೂ ಅಜ್ಞಾನದಿಂದಾದ ಸಂಸಾರಕಲ್ಮಷವೂ ಹೋಯಿತೆಂದದ್ದರಿಂದ ಸಂಸಾರಬಂಧವು 'ಪರಮಾರ್ಥವಲ್ಲವೆಂದಂತೆ ಆಯಿತು.

## ಆತ್ಮಲಾಭದ ಹೆಚ್ಚುಗಾರಿಕೆ

**ಆತ್ಮಲಾಭಾತ್ ಪರೋ ನಾನ್ಯೋ ಲಾಭಃ ಕಶ್ಚನ ವಿದ್ಯತೇ ।**
**ಯದರ್ಥಾ ವೇದವಾದಾಶ್ಚ ಸ್ಮಾರ್ತಾಶ್ಚಾಪಿ ತು ಯಾಃ ಕ್ರಿಯಾಃ ॥೪॥**

೪. ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವು ಮತ್ತೆ ಯಾವದೂ ಇರುವದಿಲ್ಲ. ಈ ಆತ್ಮಲಾಭಕ್ಕಾಗಿಯೇ ವೇದವಾದಗಳೂ ಸ್ಮಾರ್ತವಾದಗಳೂ (ಶ್ರೌತಸ್ಮಾರ್ತ) ಕರ್ಮಗಳೂ (ಹೊರಟಿರುತ್ತವೆ).[1]

**ಆತ್ಮಾರ್ಥೋಽಪಿ ಹಿ ಯೋ ಲಾಭಃ ಸುಖಾಯೇಷ್ಟೋ ವಿಪರ್ಯಯಃ।**
**ಆತ್ಮಲಾಭಃ ಪರಃ ಪ್ರೋಕ್ತೋ ನಿತ್ಯತ್ವಾದ್ಬ್ರಹ್ಮವೇದಿಭಿಃ ॥ ೫ ॥**

೫. ಯಾವ ಲಾಭವು ಸುಖಕ್ಕೆಂದು ಇಷ್ಟವಾಗಿರುವದೋ, (ನಿಜವಾಗಿ ಸುಖ)ವಿರುದ್ಧ(ಫಲವುಳ್ಳದ್ದೂ ಆಗಿರುವದೋ, ಅದೂ)[2] ಆತ್ಮನಿಗಾಗಿಯೇ ಅಲ್ಲವೆ, (ಇಷ್ಟವಾಗಿರುವದು)? ಆತ್ಮಲಾಭವು ನಿತ್ಯವಾಗಿರುವದರಿಂದ ಹೆಚ್ಚಿನದೆಂದು ಬ್ರಹ್ಮಜ್ಞಾನಿಗಳು ಹೇಳುವರು.[3]

## ಆತ್ಮಜ್ಞಾನದಿಂದಲೇ ಆತ್ಮಲಾಭ

**ಸ್ವಯಂಲಬ್ಧಸ್ವಭಾವತ್ವಾಲ್ಲಾಭಸ್ತಸ್ಯ ನ ಚಾನ್ಯತಃ ।**
**ಅನ್ಯಾಪೇಕ್ಷಸ್ತು ಯೋ ಲಾಭಃ ಸೋಽನ್ಯದೃಷ್ಟಿಸಮುದ್ಭವಃ ॥ ೬ ॥**
**ಅನ್ಯದೃಷ್ಟಿಸ್ತ್ವವಿದ್ಯಾ ಸ್ಯಾತ್ ತನ್ನಾಶೋ ಮೋಕ್ಷ ಉಚ್ಯತೇ ।**
**ಜ್ಞಾನೇನೈವ ತು ಸೋಽಪಿ ಸ್ಯಾದ್ವಿರೋಧಿತ್ವಾನ್ನ ಕರ್ಮಣಾ ॥ ೭ ॥**
**ಕರ್ಮಕಾರ್ಯಸ್ತ್ವನಿತ್ಯಃ ಸ್ಯಾದವಿದ್ಯಾಕಾಮಕಾರಣಃ ॥ ೭½ ॥**

೬-೭. ಆತ್ಮನೇ ಲಬ್ಧಸ್ವಭಾವವಾಗಿರುವದರಿಂದ[4] ಅವನ ಲಾಭವು ಮತ್ತೊಂದರಿಂದಾಗುವದಿಲ್ಲ. ಮತ್ತೊಂವರ ಬಯಕೆಯಿಂದ ಆಗುವ ಲಾಭ

---

1. ಕ. ೧-೨-೧೫, ಗೀ. ೧೮-೪೬- ಇವುಗಳ ಭಾಷ್ಯವನ್ನು ನೋಡಿರಿ.

2. ಬೃ. ೨-೪-೫, ಬೃ. ೧-೪-೮- ಇವುಗಳ ಭಾಷ್ಯವನ್ನು ನೋಡಿರಿ. ಮಿಕ್ಕದ್ದೆಲ್ಲವೂ ಆತ್ಮನಿಗಾಗಿ ಬೇಕು, ಆತ್ಮನು ತನಗಾಗಿ ಬೇಕು; ಮಿಕ್ಕದ್ದೆಲ್ಲವೂ ದುಃಖಕ್ಕೂ ಕಾರಣವಾಗಬಹುದು, ಆತ್ಮನಲ್ಲಿ ದುಃಖಹೇತುತ್ವವಿಲ್ಲ. ಆದ್ದರಿಂದ ಆತ್ಮಲಾಭವೇ ಹೆಚ್ಚಿನದು.

3. ಆತ್ಮನು ಸ್ವರೂಪವೇ ಆಗಿರುವದರಿಂದ ಆತ್ಮಲಾಭವು ನಿತ್ಯ, ಮಿಕ್ಕದ್ದು ಕರ್ಮಪ್ರಾಪ್ಯವಾದ್ದರಿಂದ ಅನಿತ್ಯ.

4. ನಿತ್ಯಪ್ರಾಪ್ತನಾಗಿರುವದರಿಂದ.

ವಿಷೆಯಲ್ಲ, ಅದು ಅನ್ಯದೃಷ್ಟಿಯಿಂದ ಆದದ್ದು; ಆದರೆ ಅನ್ಯದೃಷ್ಟಿಯು ಅವಿದ್ಯೆಯಾಗಿರುತ್ತದೆ, ಅದರ ನಾಶವೇ ಮೋಕ್ಷವೆನಿಸುತ್ತದೆ[1]. ಆ (ನಾಶವು) ಕೂಡ ಜ್ಞಾನದಿಂದಲೇ ಆಗುವದು, ಏಕೆಂದರೆ (ಜ್ಞಾನವೇ ಅದಕ್ಕೆ) ವಿರೋಧಿಯಾಗಿರುತ್ತದೆ. ಕರ್ಮದಿಂದ ಆಗಲಾರದು[2]. ಕರ್ಮದಿಂದಾದದ್ದಾದರೊ, ಅನಿತ್ಯವಾಗಿರುತ್ತದೆ. (ಅದು) ಅವಿದ್ಯಾಕಾಮಗಳೆಂಬ ಕಾರಣದಿಂದಾಗಿರುತ್ತದೆ[3].

## ಆತ್ಮಜ್ಞಾನವು ವೇದಪ್ರಮಾಣದಿಂದಾಗತಕ್ಕದ್ದು

**ಪ್ರಮಾಣಂ ವೇದ ಏವಾತ್ರ ಜ್ಞಾನಸ್ಯಾಧಿಗಮೇ ಸ್ಮೃತಃ　॥ ೮ ॥**
**ಜ್ಞಾನೈಕಾರ್ಥಪರತ್ವಾತ್ ತಂ ವಾಕ್ಯಮೇಕಂ ತತೋ ವಿದುಃ |**
**ಏಕತ್ವಂ ಹ್ಯಾತ್ಮನೋ ಜ್ಞೇಯಂ ವಾಕ್ಯಾರ್ಥಪ್ರತಿಪತ್ತಿತಃ　॥ ೯ ॥**

೮-೯. ಈ ಜ್ಞಾನಪ್ರಾಪ್ತಿಗೆ ವೇದವೇ ಪ್ರಮಾಣವೆನಿಸುವದು[4]. ಆದ್ದರಿಂದ ಜ್ಞಾನವೆಂಬ ಒಂದೇ ಅರ್ಥವನ್ನು ತಾತ್ಪರ್ಯದಿಂದ (ತಿಳಿಸುವದ)ದರಿಂದ ಅದನ್ನು ಒಂದು ವಾಕ್ಯವೆಂದು (ಬಲ್ಲವರು) ಎಣಿಸುತ್ತಾರೆ[5]. ವಾಕ್ಯಾರ್ಥಜ್ಞಾನದಿಂದ ಆತ್ಮನ ಏಕತ್ವವನ್ನೇ ತಿಳಿಯಬೇಕಾಗಿದೆ.

## ದ್ವೈತವು ಆತ್ಮನಲ್ಲಿ ಕಲ್ಪಿತ

**ವಾಚ್ಯಭೇದಾತ್ತು ತದ್ಭೇದಃ ಕಲ್ಪ್ಯೋ ವಾಚ್ಯೋಽಪಿ ತಚ್ಛ್ರುತೇಃ |**
**ತ್ರಯಂ ತ್ವೇತತ್ತತಃ ಪ್ರೋಕ್ತಂ ರೂಪಂ ನಾಮ ಚ ಕರ್ಮ ಚ ||೧೦||**

---

1. ಎರಡನೆಯದಾಗಿ ಪಡೆಯತಕ್ಕದ್ದೊಂದಿದೆ ಎಂಬ ತಿಳಿವಳಿಕೆಯೇ ಅವಿದ್ಯೆ; ವಿದ್ಯೆಯಿಂದ ಅದನ್ನು ತೊಲಗಿಸಿಕೊಳ್ಳುವದೇ ಮೋಕ್ಷ.

2. ಕರ್ಮವು ಅಜ್ಞಾನದಿಂದಾಗಿರುವದರಿಂದ ಅಜ್ಞಾನಕ್ಕೆ ವಿರೋಧಿಯಲ್ಲ.

3. ಅವಿದ್ಯೆಯಿಂದ ಎರಡನೆಯ ವಸ್ತು ಕಾಣಿಸುತ್ತದೆ; ಆ ಬಳಿಕ ಅದರಲ್ಲಿ ಕಾಮವುಂಟಾಗಿ ಅದರ ಪ್ರಾಪ್ತಿಗಾಗಿ ಕರ್ಮವನ್ನು ಮಾಡುತ್ತಾರೆ.

4. ಪ್ರತ್ಯಕ್ಷಾದಿಗಳಿಂದ ಆತ್ಮಯಾಥಾತ್ಮ್ಯಜ್ಞಾನವಾಗಲಾರದು.

5. ಕರ್ಮಕಾಂಡದಲ್ಲಿ ಕ್ರಿಯಾಕಾರಕಫಲಗಳು ಸತ್ಯವೆಂದು ಹೇಳಿಲ್ಲ; ಫಲಕ್ಕೆ ಉಪಾಯವನ್ನು ಮಾತ್ರ ಹೇಳಿದೆ. ಕರ್ಮದಿಂದ ಚಿತ್ತಶುದ್ಧಿಯನ್ನು ಹೊಂದಿದವನಿಗೆ ಜ್ಞಾನದಿಂದಲೇ ಮೋಕ್ಷವಾಗುತ್ತದೆ. ಆದ್ದರಿಂದ ಆತ್ಮಜ್ಞಾನವನ್ನು ತಿಳಿಸುವದರಿಂದ ಕರ್ಮಕಾಂಡವಚನಗಳಿಗೂ ಉಪನಿಷದ್ವಚನಗಳಿಗೂ ಏಕವಾಕ್ಯತೆಯನ್ನು ಹೇಳಬೇಕೆಂದು ವೇದಾಂತಿಗಳ ಮತವು.

**ಅಸದೇತತ್ತ್ರಯಂ ತಸ್ಮಾದನ್ಯೋಽನ್ಯೇನ ಹಿ ಕಲ್ಪಿತಮ್ ।
ಶ್ರುತೋ ವರ್ಣೋ ಯಥಾ ಶಬ್ದಾಚ್ಛ್ರುತೋಽನ್ಯತ್ರ ಧಿಯಾ ಬಹಿಃ ॥೧೧
ದೃಷ್ಟಂ ಚಾಪಿ ಯಥಾ ರೂಪಂ ಬುದ್ಧೇಃ ಶಬ್ದಾಯ ಕಲ್ಪತೇ ।
ಏವಮೇತಜ್ಜಗತ್ಸರ್ವಂ ಭ್ರಾನ್ತಿಬುದ್ಧಿವಿಕಲ್ಪಿತಮ್ ॥ ೧೨ ॥
ಅಸದೇತತ್ ತತೋ ಯುಕ್ತಂ ಸಚ್ಚಿನ್ಮಾತ್ರಂ ನ ಕಲ್ಪಿತಮ್ ।**

೧೧–೧೨. ವಾಚ್ಯಭೇದದಿಂದ ಆ (ಆತ್ಮನಲ್ಲಿ) ಭೇದವನ್ನು ಕಲ್ಪಿಸಬೇಕು. ವಾಚ್ಯವನ್ನು ಕೂಡ ಅದನ್ನು ಹೇಳುವ ಶಬ್ದದಿಂದ (ಕಲ್ಪಿಸಬೇಕು). ಆದ್ದರಿಂದ ನಾಮ, ರೂಪ, ಕರ್ಮ – ಎಂಬೀ ಮೂರೂ (ಇವೊಂದೇ) ಎಂದು (ಬೃ. ೧–೬–೧,೩) ಹೇಳಿದೆ[1]. ಆದ್ದರಿಂದ ಒಂದರಿಂದೊಂದು ಕಲ್ಪಿತವಾಗಿರುವ ಈ ಮೂರೂ ಸಟಿಯೇ ಆಗಿರುತ್ತವೆ. ಶಬ್ದದಿಂದ ಕೇಳಿದ ವರ್ಣವು ಹೇಗೆ ಬುದ್ಧಿಯಿಂದ ಹೊರಗೆ ಮತ್ತೊಂದು ಕಡೆಯಲ್ಲಿ ಕಲ್ಪಿತವಾಗುವದೋ ನೋಡಿದ ರೂಪವೂ ಹೇಗೆ ಬುದ್ಧಿಗೆ ಶಬ್ದವಾಗಿ ಪರಿಣಮಿಸುವದೋ[2] ಹಾಗೆಯೇ ಈ ಜಗತ್ತೆಲ್ಲ ಭ್ರಾಂತಿಬುದ್ಧಿಯಿಂದ ಕಲ್ಪಿತವಾಗಿರುತ್ತದೆ. ಆದ್ದರಿಂದ ಇವು ಮೂರೂ ಮಿಥ್ಯೆಯೇ ಎಂಬುದು ಯುಕ್ತವು, ಸಚ್ಚಿನ್ಮಾತ್ರ(ವಾದ ತತ್ತ್ವವು) ಕಲ್ಪಿತವಲ್ಲ[3].

## ಪ್ರಮಾಣಜ್ಞಾನವೆಲ್ಲ ನಿಜವಾಗಿ ಆತ್ಮನೇ

**ವೇದಶ್ಚಾಪಿ ಸ ಏವಾದ್ಯೋ ವೇದ್ಯಂ ಚಾನ್ಯತ್ತು ಕಲ್ಪಿತಮ್ ।
ಯೇನ ವೇತ್ತಿ ಸ ವೇದಃ ಸ್ಯಾತ್ ಸ್ವಪ್ನೇ ಸರ್ವಂ ತು ಮಾಯಯಾ ॥**

---

1. ಶಬ್ದಭೇದದಿಂದ ವಸ್ತುಭೇದವನ್ನೂ ವಸ್ತುಭೇದದಿಂದ ಶಬ್ದಭೇದವನ್ನೂ ಕಲ್ಪಿಸಬೇಕಾಗುತ್ತದೆ; ನಾಮವಿಲ್ಲದ ರೂಪವಾಗಲಿ ರೂಪವಿಲ್ಲದ ನಾಮವಾಗಲಿ ಇರುವದಿಲ್ಲ. ಹೀಗೆ ಸ್ವತಂತ್ರವಾಗಿ ಯಾವ ಉಪಾಧಿಭೇದವೂ ಸಿದ್ಧವಾಗುವದಿಲ್ಲವಾಗಿ ಆತ್ಮನಲ್ಲಿ ಉಪಾಧಿಯಿಂದ ಭೇದವು ಸಿದ್ಧವಾಗುವ ಸಂಭವವಿಲ್ಲ.

2. ಧ್ವನ್ಯಾತ್ಮಕವಾದ ವರ್ಣದಿಂದ ಚಿಹ್ನಾತ್ಮಕವಾದ ಲಿಖಿತವರ್ಣವನ್ನು ಗುರುತಿಸುವದರಿಂದಲೂ ಚಿಹ್ನದಿಂದ ಧ್ವನ್ಯಾತ್ಮಕವಾದ ವರ್ಣವನ್ನು ಗುರುತಿಸುವದರಿಂದಲೂ ನಾಮರೂಪಗಳ ಸಂಬಂಧವು ಸತ್ಯವಸ್ತುಗಳಿಂದಾಗಿರಬೇಕೆಂದು ಹೇಳುವದಕ್ಕೆ ಬರುವದಿಲ್ಲ.

3. ನಾಮರೂಪಕರ್ಮಗಳೇ ಕಲ್ಪಿತವಾಗಿರುವದರಿಂದ ಅವುಗಳಿಂದ ಆತ್ಮಭೇದವಾಗಿದೆ ಎಂಬುದು ಹೇಗೆ ಸಿದ್ಧವಾಗುವದಿಲ್ಲವೋ ಹಾಗೆ ವಿಕಲ್ಪಗಳಿಗೆ ಆಸ್ಪದವಾಗಿರುವ ಆತ್ಮನು ಕಲ್ಪಿತನೆಂಬುದೂ ಸಿದ್ಧವಾಗುವದಿಲ್ಲ.

**ಯೇನ ಪಶ್ಯತಿ ತಚ್ಚಕ್ಷುಃ ಶೃಣೋತಿ ಶ್ರೋತ್ರಮುಚ್ಯತೇ ।**
**ಯೇನ ಸ್ವಪ್ನಗತೋ ವಕ್ತಿ ಸಾ ವಾಕ್ ಘ್ರಾಣಂ ತಥೈವ ಚ ।**
**ರಸನಸ್ಪರ್ಶನೇ ಚೈವ ಮನಶ್ಚಾನ್ಯತ್ತಥೇನ್ದ್ರಿಯಮ್ ॥ ೧೫ ॥**
**ಕಲ್ಪ್ಯೇಪಾದಿಭಿರೇವೈತದ್ಭಿನ್ನಂ ಜ್ಞಾನಮನೇಕಧಾ ।**
**ಉಪಾಧಿಭೇದಾದ್ ಯಥಾ ಭೇದೋ ಮಣೇರೇಕಸ್ಯ ಜಾಯತೇ ॥೧೬॥**
**ಜಾಗ್ರತಶ್ಚ ತಥಾ[1] ಭೇದೋ ಜ್ಞಾನಸ್ಯಾಸ್ಯ ವಿಕಲ್ಪಿತಃ ॥ ೧೬೧ ॥**

೧೩–೧೬೧. ಅದೇ ಮೊದಲಿನ ವೇದವು, ಮಿಕ್ಕದ್ದು ವೇದ್ಯವಾದ್ದರಿಂದ ಕಲ್ಪಿತವಾಗಿರುತ್ತದೆ[2]. ಕನಸಿನಲ್ಲಿ ಯಾವದರಿಂದ ಎಲ್ಲವನ್ನೂ ಮಾಯೆಯಿಂದ ತಿಳಿಯುತ್ತಾನೋ ಅದು ವೇದವು; ಯಾವದರಿಂದ ಕಾಣುತ್ತಾನೋ ಅದು ಚಕ್ಷುಸ್ಸು; ಯಾವದರಿಂದ ಕೇಳುತ್ತಾನೋ ಅದು ಶ್ರೋತ್ರವು. ಕನಸಿನಲ್ಲಿರುವವನು ಯಾವದರಿಂದ ಮಾತನಾಡುತ್ತಾನೋ ಅದು ವಾಕ್ಕು; ಘ್ರಾಣ, ರಸನ, ಸ್ಪರ್ಶನ– ಮುಂತಾದ ಮಿಕ್ಕ ಇಂದ್ರಿಯವೂ ಮನಸ್ಸೂ ಹಾಗೆಯೇ[3]. ಉಪಾಧಿಯ ಭೇದದಿಂದ ಹೇಗೆ ಒಂದೇ (ಸ್ಫಟಿಕ)ಮಣಿಗೆ ಭೇದವುಂಟಾಗುವದೋ[4] ಹಾಗೆ ಈ ಜ್ಞಾನವೂ ಅನೇಕವೆಂದು ಉಪಾಧಿಗಳಿಂದಲೇ ಕಲ್ಪಿಸಬೇಕಾಗಿರುತ್ತದೆ. ಎಚ್ಚರವಾಗಿರುವವನ ಈ ಜ್ಞಾನಕ್ಕೂ ಹಾಗೆಯೇ ಭೇದವು ವಿಕಲ್ಪಿತವಾಗಿರುತ್ತದೆ[5].

## ದ್ವೈತವು ಅವಿದ್ಯಕ

**ಬುದ್ಧಿಸ್ಥಂ ವ್ಯಾಕರೋತ್ಯರ್ಥಂ ಭ್ರಾನ್ತ್ಯಾ ತೃಷ್ಣೋದ್ಭವಕ್ರಿಯಃ ॥೧೭॥**
**ಸ್ವಪ್ನೇ ತದ್ವತ್ ಪ್ರಬೋಧೇ ಯೋ ಬಹಿಶ್ಚಾನ್ತಸ್ತಥೈವ ಚ ।**
**ಆಲೇಖ್ಯಾಧ್ಯಯನೇ ಯದ್ವತ್ತದನ್ಯೋಽನ್ಯಧಿಯೋದ್ಭವಮ್ ॥ ೧೮ ॥**

---

1. 'ಯಥಾ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ವೇದವೆಂದು ಜನರು ಕರೆಯುವ ಶಬ್ದವು ಕಲ್ಪಿತವು; ಪರಮಾರ್ಥವಾದ ವೇದವು ಆತ್ಮನೇ.

3. ಕನಸಿನಲ್ಲಿ ಯಾವ ಆತ್ಮನಿಂದ ನೋಡುವದು, ಕೇಳುವದು– ಮುಂತಾದವುಗಳು ಜರುಗುತ್ತವೆಯೋ ಆ ಆತ್ಮನೇ ಚಕ್ಷುಸ್ಸು, ಮುಂತಾದ ಹೆಸರಿಗೆ ತಕ್ಕವನು.

4. ಉಂಟಾದಂತೆ ತೋರುವದೋ.

5. ಕನಸಿನಲ್ಲಿ ಆಯಾ ವ್ಯಾಪಾರದಿಂದ ಒಂದೇ ಜ್ಞಾನಕ್ಕೆ ಬೇರೆಬೇರೆಯ ಹೆಸರುಗಳು ಬಂದರೂ ಹೇಗೆ ಅದು ಒಂದೇ ಆಗಿರುವದೋ ಹಾಗೆಯೇ ಎಚ್ಚರದಲ್ಲಿಯೂ ಆತ್ಮಚೈತನ್ಯವೊಂದೇ ಬೇರೆಬೇರೆಯ ಹೆಸರುಗಳನ್ನು ಪಡೆಯುತ್ತದೆ. ಒಂದನ್ನೇ ಅನೇಕವೆಂದು ವಿಕಲ್ಪಿಸಿರುತ್ತಾರೆ.

೧೭–೧೮. ಕಾಮದಿಂದ ಉಂಟಾಗುವ ಕರ್ಮದಿಂದ ಅಂತಃಕರಣದಲ್ಲಿರುವ ಅರ್ಥವನ್ನೇ ಭ್ರಾಂತಿಯಿಂದ ವಿಂಗಡವಾಗಿ ಮಾಡಿಕೊಳ್ಳುತ್ತಾನೆ[1]. ಕನಸಿನಲ್ಲಿಯೂ ಅದರಂತೆ ಎಚ್ಚರದಲ್ಲಿಯೂ ಹೊರಗೂ ಒಳಗೂ ಯಾವ ಯಾವದು (ಇರುವದೋ ಅದು) ಬರೆದದ್ದು, ಓದುವದು – ಇವುಗಳಂತೆ ಒಂದರ ಬುದ್ಧಿಯಿಂದೊಂದು ಆದದ್ದಾಗಿರುತ್ತದೆ[2].

**ಯದಾಯಂ ಕಲ್ಪಯೇದ್ಭೇದಂ ತತ್ಕಾಮಃ ಸನ್ ಯಥಾಕ್ರತುಃ ।**
**ಯತ್ಕಾಮಸ್ತತ್ಕ್ರತುರ್ಭೂತ್ವಾ ಕೃತಂ ಯತ್ ತತ್ಪ್ರಪದ್ಯತೇ ॥ ೧೯ ॥**

೧೯. ಯಾವಾಗ ಇವನು (ತನ್ನ) ಮನೋನಿಶ್ಚಯಕ್ಕನುಗುಣವಾಗಿ ಅದೇ ಬಯಕೆಯಿಂದ ಭೇದವನ್ನು ಕಲ್ಪಿಸುವನೋ ಆಗ ಬಯಕೆಯಿದ್ದಂತೆ ನಿಶ್ಚಯವುಳ್ಳವನಾಗಿ ಮಾಡಿದ್ದನ್ನು ಪಡೆದುಕೊಳ್ಳುತ್ತಾನೆ[3].

**ಅವಿದ್ಯಾಪ್ರಭವಂ ಸರ್ವಮಸತ್ತಸ್ಮಾದಿದಂ ಜಗತ್ ।**
**ತದ್ವತಾ ದೃಶ್ಯತೇ ಯಸ್ಮಾತ್ ಸುಷುಪ್ತೇ ನ ಚ ಗೃಹ್ಯತೇ ॥ ೨೦ ॥**

೨೦. ಆದ್ದರಿಂದ ಈ ಜಗತ್ತೆಲ್ಲವೂ ಅವಿದ್ಯೆಯುಂಟಾಗಿರುವದರಿಂದ ಅಸತ್ತಾಗಿರುತ್ತದೆ. ಏಕೆಂದರೆ ಅವಿದ್ಯಾವಂತನಿಗೇ ಅದು ಕಾಣಿಸುತ್ತದೆ, ಆದರೆ ತನಿದ್ರೆಯಲ್ಲಿ ಕಾಣಿಸುವದಿಲ್ಲ[4].

## ಜ್ಞಾನವನ್ನು ಸಾಧನಗಳಿಂದ ಸಂಪಾದಿಸಿಕೊಳ್ಳಬೇಕು

**ವಿದ್ಯಾವಿದ್ಯೇ ಶ್ರುತಿಪ್ರೋಕ್ತೇ ಏಕತ್ವಾನ್ಯಧಿಯೌ ಹಿ ನಃ ।**
**ತಸ್ಮಾತ್ ಸರ್ವಪ್ರಯತ್ನೇನ ಶಾಸ್ತ್ರೇ ವಿದ್ಯಾ ವಿಧೀಯತೇ ॥ ೨೧ ॥**

---

1. ಅಂತಃಕರಣದಲ್ಲಿ ವಾಸನಾತ್ಮಕವಾಗಿರುವದೂ ಹೊರಗೆ ವಸ್ತುವಾಗಿ ಕಾಣುವದೂ ಎರಡೂ ಕಲ್ಪಿತವೇ.

2. ಕಲ್ಪಿತವಾದ ಹೊರಗಿನ ಪದಾರ್ಥವೂ ಕಲ್ಪಿತವಾದ ವಾಸನೆಯೂ ಓದುಬರಹಗಳಂತೆ ಒಂದನ್ನೊಂದು ಅವಲಂಬಿಸಿಕೊಂಡಿರುತ್ತವೆ; ಕನಸು, ಎಚ್ಚರ – ಈ ಎರಡವಸ್ಥೆಗಳಲ್ಲಿಯೂ ಇದು ಸಮಾನವಾಗಿರುತ್ತದೆ. ಮಾಂ. ಕಾ. ಭಾ. ೨-೯ರಿಂದ ೧೫ರ ವರೆಗಿನ ಗ್ರಂಥವನ್ನು ನೋಡಿ.

3. ಬೃ. ೪-೪-೫. ಅವಿದ್ಯಾಕಾಮಕರ್ಮಗಳಿಂದಲೇ ದ್ವೈತವು ತೋರುತ್ತದೆ ಎಂದರ್ಥ.

4. ಜಗತ್ತು ನಾಮರೂಪಕರ್ಮಾತ್ಮಕವಾಗಿದ್ದು ಅನ್ಯೋನ್ಯಾಶ್ರಿತವಾಗಿರುವದರಿಂದಲೂ ಅವಿದ್ಯಾವಾಸನೆಯೂ ಕಾಮಕರ್ಮಗಳೂ ಒಂದನ್ನಾಶ್ರಯಿಸಿ ಒಂದು ಎಚ್ಚರಕನಸುಗಳಲ್ಲಿ ಕಾಣಿಸಿಕೊಳ್ಳುತ್ತಿದ್ದರೂ ಸುಷುಪ್ತಿಯಲ್ಲಿ ಕಾಣದೆ ಇರುವದರಿಂದಲೂ ಅಸತ್ತು, ಹುಸಿತೋರಿಕೆ.

೨೧. ಶ್ರುತಿಯಲ್ಲಿ ಹೇಳಿರುವ ವಿದ್ಯಾವಿದ್ಯೆಗಳೆಂದರೆ ಏಕತ್ವಬುದ್ಧಿ, ಮತ್ತೊಂದೆಂಬ ಬುದ್ಧಿ – ಇವೇ ಎಂಬುದು ನಮ್ಮ (ಮತವು). ಆದ್ದರಿಂದ[1] ಸರ್ವಪ್ರಯತ್ನದಿಂದಲೂ ಶಾಸ್ತ್ರದಲ್ಲಿ ವಿದ್ಯೆಯನ್ನು ಉಪದೇಶಿಸಿರುತ್ತದೆ.

**ಚಿತ್ತೇ ಹ್ಯಾದರ್ಶವದ್ಯಸ್ಮಾಚ್ಛುದ್ಧೇ ವಿದ್ಯಾ ಪ್ರಕಾಶತೇ ।**
**ಯಮೈರ್ನಿತ್ಯೈಶ್ಚ ಯಜ್ಞೈಶ್ಚ ತಪೋಭಿಸ್ತಸ್ಯ ಶೋಧನಮ್ ॥**

೨೨. ಚಿತ್ತವು ಕನ್ನಡಿಯಂತೆ ಶುದ್ಧವಾದರೆ ವಿದ್ಯೆಯು ತೋರಿಕೊಳ್ಳುತ್ತದೆ. ಆದ್ದರಿಂದ ಯಮಗಳಿಂದಲೂ ನಿತ್ಯಕರ್ಮಗಳಾದ ಯಜ್ಞಗಳಿಂದಲೂ ತಪಸ್ಸುಗಳಿಂದಲೂ ಆ (ಚಿತ್ತದ) ಶುದ್ಧಿ(ಯನ್ನು ಮಾಡಿಕೊಳ್ಳಬೇಕು)[2].

**ಶಾರೀರಾದಿತಪಃ ಕುರ್ಯಾತ್ ತದ್ವಿಶುದ್ಧ್ಯರ್ಥಮುತ್ತಮಮ್ ।**
**ಮನಆದಿ ಸಮಾಧಾನಂ ತತ್ತದ್ದೇಹವಿಶೋಷಣಮ್ ॥ ೨೩ ॥**
**ಮನಸಶ್ಚೇನ್ದ್ರಿಯಾಣಾಂ ಚ ಹ್ಯೈಕಾಗ್ರ್ಯಂ ಪರಮಂ ತಪಃ ।**
**ತಜ್ಜ್ಯಾಯಃ ಸರ್ವಧರ್ಮೇಭ್ಯಃ ಸ ಧರ್ಮಃ ಪರ ಉಚ್ಯತೇ ॥ ೨೪ ॥**

೨೩–೨೪. ಅದರ ವಿಶುದ್ಧಿಗಾಗಿ ಆಯಾ ದೇಹವನ್ನು ಸೊರಗಿಸುವ ಉತ್ತಮವಾದ ಶಾರೀರಾದಿತಪಸ್ಸನ್ನೂ[3] ಮನಸ್ಸೇ ಮುಂತಾದವುಗಳ ಸಮಾಧಾನವನ್ನೂ ಮಾಡಬೇಕು. ಮನಸ್ಸಿನ ಮತ್ತು ಇಂದ್ರಿಯಗಳ ಏಕಾಗ್ರತೆಯೇ ಹೆಚ್ಚಿನ ತಪಸ್ಸು; ಅದು ಸರ್ವಧರ್ಮಗಳಿಗಿಂತಲೂ ಹೆಚ್ಚಿನದು. ಅದೇ ಪರಮಧರ್ಮವೆನಿಸುತ್ತದೆ[4].

## ಅವಸ್ಥಾತ್ರಯಪರೀಕ್ಷೆಯಿಂದ ಜ್ಞಾನ

**ದೃಷ್ಟಂ ಜಾಗರಿತಂ ವಿದ್ಯಾತ್ ಸ್ಮೃತಂ ಸ್ವಪ್ನಂ ತದೇವ ತು ।**
**ಸುಷುಪ್ತಂ ತದಭಾವಂ ಚ ಸ್ವಮಾತ್ಮಾನಂ ಪರಂ ಪದಮ್ ॥ ೨೫ ॥**
**ಸುಷುಪ್ತ್ಯಾಖ್ಯಂ ತಮೋಽಜ್ಞಾನಂ ಬೀಜಂ ಸ್ವಪ್ನಪ್ರಬೋಧಯೋಃ ।**
**ಸ್ವಾತ್ಮಬೋಧಪ್ರದಗ್ಧಂ ಸ್ಯಾದ್ಬೀಜಂ ದಗ್ಧಂ ಯಥಾಭವಮ್ ॥ ೨೬ ॥**

---

1. ಅವಿದ್ಯೆಯಿಂದಲೇ ದ್ವೈತಾನರ್ಥವು ತೋರುತ್ತಿರುವುದರಿಂದ ಮತ್ತು ಏಕತ್ವಬುದ್ಧಿಯಿಂದ ಎಲ್ಲವೂ ನಾಶವಾಗುವುದರಿಂದ.

2. ಸಾಧನಗಳೆಲ್ಲ ಚಿತ್ತಶುದ್ಧಿಯ ಮೂಲಕ ಜ್ಞಾನೋತ್ಪತ್ತಿಗಾಗಿಯೇ ಹೊರತು ಮೋಕ್ಷಕ್ಕೆ ನೇರಾದ ಸಾಧನವೆಂದಲ್ಲ ಎಂದು ಅಭಿಪ್ರಾಯ.

3. ಗೀತೆಯ ಹದಿನೇಳನೆಯ ಅಧ್ಯಾಯದಲ್ಲಿ ಇವನ್ನು ವಿವರಿಸಿದೆ. ಸಾತ್ತ್ವಿಕವಾದ ತಪಸ್ಸಿನಿಂದ ಸ್ಥೂಲದೇಹವನ್ನೂ ಸೂಕ್ಷ್ಮದೇಹವನ್ನೂ ಶುದ್ಧಿಗೊಳಿಸಿಕೊಳ್ಳಬೇಕು.

4. ಮೋಕ್ಷಧರ್ಮ ೨೪೯-೪ರಲ್ಲಿ ಇಂದ್ರಿಯಗಳ ಮತ್ತು ಮನಸ್ಸಿನ ಸಮಾಧಾನವೇ ಹೆಚ್ಚಿನ ತಪಸ್ಸು ಎಂದು ಹೇಳಿದೆ. ಅದನ್ನು ಇಲ್ಲಿ ಉದಾಹರಿಸಿದೆ.

೨೫–೨೬. ನೋಡಿದ್ದನ್ನು ಎಚ್ಚರವೆಂದು ತಿಳಿಯಬೇಕು. ನೆನಸಿಕೊಂಡ ಅದನ್ನೇ ಕನಸೆಂದು ತಿಳಿಯಬೇಕು. ಅವುಗಳ ಅಭಾವವನ್ನು[1] ತನಿನಿದ್ರೆ ಎಂದು ತಿಳಿಯಬೇಕು. ತನ್ನ ಆತ್ಮನನ್ನು[2] ಪರಮಪದವೆಂದು ತಿಳಿಯಬೇಕು. ಕನಸು, ಎಚ್ಚರ – ಇವೆರಡಕ್ಕೂ ಕಾರಣವಾಗಿರುವ ತನಿನಿದ್ರೆ ಎಂಬ ಕತ್ತಲೆಯು ಅಜ್ಞಾನವು ಆತ್ಮಜ್ಞಾನದಿಂದ ಸುಟ್ಟುಹೋದರೆ ಸುಟ್ಟಬೀಜದಂತೆ ಹುಟ್ಟಿಲ್ಲ ವಾಗುವದು[3].

**ತದೇವೈಕಂ ತ್ರಿಧಾ ಜ್ಞೇಯಂ ಮಾಯಾಬೀಜಂ ಪುನಃ ಕ್ರಮಾತ್ ।**
**ಮಾಯಾವ್ಯಾತ್ಮಾವಿಕಾರೋಽಪಿ ಬಹುಧೈಕೋ ಜಲಾರ್ಕವತ್ ॥೨೭॥**
**ಬೀಜಂ ಚೈಕಂ ಯಥಾಭಿನ್ನಂ ಪ್ರಾಣಸ್ವಪ್ನಾದಿಭಿಸ್ತಥಾ ।**
**ಸ್ವಪ್ನಜಾಗ್ರಚ್ಛರೀರೇಷು ತದ್ವದಾತ್ಮಾ ಜಲೇನ್ದುವತ್ ॥ ೨೮ ॥**

೨೭–೨೮. ಮತ್ತು ಅದೊಂದು ಮಾಯಾಬೀಜವೇ ಕ್ರಮವಾಗಿ ಮೂರು ಬಗೆಯಾಗಿರುವದೆಂದು ತಿಳಿಯಬೇಕು[4]. ಮಾಯಾವಿಯಾದ ಆತ್ಮನು ಯಾವ ವಿಕಾರವೂ ಇಲ್ಲದವನಾದರೂ (ನೀರಿನಲ್ಲಿ ಕಾಣಿಸುವ) ಜಲಚಂದ್ರನಂತೆ ಒಬ್ಬನೇ ಅನೇಕರೂಪನಾಗಿ ಕಾಣುತ್ತಾನೆ. ಒಂದೇ ಬೀಜವು ಸುಷುಪ್ತಿ, ಸ್ವಪ್ನ – ಮುಂತಾದ ರೂಪಗಳಿಂದ ಹೇಗೆ ಬೇರ್ಪಡುತ್ತಿರುವದೋ ಹಾಗೆಯೇ ಕನಸು, ಎಚ್ಚರಗಳ ಶರೀರಗಳಲ್ಲಿ ಆತ್ಮನು ಜಲಚಂದ್ರನಂತೆ (ಬೇರೆಬೇರೆ ರೂಪ ವನ್ನು ಹೊಂದುತ್ತಿರುವನು)[5].

---

1. ದರ್ಶನಸ್ಮರಣಗಳ ಅಭಾವವನ್ನು ಎಂದರ್ಥ.

2. ದರ್ಶನಸ್ಮರಣಗಳ ಅಭಾವಕ್ಕೂ ಸಾಕ್ಷಿಯಾಗಿರುವವನೇ ತನ್ನ ಆತ್ಮನು ; ಇವ ನನ್ನು ತುರೀಯನು ಎಂದು ಮಾಂಡೂಕ್ಯದಲ್ಲಿ ಕರೆದಿದೆ.

3. ನಿದ್ರೆಯೆಂಬುದು ಎರಡನೆಯ ವಸ್ತುವಿಲ್ಲದ್ದರಿಂದ ಅರಿಯದಿರುವದು ಎಂದು ಅರಿತುಕೊಂಡರೆ ಅವಸ್ಥೆಯಲ್ಲದೆ ಹೋಗುವದು. ಆಗ ಅಜ್ಞಾನವು ಹೋದಂತೆ. ಇದು ಮುಂದೆ ಸ್ಫುಟವಾಗುವದು.

4. ಅವಿದ್ಯಾಕಲ್ಪಿತಮಾಯಾಬೀಜವೇ ಅವಸ್ಥಾತ್ರಯವಾಗಿ ತೋರುವದು.

5. ಅಭಿನ್ನನಾದರೂ ಪರಮಾತ್ಮನು ಉಪಾಧಿವಶದಿಂದ ಜಲಾಶಯದಲ್ಲಿ ಅನೇಕ ವಾಗಿ ಕಾಣುವ ಚಂದ್ರಪ್ರತಿಬಿಂಬಗಳಂತೆ ಬೇರೆಬೇರೆಯಾಗಿ ಕಾಣುತ್ತಿರುವನು – ಎಂಬ ಪುರಾಣವಾಕ್ಯದ ಅಭಿಪ್ರಾಯವನ್ನು ಇಲ್ಲಿ ಸಂಗ್ರಹಿಸಿದೆ. ಆತ್ಮನು ಮಾಯಾವಿ ಎಂದದ್ದ ರಿಂದ ಪರಮಾರ್ಥವಾಗಿ ಅನೇಕವಾಗಿಲ್ಲ ಎಂಬ ಅಭಿಪ್ರಾಯವು ಸೂಚಿತವಾಗಿದೆ. ಮುಂದಿನ ನಾಲ್ಕು ಶ್ಲೋಕಗಳಲ್ಲಿ ಇದು ಸ್ಫುಟವಾಗುವದು.

**ಮಾಯಾಹಸ್ತಿನಮಾರುಹ್ಯ ಮಾಯಾವ್ಯೇಕೋ ಯಥಾ ವ್ರಜೇತ್ ।**
**ಆಗಚ್ಛಂ ಸ್ತದ್ವದೇವಾತ್ಮಾ ಪ್ರಾಣಸ್ವಪ್ನಾದಿಗೋ ಚಲಃ ॥ ೨೯॥**

**ನ ಹಸ್ತೀ ನ ತದಾರೂಢೋ ಮಾಯಾವ್ಯನ್ಯೋ ಯಥಾ ಸ್ಥಿತಃ ।**
**ನ ಪ್ರಾಣಾದಿ ನ ತದ್ದ್ರಷ್ಟಾ ತಥಾ ಜ್ಞೋಽನ್ಯಃ ಸದಾ ದೃಶಿಃ ॥ ೩೦ ॥**

**ಅಬದ್ಧಚಕ್ಷುಷೋ ನಾಸ್ತಿ ಮಾಯಾ ಮಾಯಾವಿನೋಽಪಿ ವಾ ।**
**ಬದ್ಧಾಕ್ಷಸ್ಯೈವ ಸಾ ಮಾಯಾ ಮಾಯಾವ್ಯೇವ ತತೋ ಭವೇತ್॥೩೧॥**

**ಸಾಕ್ಷಾದ್ದೇವಃ ಸ ವಿಜ್ಞೇಯಃ ಸಾಕ್ಷಾದಾತ್ಮೇತಿ ಚ ಶ್ರುತೇಃ ।**
**ಭಿದ್ಯತೇ ಹೃದಯಗ್ರನ್ಥಿರ್ನ ಚೇದಿತ್ಯಾದಿತಃ ಶ್ರುತೇಃ ॥ ೩೨ ॥**

೨೯-೩೨. ಮಾಯೆಯ ಆನೆಯನ್ನೇರಿ ಮಾಯಾವಿಯೊಬ್ಬನೇ ಹೇಗೆ ಹೋಗುತ್ತಿರುವನೋ ಅದರಂತೆ ಆತ್ಮನು ಪ್ರಾಣಸ್ವಪ್ನಾದಿಗಳನ್ನು ಪಡೆಯುತ್ತಾ ಸಂಚರಿಸುತ್ತಿರುವನು. (ಬೇರೆ) ನಿಂತಿರುವ ಮಾಯಾವಿಯು ಹೇಗೆ ಆನೆಯೂ ಅಲ್ಲದೆ, ಅದನ್ನು ಏರಿದವನೂ ಅಲ್ಲದೆ ಬೇರೆಯಾಗಿಯೇ ಇರುವನೋ ಅದರಂತೆ ನಿತ್ಯದೃಗ್ರೂಪನಾದ ಚೈತನ್ಯ(ರೂಪನಾದ ಆತ್ಮನು) ಪ್ರಾಣಾದ್ಯವಸ್ಥೆಗಳೂ[1] ಅಲ್ಲ, ಅವುಗಳನ್ನು ನೋಡುವವನೂ ಅಲ್ಲ, ಬೇರೆಯಾಗಿಯೇ ಇರುತ್ತಾನೆ[2]. ಕಣ್ಣುಕಟ್ಟು ಇಲ್ಲದವನಿಗೆ ಮಾಯೆಯಿಲ್ಲ, ಮಾಯಾವಿಗೂ ಇಲ್ಲ; ಕಣ್ಣುಕಟ್ಟಿದ್ದವನಿಗೆ ಮಾತ್ರವೇ ಆ ಮಾಯೆಯಿರುತ್ತದೆ. ಆದ್ದರಿಂದ ಅವನು ಮಾಯಾವಿಯೇ ಆಗಿರುತ್ತಾನೆ[3]. ಆ (ಆತ್ಮನು) ಸಾಕ್ಷಾದ್ದೇವನೆಂದೇ ತಿಳಿಯಬೇಕು. "ಸಾಕ್ಷಾತ್" (ಬೃ. ೩-೪-೧), 'ಆತ್ಮಾ' ( ಬೃ. ೩-೪-೧, ೩-೫-೧ ) "ಹೃದಯಗ್ರಂಥಿಗಳು ಬಿಚ್ಚಿಕೊಳ್ಳುತ್ತವೆ"

---

1. ಸುಷುಪ್ತಾವಸ್ಥೆಯಲ್ಲಿ ಇಂದ್ರಿಯಗಳು ಸುಪ್ತವಾಗಿರುವಲ್ಲಿ ಪ್ರಾಣವು ಕೆಲಸ ಮಾಡುತ್ತಿರುವದರಿಂದಲೂ ಸುಷುಪ್ತದಲ್ಲಿರುವ ಆತ್ಮನನ್ನು ಪ್ರಾಣನೆಂದು ಶ್ರುತಿಯಲ್ಲಿ ಕರೆದಿರುವದರಿಂದಲೂ ಪ್ರಾಣಸಂಬದ್ಧವಾದ ಈ ಅವಸ್ಥೆಯನ್ನೇ ಇಲ್ಲಿ 'ಪ್ರಾಣ' ಎಂದು ಕರೆದಿದೆ.

2. ಅವಸ್ಥೆಗಿಂತಲೂ ಅವಸ್ಥೆಯನ್ನು ಅನುಭವಿಸುವ ರೂಪಕ್ಕಿಂತಲೂ ಬೇರೆಯಾದ ಸಾಕ್ಷಿಯೇ ಆಗಿರುತ್ತಾನೆ.

3. ಅವಿದ್ಯೆಯುಳ್ಳವನಿಗೆ ಅವಸ್ಥೆಗಳಿರುತ್ತವೆ. ಆತ್ಮನಿಗಾಗಲಿ, ಆತ್ಮಜ್ಞಾನದಿಂದ ಅವಿದ್ಯೆಯನ್ನು ಕಳೆದುಕೊಂಡವನಿಗಾಗಲಿ ಅವಸ್ಥೆಗಳು ನಿಜವಾಗಿರುವದಿಲ್ಲ – ಎಂಬರ್ಥವನ್ನು ಈ ದೃಷ್ಟಾಂತದಿಂದ ಗ್ರಹಿಸಬೇಕು.

(ಮುಂ. ೨-೨-೮), "(ಅರಿತು)ಕೊಳ್ಳಲಿಲ್ಲವಾದರೆ" (ಬೃ. ೪-೪-೧೪) -ಎಂಬುದೇಮುಂತಾದ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ)[1].

## ಆತ್ಮನು ಅವಿಷಯನಾದರೂ ಅವನನ್ನು ಅರಿತುಕೊಳ್ಳಬಹುದು

**ಅಶಬ್ದಾದಿತ್ವತೋ ನಾಸ್ಯ ಗ್ರಹಣಂ ಚೇನ್ದ್ರಿಯೈರ್ಭವೇತ್ ।**
**ಸುಖಾದಿಭ್ಯಸ್ತಥಾನ್ಯತ್ವಾದ್ಬುದ್ಧ್ಯಾ ವಾಪಿ ಕಥಂ ಭವೇತ್ ॥ ೩೩ ॥**
**ಅದೃಶ್ಯೋಽಪಿ ಯಥಾ ರಾಹುಶ್ಚನ್ದ್ರೇ ಬಿಮ್ಬಂ ಯಥಾಮ್ಭಸಿ ।**
**ಸರ್ವಗೋಽಪಿ ತಥೈವಾತ್ಮಾ ಬುದ್ಧಾವೇವ ಸ ಗೃಹ್ಯತೇ ॥ ೩೪ ॥**

೩೩-೩೪. ಶಬ್ದವೇ ಮುಂತಾದವುಗಳಿಲ್ಲದ್ದರಿಂದ[2] ಅವನನ್ನು ಇಂದ್ರಿಯಗಳಿಂದ ಅರಿಯುವದು ಆಗಲಾರದು. ಸುಖಾದಿಗಳಿಗಿಂತ ಬೇರೆಯಾಗಿರುವದರಿಂದ[3] ಬುದ್ಧಿಯಿಂದಲೂ ಗ್ರಹಿಸುವದು ಹೇಗೆ ಆದೀತು ? ರಾಹುವು ಅದೃಶ್ಯನಾದರೂ ಚಂದ್ರನಲ್ಲಿ ಕಾಣುವಂತೆಯೂ (ಚಂದ್ರಾದಿಗಳ) ಪ್ರತಿಬಿಂಬವು ನೀರಿನಲ್ಲಿ ಕಾಣುವಂತೆಯೂ ಆ ಆತ್ಮನು ಸರ್ವಗತನಾಗಿದ್ದರೂ ಬುದ್ಧಿಯಲ್ಲಿಯೇ ಕಾಣಿಸುತ್ತಾನೆ[4].

**ಭಾನೋರ್ಬಿಮ್ಬಂ ಯಥಾ ಚೌಷ್ಣ್ಯಂ ಜಲೇ ದೃಷ್ಟಂ ನ ಚಾಮ್ಭಸಃ ।**
**ಬುದ್ಧೌ ಬೋಧೋ ನ ತದ್ಧರ್ಮಸ್ತಥೈವ ಸ್ಯಾದ್ವಿಧರ್ಮತಃ ॥ ೩೫ ॥**
**ಚಕ್ಷುರ್ಯುಕ್ತಾ ಧಿಯೋವೃತ್ತಿರ್ಯಾ ತಾಂ ಪಶ್ಯನ್ನಲುಪ್ತದೃಕ್ ।**
**ದೃಷ್ಟೇರ್ದ್ರಷ್ಟಾ ಭವೇದಾತ್ಮಾ ಶ್ರುತೇಃ ಶ್ರೋತಾ ತಥಾ ಭವೇತ್ ॥**
**ಕೇವಲಾಂ ಮನಸೋ ವೃತ್ತಿಂ ಪಶ್ಯನ್ ಮನ್ತಾ ಮತೇರಜಃ ।**
**ವಿಜ್ಞಾತಾಲುಪ್ತಶಕ್ತಿತ್ವಾತ್ ತಥಾ ಶಾಸ್ತ್ರಂ ನ ಹೀತತ್ಯಃ ॥ ೩೭ ॥**

---

1. ಆತ್ಮನು ನಮಗೆ ವ್ಯವಹಿತನಲ್ಲ, ನಮ್ಮ ಸ್ವರೂಪವೇ ; ಅವನನ್ನು ಅರಿತುಕೊಂಡರೆ ಎಲ್ಲಾ ಅನರ್ಥಗಳೂ ನಾಶವಾಗುತ್ತವೆ, ಇಲ್ಲದಿದ್ದರೆ ಅನರ್ಥಗಳು ತಪ್ಪುವದಿಲ್ಲ - ಎಂಬೀ ಅರ್ಥಗಳು ಕ್ರಮವಾಗಿ ಶ್ರುತಿವಚನಗಳಲ್ಲಿ ಉಕ್ತವಾಗಿವೆ. ಈ ಆತ್ಮಸ್ವರೂಪವನ್ನು ಹೇಗೆ ಕಂಡುಕೊಳ್ಳಬೇಕೆಂಬುದನ್ನೂ ಆತ್ಮಜ್ಞಾನದ ಫಲವನ್ನೂ ಮುಂದಿನ ಹನ್ನೊಂದು ಶ್ಲೋಕಗಳಲ್ಲಿ ತಿಳಿಸಲಾಗುವದು.

2. ಕ. ೧-೩-೧೫ ನ್ನು ನೋಡಿ.

3. ಹಿಂದಿನ ಪ್ರಕರಣದಲ್ಲಿ ವೈಶೇಷಿಕಮತವಿಮರ್ಶೆಯಲ್ಲಿ ಇದು ಸಿದ್ಧವಾಗಿರುತ್ತದೆ.

4. ವಿಷಯನಾಗಿ ಎಂದೇನೂ ಅರ್ಥವಲ್ಲ ; ಇದರ ವಿವರವನ್ನು ಮುಂದಿನ ಶ್ಲೋಕದಲ್ಲಿ ತಿಳಿಸಿದೆ. ಆತ್ಮನಿಗೆ ನಿಜವಾಗಿ ಪ್ರತಿಬಿಂಬವುಂಟೆಂದೂ ಅರ್ಥವಲ್ಲ.

೩೫—೩೭. ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬವೂ, ಬಿಸಿಯೂ ಹೇಗೆ ನೀರಿನಲ್ಲಿಲ್ಲವೋ ಅದರಂತೆ ಬುದ್ಧಿಯಲ್ಲಿ ಕಾಣುವ ಅರಿವೂ[1] ಅದರ ಧರ್ಮವಾಗಲಾರದು. ಏಕೆಂದರೆ ಅದು ವಿರುದ್ಧವಾದ ಧರ್ಮವುಳ್ಳದ್ದಾಗಿದೆ[2]. ಚಕ್ಷುರಿಂದ್ರಿಯಸಹಿತವಾದ ಅಂತಃಕರಣವಿದೆಯಲ್ಲ, ಅದನ್ನು ನೋಡುವ ಅಲುಪ್ತದೃಷ್ಟಿಯ ಆತ್ಮನು ದೃಷ್ಟಿಗೆ ದ್ರಷ್ಟೃವಾಗಿರುವನು, ಹಾಗೆಯೇ ಶ್ರುತಿಗೆ ಶ್ರೋತೃವಾಗುವನು ; ಬರಿಯ ಮನಸ್ಸಿನ ವೃತ್ತಿಯನ್ನು ಅರಿಯುವ ಜನ್ಮರಹಿತನಾದ ಆತ್ಮನು ಮತಿಯ ಮಂತೃವಾಗುವನು. ಹಾಗೆಯೇ ಎಂದಿಗೂ ನಾಶವಾಗದ ಅರಿವಿನ ಶಕ್ತಿಯುಳ್ಳಾತನಾದ್ದರಿಂದ (ವಿಜ್ಞಾತಿಯ) ವಿಜ್ಞಾತೃವೆನಿಸುವನು[3]. "ನ ಹಿ" (ಇಲ್ಲವೇ ಇಲ್ಲ, ಬೃ. ೪-೩-೨೩ರಿಂದ ೩೦) ಎಂಬ ಶಾಸ್ತ್ರ(ವಚನ)ವಿರುವದರಿಂದ (ಹೀಗೆಂದು ತಿಳಿಯಬೇಕು.)

**ಧ್ಯಾಯತೀತ್ಯವಿಕಾರಿತ್ವಂ[4] ತಥಾ ಲೇಲಾಯತೀತ್ಯಪಿ ।**
**ಅತ್ರ ಸ್ತೇನೇತಿ[5] ಶುದ್ಧತ್ವಂ ತಥಾಽನನ್ವಾಗತಂ ಶ್ರುತೇಃ ॥ ೩೮ ॥**
**ಶಕ್ತ್ಯಲೋಪಾತ್ ಸುಷುಪ್ತೇ ಜ್ಞಸ್ತಥಾ ಬೋಧೇಽವಿಕಾರತಃ ।**
**ಜ್ಞೇಯಸ್ಯೈವ ವಿಶೇಷಸ್ತು ಯತ್ರವೇತಿ ಶ್ರುತೇರ್ವಚಃ ॥ ೩೯ ॥**

೩೮—೩೯. 'ಯೋಚಿಸುವಂತಿರುತ್ತಾನೆ' (ಧ್ಯಾಯತೀವ ಬೃ. ೪-೩-೭) ಎಂದೂ 'ಸಂಚರಿಸುವಂತಿರುತ್ತಾನೆ' (ಲೇಲಾಯತೀವ ಬೃ. ೪—೪—೭) ಎಂದೂ (ಶ್ರುತಿಯಲ್ಲಿ ಹೇಳಿರುವದರಿಂದ) ಅವಿಕಾರಿತ್ವವೂ, ಇಲ್ಲಿ ಕಳ್ಳನು ಕಳ್ಳನಲ್ಲದೆ

---

1. ಇದು ಚಿದಾಭಾಸವು. ಅಂತಃಕರಣವೃತ್ತಿಗಳು ಚಿತ್ತಿನಂತೆ ಬೆಳಗುತ್ತಾ ಚಿದ್ವ್ಯಾಪ್ತವಾಗಿಯೇ ಹುಟ್ಟುವವು.

2. ಅಂತಃಕರಣವು ಅಚೇತನವಾಗಿರುತ್ತದೆ ; ಅದರಲ್ಲಿ ಜ್ಞಾನವು ಎಲ್ಲಿಂದ ಬಂದೀತು ? ಕನ್ನಡಿಯಲ್ಲಿ ಹೊಳಪು ಹೇಗೆ ಸೂರ್ಯನದೋ ಹಾಗೆ ಅಲ್ಲಿ ತೋರುವ ಜ್ಞಾನವು ಆತ್ಮನದೇ.

3. ಅಂತಃಕರಣದ ವೃತ್ತಿಗಳೂ ಇಂದ್ರಿಯದ ವ್ಯಾಪಾರಗಳೂ ಆದ ವಿಜ್ಞಾನ, ದೃಷ್ಟಿ ಮುಂತಾದವುಗಳನ್ನೂ ಬೆಳಗುವ ಚೈತನ್ಯವನ್ನೇ ಇಲ್ಲಿ ದೃಷ್ಟಿಯ ದ್ರಷ್ಟೃ ಎಂದು ಮುಂತಾಗಿ ಕರೆದಿದೆ.

4. 'ಧ್ಯಾಯತೀವ' ಎಂಬುದನ್ನು 'ಇವ' ಬಿಟ್ಟು ಉದಾಹರಿಸಿರುವದು ಛಂದಸ್ಸಿಗಾಗಿ ; 'ಲೇಲಾಯತಿ' ಎಂಬುದನ್ನೂ ಹೀಗೆಯೇ ಅರಿಯಬೇಕು.

5. 'ಅತ್ರ ಸ್ತೇನೋಽಸ್ತೇನಃ' ಎಂಬ ಶ್ರುತಿಯನ್ನು ಛಂದಸ್ಸಿಗಾಗಿ ಹೀಗೆ ಉದಾಹರಿಸಿದೆ. ಆತ್ಮನು ನಿತ್ಯಶುದ್ಧಮುಕ್ತಸ್ವಭಾವನು ಎಂಬುದನ್ನು ಇಲ್ಲಿ ಶ್ರುತಿಪ್ರಮಾಣದಿಂದ ಸಿದ್ಧಪಡಿಸಿರುತ್ತದೆ.

ಹೋಗುತ್ತಾನೆ, (ಅತ್ರ ಸ್ತೇನೋಽಸ್ತೇನೋ ಭವತಿ ಬೃ. ೪-೩-೨೨) ಮತ್ತು "ಪುಣ್ಯದಿಂದ ಹಿಂಬಾಲಿಸ್ಪಡನು" (ಅನನ್ವಾಗತಂ ಪುಣ್ಯೇನ.... ಬೃ. ೪-೩-೨೨) ಎಂದು ಶುದ್ಧತ್ವವೂ ಸುಷುಪ್ತಿಯಲ್ಲಿ (ಚೈತನ್ಯ)ಶಕ್ತಿಯು ಲೋಪವಾಗದೆ ಇರುವದರಿಂದಲೂ (ಬೃ. ೪-೩-೨೩) ಜ್ಞಾನದಲ್ಲಿ ಯಾವ ವಿಕಾರವೂ ಇಲ್ಲದ್ದ ರಿಂದಲೂ ಚೈತನ್ಯಸ್ವರೂಪವೂ (ಇವನಿಗೆ ಸಿದ್ಧವಾಗುತ್ತದೆ). ವಿಶೇಷವಾದರೊ, ಜ್ಞೇಯಕ್ಕೇ ಸೇರಿದ್ದು.[1] "ಎಲ್ಲಿಯಾದರೆ (ಮತ್ತೊಂದಿರುವದೋ ಅಲ್ಲಿ ಒಬ್ಬನು ಮತ್ತೊಂದನ್ನು ಕಾಣುತ್ತಾನೆ (ಬೃ. ೪-೩-೪೧) ಎಂಬ ಶ್ರುತಿವಾಕ್ಯವು (ಇದಕ್ಕೆ ಪ್ರಮಾಣವು)[2].

**ವ್ಯವಧಾನಾದ್ಧಿ ಪಾರೋಕ್ಷ್ಯಂ ಲೋಕದೃಷ್ಟೇರನಾತ್ಮನಃ ।**
**ದೃಷ್ಟೇರಾತ್ಮಸ್ವರೂಪತ್ವಾತ್ ಪ್ರತ್ಯಕ್ಷಂ ಬ್ರಹ್ಮ ತತ್ ಸ್ಮೃತಮ್ ॥೪೦॥**
**ನ ಹಿ ದೀಪಾಂತರಾಪೇಕ್ಷಾ ಯದ್ವದ್ದೀಪಪ್ರಕಾಶನೇ ।**
**ಬೋಧಸ್ಯಾತ್ಮಸ್ವರೂಪತ್ವಾನ್ನ ಬೋಧೋಽನ್ಯಸ್ತಥೇಷ್ಯತೇ ॥ ೪೧ ॥**

೪೦-೪೧. ಅನಾತ್ಮ(ವಸ್ತು) ಜನರ ದೃಷ್ಟಿಗೆ ಮರೆಯಾಗಿರುವದರಿಂದ ಲ್ಲವೆ,[3] ಪರೋಕ್ಷವಾಗಿರುತ್ತದೆ? (ಆತ್ಮನ) ದೃಷ್ಟಿಯು ಆತ್ಮಸ್ವರೂಪವೇ ಆಗಿರುವದರಿಂದ ಆ ಬ್ರಹ್ಮವು ಪ್ರತ್ಯಕ್ಷವೆನಿಸುವದು[4]. ದೀಪವನ್ನು ಬೆಳಗು ವದಕ್ಕೆ ಮತ್ತೊಂದು ದೀಪದ ಅಪೇಕ್ಷೆಯಿರುವದಿಲ್ಲವಷ್ಟೆ. ಅದರಂತೆ ಜ್ಞಾನವು ಆತ್ಮಸ್ವರೂಪವೇ ಆಗಿರುವದರಿಂದ ಮತ್ತೊಂದು ಜ್ಞಾನವು ಬೇಕಿರುವದಿಲ್ಲ[5].

**ವಿಷಯತ್ವಂ ವಿಕಾರಿತ್ವಂ ನಾನಾತ್ವಂ ವಾ ನ ಹೀಷ್ಯತೇ ।**
**ನ ಹೇಯೋ ನಾಪ್ಯುಪಾದೇಯೋ ಆತ್ಮಾ ನಾನ್ಯೇನ ವಾ ತತಃ ॥೪೨॥**

೪೨. (ಆತ್ಮನಲ್ಲಿ) ವಿಷಯತ್ವವನ್ನಾಗಲಿ ವಿಕಾರಿತ್ವವನ್ನಾಗಲಿ ನಾನಾತ್ವ ವನ್ನಾಗಲಿ ಒಪ್ಪುವಹಾಗೇ ಇಲ್ಲವಷ್ಟೆ? ಆದ್ದರಿಂದ ಆತ್ಮನು ಮತ್ತೊಬ್ಬರಾಗಲಿ (ತಾನಾಗಲಿ) ಬಿಡತಕ್ಕವನಲ್ಲ, ತೆಗೆದುಕೊಳ್ಳತಕ್ಕವನೂ ಅಲ್ಲ.

---

1. ವಿಷಯವಾದ ಅಂತಃಕರಣಾದಿಗಳಿಗೇ ಸೇರಿದ್ದು.

2. ಈ ಶ್ರುತಿಯಲ್ಲಿ ಆತ್ಮನೊಬ್ಬನೇ ಇರುವಲ್ಲಿ ಯಾವ ವಿಶೇಷವನ್ನೂ ಕಾಣುವ ಹಾಗಿಲ್ಲವೆಂಬ ವಾಕ್ಯಶೇಷವಿದೆ.

3. ದೇಶ, ಕಾಲ, ಇನ್ನೊಂದು ವಸ್ತು- ಇವುಗಳು ನಡುವೆ ಬಂದು ಮರೆಯಾ ಗಿರುವದರಿಂದ.

4. ಪರೋಕ್ಷವಲ್ಲ ಎಂದರ್ಥ; ವಿಷಯವೆಂದು ಅರ್ಥವಲ್ಲ.

5. ಆತ್ಮನಿಗೆ ಯಾವ ಮರೆಯೂ ಇಲ್ಲವೆಂಬುದು ಹೇಗೋ, ಅವನು ಅಜ್ಞಾನಕ್ಕೆ ವಿಷಯನಲ್ಲವಾದ್ದರಿಂದ ಜ್ಞಾನದಿಂದ ಪ್ರಕಾಶ್ಯನಲ್ಲವೆಂಬುದೂ ಹಾಗೆಯೇ. ಇವೆರಡೂ ಆತ್ಮನು ಜ್ಞಾನಸ್ವರೂಪನೆಂಬ ಹೇತುವಿನಿಂದಲೇ ಸಿದ್ಧವಾಗುವವು.

## ಆತ್ಮಜ್ಞಾನದ ಫಲ

**ಸಬಾಹ್ಯಾಭ್ಯನ್ತರೋಽಜೀರ್ಣೋ ಜನ್ಮಮೃತ್ಯುಜರಾತಿಗಃ |**
**ಅಹಮಾತ್ಮೇತಿ ಯೋ ವೇದ ಕುತೋ ನ್ವೇವ ಬಿಭೇತಿ ಸಃ || ೪೩ ||**

೪೩. ಒಳಗೂ ಹೊರಗೂ ಜೀರ್ಣನಾಗದ ಹುಟ್ಟು, ಹೊಂದು, ಮುಪ್ಪು – ಇವುಗಳನ್ನು ಮೀರಿದ ಆತ್ಮನೇ ನಾನು ಎಂದು ಯಾವನು ತಿಳಿದುಕೊಳ್ಳುವನೋ ಅವನು ಏತಕ್ಕೆ ತಾನೆ ಅಂಜಿಯಾನು[1] ?

## ಜ್ಞಾನಿಗೆ ಕರ್ಮವಿಲ್ಲ

**ಪ್ರಾಗೇವೈತದ್ವಿಧೇಃ ಕರ್ಮ ವರ್ಣಿತ್ವಾದೇರಪೋಹನಾತ್ ।**
**ತದಸ್ಥೂಲಾದಿಶಾಸ್ತ್ರೇಭ್ಯಸ್ತತ್ತ್ವಮೇವೇತಿ ನಿಶ್ಚಯಾತ್ || ೪೪ ||**

೪೪. ಏಕೆಂದರೆ "ಅದು ಅಸ್ಥೂಲವು." (ಬೃ. ೩–೮–೮) ಎಂದು ಮುಂತಾಗಿರುವ ಶಾಸ್ತ್ರಗಳಿಂದ ವರ್ಣಿತ್ವವೇ ಮುಂತಾದವುಗಳನ್ನು ನಿಷೇಧ ಮಾಡಿರುವದರಿಂದಲೂ[2] 'ಅದೇ ನೀನು' (ಛಾಂ. ೬–೮–೭)ಎಂದು ನಿಶ್ಚಯವಾಗಿರುವದರಿಂದಲೂ ಈ ಜ್ಞಾನಕ್ಕಿಂತಲೂ[3] ಮೊದಲೇ ಕರ್ಮವು.

**ಪೂರ್ವದೇಹಪರಿತ್ಯಾಗೇ ಜಾತ್ಯಾದೀನಾಂ ಪ್ರಹಾಣತಃ ।**
**ದೇಹಸ್ಯೈವ ತು ಜಾತ್ಯಾದಿಸ್ತಸ್ಯಾಪ್ಯೇವಂ ಹ್ಯನಾತ್ಮತಾ || ೪೫ ||**

೪೫. ಹಿಂದಿನ ದೇಹವನ್ನು ಬಿಟ್ಟರೆ ಜಾತಿಯೇ ಮುಂತಾದವು ಹೋಗಿ ಬಿಡುವದರಿಂದ ದೇಹಕ್ಕೇ ಜಾತ್ಯಾದಿಗಳು, ಆ ದೇಹವೂ ಹೀಗೆಯೇ ಅನಾತ್ಮವು.

**ಮಮಾಹಂ ಚೇತ್ಯತೋಽವಿದ್ಯಾ ಶರೀರಾದಿಷ್ವನಾತ್ಮಸು |**
**ಆತ್ಮಜ್ಞಾನೇನ ಹೇಯಾ ಸ್ಯಾದಸುರಾಣಾಮಿತಿ ಶ್ರುತೇಃ || ೪೬ ||**

೪೬. ಆದ್ದರಿಂದ ಶರೀರವೇ ಮುಂತಾದ ಅನಾತ್ಮಗಳಲ್ಲಿ ನಾನು, ನನ್ನದು – ಎಂಬ ತಿಳಿವಳಿಕೆಯೇ ಅವಿದ್ಯೆ. ಅದನ್ನು ಆತ್ಮಜ್ಞಾನದಿಂದ ನಾಶಗೊಳಿಸ

---

1. ಅದ್ವಿತೀಯಜ್ಞಾನಕ್ಕೆ ಅಭಯವೇ ಫಲ.

2. ಅಸ್ಥೂಲಶ್ರುತಿಯಲ್ಲಿ ಸ್ಥೂಲತ್ವಾದಿಗಳನ್ನು ನಿಷೇಧಿಸಿದೆ ; ಬೃ. ೪–೫–೭ರಲ್ಲಿ ವರ್ಣಿತ್ವವನ್ನು ನಿಷೇಧಿಸಿದೆ ; ಬೃ. ೪–೩–೨೨ರಲ್ಲಿ ಸಂನ್ಯಾಸಾದ್ಯಾಶ್ರಮಧರ್ಮವನ್ನು ನಿಷೇಧಿಸಿದೆ.

3. ವಿಧಿ ಎಂಬ ಶಬ್ದಕ್ಕೆ ಇಲ್ಲಿ ಜ್ಞಾನೋಪದೇಶವೆಂದು ಅರ್ಥಮಾಡಬೇಕು, ಏಕೆಂದರೆ ಜ್ಞಾನವನ್ನು ವಿಧಿಸುವದಕ್ಕೆ ಆಗುವದಿಲ್ಲ.

ಬೇಕು. "(ಇದು) ಅಸುರರ (ಉಪನಿಷತ್ತು)" (ಛಾಂ. ೮-೮-೫) ಎಂಬ ಶ್ರುತಿಯಿಂದ[1] (ಇದು ಸಿದ್ಧವಾಗುತ್ತದೆ).

**ದಶಾಹಾಶೌಚಕಾರ್ಯಾಣಾಂ ಪಾರಿವ್ರಾಜ್ಯೇ ನಿವರ್ತನಮ್ ।**
**ಯಥಾ ಜ್ಞಾನಸ್ಯ ಸಂಪ್ರಾಪ್ತೌ ತದ್ವಜ್ಜಾತ್ಯಾದಿಕರ್ಮಣಾಮ್ ॥ ೪೭ ॥**

೪೭. ಸಂನ್ಯಾಸಾಶ್ರಮದಲ್ಲಿ ಹೇಗೆ ಹತ್ತುದಿನಗಳ ಆಶೌಚ(ನಿಮಿತ್ತವಾದ) ಕಾರ್ಯಗಳು ತೊಲಗುವವೋ ಹಾಗೆ ಜ್ಞಾನವು ಬರಲು ಜಾತ್ಯಾದಿ ನಿಮಿತ್ತವಾದ ಕರ್ಮಗಳೂ (ಇಲ್ಲವಾಗುವವು).

**ಯತ್ಕಾಮಸ್ತತ್ಕ್ರತುರ್ಭೂತ್ವಾ ಕೃತಂ ತ್ವಜ್ಞಃ ಪ್ರಪದ್ಯತೇ ।**
**ಯದಾ ಸ್ವಾತ್ಮದೃಶಃ ಕಾಮಾಃ ಪ್ರಮುಚ್ಯಂತೇಽಮೃತಸ್ತದಾ ॥ ೪೮ ॥**

೪೮. ಯಾವವರ ಬಯಕೆಯಿರುವದೋ ಅದರಲ್ಲಿ ಮನೋನಿಶ್ಚಯವುಳ್ಳವನಾಗಿ ಅಜ್ಞನು ಕರ್ಮವನ್ನು ಮಾಡಿ (ಅದರ ಫಲವನ್ನು) ಪಡೆಯುತ್ತಾನೆ. ತನ್ನ ಆತ್ಮನನ್ನು ಕಂಡುಕೊಂಡವನಿಗೆ ಯಾವಾಗ ಕಾಮಗಳೆಲ್ಲವೂ ಬಿಡುಗಡೆಯಾಗುವವೋ ಆಗ ಅಮೃತನಾಗುತ್ತಾನೆ[2].

**ಆತ್ಮರೂಪವಿಧೇಃ ಕಾರ್ಯಂ ಕ್ರಿಯಾದಿಭ್ಯೋ ನಿವರ್ತನಮ್ ।**
**ನ ಸಾಧ್ಯಂ ಸಾಧನಂ ವಾತ್ಮಾ ನಿತ್ಯತೃಪ್ತಸ್ಮೃತೇರ್ಮತಃ ॥ ೪೯ ॥**

೪೯. ಆತ್ಮಸ್ವರೂಪವನ್ನು ಉಪದೇಶಿಸಿದ್ದರ ಫಲವೇನೆಂದರೆ ಕ್ರಿಯೆಯೇ ಮುಂತಾದವುಗಳನ್ನು ತೊಲಗಿಸಿಕೊಳ್ಳುವದೇ. ಆತ್ಮನು ಸಾಧ್ಯವೆಂದಾಗಲಿ ಸಾಧನವೆಂದಾಗಲಿ ಎನಿಸುವದಿಲ್ಲ. ಇದಕ್ಕೆ ನಿತ್ಯತೃಪ್ತಸ್ಮೃತಿಯು (ಗೀ. ೪-೨೦) (ಪ್ರಮಾಣವು).

**ಉತ್ಪಾದ್ಯಾಪ್ಯವಿಕಾರ್ಯಾಣಿ ಸಂಸ್ಕಾರ್ಯಂ ಚ ಕ್ರಿಯಾಫಲಮ್ ।**
**ನಾತೋಽನ್ಯತ್ಕರ್ಮಣಾಂ ಕಾರ್ಯಂ ತ್ಯಜೇತ್ತಸ್ಮಾತ್ಸಸಾಧನಮ್ ॥೫೦**

೫೦. ಹುಟ್ಟಿಸತಕ್ಕದ್ದು, ಪಡೆಯತಕ್ಕದ್ದು, ಮಾರ್ಪಡಿಸಿಕೊಳ್ಳತಕ್ಕದ್ದು, (ಇವೂ) ಸಂಸ್ಕಾರ್ಯವೂ ಕರ್ಮದ ಫಲವು. ಕರ್ಮಗಳಿಗೆ ಇವಕ್ಕಿಂತ

---

1. ದೇಹಾಭಿಮಾನವುಳ್ಳವರು ಮಿಥ್ಯಾಭಿಮಾನವುಳ್ಳ ಅಸುರರು ಎಂದು ಈ ಶ್ರುತಿಯಲ್ಲಿ ಹೇಳಿವೆ.

2. ಕ. ೨-೩-೧೪, ಬೃ. ೪-೪-೭ ಇವುಗಳ ಅರ್ಥ.

ಬೇರೆಯ ಫಲವಿಲ್ಲ[1]. ಆದ್ದರಿಂದ ಕರ್ಮವನ್ನು ಸಾಧನಸಹಿತ ಬಿಟ್ಟುಬಿಡಬೇಕು[2].

## ಮುಮುಕ್ಷುವು ವೈರಾಗ್ಯಯುಕ್ತನಾಗಿ ಗುರುವನ್ನಾಶ್ರಯಿಸಬೇಕು

**ತಾಪಾನ್ತತ್ವಾದನಿತ್ಯತ್ವಾದಾತ್ಮಾರ್ಥತ್ವಾಚ್ಚ ಯಾ ಬಹಿಃ ।**
**ಸಂಹೃತ್ಯಾತ್ಮನಿ ತಾಂ ಪ್ರೀತಿಂ ಸತ್ಯಾರ್ಥೀ ಗುರುಮಾಶ್ರಯೇತ್ ॥೫೧॥**

**ಶಾನ್ತಂ ಪ್ರಾಜ್ಞಂ ತಥಾ ಮುಕ್ತಂ ನಿಷ್ಕ್ರಿಯಂ ಬ್ರಹ್ಮಣಿ ಸ್ಥಿತಮ್ ।**
**ಶ್ರುತೇರಾಚಾರ್ಯವಾನ್ ವೇದ ತದ್ವಿದ್ಧೀತಿ ಸ್ಮೃತೇಸ್ತಥಾ ॥ ೫೨ ॥**

೫೧-೫೨. ಹೊರಗಿನ (ವಿಷಯದ) ಪ್ರೀತಿಯು ಸಂತಾಪದಲ್ಲಿ ಕೊನೆಗಾಣುವದರಿಂದಲೂ ಅನಿತ್ಯವಾಗಿರುವದರಿಂದಲೂ ಆತ್ಮನಿಗಾಗಿಯೇ ಇರುವದಾದ್ದರಿಂದಲೂ ಆ ಪ್ರೀತಿಯನ್ನು ಆತ್ಮನಲ್ಲಿಯೇ ಸೆಳೆದಿಟ್ಟುಕೊಂಡು[3] ಸತ್ಯಾರ್ಥಿಯಾದವನು ಶಾಂತನೂ ಪ್ರಾಜ್ಞನೂ ಮುಕ್ತನೂ ಕ್ರಿಯಾರಹಿತನೂ ಬ್ರಹ್ಮನಿಷ್ಠನೂ ಆಗಿರುವ ಗುರುವನ್ನಾಶ್ರಯಿಸಬೇಕು. "ಆಚಾರ್ಯವಂತನಾದ ಪುರುಷನು ಅರಿತುಕೊಳ್ಳುವನು" (ಛಾಂ. ೬-೧೪-೨), ಎಂಬ ಶ್ರುತಿಯಿಂದಲೂ (ಪ್ರಣಿಪಾತಾದಿಗಳಿಂದ) "ಅದನ್ನು ಅರಿತುಕೊ" (ಗೀ. ೪-೩೪) ಎಂಬ ಸ್ಮೃತಿಯಿಂದಲೂ (ಇದು ಸಿದ್ಧವಾಗುತ್ತದೆ)[4]

**ಸ ಗುರುಸ್ತಾರಯೇದ್ ಯುಕ್ತಂ ಶಿಷ್ಯಂ ಶಿಷ್ಯಗುಣಾನ್ವಿತಮ್ ।**
**ಬ್ರಹ್ಮವಿದ್ಯಾಪ್ಲವೇನಾಶು ಸ್ವಾನ್ತಧ್ವಾನ್ತಮಹೋದಧಿಮ್ ॥ ೫೩ ॥**

---

1. ಸೂ. ಭಾ. ೧-೧-೪ರಲ್ಲಿ ಇವುಗಳ ವರ್ಣನೆಯಿದೆ.

2. ಯಜ್ಞೋಪವೀತಾದಿಗಳನ್ನೂ ಅವುಗಳಿಂದ ಮಾಡಬೇಕಾಗಿರುವ ಕರ್ಮವನ್ನೂ ಎಂದರ್ಥ. ಚಿತ್ತಶುದ್ಧಿಯಾದವರಿಗೆ ಅವುಗಳಿಂದ ಮತ್ತೆ ಆಗಬೇಕಾದದ್ದು ಏನೂ ಇಲ್ಲ.

3. ಆತ್ಮನು ಆನಂದರೂಪನಾಗಿ ನಿತ್ಯನಾಗಿ ಸ್ವಪ್ರಧಾನನಾಗಿರುವದರಿಂದ ಆತ್ಮನಲ್ಲಿಯೇ ಪ್ರೀತಿಯನ್ನು ಮಾಡಬೇಕು. ಬೃ. ೧-೪-೮, ೪-೫-೬.

4. ಎಂಥ ವಿದ್ವಾಂಸನಾದರೂ ತಾನೇ ಶಾಸ್ತ್ರಾರ್ಥವನ್ನು ವಿಚಾರಮಾಡಿ ತಿಳಿದುಕೊಳ್ಳುವೆನೆಂದು ಎಣಿಸಿಕೊಳ್ಳಬಾರದು.

೫೩. ಆ ಗುರುವು ಶಿಷ್ಯಗುಣಗಳಿಂದ ಕೂಡಿ ಸಮಾಹಿತಚಿತ್ತನಾಗಿರುವ ಶಿಷ್ಯನನ್ನು ಹೃದಯದ ಅಜ್ಞಾನವೆಂಬ ಮಹಾಸಾಗರವನ್ನು ಬ್ರಹ್ಮವಿದ್ಯೆ ಎಂಬ ಹಡಗಿನಿಂದ ದಾಟಿಸುವನು[1].

## ಜ್ಞಾನದಿಂದಾಗುವ ಬ್ರಹ್ಮಪ್ರಾಪ್ತಿ

**ದೃಷ್ಟಿಃ ಸ್ಪೃಷ್ಟಿಃ ಶ್ರುತಿರ್ಘ್ರಾತಿರ್ಮತಿರ್ವಿಜ್ಞಾತಿರೇವ ಚ |**
**ಶಕ್ತಯೋಽನ್ಯಾಶ್ಚ ಭಿದ್ಯನ್ತೇ ಚಿದ್ರೂಪತ್ವೇಽಪ್ಯುಪಾಧಿಭಿಃ || ೫೪ ||**

೫೪. ದೃಷ್ಟಿ, ಸ್ಪರ್ಶ, ಘ್ರಾಣ, ಮನನ, ವಿಜ್ಞಾನ – (ಇವೂ) ಇನ್ನೂ ಬೇರೆಯ ಶಕ್ತಿಗಳೂ (ತಾವು) ಚೈತನ್ಯರೂಪವೇ ಆಗಿದ್ದರೂ ಉಪಾಧಿಗಳಿಂದ ಬೇರೆಬೇರೆಯಾಗಿರುತ್ತವೆ.

**ಅಪಾಯೋದ್ಭೂತಿಹೀನಾಭಿರ್ನಿತ್ಯಂ ದೀಪ್ಯನ್ ರವಿರ್ಯಥಾ |**
**ಸರ್ವಜ್ಞಃ ಸರ್ವದೃಕ್ ಶುದ್ಧಃ ಸರ್ವಂ ಜಾನಾತಿ ಸರ್ವದಾ || ೫೫ ||**

೫೫. ನಾಶವಾಗಲಿ ಹುಟ್ಟಾಗಲಿ ಇಲ್ಲದ[2] (ಈ ಶಕ್ತಿಗಳಿಂದ) ಸರ್ವಜ್ಞನೂ ಸರ್ವದೃಗ್ರೂಪನೂ ಶುದ್ಧನೂ (ಆಗಿರುವ ಆತ್ಮನು) ಸೂರ್ಯನಂತೆ ಯಾವಾಗಲೂ ಬೆಳಗುತ್ತಿರುವದರಿಂದ ಯಾವಾಗಲೂ ಎಲ್ಲವನ್ನೂ ನೋಡುತ್ತಿರುತ್ತಾನೆ.

**ಅನ್ಯದೃಷ್ಟಿಃ ಶರೀರಸ್ಥಸ್ತಾವನ್ಮಾತ್ರೋ ಹ್ಯವಿದ್ಯಯಾ |**
**ಜಲೇನ್ದ್ವಾದ್ಯುಪಮಾಭಿಸ್ತು ತದ್ಧರ್ಮಾ ಚ ವಿಭಾವ್ಯತೇ || ೫೬ ||**

೫೬. ಆದರೆ ಅವಿದ್ಯೆಯಿಂದ ಮತ್ತೊಂದನ್ನು ಕಾಣುತ್ತಾ ಶರೀರದಲ್ಲಿದ್ದುಕೊಂಡು ಅಷ್ಟೇ ಪ್ರಮಾಣದವನಾಗಿಯೂ ಅದರ ಧರ್ಮಗಳುಳ್ಳವನಾಗಿಯೂ ಆಗಿರುವಂತೆ ತೋರುತ್ತಾನೆ. ಜಲಚಂದ್ರನೇ ಮುಂತಾದ ಉಪಮಾನಗಳಿಂದ (ಹೀಗೆಂದು ತಿಳಿದುಕೊಳ್ಳಬೇಕು).

**ದೃಷ್ಟ್ವಾ ಬಾಹ್ಯಂ ನಿಮೀಲ್ಯಾಥ ಸ್ಮೃತ್ವಾ ತತ್ಪ್ರವಿಹಾಯ ಚ |**
**ಅಥೋನ್ಮೀಲ್ಯಾತ್ಮನೋ ದೃಷ್ಟಿಂ ಬ್ರಹ್ಮ ಪ್ರಾಪ್ನೋತ್ಯನಧ್ವಗಃ || ೫೭ ||**

---

1. ಶಿಷ್ಯಗುಣಗಳಿಂದ ಕೂಡಿರುವ ಅಧಿಕಾರಿಗೆ ತತ್ತ್ವಜ್ಞಾನದಿಂದ ಗುರುವು ಹೇಳಿದ ಉಪದೇಶವು ಅವಶ್ಯವಾಗಿ ಅಜ್ಞಾನವನ್ನು ಕಳೆಯುವದು; ಅನಧಿಕಾರಿಗಳಿಗೆ ಅಥವಾ ಬರಿಯ ಪುಸ್ತಕಜ್ಞಾನವುಳ್ಳವರ ಉಪದೇಶದಿಂದ ಈ ಫಲವಾಗಲಾರದು. ಉಪ. ಗದ್ಯ ೨ರಿಂದ ೫ರವರೆಗಿನ ಖಂಡಗಳನ್ನು ನೋಡಿ.

2. ತನ್ನ ಸ್ವರೂಪವೇ ಆಗಿರುವ.

೫೭. ಹೊರಗನ್ನು ನೋಡಿ ಆಮೇಲೆ (ಕಣ್ಣು)ಮುಚ್ಚಿಕೊಂಡು[1] ಬಳಿಕ ನೆನಪಿಗೆ ತಂದುಕೊಂಡು[2] ಅದನ್ನು ಬಿಟ್ಟು[3] ಆಮೇಲೆ ಆತ್ಮನ ದೃಷ್ಟಿಯನ್ನು ತೆರೆದರೆ[4] ಯಾವ ದಾರಿಯನ್ನೂ ನಡೆಯದೆ ಬ್ರಹ್ಮವನ್ನು ಪಡೆಯುತ್ತಾನೆ[5].

**ಪ್ರಾಣಾದ್ಯೇವಂ ತ್ರಿಕಂ ಹಿತ್ವಾ ತೀರ್ಣೋಽಜ್ಞಾನಮಹೋದಧಿಮ್ ।**
**ಸ್ವಾತ್ಮಸ್ಥೋ ನಿರ್ಗುಣಃ ಶುದ್ಧೋ ಬುದ್ಧೋ ಮುಕ್ತಃ ಸ್ವತೋ ಹಿ ಸಃ॥**

೫೮. ಹೀಗೆ ಪ್ರಾಣನೇ ಮುಂತಾದ ಮೂರನ್ನೂ ಬಿಟ್ಟು[6] ಅಜ್ಞಾನ ಮಹಾಸಾಗರವನ್ನು ದಾಟಿದವನು ತನ್ನ ಆತ್ಮನಲ್ಲಿಯೇ ನಿಲ್ಲುವನು. ಆ (ಆತ್ಮನು) ಸ್ವತಃ ನಿರ್ಗುಣನು, ಶುದ್ಧನು, ಮುಕ್ತನು.

## ಬ್ರಹ್ಮಜ್ಞಾನಿಗೆ ಜನ್ಮವಿಲ್ಲ

**ಅಜೋಽಹಂ ಚಾಮರೋಽಮೃತ್ಯುರಜರೋಽಭಯ ಏವ ಚ ।**
**ಸರ್ವಜ್ಞಃ ಸರ್ವದೃಕ್ ಶುದ್ಧ ಇತಿ ಬುದ್ಧೋ ನ ಜಾಯತೇ ॥ ೫೯ ॥**

೫೯. ನಾನು ಜನ್ಮರಹಿತನು, ಮರಣರಹಿತನು, ಮೃತ್ಯುವಿಲ್ಲದವನು[7], ಮುಪ್ಪಿಲ್ಲದವನು, ಸರ್ವಜ್ಞನು, ಸರ್ವದೃಕ್ಕು, ಶುದ್ಧನು – ಎಂದು ತಿಳಿದುಕೊಂಡವನು ಹುಟ್ಟುವದಿಲ್ಲ[8].

**ಪೂರ್ವೋಕ್ತಂ ಯತ್ ತಮೋಬೀಜಂ ತನ್ನಾಸ್ತೀತಿ ವಿನಿಶ್ಚಯಃ ।**
**ತದಭಾವೇ ಕುತೋ ಜನ್ಮ ಬ್ರಹ್ಮೈಕತ್ವಂ ವಿಜಾನತಃ ॥ ೬೦ ॥**

೬೦. ಹಿಂದೆ ಹೇಳಿದ ತಮೋಬೀಜವೆಂಬುದಿದೆಯಲ್ಲ, ಅದು ಇಲ್ಲವೆಂದೇ (ಅವನ) ನಿಶ್ಚಯವಾಗಿರುತ್ತದೆ. ಅದಿಲ್ಲದಿದ್ದರೆ, ಬ್ರಹ್ಮವೊಂದೇ (ಸತ್ಯವೆಂದು) ತಿಳಿದುಕೊಂಡ ಅವನಿಗೆ ಜನ್ಮವೆಲ್ಲಿಂದ (ಬಂದೀತು)[9] ?

---

1. ಎಚ್ಚತ್ತ ಬಳಿಕ ನಿದ್ರೆಗೈದು.
2. ಕನಸನ್ನು ಕಂಡು
3. ಕನಸಿಲ್ಲದ ನಿದ್ರೆಯನ್ನು ಅನುಭವಿಸಿ.
4. ಅವಸ್ಥೆಗಳನ್ನೆಲ್ಲ ನೋಡುವ ಚೈತನ್ಯದಲ್ಲಿ ನಿಂತರೆ.
5. ತನ್ನ ಸ್ವರೂಪದಲ್ಲಿಯೇ ಬ್ರಹ್ಮವನ್ನು ಕಾಣುತ್ತಾನೆ. ಅವಸ್ಥಾತ್ರಯಕ್ಕೆ ಅತೀತವಾಗಿರುವ ಆತ್ಮನೇ ಬ್ರಹ್ಮವು ಎಂದರ್ಥ.
6. ಪ್ರಾಜ್ಞ, ತೈಜಸ, ವಿಶ್ವ – ಎಂಬ ಮೂರು ಅಭಿಮಾನವನ್ನೂ ಬಿಟ್ಟು.
7. ಪರಮಾತ್ಮನು ಅದ್ವಿತೀಯನಾದ್ದರಿಂದ ಮೃತ್ಯುವು ಅವನಿಗೆ ಇಲ್ಲ.
8. ಅವನಿಗೆ ಹುಟ್ಟುವದಕ್ಕೆ ಕಾರಣವಾದ ಧರ್ಮಾಧರ್ಮಗಳಿರುವದಿಲ್ಲ.
9. ಅಜ್ಞಾನವೇ ಕಾಮಕರ್ಮಗಳ ಮೂಲಕ ಜನ್ಮಕ್ಕೆ ಕಾರಣವು.

**ಕ್ಷೀರಾತ್ಸರ್ಪಿರ್ಯಥೋದ್ಧೃತ್ಯ ಕ್ಷಿಪ್ತಂ ತಸ್ಮಿನ್ನ ಪೂರ್ವವತ್ |**
**ಬುದ್ಧ್ಯಾದೇರ್ಜ್ಞಸ್ತಥಾಽಸತ್ತ್ವಾನ್ನ ದೇಹೀ ಪೂರ್ವವದ್ಭವೇತ್ ||೬೧||**

೬೧. ಹಾಲಿನಿಂದ ತೆಗೆದು ಅದರಲ್ಲಿ ಹಾಕಿದ ಬೆಣ್ಣೆಯು ಹೇಗೆ ಮೊದಲಿನಂತೆ ಅದರಲ್ಲಿರಲಾರದೋ ಅದರಂತೆ ಅಸತ್ಯವಾದ ಬುದ್ಧಿಯೇ ಮುಂತಾದವುಗಳಿಂದ (ತೆಗೆದುಹಾಕಿದಂತೆ ಆದ) ಆತ್ಮನು ಮೊದಲಿನಂತೆ ದೇಹಿಯಾಗಿರಲಾರನು[1].

## ಬ್ರಹ್ಮಾತ್ಮೈಕ್ಯಜ್ಞಾನಕ್ಕೆ ಉಪನಿಷತ್ಪ್ರಮಾಣ

**ಸತ್ಯಂ ಜ್ಞಾನಮನನ್ತಂ ಚ ರಸಾದೇಃ ಪಞ್ಚಕಾತ್ ಪರಮ್ |**
**ಸ್ಯಾಮದೃಶ್ಯಾದಿಶಾಸ್ತ್ರೋಕ್ತಮಹಂ ಬ್ರಹ್ಮೇತಿ ನಿರ್ಭಯಃ ॥ ೬೨ ॥**
**ಯಸ್ಮಾದ್ ಭೀತಾಃ ಪ್ರವರ್ತನ್ತೇ ವಾಙ್ಮನಃಪಾವಕಾದಯಃ |**
**ತದಾತ್ಮಾನನ್ದತತ್ತ್ವಜ್ಞೋ ನ ಬಿಭೇತಿ ಕುತಶ್ಚನ || ೬೩ ||**

೬೨-೬೩. ಸತ್ಯವೂ ಜ್ಞಾನವೂ ಅನಂತವೂ ಆಗಿ (ತೈ. ೨-೧) ಅನ್ನರಸಮಯವೇ ಮುಂತಾದ ಐದು ಕೋಶಗಳಿಗಿಂತಲೂ ಬೇರೆಯಾಗಿರುವ (ತೈ. ೨-೨ರಿಂದ ೫) ಅದೃಶ್ಯಾದಿಶಾಸ್ತ್ರದಿಂದ ಉಕ್ತವಾಗಿರುವ (ತೈ. ೨-೭) ನಿರ್ಭಯಬ್ರಹ್ಮವೇ ನಾನು. ವಾಕ್ಕು, ಮನಸ್ಸು, ಅಗ್ನಿ- ಮುಂತಾದವರು ಯಾವದಕ್ಕೆ ಅಂಜಿಕೊಂಡು (ತಮ್ಮ ಕೆಲಸದಲ್ಲಿ) ತೊಡಗುವರೋ (ತೈ. ೨-೮, ೨-೯, ಕೇ. ೧-೧), ಆ ಆತ್ಮಾನಂದತತ್ತ್ವವನ್ನು ಬಲ್ಲಾತನು ಏತಕ್ಕೂ ಅಂಜುವದಿಲ್ಲ (ತೈ. ೩-೯).

**ನಾಮಾದಿಭ್ಯಃ ಪರೇ ಭೂಮ್ನಿ ಸ್ವಾರಾಜ್ಯೇ ಚೇತ್ಸ್ಥಿತೋಽದ್ವಯೇ ।**
**ಪ್ರಣಮೇತ್ ಕಂ ತದಾತ್ಮಜ್ಞೋ ನ ಕಾರ್ಯಂ ಕರ್ಮಣಾ ತದಾ ॥೬೪॥**

೬೪. ನಾಮಾದಿಗಳಿಗಿಂತ ಆಚೆನದಾದ ಅದ್ವಿತೀಯವಾದ ಭೂಮವೆಂಬ (ಛಾಂ. ೭-೧ರಿಂದ ೨೩) ಸ್ವಾರಾಜ್ಯದಲ್ಲಿ (ಛಾಂ. ೭-೨೫) ಇದ್ದುಕೊಂಡಿರುವನಾದರೆ ಆತ್ಮಜ್ಞನು ಯಾರನ್ನು ತಾನೆ ನಮಸ್ಕರಿಸಿಯಾನು ? ಆಗ ಕರ್ಮದಿಂದ ಆಗಬೇಕಾದದ್ದು (ಏನೂ) ಇರುವದಿಲ್ಲ.

**ವಿರಾಡ್ವೈಶ್ವಾನರೋ ಬಾಹ್ಯಃ ಸ್ಮರನ್ನನ್ತಃ ಪ್ರಜಾಪತಿಃ |**
**ಪ್ರವಿಲೀನೇ ತು ಸರ್ವಸ್ಮಿನ್ ಪ್ರಾಜ್ಞೋಽವ್ಯಾಕೃತಮುಚ್ಯತೇ ||೬೫||**

---

1. ಶರೀರವಿರುವಂತೆ ಕಂಡರೂ ಅದು ಅಜ್ಞಾನದೃಷ್ಟಿಯಿಂದ ; ನಿಜವಾಗಿ ಅವನು ಅಶರೀರಿಯೇ.

**ವಾಚಾರಮ್ಭಣಮಾತ್ರತ್ವಾತ್ ಸುಷುಪ್ತಾದಿತ್ರಿಕಂ ತ್ವಸತ್ |**
**ಸತ್ಯೋ ಜ್ಞಶ್ಚಾಹಮಿತ್ಯೇವಂ ಸತ್ಯಸನ್ಧೋ ವಿಮುಚ್ಯತೇ || ೬೧ ||**

೬೦-೬೧. ಹೊರಗೆ (ಅರಿಯುವಾಗ) ವಿರಾಡ್ರೂಪನಾದ ವೈಶ್ವಾನರನು, ಒಳಗೆ ಸ್ಮರಿಸುವಾಗ ಪ್ರಜಾಪತಿ[1]; ಎಲ್ಲವೂ ಅಡಗಿದರೆ ಅವ್ಯಾಕೃತನಾದ ಪ್ರಾಜ್ಞನೆನಿಸುವನು. ಸುಷುಪ್ತಿಯೇ ಮುಂತಾದ ಮೂರೂ ಬರಿಯ ವಾಚಾರಂಭಣ[2] (ಛಾಂ. ೬-೪) ರೂಪವಾಗಿರುವದರಿಂದ ಅಸತ್ಯವಾಗಿರುತ್ತವೆ. ಸತ್ಯವಾಗಿರುವ ಚೈತನ್ಯ(ರೂಪನಾದ ಆತ್ಮನೇ) ನಾನು ಎಂದು ಸತ್ಯಸಂಧನಾದವನು ವಿಮುಕ್ತನಾಗುತ್ತಾನೆ.

**ಭಾರೂಪತ್ವಾದ್ಯಥಾ ಭಾನೋರ್ನಾಹೋರಾತ್ರೇ ತಥೈವ ಚ |**
**ಜ್ಞಾನಾಜ್ಞಾನೇ ನ ಮೇ ಸ್ಯಾತಾಂ ಚಿದ್ರೂಪತ್ವಾವಿಶೇಷತಃ || ೬೨ ||**

೬೨. ಪ್ರಕಾಶರೂಪನಾಗಿರುವದರಿಂದ ಹೇಗೆ ಸೂರ್ಯನಿಗೆ ಹಗಲು ರಾತ್ರಿಗಳು ಇರುವದಿಲ್ಲವೋ ಹಾಗೆಯೇ ಚಿದ್ರೂಪನಾಗಿರುವದು (ಯಾವಾಗಲೂ) ಸಮಾನವಾಗಿರುವದರಿಂದ ನನಗೆ ಜ್ಞಾನಾಜ್ಞಾನಗಳು ಆಗಲಾರವು[3].

**ಶಾಸ್ತ್ರಸ್ಯಾನತಿಶಙ್ಕ್ಯತ್ವಾದ್ಬ್ರಹ್ಮೈವ ಸ್ಯಾಮಹಂ ಸದಾ |**
**ಬ್ರಹ್ಮಣೋ ಮೇ ನ ಹೇಯಂ ಸ್ಯಾದ್ಗ್ರಾಹ್ಯಂ ವೇತಿ ಚ ಸಂಸ್ಮರೇತ್ ||**

೬೩. ಶಾಸ್ತ್ರವನ್ನು ಮೀರಿ ಶಂಕಿಸುವದಕ್ಕಿಲ್ಲವಾದ್ದರಿಂದ ನಾನು ಯಾವಾಗಲೂ ಬ್ರಹ್ಮವೇ ಆಗಿರುವೆನು. ಬ್ರಹ್ಮವಾದ ನನಗೆ ಬಿಡತಕ್ಕದ್ದಾಗಲಿ ತೆಗೆದುಕೊಳ್ಳತಕ್ಕದ್ದಾಗಲಿ ಇರುವದಿಲ್ಲ ಎಂದೂ ಸ್ಮರಿಸಿಕೊಳ್ಳಬೇಕು[4].

**ಅಹಮೇವ ಚ ಭೂತೇಷು ಸರ್ವೇಷ್ವೇಕೋ ನಭೋ ಯಥಾ |**
**ಮಯಿ ಸರ್ವಾಣಿ ಭೂತಾನಿ ಪಶ್ಯನ್ನೇವಂ ನ ಜಾಯತೇ || ೬೪ ||**

---

1. ಹಿರಣ್ಯಗರ್ಭನು.

2. ಬರಿಯ ಮಾತಿನಿಂದ ಆಡಿದ್ದು, ನಿಜವಾಗಿ ವಸ್ತುವಿಲ್ಲದ್ದು.

3. ಛಾಂ. ೩-೧೧-೩ನ್ನು ನೋಡಿ. ಅಲ್ಲಿ ಉಪಾಸನೆಯ ವಿಷಯವನ್ನು ಹೇಳಿದೆಯಾದರೂ ಜ್ಞಾನದ ವಿಷಯಕ್ಕೆ ಭಾಷ್ಯದಲ್ಲಿ ಹೇಳಿರುವದು ಇನ್ನೂ ಚೆನ್ನಾಗಿ ಹೊಂದುತ್ತದೆ.

4. 'ಅದೇ ನೀನು' ಎಂಬ ಶಾಸ್ತ್ರವು ಅಗ್ನಿಹೋತ್ರಾದಿಪ್ರಕಾಶಕಶಾಸ್ತ್ರದಂತೆಯೇ ಪ್ರಮಾಣವಾಗಿರುವದರಿಂದ ಅದರಿಂದುಂಟಾದ ಜ್ಞಾನವನ್ನು ಶಂಕಿಸುವದಕ್ಕಾಗುವದಿಲ್ಲ. ಆದ್ದರಿಂದ ನಮ್ಮ ಪ್ರತ್ಯಗಾತ್ಮನು ನಿತ್ಯವೂ ಬ್ರಹ್ಮವೇ ಎಂಬುದನ್ನು ಮನಸ್ಸಿಗೆ ತಂದುಕೊಳ್ಳಬೇಕು.

೧೯. ನಾನೊಬ್ಬನೇ ಎಲ್ಲಾ ಪ್ರಾಣಿಗಳಲ್ಲಿಯೂ ಆಕಾಶದಂತೆ ಇರುತ್ತೇನೆ, ನನ್ನಲ್ಲಿ ಎಲ್ಲಾ ಭೂತಗಳೂ ಇರುತ್ತವೆ ಹೀಗೆಂದು ಕಂಡುಕೊಂಡವನು (ಮತ್ತೆ) ಹುಟ್ಟುವದಿಲ್ಲ[1].

**ನ ಬಾಹ್ಯಂ ಮಧ್ಯತೋ ವಾನ್ತರ್ವಿದ್ಯತೇಽನ್ಯತ್ ಸ್ವತಃ ಕ್ವಚಿತ್ ।**
**ಅಬಾಹ್ಯಾನ್ತಃಶ್ರುತೇಃ ಕಿಂಚಿತ್ ತಸ್ಮಾಚ್ಛುದ್ಧಃ ಸ್ವಯಂಪ್ರಭಃ ॥೨೦॥**

೨೦. ತನ್ನ (ಆತ್ಮ)ನಿಗಿಂತ ಹೊರಗೆ, ನಡುವೆ, ಅಥವಾ ಒಳಗೆ ಯಾವದೂ ಒಂದಿಷ್ಟೂ ಎಲ್ಲಿಯೂ ಇರುವದಿಲ್ಲ. ಏಕೆಂದರೆ "ಹೊರಗಿಲ್ಲ, ಒಳಗಿಲ್ಲ"[2] (ಬೃ. ೩-೮-೮) ಎಂದು ಶ್ರುತಿಯಿದೆ. ಆದ್ದರಿಂದ (ಆತ್ಮನು) ಶುದ್ಧನು, ಸ್ವಯಂಪ್ರಕಾಶನು[3].

**ನೇತಿನೇತ್ಯಾದಿಶಾಸ್ತ್ರೇಭ್ಯಃ ಪ್ರಪಞ್ಚೋಪಶಮೋಽದ್ವಯಃ ।**
**ಅವಿಜ್ಞಾತಾದಿಶಾಸ್ತ್ರಾಚ್ಚ ನೈವ ಜ್ಞೇಯೋ ಹ್ಯತೋಽನ್ಯಥಾ ॥ ೨೧ ॥**

೨೧. "ಇದಲ್ಲ, ಇದಲ್ಲ" (ಬೃ. ೨-೩-೬) ಎಂದು ಮುಂತಾಗಿ ಶಾಸ್ತ್ರ (ವಚನ)ಗಳಿರುವದರಿಂದಲೂ "ಅರಿಯಲ್ಪಡದಿರುವವನು" (ಬೃ. ೩-೮-೧೧, ೩-೭-೨೩) ಎಂದು ಮುಂತಾಗಿ ಶಾಸ್ತ್ರವಿರುವದರಿಂದಲೂ "ಪ್ರಪಂಚೋಪಶಮನೂ ಅದ್ವಯನೂ" (ಮಾಂ. ೭) ಆಗಿರುವ ಆತ್ಮನು ಇನ್ನು ಬೇರೆ ರೀತಿಯಿಂದ[4] ತಿಳಿಯುವದಕ್ಕೆ ಶಕ್ಯನಲ್ಲ.

**ಸರ್ವಸ್ಯಾತ್ಮಾಹಮೇವೇತಿ ಬ್ರಹ್ಮ ಚೇದ್ವಿದಿತಂ ಪರಮ್ ।**
**ಸ ಆತ್ಮಾ ಸರ್ವಭೂತಾನಾಮಾತ್ಮಾ ಹ್ಯೇಷಾಮಿತಿ ಶ್ರುತೇಃ ॥ ೨೨ ॥**

೨೨. ಎಲ್ಲಕ್ಕೂ ನಾನೇ ಆತ್ಮನು ಎಂದು ಪರಬ್ರಹ್ಮವನ್ನು ಅರಿತುಕೊಂಡರೆ ಅವನು ಸರ್ವಭೂತಗಳಿಗೂ ಆತ್ಮನಾಗುವನು. "ಇವರಿಗೆ ಆತ್ಮನೇ (ಆಗುವ)ನಲ್ಲವೆ ?" (ಬೃ. ೧-೪-೧೦) ಎಂಬ ಶ್ರುತಿ ಇದಕ್ಕೆ ಪ್ರಮಾಣವು[5].

---

1. ಈ. ೭ರ ಅಭಿಪ್ರಾಯವಿದು.

2. ಶ್ರುತಿಯ ಅರ್ಥವಿದು ; ಆದ್ದರಿಂದ ಅವೇ ಅನುಕ್ರಮವಲ್ಲಿಲ್ಲ.

3. ಎರಡನೆಯ ವಸ್ತುವಿನಿಂದ ಅಶುದ್ಧಿಯು ಬರಬೇಕು, ಅದರಿಂದ ಇದು ಬೆಳಗುವದೆಂಬ ಶಂಕೆಯುಂಟಾಗಬೇಕು. ಅದ್ವಿತೀಯವಾಗಿರುವದರಿಂದಲೇ ಶುದ್ಧನು, ಸ್ವಯಂಪ್ರಕಾಶನು ಎಂದು ಏರ್ಪಡುತ್ತದೆ.

4. ಜ್ಞಾನಕ್ಕೆ ವಿಷಯವಾಗಿ ಮಾಡಿಕೊಂಡು.

5. ದೇವತೆಗಳೂ ಬ್ರಹ್ಮಜ್ಞಾನಿಯ ಸರ್ವಭಾವಕ್ಕೆ ಅಡ್ಡಿಯಾಗಲಾರರು ; ಏಕೆಂದರೆ ಅವರಿಗೂ ಇವನು ಆತ್ಮನಾಗಿರುವನು ಎಂದು ಶ್ರುತಿಯ ಅರ್ಥ. ಜ್ಞಾನವಾದ ಬಳಿಕವೂ ಯಾವದಾದರೊಂದು ಅಡ್ಡಿ ಬರಬಹುದೆಂಬ ಪ್ರಸಂಖ್ಯಾನವಾದಿಗಳೇ ಮುಂತಾದವರ ಶಂಕೆಯು ಶ್ರುತಿವಿರುದ್ಧವೆಂದು ತಿಳಿಸಿದಂತೆ ಆಯಿತು.

**ಜೀವಶ್ಚೇತ್ಪರಮಾತ್ಮಾನಂ ಸ್ವಾತ್ಮಾನಂ ದೇವಮಞ್ಜಸಾ |**
**ವೇದೋಪಾಸ್ಯಃ ಸ ದೇವಾನಾಂ ಪಶುತ್ವಾಚ್ಚ ನಿವರ್ತತೇ || ೭೩ ||**

೭೩. ಜೀವನು ಪರಮಾತ್ಮನನ್ನು ತನ್ನ ಆತ್ಮನಾದ ದೇವನೆಂದು ಸ್ಪಷ್ಟವಾಗಿ ಅರಿತುಕೊಂಡರೆ ಅವನು ದೇವತೆಗಳಿಗೂ ಉಪಾಸ್ಯನಾಗುವನು (ಬೃ. ೪-೪-೧೫, ತೈ. ೧-೫), ಪಶುತ್ವದಿಂದಲೂ ತಪ್ಪಿಸಿಕೊಳ್ಳುವನು[1].

**ಅಹಮೇವ ಸದಾತ್ಮಾ ಜ್ಞಃ[2] ಶೂನ್ಯಸ್ತ್ವನ್ಯೈರ್ಯಥಾಮ್ಬರಮ್ ।**
**ಇತ್ಯೇವಂ ಸತ್ಯಸನ್ಧತ್ವಾದಸದ್ಧಾತಾ ನ ಬಧ್ಯತೇ || ೭೪ ||**

೭೪. ನಾನೇ ಸದ್ರೂಪನಾದ ಆತ್ಮನು, ಚೈತನ್ಯಸ್ವರೂಪನು, ಆಕಾಶದಂತೆ ಮಿಕ್ಕ (ಭೂತಗಳಿಂದ) ರಹಿತನಾದವನು[3] -ಎಂದು ಅಸತ್ತಾದದ್ದನ್ನು ಬಿಟ್ಟವನು ಸತ್ಯಸಂಧನು[4], (ಅವನು) ಬದ್ಧನಾಗುವದಿಲ್ಲ.

**ಕೃಪಣಾಸ್ತೇಽನ್ಯಥೈವಾತೋ ವಿದುರ್ಬ್ರಹ್ಮ ಪರಂ ಹಿ ಯೇ ।**
**ಸ್ವರಾಡ್ಯೋಽನನ್ಯದೃಕ್ ಸ್ವಸ್ಥಸ್ತಸ್ಯ ದೇವಾ ಅಸನ್ ವಶೇ || ೭೫ ||**

೭೫. ಇದಕ್ಕಿಂತ ಬೇರೆಯಾಗಿಯೇ ಬ್ರಹ್ಮವನ್ನು ಅರಿಯುವರೋ ಅವರು ಕೃಪಣರು. (ಅದು) ತನಗಿಂತ ಬೇರೆಯಲ್ಲವೆಂದು ಕಂಡುಕೊಂಡು ತನ್ನ ರೂಪದಲ್ಲಿಯೇ ಯಾವನು ಇದ್ದುಕೊಂಡಿರುವನೋ ಅವನು ಸ್ವರಾಜನಾಗಿರುವನು. (ಛಾಂ. ೭-೨೫-೨), ಅವನಿಗೆ ದೇವತೆಗಳೂ ವಶದಲ್ಲಿರುತ್ತಾರೆ. (ತೈ. ಆ. ೩-೧೩).

---

1. ಭೂತಭವ್ಯಗಳೊಡೆಯನಾದ ಪರಮಾತ್ಮನೇ ನನ್ನ ಆತ್ಮನೆಂದು ತಿಳಿದುಕೊಂಡವನು ತನ್ನನ್ನು ಕಾಪಾಡಿಕೊಳ್ಳುವದಕ್ಕೆ ಹೋಗುವದಿಲ್ಲ, ಅಥವಾ ಮತ್ತೊಂದನ್ನು ನಿಂದಿಸುವದಿಲ್ಲ -ಎಂಬುದು ಬೃಹದಾರಣ್ಯಕವಾಕ್ಯದ ಅರ್ಥವು. ನಾನೇ ಬ್ರಹ್ಮವು ಎಂದು ತಿಳಿದುಕೊಂಡವನು ದೇವತೆಗಳಿಗೂ ಆತ್ಮನಾಗುವದರಿಂದ ಅವನು ಪಶುವಿನಂತೆ ಕರ್ಮವನ್ನು ಮಾಡುವದು ತಪ್ಪುವದು ಎಂಬರ್ಥವು ಬೃ. ೧-೪-೧೦ರಲ್ಲಿದೆ.

2. 'ಸದಾತ್ಮಜ್ಞಃ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

3. ಆಕಾಶವೇ ವಾಯ್ವಾದಿಗಳ ರೂಪವನ್ನು ತಾಳಿರುವದರಿಂದ ಅದ್ವಿತೀಯವಾಗಿರುತ್ತದೆ. ಆತ್ಮನು ಆಕಾಶಾದಿಭೂತಗಳಿಂದ ರಹಿತನಾಗಿರುವದೂ ಹಾಗೆಯೇ.

4. ಸತ್ಯಸಂಧನು ಕಾದ ಕೊಡಲಿಯನ್ನು ಮುಟ್ಟಿದರೂ ಅವನನ್ನು ಅದು ಸುಡದಿರುವಂತೆ ಸತ್ಯಸ್ವರೂಪನಾದ ಆತ್ಮನನ್ನು ಅರಿತುಕೊಂಡವನನ್ನು ಅಸದ್ರೂಪವಾದ ಸಂಸಾರವು ಬಂಧಿಸುವದಿಲ್ಲ -ಎಂದು ಛಾಂ. ೬-೧೬-೧ರಿಂದ ೩ರಲ್ಲಿ ತಿಳಿಸಿದೆ.

**ಹಿತ್ವಾ ಜಾತ್ಯಾದಿಸಂಬನ್ಧಾನ್ ವಾಚೋಽನ್ಯಾಃ ಸಹ ಕರ್ಮಭಿಃ ।**
**ಓಮಿತ್ಯೇವಂ ಸದಾತ್ಮಾನಂ ಸರ್ವಂ ಶುದ್ಧಂ ಪ್ರಪದ್ಯಥ ॥ ೭೬ ॥**
**ಸೇತುಂ ಸರ್ವವ್ಯವಸ್ಥಾನಾಮಹೋರಾತ್ರಾದಿವರ್ಜಿತಮ್ ।**
**ತಿರ್ಯಗೂರ್ಧ್ವಮಧಃ ಸರ್ವಂ ಸಕೃಜ್ಜ್ಯೋತಿರನಾಮಯಮ್ ॥೭೭॥**

೭೬-೭೭. ಸರ್ವವೂ ತಾನೇ ಆಗಿರುವ, ಶುದ್ಧನಾಗಿರುವ ಎಲ್ಲಾ ವ್ಯವಸ್ಥೆಗಳಿಗೂ ಸೇತುವಾಗಿರುವ (ಮುಂ. ೨-೨-೫) ಹಗಲು, ರಾತ್ರೆ –ಮುಂತಾದವುಗಳಿಲ್ಲದ (ಛಾಂ. ೮-೪-೧) ಅಡ್ಡಲಾಗಿಯೂ ಮೇಲೆಯೂ ಕೆಳಗೂ ತಾನೇ ಎಲ್ಲವೂ ಆಗಿರುವ ( ಮುಂ. ೨-೨-೧೧ ) ನಿತ್ಯಜ್ಯೋತಿಃಸ್ವರೂಪನಾಗಿರುವ ( ಮುಂ. ೨-೨-೧೧ ) ನಿರ್ದೋಷನಾದ ಆತ್ಮನನ್ನು ಜಾತಿಯೇ ಮುಂತಾದ ಸಂಬಂಧಗಳನ್ನೂ ಮಿಕ್ಕ ಮಾತುಗಳನ್ನೂ ಕರ್ಮಗಳೊಡನೆ ಬಿಟ್ಟು ಓಂ ಎಂದಿಂತು ಧ್ಯಾನಿಸಿರಿ (ಮುಂ. ೨-೨-೬).

**ಧರ್ಮಾಧರ್ಮವಿನಿರ್ಮುಕ್ತಂ ಭೂತಭವ್ಯಾತ್ ಕೃತಾಕೃತಾತ್ ।**
**ಸ್ವಮಾತ್ಮಾನಂ ಪರಂ ವಿದ್ಯಾದ್ವಿಮುಕ್ತಂ ಸರ್ವಬನ್ಧನೈಃ ॥ ೭೮ ॥**

೭೮. ಧರ್ಮಾಧರ್ಮಗಳಿಲ್ಲದ ಹಿಂದಿನ ಕಾಲ, ಮುಂದಿನ ಕಾಲ- (ಯಾವದೂ) ಇಲ್ಲದ, ಕಾರ್ಯಕರಣಗಳಿಲ್ಲದ (ಕ. ೧-೨-೧೪) ಯಾವ ಬಂಧನಗಳೂ ಇಲ್ಲದ ವಿಮುಕ್ತಪರಮಾತ್ಮನೇ ತನ್ನ ಆತ್ಮನೆಂದು ಅರಿತುಕೊಳ್ಳಬೇಕು.

**ಅಕುರ್ವನ್ ಸರ್ವಕೃಚ್ಛುದ್ಧಸ್ತಿಷ್ಠನ್ನತ್ಯೇತಿ ಧಾವತಃ ।**
**ಮಾಯಯಾ ಸರ್ವಶಕ್ತಿತ್ವಾದಜಃ ಸನ್ ಬಹುಧಾ ಮತಃ ॥ ೭೯ ॥**

೭೯. ಎಲ್ಲಾ ಶಕ್ತಿಗಳೂ ಉಳ್ಳವನಾದ್ದರಿಂದ (ಏನೂ) ಮಾಡದೆ ಮಾಯೆಯಿಂದ ಎಲ್ಲವನ್ನೂ ಮಾಡುತ್ತಾನೆ; ಶುದ್ಧನಾಗಿರುತ್ತಾನೆ; ನಿಂತುಕೊಂಡಿದ್ದರೂ ಓಡುವವರನ್ನು ಮೀರಿಹೋಗುತ್ತಾನೆ; (ಈ. ೪) ಹುಟ್ಟದೆ ಬಹು ಪ್ರಕಾರವಾಗಿ ತೋರುತ್ತಾನೆ (ತೈ. ಆ. ೩-೧೨).

## ಉಪಸಂಹಾರ

**ರಾಜವತ್ ಸಾಕ್ಷಿಮಾತ್ರತ್ವಾತ್ ಸಾನ್ನಿಧ್ಯಾದ್ ಭ್ರಾಮಕೋ ಯಥಾ ।**
**ಭ್ರಾಮಯನ್ ಜಗದಾತ್ಮಾಹಂ ನಿಷ್ಕ್ರಿಯೋಽಕಾರಕೋಽದ್ವಯಃ॥೮೦**

೮೦. ರಾಜನಂತೆ ಬರಿಯ ಸಾಕ್ಷಿಯಾಗಿರುವದರಿಂದ, ಸೂಜಿಗಲ್ಲಿನಂತೆ ಸಮೀಪದಲ್ಲಿರುವದರಿಂದಲೇ, ಜಗತ್ತನ್ನು ಚಲಿಸುವಂತೆ ಮಾಡುತ್ತಿರುವ ನಿಷ್ಕ್ರಿಯನಾದ ಕಾರಕಗಳಿಲ್ಲದ ಅದ್ವಯನಾದ ಆತ್ಮನು ನಾನು.

**ನಿರ್ಗುಣಂ ನಿಷ್ಕ್ರಿಯಂ ನಿತ್ಯಂ ನಿರ್ದ್ವಂದ್ವಂ ಯನ್ನಿರಾಮಯಮ್ ।**
**ಶುದ್ಧಂ ಬುದ್ಧಂ ತಥಾ ಮುಕ್ತಂ ತದ್ಬ್ರಹ್ಮಾಸ್ಮೀತಿ ಧಾರಯೇತ್ ॥೭೧**

೭೧. (ಯಾವ) ಗುಣವೂ ಇಲ್ಲದ, (ಯಾವ) ಕ್ರಿಯೆಯೂ ಇಲ್ಲದ, ನಿತ್ಯವಾದ ದ್ವಂದ್ವಗಳೇ ಇಲ್ಲದ, (ಯಾವ) ದೋಷವೂ ಇಲ್ಲದ ಶುದ್ಧವೂ ಬುದ್ಧವೂ ಮುಕ್ತವೂ ಆಗಿರುವದಲ್ಲ, ಆ ಬ್ರಹ್ಮನೇ ಆಗಿರುವೆನು ಎಂದು ತಿಳಿಯಬೇಕು.

**ಬನ್ಧಂ ಮೋಕ್ಷಂ ಚ ಸರ್ವಂ ಯತ ಇದಮುಭಯಂ ಹೇಯಮೇಕಂ ದ್ವಯಂ ಚ**
**ಜ್ಞೇಯಂ ಜ್ಞೇಯಾಭ್ಯತೀತಂ ಪರಮಧಿಗತಂ ತತ್ತ್ವಮೇಕಂ ವಿಶುದ್ಧಮ್ ।**
**ವಿಜ್ಞಾಯೈತದ್ ಯಥಾವಚ್ಛ್ರುತಿಮುನಿಗದಿತಂ ಶೋಕಮೋಹಾವತೀತಃ**
**ಸರ್ವಜ್ಞಃ ಸರ್ವಕೃತ್ ಸ್ಯಾದ್ ಭವಭಯರಹಿತೋ ಬ್ರಾಹ್ಮಣೋಽವಾಪ್ತಕೃತ್ಯಃ ॥೭೨॥**

೭೨. ಬಂಧ, ಮೋಕ್ಷ – ಈ ಎರಡೂ ಸಂಪೂರ್ಣವಾಗಿ ಏತರಿಂದಾಗುವವೋ ಆ ಒಂದು[1] ಬಿಡತಕ್ಕದ್ದು ಎಂದು ಅರಿತುಕೊಂಡು, ಜ್ಞೇಯವಾಗಿರುವ ದ್ವೈತವನ್ನೂ ಜ್ಞೇಯಾತೀತವಾದ ವಿಶುದ್ಧವಾದ ಪರಮತತ್ತ್ವವೆನಿಸಿರುವ ಒಂದನ್ನೂ ಶ್ರುತಿಮುನಿಗಳು ಹೇಳುವಂತೆ ಯಥಾವತ್ತಾಗಿ ಅರಿತುಕೊಂಡರೆ[2] ಶೋಕಮೋಹಗಳನ್ನು ದಾಟಿ, ಸರ್ವಜ್ಞನೂ ಸರ್ವಕರ್ತನೂ ಭವಭಯರಹಿತನೂ ಕೃತಕೃತ್ಯನೂ ಬ್ರಾಹ್ಮಣನೂ ಆಗುವನು[3].

**ನ ಸ್ವಯಂ ಸ್ವಸ್ಯ ನಾನ್ಯಶ್ಚ ನಾನ್ಯಸ್ಯಾತ್ಮಾ ಚ ಹೇಯಗಃ ।**
**ಉಪಾದೇಯೋ ನ ಚಾಪ್ಯೇವಂ ಇತಿ ಸಮ್ಯಙ್ಮತಿಃ ಸ್ಮೃತಾ ॥ ೭೩ ॥**

---

1. ಅಜ್ಞಾನವೇ ಬಂಧಮೋಕ್ಷಗಳಿಗೆ ಕಾರಣವು. ಆತ್ಮಾನಾತ್ಮಗಳ ಅಧ್ಯಾಸವೇ ಅಜ್ಞಾನವೆಂಬುದನ್ನು ಅರಿತುಕೊಳ್ಳಬೇಕು.

2. ದ್ವೈತವು ಬರಿಯ ಹುಸಿತೋರಿಕೆಯೆಂದೂ ಜ್ಞೇಯಾತೀತವಾಗಿರುವ ಪರಮಾತ್ಮತತ್ತ್ವವು ಸ್ವರೂಪವನ್ನು ಚೇರ್ಪಡಿಸದ ಪರಮಾರ್ಥವೆಂದೂ ಇದ್ದದ್ದು ಇದ್ದಂತೆ ಅರಿತುಕೊಂಡರೆ.

3. ಶೋಕಮೋಹಗಳಿಲ್ಲವೆಂದು ಈ. ೭ ; ಅಭಯವುಂಟಾಗುವವೆಂದು ತೈ.೨-೭ ; ಸರ್ವಜ್ಞನೂ ಕೃತಕೃತ್ಯನೂ ಆಗುವನೆಂದು ಗೀ. ೧೫-೨೦ ; ಬ್ರಾಹ್ಮಣನಾಗುವನೆಂದು ಬೃ. ೩-೫-೧.

೬೩. ಆತ್ಮನು ತಾನು ತನಗಾಗಲಿ[1], ಒಬ್ಬನು ಮತ್ತೊಬ್ಬನಿಗಾಗಲಿ[2] ಹೇಯನೂ ಅಲ್ಲ, ಹಾಗೆಯೇ ಉಪಾದೇಯನೂ ಅಲ್ಲ – ಇಂತೆಂಬುದೇ ಸಮ್ಯಙ್ಮತಿಯೆನಿಸುವದು[3].

**ಆತ್ಮಪ್ರತ್ಯಯಿಕಾ[4] ಹ್ಯೇಷಾ ಸರ್ವವೇದಾನ್ತಗೋಚರಾ ।**
**ಜ್ಞಾತ್ವೈತಾಂ ಹಿ ವಿಮುಚ್ಯನ್ತೇ ಸರ್ವಸಂಸಾರಬನ್ಧನೈಃ ॥ ೬೪ ॥**

೬೪. ಸರ್ವವೇದಾಂತಗಳಿಗೂ ವಿಷಯವಾದ (ಈ ಮತಿಯು) ತನ್ನ ಅನುಭವಕ್ಕೆ ಗೊತ್ತಾಗತಕ್ಕದ್ದು[5]. ಇದನ್ನು ಅರಿತುಕೊಂಡರೆ ಎಲ್ಲಾ ಸಂಸಾರ ಬಂಧಗಳಿಂದಲೂ ವಿಮುಕ್ತರಾಗುತ್ತಾರೆ[6].

**ರಹಸ್ಯಂ ಸರ್ವವೇದಾನಾಂ ದೇವಾನಾಂ ಚಾಪಿ ಯತ್ಪರಮ್ ।**
**ಪವಿತ್ರಂ ಪರಮಂ ಹ್ಯೇತತ್ ತದೇತತ್ ಸಂಪ್ರಕಾಶಿತಮ್ ॥ ೬೫ ॥**

೬೫. ಎಲ್ಲಾ ವೇದಗಳಿಗೂ ಮತ್ತು ಎಲ್ಲಾ ದೇವತೆಗಳಿಗೂ ಪರಮ ರಹಸ್ಯವು ಯಾವದೋ ಆ ಪರಮಪವಿತ್ರವಾದ ಇದನ್ನು ಚೆನ್ನಾಗಿ ಬೆಳಕಿಗೆ ಹಿಡಿಯಲಾಗಿದೆ[7].

---

1. ತಾನು ತನಗೆ ವಿಷಯನೆಂದರೆ ಆತ್ಮಾಶ್ರಯದೋಷವು; ತಾನೇ ಕರ್ತೃವಾಗಿಯೂ ಕರ್ಮವಾಗಿಯೂ ಇರುವದು ಅನುಭವವಿರುದ್ಧವು.

2. ಆತ್ಮನೊಬ್ಬನಿಗೆ ಮತ್ತೊಬ್ಬನು ವಿಷಯನೆಂದರೆ ಅವರಿಬ್ಬರಲ್ಲಿ ಏನಾದರೂ ಹೆಚ್ಚು ಕಡಿಮೆಯಿರಬೇಕಾಗುವದು, ಅದಿಲ್ಲ; ಅದ್ವಿತೀಯಚೈತನ್ಯದಲ್ಲಿ ಮತ್ತೊಬ್ಬನೆಂಬುದೇ ಇಲ್ಲ.

3. ಹೇಯೋಪಾದೇಯರಹಿತಚೈತನ್ಯವೇ ಆತ್ಮನೆಂಬುದು ತತ್ತ್ವಜ್ಞಾನವು.

4. 'ಆತ್ಮಪ್ರತ್ಯಾಯಿಕಾ' ಎಂಬ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

5. 'ಆತ್ಮಪ್ರತ್ಯಯಿಕ' ಎಂಬದರ ಅರ್ಥವಿದು. ಶಾಸ್ತ್ರಾಚಾರ್ಯರು ತಿಳಿಸಿಕೊಡುವ ಜ್ಞಾನವು 'ಆತ್ಮಪ್ರತ್ಯಯಿಕ'ವೆಂದು ಗೀತೆಯ ೧೩–೩೪ರ ಭಾಷ್ಯದಲ್ಲಿ ಹೇಳಿದೆ. 'ಆತ್ಮಪ್ರತ್ಯಾಯಿಕಾ' ಎಂಬ ಪಾಠಕ್ಕೆ ವ್ಯಾಖ್ಯಾನದಲ್ಲಿ 'ಆತ್ಮನನ್ನು ಬ್ರಹ್ಮವೆಂದು ತಿಳಿಸುವ' ಜ್ಞಾನವೆಂದು ಅರ್ಥವನ್ನು ಬರೆದಿದೆ; ಆದರೆ ಈ ಶಬ್ದವು ಭಾಷ್ಯದಲ್ಲಿ ಎಲ್ಲಿಯೂ ಪ್ರಯುಕ್ತವಾಗಿರುವಂತೆ ಕಾಣಲಿಲ್ಲ.

6. ಏಕೆಂದರೆ ಬಂಧಗಳೆಲ್ಲವೂ ಆವಿದ್ಯಕವಾಗಿವೆ.

7. ವೇದಗಳಿಗೆ ರಹಸ್ಯವೆಂದರೆ ಮನೋವಾಕ್ಕಾಯಗಳಿಗೆ ಅಗೋಚರವಾದ ತತ್ತ್ವವು; ದೇವತೆಗಳಿಗೂ ಇದು ತಿಳಿಯದ್ದರಿಂದ ದೇವತೆಗಳಿಗೂ ರಹಸ್ಯವು. ತೈ. ೨–೯; ಕ. ೧–೧–೨೧ ನೋಡಿ; ಜ್ಞಾನವು ಎಲ್ಲಕ್ಕಿಂತಲೂ ಪಾಪನಾಶಕವಾದ ಪವಿತ್ರವೆಂದು ಗೀ. ೪–೩೮ರಲ್ಲಿ ಹೇಳಿದೆ.

**ನೈತದ್ದೇಯಮಶಾನ್ತಾಯ ರಹಸ್ಯಂ ಜ್ಞಾನಮುತ್ತಮಮ್ ।**
**ವಿರಕ್ತಾಯ ಪ್ರದಾತವ್ಯಂ ಶಿಷ್ಯಾಯಾನುಗತಾಯ ಚ ॥ ೮೬ ॥**

೮೬. ಶಾಂತನಲ್ಲದವನಿಗೆ ಈ ರಹಸ್ಯವಾದ ಉತ್ತಮಜ್ಞಾನವನ್ನು ಕೊಡಬಾರದು. ವಿರಕ್ತನಾಗಿ (ತನ್ನನ್ನೇ) ಅನುಸರಿಸಿಕೊಂಡಿರುವ ಶಿಷ್ಯನಿಗೆ ಇದನ್ನು ಕೊಡಬೇಕು.

**ದದತಶ್ಚಾತ್ಮನೋ ಜ್ಞಾನಂ ನಿಷ್ಕ್ರಯೋಽನ್ಯೋ ನ ವಿದ್ಯತೇ ॥**
**ಜ್ಞಾನಮಿಚ್ಛಂಸ್ತರೇತ್ ತಸ್ಮಾದ್ಯುಕ್ತಃ ಶಿಷ್ಯಗುಣೈಃ ಸದಾ ॥ ೮೭ ॥**

೮೭. ಆತ್ಮಜ್ಞಾನವನ್ನು ಕೊಟ್ಟವನಿಗೆ ಇನ್ನು ಬೇರೆ ನಿಷ್ಕ್ರಯವಿರುವದಿಲ್ಲ, ಆದ್ದರಿಂದ ಜ್ಞಾನವನ್ನು ಬಯಸುವವನು ಯಾವಾಗಲೂ ಶಿಷ್ಯಗುಣಗಳಿಂದ ಕೂಡಿದವನಾಗಿ (ಸಂಸಾರವನ್ನು) ದಾಟಬೇಕು[1].

## ಮಂಗಲ

**ಜ್ಞಾನಂ ಜ್ಞೇಯಂ ತಥಾ ಜ್ಞಾತಾ ಯಸ್ಮಾದನ್ಯೋ ನ ವಿದ್ಯತೇ ।**
**ಸರ್ವಜ್ಞಃ ಸರ್ವಶಕ್ತಿರ್ಯಸ್ತಸ್ಮೈ ಜ್ಞಾನಾತ್ಮನೇ ನಮಃ ॥ ೮೮ ॥**

೮೮. ಜ್ಞಾನ, ಜ್ಞೇಯ, ಜ್ಞಾತೃ- ಇವು ಯಾವೂ ಯಾವ (ಆತ್ಮನಿಗಿಂತ) ಬೇರೆಯಾಗಿ ಇರುವದಿಲ್ಲವೋ ಅಂಥ ಸರ್ವಜ್ಞನೂ ಸರ್ವಶಕ್ತಿಯುಳ್ಳವನೂ ಆದ ಜ್ಞಾನಾತ್ಮನಿಗೆ[2] ನಮಸ್ಕಾರ !

**ವಿದ್ಯಯಾ ತಾರಿತಾಃ ಸ್ಮೋ ಯೈರ್ಜನ್ಮಮೃತ್ಯುಮಹೋದಧಿಮ್ ।**
**ಸರ್ವಜ್ಞೇಭ್ಯೋ ನಮಸ್ತೇಭ್ಯೋ ಗುರುಭ್ಯೋಽಜ್ಞಾನಸಙ್ಕುಲಮ್ ॥**

೮೯. ಜನ್ಮ, ಮರಣ- ಇವುಗಳ ಅಜ್ಞಾನಪೂರ್ಣಮಹಾಸಾಗರವನ್ನು ಯಾರು ವಿದ್ಯೆಯಿಂದ ದಾಟಿಸಿದರೋ ಅಂಥ ಸರ್ವಜ್ಞರಾದ ಗುರುಗಳಿಗೆ ನಮಸ್ಕಾರ !



1. ಗದ್ಯಬಂಧ ಖಂಡ ೨ನ್ನೂ ೩ನ್ನೂ ನೋಡಿ.

2. ಗದ್ಯಬಂಧ ಅವಗತಿಪ್ರಕರಣವನ್ನು ನೋಡಿ. ಆತ್ಮನು ಜ್ಞಾತೃಜ್ಞಾನಜ್ಞೇಯವೆಂಬ ವಿಭಾಗವಿಲ್ಲದವನೆಂದು ಅಲ್ಲಿ ಹೇಳಿದೆ.

# ಸಮ್ಯಙ್ಮತಿಪ್ರಕರಣದ ಸಾರ

೧–೩. ಸರ್ವಜ್ಞನೂ ಸರ್ವದೃಕ್ಸ್ವರೂಪನೂ ಆಗಿರುವ ಜ್ಞೇಯರೂಪನಾದ ಪರಮಾತ್ಮನನ್ನೂ ಆ ಜ್ಞೇಯವನ್ನು ತಿಳಿಸಿಕೊಟ್ಟಿರುವ ಆಚಾರ್ಯರನ್ನೂ ನಮಸ್ಕರಿಸಿ ಬ್ರಹ್ಮವಿದ್ಯೆಯ ನಿಶ್ಚಯವನ್ನು ತಿಳಿಸುತ್ತೇವೆ.

೪–೭. ಆತ್ಮಲಾಭವೇ ಎಲ್ಲಕ್ಕಿಂತಲೂ ಹೆಚ್ಚಿನ ಲಾಭವು; ಏಕೆಂದರೆ ಅದೊಂದೇ ನಿತ್ಯವಾದ ಲಾಭವು. ಈ ಲಾಭವು ಆತ್ಮಜ್ಞಾನವೊಂದರಿಂದಲೇ ಆಗುವದು; ಏಕೆಂದರೆ ನಮ್ಮ ಆತ್ಮನು ಅಜ್ಞಾನದಿಂದಲೇ ಅಲಬ್ಧನಾಗಿರುತ್ತಾನೆ.

೮–೧೬½. ಆತ್ಮಜ್ಞಾನವು ವೇದಪ್ರಮಾಣದಿಂದ ಉಂಟಾಗತಕ್ಕದ್ದು. ವೇದಕ್ಕೆ ಆತ್ಮಸ್ವರೂಪವನ್ನು ತಿಳಿಸುವದರಲ್ಲಿಯೇ ತಾತ್ಪರ್ಯವು; ಆತ್ಮನು ಒಬ್ಬನೇ, ಅದ್ವಿತೀಯನು – ಎಂಬುದು ವೇದವಾಕ್ಯದಿಂದಲೇ ತಿಳಿಯತಕ್ಕದ್ದು. ಅನಾತ್ಮವೆಲ್ಲವೂ ನಾಮರೂಪಕರ್ಮಾತ್ಮಕವಾಗಿರುತ್ತದೆ; ಇವು ಮೂರೂ ಒಂದನ್ನೊಂದು ಆಶ್ರಯಿಸಿಕೊಂಡೇ ಸಿದ್ಧವಾಗುತ್ತವೆ. ಅವು ಸ್ವಯಂಸಿದ್ಧವಲ್ಲ; ತನಗೆ ತಾನೇ ಇದ್ದುಕೊಂಡಿರುವ ಆತ್ಮನಲ್ಲಿ ಕಲ್ಪಿತವಾಗಿರುತ್ತವೆ – ಎಂಬುದು ವೇದದ ಉಪದೇಶವು. ಸರಿಯಾಗಿ ನೋಡಿದರೆ ವೇದವೆಂಬುದೂ ಆತ್ಮನಿಗಿಂತ ಬೇರೆಯಲ್ಲ. ಆತ್ಮಜ್ಞಾನವೊಂದೇ ವೇದಜನಿತಜ್ಞಾನವೆಂದೂ ಇಂದ್ರಿಯಾದಿಜನಿತಜ್ಞಾನವೆಂದೂ ಉಪಾಧಿಭೇದದಿಂದ ವಿಕಲ್ಪಿತವಾಗಿರುತ್ತದೆ. ಸ್ವಪ್ನಜ್ಞಾನದ ವಿಮರ್ಶೆಯಿಂದ ಇದು ಗೊತ್ತಾಗುತ್ತದೆಯೆಂದು ಶ್ರುತಿ ಹೇಳುತ್ತದೆ.

೧೬½–೨೦. ಜಾಗ್ರತ್ಸ್ವಪ್ನಗಳಲ್ಲಿ ಜ್ಞಾನವೆಂದೂ ಜ್ಞೇಯವಸ್ತುವೆಂದೂ ಕಾಣುವ ದ್ವೈತವು ಬರೆವಣಿಗೆ, ಓದು – ಇವುಗಳಂತೆ ಒಂದನ್ನೊಂದು ಅವಲಂಬಿಸಿಕೊಂಡು ಪ್ರತೀತವಾಗುತ್ತಿರುತ್ತವೆ. ಈ ದ್ವೈತಕಲ್ಪನೆಯಿಂದ ಕಾಮಕರ್ಮಗಳು ಉಂಟಾಗುತ್ತಿರುವವು. ಈ ಭೇದವೂ ಕಾಮಕರ್ಮಗಳೂ ಅವಿದ್ಯಾಕಲ್ಪಿತವಾದ್ದರಿಂದ ಅಸತ್ತೆಂಬುದು ಅವಿದ್ಯಾರಹಿತವಾದ ಸುಷುಪ್ತಿಯಲ್ಲಿ ಸ್ವಲ್ಪವೂ ಇಲ್ಲದಿರುವದರಿಂದ ಸ್ಪಷ್ಟವಾಗುತ್ತದೆ.

೨೧–೨೪. ಏಕತ್ವಬುದ್ಧಿಯೇ ವಿದ್ಯೆ; ಅನ್ಯತ್ವಬುದ್ಧಿಯೇ ಅವಿದ್ಯೆ. ವಿದ್ಯೆಯು ಶುದ್ಧವಾದ ಅಂತಃಕರಣದಲ್ಲಿ ಉಂಟಾಗುತ್ತದೆ. ಆದ್ದರಿಂದ ಅಂತಃಕರಣಶುದ್ಧಿಗಾಗಿ ಕಾಯಿಕವಾಚನಿಕಮಾನಸಿಕತಪಸ್ಸನ್ನು ಮಾಡಬೇಕು.

೨೫–೩೨. ದೃಷ್ಟವೆಂಬ ಎಚ್ಚರ, ಸ್ಮೃತವೆಂಬ ಕನಸು, ಅವುಗಳ ಅಭಾವವೆಂಬ ತನಿನಿದ್ರೆ – ಈ ಮೂರರಲ್ಲಿ ತನಿನಿದ್ರೆಯು ಮಿಕ್ಕೆರಡಕ್ಕೆ ಬೀಜವು. ಆತ್ಮಜ್ಞಾನದಿಂದ ಈ ಬೀಜವನ್ನು ಸುಟ್ಟುಹಾಕಿದರೆ ಮತ್ತೆ ದ್ವೈತವು ಹುಟ್ಟುವದಿಲ್ಲ. ಸುಷುಪ್ತಿಯೆಂಬ ಒಂದು ಬೀಜವೇ ಮೂರವಸ್ಥೆಗಳಾಗಿ ತೋರುತ್ತದೆ; ಅದ್ವಿತೀಯಾತ್ಮನೇ ಈ ಮೂರವಸ್ಥೆಗಳಿಂದ ಮೂರು ಬಗೆಯಾಗಿ ತೋರುತ್ತಿರುತ್ತಾನೆ. ಅವಸ್ಥಾತ್ರಯವು ಮಾಯಿಕವೆಂಬುದನ್ನು ಅರಿತುಕೊಂಡರೆ ಆತ್ಮನಿಗೆ ಪ್ರಾಜ್ಞ, ತೈಜಸ, ವಿಶ್ವ – ಎಂಬ ಮೂರು ರೂಪಗಳೂ ಮಾಯಿಕವೆಂಬುದು ತಿಳಿಯಬರುತ್ತದೆ.

೩೩–೪೩. ಆತ್ಮನು ಶಬ್ದಾದಿಗಳಿಲ್ಲದವನಾದ್ದರಿಂದ ಇಂದ್ರಿಯಾದಿಗಳಿಂದಲಾಗಲಿ ಸುಖಾದಿರಹಿತನಾದ್ದರಿಂದ ಅಂತಃಕರಣದಿಂದಲಾಗಲಿ ವಿಷಯೀಕರಿಸುವದಕ್ಕೆ ಬರುವದಿಲ್ಲ. ಆದರೂ ಚಂದ್ರದರ್ಶನದಿಂದ ರಾಹುದರ್ಶನವೂ ಆಗುವಂತೆ ಅಂತಃಕರಣದಲ್ಲಿಯೇ ಆತ್ಮನೂ ಅರಿಯಬರುತ್ತಾನೆ. ಏಕೆಂದರೆ ಅಂತಃಕರಣದಲ್ಲಿ ಕಾಣುವ ಜ್ಞಾನವು ನಿಜವಾಗಿ ಆತ್ಮನದೇ. ಆತ್ಮನು ಇಂದ್ರಿಯಗಳ ಮೂಲಕ ವಿಷಯಗಳನ್ನು ಬೆಳಗುವದಲ್ಲದೆ ದೃಷ್ಟ್ಯಾದಿಗಳನ್ನು ನಿತ್ಯವಾದ ತನ್ನ ಚೈತನ್ಯದಿಂದ ಬೆಳಗುತ್ತಿರುತ್ತಾನೆ. ಸುಷುಪ್ತಿಯಲ್ಲಿಕೂಡ ಅವನ ಚೈತನ್ಯಕ್ಕೆ ಲೋಪವಿರುವದಿಲ್ಲ. ಇಂದ್ರಿಯಗಳ ಅಥವಾ ಅಂತಃಕರಣದ ಯಾವ ಕ್ರಿಯೆಯೂ ಆತ್ಮ ಚೈತನ್ಯಕ್ಕೆ ಸೇರಿದ್ದಲ್ಲ. ಇಂದ್ರಿಯಗಳಿಂದ ಅರಿಯುವ ವಸ್ತುಗಳಿಗೆ ದೇಶಕಾಲಾದಿವ್ಯವಧಾನವಿರುವದರಿಂದ ಅವು ಪರೋಕ್ಷವಾಗಿರುತ್ತವೆ ; ಆತ್ಮನು ನಮ್ಮ ಸ್ವರೂಪವೇ ಆಗಿರುವದರಿಂದ ಪ್ರತ್ಯಕ್ಷನಾಗಿರುತ್ತಾನೆ. ಮಿಕ್ಕ ವಸ್ತುಗಳಿಗೆ ಜ್ಞಾನದ ಬೆಳಕು ಬೇಕು ; ಆತ್ಮನು ಜ್ಞಾನಸ್ವರೂಪವೇ ಆಗಿರುವದರಿಂದ ಅವನನ್ನು ತಿಳಿದುಕೊಳ್ಳುವದಕ್ಕೆ ಮತ್ತೇತರ ಸಹಾಯವೂ ಬೇಡ. ಹೀಗೆ ಸರ್ವಗತನಾಗಿರುವ ಸರ್ವವಿಕ್ರಿಯರಹಿತನಾದ ಆತ್ಮನು ತಾನೆಂದು ಅರಿತುಕೊಂಡವನಿಗೆ ಏತರ ಅಂಜಿಕೆಯೂ ಇರುವದಿಲ್ಲ.

೪೪–೫೦. ಈ ಜ್ಞಾನವುಂಟಾಗುವ ಪೂರ್ವದಲ್ಲಿ ವರ್ಣಾಶ್ರಮಾದ್ಯಭಿಮಾನವಿರುವವರಿಗಾಗಿ ಕರ್ಮವನ್ನು ಶಾಸ್ತ್ರದಲ್ಲಿ ವಿಧಿಸಿರುತ್ತದೆ. ಆದರೆ ವರ್ಣಾಶ್ರಮಾದಿಗಳು ಶರೀರಕ್ಕೆ ಸೇರಿದವೇ ಹೊರತು ಆತ್ಮನಿಗೆ ಸೇರಿದವಲ್ಲ. ಶರೀರಾಭಿಮಾನವು ಅವಿದ್ಯೆ, ಇದನ್ನು ಕಳೆಯುವ ತಿಳಿವಳಿಕೆಯು ವಿದ್ಯೆ. ಸಂನ್ಯಾಸಿಗೆ ಹೇಗೆ ಅಶೌಚಾದಿಗಳು ಇರುವದಿಲ್ಲವೋ ಹಾಗೆ ಜ್ಞಾನಿಗೆ ಜಾತ್ಯಾದಿನಿಮಿತ್ತವಾದ ಕರ್ಮಗಳಿರುವದಿಲ್ಲ. ಅಜ್ಞಾನಿಗೆ ಕಾಮದಿಂದ ಕರ್ಮಗಳುಂಟಾಗುತ್ತವೆ ; ಜ್ಞಾನಿಗೆ ಕಾಮವಿಲ್ಲದ್ದರಿಂದ ಕರ್ಮವೂ ಇರುವದಿಲ್ಲ. ಕರ್ಮದ ಫಲವು ಉತ್ಪಾದ್ಯ, ಆಪ್ಯ, ವಿಕಾರ್ಯ, ಸಂಸ್ಕಾರ್ಯ - ಈ ನಾಲ್ಕರಲ್ಲಿ ಒಂದಾಗಿರುತ್ತದೆ. ಆದರೆ ಮೋಕ್ಷವು ಈ ನಾಲ್ಕರಲ್ಲಿ ಒಂದೂ ಅಲ್ಲದ್ದರಿಂದ ಮೋಕ್ಷಕ್ಕಾಗಿ ಕರ್ಮವು ಬೇಕಿಲ್ಲ.

೫೧–೫೩. ಅನಾತ್ಮಪ್ರೀತಿಯಿಂದ ತಾಪವುಂಟಾಗುತ್ತದೆ, ಅನಾತ್ಮವು ಅನಿತ್ಯವಾಗಿರುತ್ತದೆ, ಅನಾತ್ಮಪ್ರೀತಿಯೂ ಆತ್ಮಾರ್ಥವಾಗಿರುತ್ತದೆ. ಆದ್ದರಿಂದ ಹೊರಗಿನ ವಿಷಯದ ಪ್ರೀತಿಯನ್ನು ಆತ್ಮನಲ್ಲಿಯೇ ಇಟ್ಟು ಆತ್ಮಜ್ಞಾನಕ್ಕಾಗಿ ನಿಷ್ಕ್ರಿಯನೂ ಮುಕ್ತನೂ ಆಗಿರುವ ಬ್ರಹ್ಮನಿಷ್ಠನಾದ ಗುರುವನ್ನು ಆಶ್ರಯಿಸಬೇಕು. ಆ ಗುರುವು ಶಿಷ್ಯನನ್ನು ಸಂಸಾರದಿಂದ ದಾಟಿಸುವನು.

೫೪–೭೯. ಆತ್ಮನು ಚೈತನ್ಯಸ್ವರೂಪನೇ ಆಗಿದ್ದರೂ ಉಪಾಧಿಯಿಂದ ಆ ಚೈತನ್ಯವು ದೃಷ್ಟ್ಯಾದಿರೂಪಗಳಿಂದ ಬೇರೆಬೇರೆಯಾಗಿ ಕಾಣುತ್ತದೆ. ಈ ನಿತ್ಯಚೈತನ್ಯದಿಂದ ಯಾವಾಗಲೂ ಎಲ್ಲವನ್ನೂ ಆತ್ಮನು ಅರಿಯುತ್ತಿರುತ್ತಾನೆ. ಅನ್ಯದೃಷ್ಟಿಯಿಂದ ಶರೀರಾಭಿಮಾನವುಳ್ಳವನಾಗಿ ತಾನು ಪರಿಚ್ಛಿನ್ನನೆಂಬ ತಪ್ಪುತಿಳಿವಳಿಕೆಯಿಂದ ಆಯಾ ಶರೀರದ ಧರ್ಮವುಳ್ಳವನಾಗಿ ಕಾಣುತ್ತಿರುತ್ತಾನೆ. ಹಿಂದೆ ಹೇಳಿರುವ ಅವಸ್ಥಾತ್ರಯವಿಮರ್ಶೆಯಿಂದ ತನ್ನ ನಿಜವಾದ ಸ್ವರೂಪದ ಅರಿವಾಗುತ್ತದೆ. ಆತ್ಮನು ಪರಮಾರ್ಥಸತ್ಯಸ್ವರೂಪನು, ಚೈತನ್ಯಸ್ವರೂಪನು, ಪರಿಚ್ಛೇದರಹಿತನು, ಕರ್ತೃತ್ವಾದಿಗಳಿಲ್ಲದವನು, ಜ್ಞಾನಾಜ್ಞಾನಗಳೆಂಬ ವಿಶೇಷಗಳೂ ಇಲ್ಲದವನು, ಹೇಯೋಪಾದೇಯರಹಿತನು, ಹೊರಗು ಒಳಗು ಎಂಬ ಭೇದವಿಲ್ಲದವನು, ನಿರ್ವಿ

ಶೇಷನು, ಅದ್ವಿತೀಯನು – ಎಂದೂ ಇದನ್ನು ಅರಿತುಕೊಂಡವರು ಸರ್ವಸ್ವತಂತ್ರರು, ಉಳಿದವರು ಕೃಪಣರು ; ಆದ್ದರಿಂದ ಆತ್ಮಚೈತನ್ಯದ ಚಿಂತೆಯಲ್ಲಿಯೇ ಕಾಲವನ್ನು ಕಳೆಯ ಬೇಕು ; ಆತ್ಮನು ಧರ್ಮಾಧರ್ಮ, ಕಾರ್ಯಕರಣ, ಕಾಲತ್ರಯ – ಇವುಗಳ ಸೋಂಕಿಲ್ಲ ದವನೆಂದು ತಿಳಿದುಕೊಂಡರೆ ಅಮೃತತ್ವವು ದೊರಕುವದು ಎಂದು ಉಪನಿಷತ್ತುಗಳು ಸಾರು ತ್ತಿರುವವು.

೮೦_೮೫. ಆತ್ಮನು ಕೂಟಸ್ಥನು, ನಿತ್ಯಚೈತನ್ಯಸ್ವರೂಪನು, ನಿಷ್ಕ್ರಿಯನು ; ಅವನ ಸನ್ನಿಧಿಯಲ್ಲಿ ಜಗತ್ತು ಬಗೆಬಗೆಯ ವಿಕಾರಗಳನ್ನು ಪಡೆಯುತ್ತಿರುವದು. ಬಂಧ ಮೋಕ್ಷಗಳು ಅಜ್ಞಾನಕಾರ್ಯವೆಂದು ತಿಳಿದು ಸರ್ವಜ್ಞೇಯಾತೀತವಾದ ಪರಮಾರ್ಥವನ್ನು ಅರಿತುಕೊಂಡವನು ಶೋಕಮೋಹಾದಿಗಳನ್ನು ದಾಟುವನು. ನಾನು ಅದ್ವಿತೀಯನು, ನನ ಗಾಗಲಿ ಮತ್ತೊಬ್ಬನಿಗಾಗಿ ವಿಷಯವಲ್ಲದ ನಿತ್ಯಚೈತನ್ಯಸ್ವರೂಪನು – ಎಂಬ ಅರಿವೇ ಸಮ್ಯ ಗ್ಜ್ಞಾನವು. ಈ ಜ್ಞಾನವನ್ನೇ ಎಲ್ಲಾ ಉಪನಿಷತ್ತುಗಳೂ ತಿಳಿಸುತ್ತವೆ. ಈ ಸರ್ವವೇದಾಂತ ರಹಸ್ಯವನ್ನು ಸದ್ಗುರುವಿನಿಂದ ಯೋಗ್ಯನಾದ ಶಿಷ್ಯನು ಸಂಪಾದಿಸಿಕೊಳ್ಳಬಹುದು. ದೇವತಾಗುರುಭಕ್ತಿಯೇ ಈ ಜ್ಞಾನಕ್ಕೆ ಮುಖ್ಯಸಾಧನವು.

---:0:---

# ೧೮. ತತ್ತ್ವಮಸಿ[1]

## ಮಂಗಲ

**ಯೇನಾತ್ಮನಾ ವಿಲೀಯನ್ತ ಉದ್ಭವನ್ತಿ ಚ ವೃತ್ತಯಃ ।**
**ನಿತ್ಯಾವಗತಯೇ ತಸ್ಮೈ ನಮೋ ಧೀಪ್ರತ್ಯಯಾತ್ಮನೇ ॥ ೧ ॥**

೧. (ಅಂತಃಕರಣದ) ವೃತ್ತಿಗಳು ಯಾವ ಆತ್ಮನ ರೂಪದಿಂದಲೇ ಅಡಗಿ ಹುಟ್ಟುತ್ತಿರುವವೋ ಅಂತಃಕರಣಪ್ರತ್ಯಯಗಳಿಗೆ ಆತ್ಮನಾದ ಆ ನಿತ್ಯ ಚೈತನ್ಯಸ್ವರೂಪನಿಗೆ[2] ನಮಸ್ಕಾರ !

**ಪ್ರಮಥ್ಯ ವಜ್ರೋಪಮಯುಕ್ತಿಸಂಭೃತೈಃ**
**ಶ್ರುತೇರರಾತೀನ್ ಶತಶೋ ವಚೋಽಸಿಭಿಃ ।**
**ರರಕ್ಷ ವೇದಾರ್ಥನಿಧಿಂ ವಿಶಾಲಧೀ**
**ರ್ನಮೋ ಯತೀನ್ದ್ರಾಯ ಗುರೋರ್ಗರೀಯಸೇ ॥ ೨ ॥**

೨. ವಜ್ರದಂತಿರುವ (ಪ್ರಬಲ)ಯುಕ್ತಿಗಳಿಂದ ರಕ್ಷಿತವಾಗಿರುವ ನೂರಾರು ವಾಗ್ರೂಪವಾದ ಕತ್ತಿಗಳಿಂದ ವೇದಶತ್ರುಗಳನ್ನು ನಾಶಗೊಳಿಸಿ ವೇದಾರ್ಥವೆಂಬ ನಿಧಿಯನ್ನು ರಕ್ಷಿಸಿದ ವಿಶಾಲಬುದ್ಧಿಯ ಯತಿಶ್ರೇಷ್ಠರಾದ ಗುರುಗಳ ಗುರುಗಳಿಗೆ[3] ನಮಸ್ಕಾರ !

---

1. 'ತತ್ತ್ವಮತಿ' ಎಂಬ ವ್ಯೈ॥ ಪಾಠವು ಅಚ್ಚಿನ ತಪ್ಪೆಂದು ಕಾಣುತ್ತದೆ.

2. ಅದ್ವಿತೀಯನಾದ ಆತ್ಮನಿಗಿಂತ ವ್ಯತಿರಿಕ್ತವಾಗಿ ಅಂತಃಕರಣದ ವೃತ್ತಿಗಳಾಗಲಿ ವಿಷಯಗಳಾಗಲಿ ಇರುವದಿಲ್ಲ; ಹಾಗೆ ಇರುವವೆಂಬ ಅಜ್ಞಾನವನ್ನು ಕಳೆಯುವ ಆತ್ಮಜ್ಞಾನವೇ ನಿಜವಾದ ವೇದಾಂತಜ್ಞಾನವು, ವಿಧೇಯವಾದ ಜ್ಞಾನವಲ್ಲ - ಎಂಬ ಸೂಚನೆ ಇಲ್ಲಿದೆ.

3. ಗೌಡಪಾದರು ಅಸಮಾನವಾದ ಯುಕ್ತಿಗಳಿಂದ ಇಲ್ಲಿ ಹೇಳುವ ವೇದಾರ್ಥವನ್ನು ಸ್ಥಾಪಿಸಿದ್ದರು. ಅದ್ವಿತೀಯನಾದ ಆತ್ಮನನ್ನು ಅರಿತುಕೊಂಡಮಾತ್ರದಿಂದ ಪರಮಪುರುಷಾರ್ಥವು ಪ್ರಾಪ್ತವಾಗುವದೆಂಬುದನ್ನು ಅವರು ತಮ್ಮ ಪ್ರಕರಣಚತುಷ್ಟಯರೂಪವಾದ ಮಾಂಡೂಕ್ಯಕಾರಿಕೆಯಲ್ಲಿ ಸ್ಥಾಪಿಸಿರುವ ವೇದಾರ್ಥವೇ ಈ ಪ್ರಕರಣದಲ್ಲಿ ಉಕ್ತವಾಗಿದೆ ಎಂಬ ಸೂಚನೆ ಇಲ್ಲಿರುತ್ತದೆ.

## 'ತತ್ತ್ವಮಸಿ' ಎಂಬ ಶ್ರುತಿಯ ತಾತ್ಪರ್ಯ

**ನಿತ್ಯಮುಕ್ತಃ ಸದೇವಾಸ್ಮೀತ್ಯೇವಂ ಚೇನ್ನ ಭವೇನ್ಮತಿಃ ।**
**ಕಿಮರ್ಥಂ ಶ್ರಾವಯತ್ಯೇವಂ ಮಾತೃವಚ್ಛ್ರುತಿರಾದೃತಾ[1] ॥ ೩ ॥**

೩. 'ನಿತ್ಯಮುಕ್ತನಾಗಿ ಸದ್ರೂಪ(ಬ್ರಹ್ಮವೇ) ಆಗಿರುವೆನು' ಎಂದಿಂತಿರುವದು (ಸರಿಯಾದ) ಜ್ಞಾನವಾಗಲಾರದಾದರೆ ತಾಯಿಯಂತೆ ಶ್ರುತಿಯು ಆದರದಿಂದ ಹೀಗೇಕೆ ಹೇಳುತ್ತಿದೆ[2] ?

**ಸಿದ್ಧಾದೇವಾಹಮಿತ್ಯಸ್ಮಾದ್ ಯುಷ್ಮದ್ಧರ್ಮೋ ನಿಷಿಧ್ಯತೇ ।**
**ರಜ್ಜ್ವಾಮಿವಾಹಿಧೀರ್ಯುಕ್ತ್ಯಾ ತತ್ತ್ವಮಿತ್ಯಾದಿಶಾಸನೈಃ ॥ ೪ ॥**

೪. ಹಗ್ಗದಲ್ಲಿ ಹಾವಿನ ಬುದ್ಧಿಯನ್ನು ಯುಕ್ತಿಯಿಂದ ಕಳೆದುಹಾಕುವಂತೆ ಸಿದ್ಧನೇ ಆಗಿರುವ ನಾನೆಂಬುದರಿಂದ ವಿಷಯಧರ್ಮವನ್ನು 'ತತ್ತ್ವಮ್' (ಛಾಂ. ೬-೮-೭) ಮುಂತಾದ ಶಾಸ್ತ್ರಗಳು ಕಳೆಯುತ್ತವೆ[3].

**ಶಾಸ್ತ್ರಪ್ರಾಮಾಣ್ಯತೋ ಜ್ಞೇಯಾ ಧರ್ಮಾದೇರಸ್ತಿತಾ ಯಥಾ ।**
**ವಿಷಾಪೋಹೋ ಯಥಾ ಧ್ಯಾನಾನ್ನಿವೃತ್ತಿಃ ಸ್ಯಾತ್ ಪಾಪ್ಮನಸ್ತಥಾ ॥೫**

೫. ಧರ್ಮಾದಿಗಳು ಇವೆ ಎಂಬುದು ಶಾಸ್ತ್ರಪ್ರಾಮಾಣ್ಯದಿಂದಲೇ ಹೇಗೆ ತಿಳಿಯುವವೋ, (ಗರುಡ)ಧ್ಯಾನದಿಂದ ವಿಷವು ಹೋಗುವದೆಂಬುದು (ಶಾಸ್ತ್ರಪ್ರಾಮಾಣ್ಯದಿಂದಲೇ ಹೇಗೆ ತಿಳಿಯಬರುವದೋ. (ಆತ್ಮನಲ್ಲಿ) ಪಾಪವನ್ನು ಅಲ್ಲಗಳೆಯುವ (ಜ್ಞಾನವೂ) ಹಾಗೆಯೇ (ಶಾಸ್ತ್ರದಿಂದ ಆಗುತ್ತದೆ)[4].

---

1. 'ಶ್ರುತಿರಾದರಾತ್' ೩॥

2. ಶ್ರುತಿಯು 'ತತ್ತ್ವಮಸಿ' (ಅದೇ ನೀನಾಗಿದ್ದೀಯೆ) ಎಂದು ಮತ್ತೆಮತ್ತೆ ಹೇಳುತ್ತಿರುವದರಿಂದ ವಾಕ್ಯಜ್ಞಾನವಾದ ಬಳಿಕ ಸಾಧನವಿಶೇಷದಿಂದ ಬ್ರಹ್ಮವಾಗಬೇಕೆಂಬುದು ಶ್ರುತ್ಯಭಿಪ್ರಾಯವಲ್ಲವೆಂದು ನಿಶ್ಚಯವಾಗುತ್ತದೆ.

3. 'ತತ್ತ್ವಮಸಿ' ಎಂಬಲ್ಲಿ ಆತ್ಮನಲ್ಲಿ ಹೊಸದೇನನ್ನೂ ವಾಕ್ಯವು ಉಂಟುಮಾಡುವದಿಲ್ಲ ; ಅನಾತ್ಮಧರ್ಮದ ಅಧ್ಯಾಸವನ್ನು ಮಾತ್ರ ತೆಗೆದು ಆತ್ಮನಲ್ಲಿ ಸಂಸಾರಿತ್ವವು ಇಲ್ಲ ಎಂದು ತಿಳಿಸುತ್ತದೆ.

4. ನಾನೇ ಬ್ರಹ್ಮವು ಎಂಬ ಜ್ಞಾನವು ಯಾರಿಗೂ ಆಗುವದೇ ಇಲ್ಲ ; ಏಕೆಂದರೆ ಆ ಜ್ಞಾನಕ್ಕೆ ಸಾಧನವೇ ಇಲ್ಲ - ಎಂಬ ಆಕ್ಷೇಪಕ್ಕೆ ಸಮಾಧಾನವಿದು. ಗೀ. ಭಾ. ೨-೨೧ನ್ನು ನೋಡಿ. ಇಲ್ಲಿ ಪಾಪವೆಂದರೆ ಧರ್ಮಾಧರ್ಮಗಳು.

**ಸದ್ಬ್ರಹ್ಮಾಹಂ ಕರೋಮೀತಿ ಪ್ರತ್ಯಯಾವಾತ್ಮಸಾಕ್ಷಿತೌ ।**
**ತಯೋರಜ್ಞಾನಜಸ್ಯೈವ ಬಾಧೋ[1] ಯುಕ್ತತರೋ ಮತಃ ॥ ೬ ॥**

೬. ನಾನು ಸದ್ಬ್ರಹ್ಮವು, (ನಾನು ಕರ್ಮವನ್ನು) ಮಾಡುತ್ತೇನೆ– ಎಂಬ ಪ್ರತ್ಯಯಗಳು ತನ್ನ ಅನುಭವದಿಂದ (ಸಿದ್ಧವಾಗಿವೆ). ಅವುಗಳಲ್ಲಿ ಅಜ್ಞಾನದಿಂದುಂಟಾಗಿರುವ (ಪ್ರತ್ಯಯಕ್ಕೇ) ಬಾಧೆಯಾಗಬೇಕೆಂಬುದು ಯುಕ್ತತರವಾಗಿದೆ[2].

**ಸದಸ್ಮೀತಿ ಪ್ರಮಾಣೋತ್ಥಾ ಧೀರನ್ಯಾ ತನ್ನಿಭೋದ್ಭವಾ ।**
**ಪ್ರತ್ಯಕ್ಷಾದಿನಿಭಾ ಸಾಪಿ ಬಾಧ್ಯತೇ ದಿಗ್ಭ್ರಮಾದಿವತ್ ॥ ೭ ॥**

೭. 'ನಾನು ಸತ್ತೇ ಆಗಿರುವೆನು' ಎಂಬ ಬುದ್ಧಿಯು ಪ್ರಮಾಣದಿಂದ ಹುಟ್ಟಿದ್ದು. ಇನ್ನೊಂದು ಪ್ರಮಾಣಾಭಾಸದಿಂದ ಹುಟ್ಟಿದ್ದು. ಪ್ರತ್ಯಕ್ಷಾದ್ಯಾಭಾಸದಿಂದ ಹುಟ್ಟಿದ್ದರೂ ದಿಗ್ಭ್ರಮೆಯೇ ಮುಂತಾದದ್ದರಂತೆ ಬಾಧಿತವಾಗುತ್ತದೆ[3].

**ಕುರು ಭೋಕ್ಷ್ಯೇತಿ ಯಚ್ಛಾಸ್ತ್ರಂ ಲೋಕಬುದ್ಧ್ಯನುವಾದಿ ತತ್ ।**
**ಸದಸ್ಮೀತಿ ಶ್ರುತೇರ್ಜಾತಾ ಬಾಧ್ಯತೇಽನ್ಯಾ ತಯೈವ ಧೀಃ ॥ ೮ ॥**

೮. 'ಮಾಡು, (ನೀನು) ಭೋಕ್ತೃವು' ಎಂಬ ಶಾಸ್ತ್ರವು[4] (ಇದೆಯಲ್ಲ) ಅದು ಲೋಕಬುದ್ಧಿಯನ್ನು ಅನುವಾದಮಾಡುತ್ತದೆ[5]. 'ಸತ್ತೇ ಆಗಿರುವೆನು' ಎಂಬುದು ಶ್ರುತಿಯಿಂದ ಉಂಟಾದದ್ದು[6]. ಇನ್ನೊಂದು ಬುದ್ಧಿಯು ಅದರಿಂದಲೇ ಬಾಧಿತವಾಗುತ್ತದೆ.

---

1. 'ಬಾಧೋ' ಎಂಬುದು 'ತ್ಯಾಗೋ' ಎಂಬ ಪಾಠಕ್ಕಿಂತ ಮೇಲು.

2. ಕರ್ತೃಭೋಕ್ತೃಬುದ್ಧಿಯೇ ಏತಕ್ಕೆ ಬಾಧಕವಲ್ಲ? –ಎಂಬ ಆಕ್ಷೇಪಕ್ಕೆ ಮುಂದಿನ ಮೂರು ಶ್ಲೋಕಗಳಲ್ಲಿ ಉತ್ತರವಿದೆ. ಶ್ರುತಿಪ್ರತ್ಯಕ್ಷಗಳಲ್ಲಿ ನಿರೂಪಿತಪ್ರತ್ಯಕ್ಷದಿಂದುಂಟಾದದ್ದು ಬಾಧಕ, ಅಜ್ಞಾನದಿಂದುಂಟಾದದ್ದು ಬಾಧ್ಯ. ರಜ್ಜುಸರ್ಪಜ್ಞಾನವು ರಜ್ಜುಜ್ಞಾನದಿಂದ ಬಾಧಿತವಾಗುವದಕ್ಕೆ ಇದೇ ಕಾರಣ.

3. ಕರ್ತೃಭೋಕ್ತೃಬುದ್ಧಿಯೂ ಪ್ರಮಾಣದಿಂದ ಹುಟ್ಟಿಲ್ಲವೆ ?– ಎಂಬ ಪ್ರಶ್ನೆಗೆ ಉತ್ತರವಿದು. ಭ್ರಾಂತಿಪ್ರತ್ಯಕ್ಷವು ಪ್ರಮಾಣವಲ್ಲ.

4. ಶಾಸ್ತ್ರದಿಂದಲೂ ಕರ್ತೃಭೋಕ್ತೃಬುದ್ಧಿಯುಂಟಾಗುವದಲ್ಲ !– ಎಂಬ ಶಂಕೆಗೆ ಪರಿಹಾರವಿದು. ಕರ್ಮವಿಧಿವಾಕ್ಯವು ಕರ್ತೃತ್ವಭೋಕ್ತೃತ್ವವನ್ನು ಅನುವಾದಮಾಡಿಕೊಂಡು ಹೊರಟಿದೆ. ಜ್ಞಾನವಾಕ್ಯವು ತಾತ್ಪರ್ಯದಿಂದ ಬ್ರಹ್ಮಾತ್ಮೈಕ್ಯವನ್ನು ತಿಳಿಸುತ್ತವೆ. ಆದ್ದರಿಂದ ತತ್ಪರವಾದದ್ದೇ ಬಾಧಕವು, ಅತತ್ಪರವಾದದ್ದು ಬಾಧ್ಯವು – ಎಂದರ್ಥ.

5. ಗೊತ್ತಿರುವದನ್ನು ಹೇಳಿಕೊಂಡಿದೆ; ಅದನ್ನೇ ಪ್ರತಿಪಾದಿಸುವದಕ್ಕೆ ಬಂದಿಲ್ಲ.

6. ಶ್ರುತಿಯು ಅಜ್ಞಾತವಾದದ್ದನ್ನು ತಿಳಿಸುತ್ತದೆಯಾದ್ದರಿಂದ ಈ ವಿಷಯದಲ್ಲೇ ಅದು ಪ್ರಮಾಣ ಎಂದು ಭಾವ.

## ಪ್ರಸಂಖ್ಯಾನವಾದಿಗಳ ಮತ

**ಸದೇವ ತ್ವಮಸೀತ್ಯುಕ್ತೇ ನಾತ್ಮನೋ ಮುಕ್ತತಾ ಸ್ಥಿರಾ |**
**ಪ್ರವರ್ತತೇ ಪ್ರಸಙ್ಖ್ಯಾನಮತೋ ಯುಕ್ತ್ಯಾನುಚಿನ್ತಯೇತ್ || ೯ ||**

೯. 'ಸತ್ತೇ ನೀನು' ಎಂದ ಮಾತ್ರದಿಂದ ಆತ್ಮನು ಮುಕ್ತನೆಂಬುದು ನೆಲೆಯಾಗಿ ಇರುವದಿಲ್ಲ. ಆದ್ದರಿಂದ ಯುಕ್ತಿಯೊಡನೆ ಪ್ರಸಂಖ್ಯಾನವನ್ನು ಅನುಚಿಂತನಮಾಡಬೇಕು[1].

**ಸಕೃದುಕ್ತಂ ನ ಗೃಹ್ಣಾತಿ ವಾಕ್ಯಾರ್ಥಜ್ಞೋಽಪಿ ಯೋ ಭವೇತ್ ।**
**ಅಪೇಕ್ಷತೇಽತ ಏವಾನ್ಯದವೋಚಾಮ ದ್ವಯಂ ಹಿ ತತ್ ।। ೧೦ ।।**

೧೦. ವಾಕ್ಯಾರ್ಥವನ್ನು ತಿಳಿದುಕೊಂಡವನುಕೂಡ ಒಂದು ಸಲ ಹೇಳಿದ್ದನ್ನು ತಿಳಿದುಕೊಳ್ಳಲಾರನು. ಆದ್ದರಿಂದಲೇ ಅವನಿಗೆ ಮತ್ತೊಂದು ಬೇಕು. ಆ ಎರಡನ್ನೂ ಹೇಳಿಯೇ ಇರುತ್ತೇವೆ[2].

**ನಿಯೋಗೋಽಪ್ರತಿಪನ್ನತ್ವಾತ್ ಕರ್ಮಣಾಂ ಸ ಯಥಾ ಭವೇತ್ ।**
**ಅವಿರುದ್ಧೋ ಭವೇತ್ತಾವದ್ ಯಾವತ್ಸಂವೇದ್ಯತಾದೃಢಾ ||೧೧||**

೧೧. ಎಲ್ಲಿಯವರೆಗೆ ಅನುಭವಕ್ಕೆ ವಿಷಯವಾಗುವದೆಂಬುದು ದೃಢವಾಗಿರುವದಿಲ್ಲವೋ ಅಲ್ಲಿಯವರೆಗೆ, ಕರ್ಮಗಳನ್ನು ತಿಳಿಯದ್ದರಿಂದ ವಿಧಿಯಿರಬಹುದಾಗಿರುವಂತೆ (ಪ್ರಸಂಖ್ಯಾನವಿಧಿಯಿರುವದೂ) ಅವಿರುದ್ಧವಾಗಿರುತ್ತದೆ[3].

---

1. ವಾಕ್ಯದಿಂದ ಒಂದೇ ಸಲಕ್ಕೆ ಜ್ಞಾನವಾಗದ್ದರಿಂದ ಮತ್ತೆಮತ್ತೆ ಶ್ರುತಿಯು ಯುಕ್ತಿಸಹಿತವಾಗಿ ತಿಳಿಸಿಕೊಟ್ಟದೆ ಎಂದು ಭಾವ.

2. ವಾಕ್ಯಯುಕ್ತಿಗಳ ಅಭ್ಯಾಸವೇ ಪ್ರಸಂಖ್ಯಾನವು; ಒಂದು ಸಲ ಹೇಳಿದ ಮಾತ್ರದಿಂದ ಜ್ಞಾನವಾಗುವದಿಲ್ಲವಾದ್ದರಿಂದ ಪ್ರಸಂಖ್ಯಾನವು ಬೇಕು.

3. ಕರ್ಮಗಳಿಗೂ ಫಲಕ್ಕೂ ಇರುವ ಸಂಬಂಧವು ಗೊತ್ತಿಲ್ಲದವರಿಗೆ ಇಂಥ ಫಲಕ್ಕಾಗಿ ಈ ಕರ್ಮವನ್ನು ಮಾಡು ಎಂದು ಶಾಸ್ತ್ರವು ಕಟ್ಟುಮಾಡುವಂತೆ, ಬ್ರಹ್ಮಾತ್ಮೈಕ್ಯಜ್ಞಾನವಾಗದವರಿಗಾಗಿ ಪ್ರಸಂಖ್ಯಾನವನ್ನು ಮಾಡು ಎಂದು ಕಟ್ಟುಮಾಡುವದು ವಿರುದ್ಧವಲ್ಲ ಎಂದರ್ಥ. ಪೂರ್ವಪಕ್ಷಿಯೂ ಅದ್ವೈತಿಯೇ ಆದರೂ ಒಂದೇ ಸಲಕ್ಕೆ ವಾಕ್ಯದಿಂದ ಜ್ಞಾನವಾಗುವದಿಲ್ಲ ಎಂಬ ಮತದವನು; ವಾಕ್ಯಶ್ರವಣವಾದ ಮೇಲೂ ವಾಕ್ಯಜ್ಞಾನಾಭ್ಯಾಸದ ವಿಧಿಯನ್ನು ಒಪ್ಪುವವನು.

**ಚೇಷ್ಟಿತಂ ಚ ತಥಾ ಮಿಥ್ಯಾ ಸ್ವಚ್ಛನ್ದಃ ಪ್ರತಿಪದ್ಯತೇ ।**
**ಪ್ರಸಙ್ಖ್ಯಾನಮತಃ ಕಾರ್ಯಂ ಯಾವದಾತ್ಮಾನುಭೂಯತೇ ॥ ೧೨ ॥**

೧೨. ಮತ್ತು ಸ್ವೇಚ್ಛೆಯಿಂದ ನಡೆಯುವವನು[1] ಮಿಥ್ಯಾವ್ಯಾಪಾರವನ್ನೂ ಪಡೆಯಬಹುದು[2]. ಆದ್ದರಿಂದ ಆತ್ಮನು ಅನುಭವಕ್ಕೆ[3] ಬರುವವರೆಗೂ ಪ್ರಸಂಖ್ಯಾನವನ್ನು ಮಾಡಬೇಕು.

**ಸದಸ್ಮೀತಿ ಚ ವಿಜ್ಞಾನಮಕ್ಷಜೋ ಬಾಧತೇ ಧ್ರುವಮ್ ।**
**ಶಬ್ದೋತ್ಥಂ ದೃಢಸಂಸ್ಕಾರೋ ದೋಷೈಶ್ಚಾಕೃಷ್ಯತೇ ಬಹಿಃ ॥ ೧೩ ॥**

೧೩. 'ಸದ್ಬ್ರಹ್ಮನಾಗಿರುವೆನು' ಎಂಬ ಶಬ್ದದಿಂದುಂಟಾಗಿರುವ ವಿಜ್ಞಾನವನ್ನು ಪ್ರತ್ಯಕ್ಷದಿಂದುಂಟಾಗಿರುವ ಗಟ್ಟಿಯಾದ ಸಂಸ್ಕಾರವು ಅವಶ್ಯವಾಗಿ ಬಾಧಿಸುತ್ತದೆ[4]. ದೋಷಗಳಿಂದ ಹೊರಕ್ಕೂ ಸೆಳೆಯಲ್ಪಡುತ್ತಾನೆ[5].

**ಶ್ರುತಾನುಮಾನಜನ್ಮಾನೌ ಸಾಮಾನ್ಯವಿಷಯೌ ಯತಃ ।**
**ಪ್ರತ್ಯಯಾವಕ್ಷಜೋಽವಶ್ಯಂ ವಿಶೇಷಾರ್ಥೋ ನಿವಾರಯೇತ್ ॥ ೧೪ ॥**

೧೪. ಶಬ್ದ, ಅನುಮಾನ – ಇವುಗಳಿಂದಾದ ಜ್ಞಾನಗಳು ಸಾಮಾನ್ಯವಿಷಯಕವಾದ (ಜ್ಞಾನಗಳಾ)ಗಿರುವದರಿಂದ ಪ್ರತ್ಯಕ್ಷದಿಂದ ಹುಟ್ಟಿದ ವಿಶೇಷವಿಷಯಕವಾದ (ಜ್ಞಾನವು) ಅವಶ್ಯವಾಗಿ (ಅವನ್ನು) ಬಾಧಿಸುವದು[6].

---

1. ಶಾಸ್ತ್ರವಿಧಿಯಿಲ್ಲದೆ ನಡೆಯುವವನು.

2. ನಿಷಿದ್ಧಕರ್ಮವನ್ನು ಮಾಡಬಹುದು. ಆದ್ದರಿಂದ ಜ್ಞಾನಾಭ್ಯಾಸರೂಪವಾದ ಪ್ರಸಂಖ್ಯಾನದ ವಿಧಿ ಬೇಕು ಎಂದು ಭಾವ.

3. ವಾಕ್ಯದಿಂದ ಅನುಭವವಾಗುವದಿಲ್ಲ, ಪ್ರಸಂಖ್ಯಾನದಿಂದ ಆಗುತ್ತದೆ ಎಂದು ಭಾವ.

4. ಶಬ್ದಜ್ಞಾನವು ಹೊಸದಾಗಿ ಹುಟ್ಟಿರುವದರಿಂದ ಅದು ಪ್ರತ್ಯಕ್ಷಜ್ಞಾನದಷ್ಟು ದೃಢವಾಗಿರಲಾರದು ಎಂದು ಭಾವ.

5. ರಾಗಾದಿಗಳಿಂದ ಅನಾತ್ಮದ ಕಡೆಗೂ ತಿರುಗುತ್ತಾನೆ.

6. ಶಬ್ದದಿಂದ ಪರೋಕ್ಷಜ್ಞಾನವಾಗುವದೇ ಹೊರತು ಅಪರೋಕ್ಷಜ್ಞಾನವಾಗಲಾರದು ; ಪ್ರತ್ಯಕ್ಷದಿಂದ ನಾನು ಕರ್ತೃ-ಭೋಕ್ತೃ ಎಂಬ ಜ್ಞಾನವಾಗುತ್ತಿರುವಲ್ಲಿ ಪರೋಕ್ಷವಾಗಿರುವ ನಾನು ಅಕರ್ತೃ ಎಂಬ ಶಬ್ದಜ್ಞಾನವು ಏನುಮಾಡೀತು ? –ಎಂದು ಭಾವ. ಈ ಪ್ರಕರಣದಲ್ಲಿರುವ ಪೂರ್ವಪಕ್ಷಸಿದ್ಧಾಂತಗಳನ್ನು ಸೂ. ಭಾ. ೪-೧-೨ರಲ್ಲಿ ಸಂಗ್ರಹವಾಗಿ ಕೊಟ್ಟಿರುತ್ತದೆ.

**ವಾಕ್ಯಾರ್ಥಪ್ರತ್ಯಯೀ ಕಶ್ಚಿನ್ನಿರ್ದುಃಖೋ ನೋಪಲಭ್ಯತೇ ।**
**ಯದಿ ವಾ ದೃಶ್ಯತೇ ಕಶ್ಚಿದ್ವಾಕ್ಯಾರ್ಥಶ್ರುತಿಮಾತ್ರತಃ ॥ ೧೫ ॥**
**ನಿರ್ದುಃಖೋಽತೀತದೇಹೇಷು ಕೃತಭಾವೋಽನುಮೀಯತೇ ।**
**ಚರ್ಯಾ ನೋ ಶಾಸ್ತ್ರಸಂವೇದ್ಯಾ[1] ಸ್ಯಾದನಿಷ್ಟಂ ತಥಾ ಸತಿ ॥ ೧೬ ॥**

೧೫–೧೬. ವಾಕ್ಯಾರ್ಥಜ್ಞಾನವುಳ್ಳವನು ಯಾವನೂ ದುಃಖರಹಿತನಾಗಿರುವದು ಕಂಡುಬರುವದಿಲ್ಲ[2]. ಅಥವಾ ವಾಕ್ಯಾರ್ಥಶ್ರವಣಮಾತ್ರದಿಂದ ಯಾವನಾದರೂ ನಿರ್ದುಃಖನಾದವನು ಕಂಡುಬಂದರೆ, ಹಿಂದಿನ (ಜನ್ಮದ) ದೇಹಗಳಲ್ಲಿ ಪ್ರಸಂಖ್ಯಾನವನ್ನು ಮಾಡಿದವನೆಂದು ಅನುಮಾನಿಸಬೇಕಾಗುತ್ತದೆ[3]. (ಪ್ರಸಂಖ್ಯಾನವಿಧಿಯಿಲ್ಲದೆ ಇದ್ದರೆ ಪರಮಹಂಸ)ಚರ್ಯೆಯು ಶಾಸ್ತ್ರದಿಂದ ತಿಳಿಯಬಂದದ್ದೆಂದು ಆಗಲಾರದು ; ಹಾಗಾದರೆ ಅನಿಷ್ಟವಾಗುವದು[4].

**ಸದಸೀತಿ ಫಲಂ ಚೋಕ್ತ್ವಾ ವಿಧೇಯಂ ಸಾಧನಂ ಯತಃ ।**
**ನ ತದನ್ಯತ್ ಪ್ರಸಂಖ್ಯಾನಾತ್ ಪ್ರಸಿದ್ಧಾರ್ಥಮಿಹೇಷ್ಯತೇ ॥ ೧೭ ॥**
**ತಸ್ಮಾದನುಭವಾಯೈವ ಪ್ರಸಂಚಕ್ಷೀತ ಯತ್ನತಃ ।**
**ತ್ಯಜನ್ ಸಾಧನತತ್ಸಾಧ್ಯವಿರುದ್ಧಂ ಶಮನಾದಿಮಾನ್ ॥ ೧೮ ॥**

೧೭–೧೮. 'ನೀನು ಸದ್ಬ್ರಹ್ಮವಾಗಿರುವೆ' ಎಂದು ಫಲವನ್ನು ಹೇಳಿ[5] ಸಾಧನವನ್ನು ವಿಧಿಸಬೇಕಷ್ಟೆ[6]. ಅಂಥ ಪ್ರಸಿದ್ಧಾರ್ಥವಾದ ಸಾಧನವು[7]

---

1. 'ನೋಽಶಾಸ್ತ್ರಸಂವೇದ್ಯಾ' ಎಂಬ ಪಾಠವು ಬೇಕಿಲ್ಲ ; ಈಗಿರುವಂತೆಯೇ ಅರ್ಥವಾಗುತ್ತದೆ. 'ನೋ' ಎಂಬುದೇ ನಿಷೇಧಾರ್ಥಕವು.

2. ಇಲ್ಲದಿದ್ದರೆ 'ತತ್ತ್ವಮಸಿ' ಎಂಬ ವಾಕ್ಯವು ಕಿವಿಗೆ ಬಿದ್ದವರೆಲ್ಲರೂ ಮುಕ್ತರಾಗಬೇಕಾದೀತು.

3. ಏಕೆಂದರೆ ಕಾರಣವಿಲ್ಲದೆ ಕಾರ್ಯವಾಗಲಾರದು ; ಅನುಭವವು ಪ್ರಸಂಖ್ಯಾನ ಕಾರ್ಯವಾಗಿರುತ್ತದೆ.

4. ಸಂನ್ಯಾಸವನ್ನು ಸ್ವೀಕರಿಸಿದವನು ಸ್ವೇಚ್ಛೆಯಿಂದ ಮತ್ತೆ ಗೃಹಸ್ಥನೂ ಆಗಬಹುದೆಂದಾಗುವದು. ಶಾಸ್ತ್ರವಿಧಿಯಿಂದ ಸಂನ್ಯಾಸವನ್ನು ತೆಗೆದುಕೊಂಡರೆ ಹಿಂತಿರುಗುವದಕ್ಕೆ ಆಗುವದಿಲ್ಲ.

5. ಇದು ಫಲವೇ ಹೊರತು ಈಗಲೆ ಸಿದ್ಧವಾಗಿರುವದನ್ನು ಹೇಳುವದಿಲ್ಲವೆಂದು ಪೂರ್ವಪಕ್ಷಿಯ ಮತ.

6. ಸ್ವರ್ಗಕಾಮನಿಗೆ ಯಾಗವನ್ನು ವಿಧಿಸಿರುವಂತೆ ಬ್ರಹ್ಮಸ್ವರೂಪಕಾಮನಿಗೆ ಪ್ರಸಂಖ್ಯಾನವನ್ನು ವಿಧಿಸಿದೆ ಎಂದು ಭಾವ.

7. ಅನುಭವವೆಂಬ ಪ್ರಯೋಜನವನ್ನು ಕೊಡುವ ಸಾಧನವು.

ಪ್ರಸಂಖ್ಯಾನವನ್ನು ಬಿಟ್ಟರೆ ಬೇರೆ ಇಲ್ಲ[1] ಆದ್ದರಿಂದ (ಈ) ಸಾಧನ ಮತ್ತು ಇದರ ಸಾಧ್ಯ[2] –ಇವುಗಳಿಗೆ ವಿರುದ್ಧವಾದ (ಕರ್ಮಾದಿಗಳನ್ನು) ಬಿಟ್ಟು ಅನು ಭವಕ್ಕಾಗಿಯೇ ಶಾಂತ್ಯಾದಿಗಳೊಡಗೂಡಿ ಯತ್ನಪೂರ್ವಕವಾಗಿ ಪ್ರಸಂಖ್ಯಾನ ವನ್ನು ಮಾಡಬೇಕು[3].

## ಸಿದ್ಧಾಂತ : ಮೋಕ್ಷವು ನಿತ್ಯಸಿದ್ಧವಾದ್ದರಿಂದ ಶಾಸ್ತ್ರವು ಅಧ್ಯಾಸವನ್ನು ನಿಷೇಧಮಾಡಿದರೆ ಸಾಕು

**ನೈತದೇವಂ ರಹಸ್ಯಾನಾಂ ನೇತಿನೇತ್ಯವಸಾನತಃ ।**
**ಕ್ರಿಯಾಸಾಧ್ಯಂ ಪುರಾ ಶ್ರಾವ್ಯಂ ನ ಮೋಕ್ಷೋ ನಿತ್ಯಸಿದ್ಧತಃ ॥ ೧೯ ॥**

೧೯. ಇದು ಹೀಗಲ್ಲ. ಏಕೆಂದರೆ ಉಪನಿಷತ್ತುಗಳು "ನೇತಿ ನೇತಿ" ಹೀಗಲ್ಲ, ಹೀಗಲ್ಲ – ಎಂದು (ಹೇಳುವದರಲ್ಲಿಯೇ) ಪರ್ಯವಸಾನವಾಗಿರು ತ್ತವೆ. ಕ್ರಿಯೆಯಿಂದ ಸಾಧ್ಯವಾಗಿರುವದನ್ನು ಪೂರ್ವಕಾಂಡದಲ್ಲಿ ಹೇಳಬೇಕು[4]. ಮೋಕ್ಷವು ನಿತ್ಯಸಿದ್ಧವಾಗಿರುವದರಿಂದ (ಕ್ರಿಯಾಸಾಧ್ಯ)ವಲ್ಲ.

**ಪುತ್ರದುಃಖಂ ಯಥಾಧ್ಯಸ್ತಂ ಪಿತ್ರಾದುಃಖೇ ಸ್ವ ಆತ್ಮನಿ ।**
**ಅಹಂಕರ್ತಾ ತಥಾಧ್ಯಸ್ತೋ ನಿತ್ಯಾದುಃಖೇ ಸ್ವ ಆತ್ಮನಿ ॥ ೨೦ ॥**

೨೦. ತಂದೆಯು ಮಗನ ದುಃಖವನ್ನು ದುಃಖವಿಲ್ಲದ ತನ್ನ ಆತ್ಮನಲ್ಲಿ ಆರೋಪಿಸಿಕೊಳ್ಳುವಂತೆ ಅಹಂಕಾರವನ್ನು ಅಧ್ಯಾಸಮಾಡಿಕೊಂಡಿರುತ್ತಾರೆ[5].

---

1. ಜ್ಞಾನಾಭ್ಯಾಸದಿಂದ ಅನುಭವವಾಗುವದು ಲೋಕದಲ್ಲಿ ಪ್ರಸಿದ್ಧವಾಗಿದೆ ಎಂದು ಭಾವ.

2. ಶಾಂತ್ಯಾದಿಗಳೂ ಪ್ರಸಂಖ್ಯಾನವೂ ಸಾಧನ, ಮೋಕ್ಷವು ಸಾಧ್ಯ.

3. ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳಬೇಕು ಎಂದು ಶ್ರುತಿ (ಬೃ. ೪-೪-೨೩) ಯಲ್ಲಿ ಹೇಳಿರುವದರಿಂದ ಶಮಾದಿಯುಕ್ತನಾಗಿ ಅನುಭವಕ್ಕಾಗಿ ಪ್ರಸಂಖ್ಯಾನಮಾಡಬೇಕು ಎಂಬುದು ಶಾಸ್ತ್ರವಿಹಿತವಾಗಿರುತ್ತದೆ.

4. ಕರ್ಮಕಾಂಡವು ಸಾಧ್ಯಸಾಧನವನ್ನೂ ಜ್ಞಾನಕಾಂಡವು ಸಿದ್ಧವಸ್ತುವಿನ ಜ್ಞಾನ ವನ್ನೂ ತಿಳಿಸುತ್ತವೆ. ಸಿದ್ಧವಸ್ತುವಿನ ಪ್ರಕರಣದಲ್ಲಿ ವಿಧಿಗೆ ಅವಕಾಶವೆಲ್ಲಿ?

5. ಮೋಕ್ಷವು ನಿತ್ಯಸಿದ್ಧವಾದರೆ ಅದಕ್ಕಾಗಿ ಯತ್ನವೇಕೆ? –ಎಂಬ ಆಕ್ಷೇಪಕ್ಕೆ ಉತ್ತರವಿದು. ಮೋಕ್ಷವು ಆತ್ಮಸ್ವರೂಪವೇ ಆಗಿದ್ದರೂ ಅಧ್ಯಸ್ತವಾಗಿರುವ ಅಹಂಕಾರ ವನ್ನು ವಿಂಗಡಿಸಿ ಅರಿತುಕೊಳ್ಳುವದು ಅವಶ್ಯ ಎಂದು ಅಭಿಪ್ರಾಯ.

**ಸೋಽಧ್ಯಾಸೋ ನೇತಿನೇತೀತಿ ಪ್ರಾಪ್ತವತ್ ಪ್ರತಿಷಿಧ್ಯತೇ |**
**ಭೂಯೋಽಧ್ಯಾಸವಿಧಿಃ ಕಶ್ಚಿತ್ ಕುತಶ್ಚಿನ್ನೋಪಪದ್ಯತೇ || ೨೧ ||**

೨೧. ಆ ಅಧ್ಯಾಸವನ್ನು 'ನೇತಿ ನೇತಿ' ಹೀಗಲ್ಲ, ಹೀಗಲ್ಲ ಎಂದು (ನಿಜವಾಗಿ) ಬಂದೊದಗಿದ್ದಂತೆ[1] (ಅದನ್ನು) ಅಲ್ಲಗಳೆಯಲಾಗಿರುತ್ತದೆ. ಮತ್ತೆ ಅಧ್ಯಾಸಮಾಡಬೇಕೆಂಬ ವಿಧಿಯು ಯಾವ ಕಾರಣದಿಂದಲೂ ಹೊಂದುವದಿಲ್ಲ[2].

**ಆತ್ಮನೀಹ ತಥಾಧ್ಯಾಸಃ[3] ಪ್ರತಿಷೇಧಸ್ತಥೈವ ಚ |**
**ಮಲಾಧ್ಯಾಸನಿಷೇಧೌ ಖೇ ಕ್ರಿಯೇತೇ ಚ ಯಥಾಬುಧೈಃ ॥ ೨೨ ॥**

೨೨. ಅಜ್ಞರು ಆಕಾಶದಲ್ಲಿ ಕಲ್ಮಷವನ್ನು ಹೇಗೆ ಅಧ್ಯಾಸಮಾಡಿ ಅಲ್ಲಗಳೆಯುವರೋ[4] ಇಲ್ಲಿ ಆತ್ಮನಲ್ಲಿ ಅಧ್ಯಾಸಮಾಡುವದೂ ಹಾಗೆಯೇ, ಅಲ್ಲಗಳೆಯುವದೂ ಹಾಗೆಯೇ[5].

**ಪ್ರಾಪ್ತಶ್ಚೇತ್ ಪ್ರತಿಷಿಧ್ಯೇತ ಮೋಕ್ಷೋಽನಿತ್ಯೋ ಭವೇದ್ಧ್ರುವಮ್ |**
**ಅತೋಽಪ್ರಾಪ್ತನಿಷೇಧೋಽಯಂ ದಿವ್ಯಗ್ನಿಚಯನಾದಿವತ್ || ೨೩ ||**

೨೩. ಪ್ರಾಪ್ತವಾದದ್ದನ್ನೇ ಅಲ್ಲಗಳೆಯುವದಾದರೆ ಮೋಕ್ಷವು ಅವಶ್ಯವಾಗಿ ಅನಿತ್ಯವಾಗುವದು[6], ಆದ್ದರಿಂದ ದ್ಯುಲೋಕದಲ್ಲಿ ಅಗ್ನಿಚಯನವನ್ನು ನಿಷೇಧಿಸಿರುವದೇ ಮುಂತಾದದ್ದರಂತೆ ಇದು ಅಪ್ರಾಪ್ತನಿಷೇಧವೇ[7].

---

1. ಆತ್ಮನ ಧರ್ಮವಲ್ಲದಿದ್ದರೂ ಅವನ ಧರ್ಮವೆಂಬಂತೆ ತೋರುವದರಿಂದ ಎಂದರ್ಥ.

2. ಪ್ರಸಂಖ್ಯಾನವೇ ಮುಂತಾದ ಯಾವ ವಿಧಿಯನ್ನೂ ಜ್ಞಾನವಾದ ಬಳಿಕ ಮಾಡುವದೆಂಬುದು ಆತ್ಮನ ಸ್ವರೂಪವಲ್ಲದ್ದನ್ನು ಸ್ವರೂಪವೆಂದು ಹೇಳಿದಂತೆ ಆಗುತ್ತದೆ ಎಂದರ್ಥ.

3. 'ಯಥಾಧ್ಯಾಸಃ' ಎಂಬ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

4. ಅಧ್ಯಾಸಮಾಡಿಕೊಂಡಾಗಲೂ ಅಲ್ಲಗಳೆದಾಗಲೂ ಆಕಾಶದಲ್ಲಿ ತಲಮಲಿನತ್ವವು ಇರುವದೇ ಇಲ್ಲ.

5. ಆತ್ಮನಲ್ಲಿ ಅಹಂಕಾರವು ಇರುವದೇ ಇಲ್ಲ.

6. ಇರುವದು ಹೋಗುವದಿಲ್ಲ, ಹೋದರೆ ಮತ್ತೆ ಬರುವದು ಖಂಡಿತ.

7. "ಭೂಮಿಯಲ್ಲಾಗಲಿ ಅಂತರಿಕ್ಷದಲ್ಲಾಗಲಿ ಸ್ವರ್ಗಲೋಕದಲ್ಲಾಗಲಿ ಅಗ್ನಿಯನ್ನು ಚಯನಮಾಡಬಾರದು" ಎಂದು (ತೈ. ಸಂ. ೩-೨-೭) ಶಾಸ್ತ್ರವಚನವಿದೆ. ಅಲ್ಲಿ ದ್ಯುಲೋಕದಲ್ಲಿ ಅಗ್ನಿಚಯನವನ್ನು ಮಾಡಬಾರದು ಎಂಬುದು ಹೇಗೆ ಅಪ್ರಾಪ್ತಪ್ರತಿಷೇಧವೋ ಹಾಗೆ ಆತ್ಮನಲ್ಲಿ ಅಹಂಕಾರಪ್ರತಿಷೇಧವೂ ಅಪ್ರಾಪ್ತವೇ.

## ಆತ್ಮನು ಶಬ್ದಪ್ರತ್ಯಯಗೋಚರನಲ್ಲ

**ಸಂಭಾವ್ಯೋ ಗೋಚರೇ ಶಬ್ದಃ ಪ್ರತ್ಯಯೋ ವಾ ನ ಚಾನ್ಯಥಾ ।**
**ನ ಸಂಭಾವ್ಯೌ ತದಾತ್ಮತ್ವಾದಹಙ್ಕರ್ತುಸ್ತಥೈವ ಚ ॥ ೨೪ ॥**

೨೪. ಶಬ್ದವಾಗಲಿ ಪ್ರತ್ಯಯವಾಗಲಿ ವಿಷಯದಲ್ಲಿ (ವ್ಯಾಪಾರವುಳ್ಳ) ದ್ದಾಗಿರಬಹುದು, ಹಾಗಿಲ್ಲದ್ದರಲ್ಲಿ ಆಗಲಾರದು. ಆದರೆ (ಆತ್ಮನು) ಅವುಗಳ ಆತ್ಮನಾಗಿರುವದರಿಂದಲೂ ಅಹಂಕಾರಕ್ಕೂ ಆತ್ಮನಾಗಿರುವದರಿಂದಲೂ (ಅವೆರಡೂ ಆತ್ಮನಲ್ಲಿ ವರ್ತಿಸ)ಲಾರವು[1].

**ಅಹಙ್ಕರ್ತ್ರಾತ್ಮನಿ ನ್ಯಸ್ತಂ ಚೈತನ್ಯೇ ಕರ್ತೃತಾದಿ ಯತ್ ।**
**ನೇತಿ ನೇತೀತಿ ತತ್ ಸರ್ವಂ ಸಾಹಙ್ಕರ್ತ್ರ[2] ನಿಷಿಧ್ಯತೇ ॥ ೨೫ ॥**

೨೫. ಅಹಂಕಾರವು ಆತ್ಮನಾದ ಚೈತನ್ಯದಲ್ಲಿ ಅಧ್ಯಾಸಮಾಡಿರುವ ಕರ್ತೃತ್ವವೇ ಮುಂತಾದವುಗಳಿವೆಯಲ್ಲ, ಅದೆಲ್ಲವನ್ನೂ ಅಹಂಕಾರದೊಡನೆ 'ಹೀಗಲ್ಲ, ಹೀಗಲ್ಲ' ಎಂದು ನಿಷೇಧಮಾಡಿರುತ್ತದೆ.

**ಉಪಲಬ್ಧಿಃ ಸ್ವಯಂಜ್ಯೋತಿರ್ದೃಶಿಃ ಪ್ರತ್ಯಕ್ಸದಾಕ್ರಿಯಃ ।**
**ಸಾಕ್ಷಾತ್ ಸರ್ವಾನ್ತರಃ ಸಾಕ್ಷೀ ಚೇತಾ ನಿತ್ಯೋಽಗುಣೋಽದ್ವಯಃ ॥**
**ಸನ್ನಿಧೌ ಸರ್ವದಾ ತಸ್ಯ ಸ್ಯಾತ್ತದಾಭೋಽಭಿಮಾನಕೃತ್ ।**
**ಆತ್ಮಾತ್ಮೀಯಂ ದ್ವಯಂ ಚಾತಃ ಸ್ಯಾದಹಂಮಮಗೋಚರಃ ॥ ೨೭ ॥**

೨೬-೨೭. (ಆತ್ಮನು) ಚೈತನ್ಯಸ್ವರೂಪನು, ಸ್ವಯಂಪ್ರಕಾಶನು, (ಎಲ್ಲವನ್ನೂ) ನೋಡುವವನು, ಒಳಗಿರುವ (ಆತ್ಮನು), ಯಾವಾಗಲೂ ನಿಷ್ಕ್ರಿಯನು, ನೇರಾಗಿ(ತಿಳಿಯಬರುವವನು), ಎಲ್ಲಕ್ಕೂ ಒಳಗಿರುವವನು, ಸಾಕ್ಷಿಯು, ಅರಿಯುವವನು, ನಿತ್ಯನು, ನಿರ್ಗುಣನು, ಅದ್ವಿತೀಯನು. ಯಾವಾಗಲೂ ಅವನ ಸನ್ನಿಧಿಯಲ್ಲಿದ್ದುಕೊಂಡು ಅಹಂಕಾರವು ಅವನಂತೆ ತೋರುತ್ತಾ ತಾನೂ ತನ್ನದೂ

---

1. ಆತ್ಮನನ್ನು ಶಬ್ದವು ತಿಳಿಸುವದಕ್ಕೆ ಆಗಲೇ ಆರದಾದ್ದರಿಂದಲೂ ಅದಕ್ಕೂ ಆತ್ಮನಾಗಿರುವದರಿಂದಲೂ ಅವನನ್ನು ಅನಾತ್ಮನಿಷೇಧದಿಂದಲೇ ತಿಳಿಸಬೇಕಾಗಿದೆ. ಆತ್ಮನ ಅನುಭವರೂಪವಾದ ಪ್ರತ್ಯಯವೂ ಆಗುವದಿಲ್ಲ; ಏಕೆಂದರೆ ಪ್ರತ್ಯಯಕ್ಕೂ ಆತ್ಮನು ವಿಷಯನಲ್ಲ. ಆದ್ದರಿಂದ ಪ್ರಸಂಖ್ಯಾನಕ್ಕೆ ವಿಷಯವೇ ಇಲ್ಲ ಎಂದು ಭಾವ.

2. 'ಸಾಹಙ್ಕರ್ತ್ರಾ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಎರಡೂ ಆಗಿ ಇದ್ದರಿಂದಲೇ 'ನಾನು', 'ನನ್ನದು' –ಎಂಬ ವ್ಯವಹಾರಕ್ಕೆ ಗೋಚರವಾಗಿರುತ್ತದೆ[1].

**ಜಾತಿಕರ್ಮಾದಿಮತ್ತ್ವಾದ್ ಹಿ ತಸ್ಮಿನ್ ಶಬ್ದಾಸ್ತ್ವಹಙ್ಕೃತಿ ।**
**ನ ಕಶ್ಚಿದ್ವರ್ತತೇ ಶಬ್ದಸ್ತದಭಾವಾತ್ ಸ್ವ ಆತ್ಮನಿ ॥ ೨೮ ॥**

**ನ ಹ್ಯಜಾತ್ಯಾದಿಮಾನ್ ಕಶ್ಚಿದರ್ಥಃ ಶಬ್ದೈರ್ನಿರೂಪ್ಯತೇ ॥೨೮-೧॥**[2]

೨೮–೨೮-೧. ಜಾತಿ, ಕ್ರಿಯೆ – ಮುಂತಾದವುಗಳಿರುವದರಿಂದ ಆ ಅಹಂಕಾರದಲ್ಲಿ ಶಬ್ದಗಳು (ವರ್ತಿಸುತ್ತವೆ). ಆದರೆ ತನ್ನ (ಸ್ವರೂಪವಾದ) ಆತ್ಮನಲ್ಲಿ ಅವುಗಳಿಲ್ಲದ್ದರಿಂದ ಯಾವ ಶಬ್ದವೂ ವರ್ತಿಸಲಾರದು. ಜಾತಿಯೇ ಮುಂತಾದವುಗಳಿಲ್ಲದ ಯಾವದೊಂದು ವಸ್ತುವನ್ನೂ ಶಬ್ದಗಳು ತಿಳಿಸುವದಕ್ಕೆ ಆಗಲಾರದಷ್ಟೆ[3].

**ಆಭಾಸೋ ಯತ್ರ ತತ್ರೈವ ಶಬ್ದಾಃ ಪ್ರತ್ಯಗ್ದೃಶಿಂ ಸ್ಥಿತಾಃ ।**
**ಲಕ್ಷಯೇಯುರ್ನ ಸಾಕ್ಷಾತ್ತಮಭಿದಧ್ಯುಃ ಕಥಂಚನ ॥ ೨೯ ॥**

೨೯. ಎಲ್ಲಿ ಆಭಾಸವಿರುವದೋ ಅಲ್ಲಿಯೇ[4] ಇದ್ದುಕೊಂಡು ಶಬ್ದಗಳು ಪ್ರತ್ಯಗಾತ್ಮನನ್ನು ಲಕ್ಷಣೆಯಿಂದ ಹೇಳುತ್ತವೆಯೇ[5] ಹೊರತು ಹೇಗೂ ನೇರಾಗಿ ಅವನನ್ನು ಹೇಳಲಾರವು.

---

1. ಆತ್ಮನಲ್ಲಿ ಅಧ್ಯಸ್ತವಾಗಿರುವ ಅಹಂಕಾರವು ಆತ್ಮನಂತಿದ್ದರೂ ಆತ್ಮನಲ್ಲ ; ಆತ್ಮನು ಸ್ವತಃಸಿದ್ಧನಾಗಿರುವದರಿಂದ ಅವನನ್ನು ತಿಳಿಸುವದಕ್ಕೆ ಯಾವ ಶಬ್ದಪ್ರತ್ಯಯಗಳೂ ಬೇಡ ; ಅಹಂಕಾರವು ಆತ್ಮಾಭಾಸದಿಂದೊಡಗೂಡಿದ್ದರೂ ನಾನು ನನ್ನದು ಎಂಬ ಶಬ್ದಪ್ರತ್ಯಯಗಳಿಗೆ ವಿಷಯವಾಗಿರುತ್ತದೆ.

2. ಅಚ್ಚಿನ ಮೂಲದಲ್ಲಿ ೨೯ ಆದಮೇಲೆ ಈ ಅರ್ಧಶ್ಲೋಕವಿದೆ; ಆದರೆ ಇಲ್ಲಿಗೇ ಅದು ಹೊಂದುತ್ತದೆ.

3. ಜಾತಿ, ಕ್ರಿಯೆ, ಗುಣ, ಸಂಬಂಧ – ಇವುಗಳೇ ಶಬ್ದಪ್ರವೃತ್ತಿಗೆ ನಿಮಿತ್ತಗಳು. ಇವು ಯಾವವೂ ಇಲ್ಲದ್ದರಿಂದ ೨೬ರಲ್ಲಿ ಹೇಳಿದ ಉಪಲಬ್ಧಿ ಮುಂತಾದ ಶಬ್ದಗಳು ಕೂಡ ಆತ್ಮನಿಗೆ ವಾಚಕಗಳಲ್ಲ.

4. ಅಹಂಕಾರದಲ್ಲಿಯೇ ಎಂದರ್ಥ. ಅಹಂಕಾರವು ಹೊರಗಿನ ಮಿಕ್ಕವಸ್ತುಗಳ ಅಪೇಕ್ಷೆಯಿಂದ ಎಲ್ಲವನ್ನೂ ಅರಿಯುವದು, ಎಲ್ಲಕ್ಕಿಂತಲೂ ಒಳಗಿರುವದು ಮುಂತಾದ ಶಬ್ದಗಳಿಗೆ ತಕ್ಕದ್ದಾಗಿದೆ ; ಆದ್ದರಿಂದ ಉಪಲಬ್ಧ್ರಾದಿಶಬ್ದಗಳು ಅದಕ್ಕೇ ವಾಚಕಗಳು.

5. 'ಗಂಗೆಯಲ್ಲಿ ಹಳ್ಳಿಯಿದೆ' ಎಂಬಲ್ಲಿ ಗಂಗೆ ಎಂಬ ಶಬ್ದವು ತೀರವನ್ನು ಲಕ್ಷಣೆಯಿಂದ ತಿಳಿಸುವಂತೆ ಸಾಭಾಸಾಹಂಕಾರವಾಚಕಗಳು ಆತ್ಮನನ್ನು ಲಕ್ಷಣೆಯಿಂದ ತಿಳಿಸುತ್ತವೆ.

**ಆತ್ಮಾಭಾಸೋ ಯಥಾಹಙ್ಕೃದಾತ್ಮಶಬ್ದೈಸ್ತಥೋಚ್ಯತೇ ।**
**ಉಲ್ಮುಕಾದೌ ಯಥಾಗ್ನ್ಯರ್ಥಾಃ ಪರಾರ್ಥತ್ವಾನ್ನ ಚಾಞ್ಜಸಾ ॥೩೦॥**

೩೦. ಅಹಂಕಾರವು ಆತ್ಮನಂತೆಯೇ ತೋರುತ್ತಿರುವದಲ್ಲವೆ[1]? ಅದರಿಂದ ಕೊಳ್ಳಿಯೇ ಮುಂತಾದವುಗಳನ್ನು ಬೆಂಕಿಯನ್ನು ಹೇಳುವ ಶಬ್ದಗಳು ತಿಳಿಸುವಂತೆ ಆತ್ಮನನ್ನು ಹೇಳುವ ಮಾತುಗಳು ಅಹಂಕಾರವನ್ನು ತಿಳಿಸುತ್ತವೆ. ಮುಖ್ಯವಾಗಿ ತಿಳಿಸುವದಿಲ್ಲ; ಏಕೆಂದರೆ ಅದು ಪರಾರ್ಥವಾಗಿರುತ್ತದೆ[2]

## ಚಿದಾಭಾಸಕ್ಕೆ ಮುಖಾಭಾಸದ ದೃಷ್ಟಾಂತ

**ಮುಖಾದನ್ಯೋ ಮುಖಾಭಾಸೋ ಯಥಾದರ್ಶಾನುಕಾರತಃ ।**
**ಆಭಾಸಾನ್ಮುಖಮಪ್ಯೇವಮಾದರ್ಶಾನನುವರ್ತನಾತ್ ॥ ೩೧ ॥**

೩೧. ಮುಖದ ಪ್ರತಿಬಿಂಬವು ಕನ್ನಡಿಯನ್ನು ಅನುಸರಿಸುತ್ತಿರುವದರಿಂದ ಹೇಗೆ ಮುಖಕ್ಕಿಂತ ಬೇರೆಯಾಗಿರುವದೋ, ಮುಖವು ಕನ್ನಡಿಯನ್ನನುಸರಿಸದೆ ಇರುವದರಿಂದ ಪ್ರತಿಬಿಂಬಕ್ಕಿಂತಲೂ ಹಾಗೆಯೇ ಬೇರೆಯಾಗಿದೆ.

**ಅಹಙ್ಕೃತ್ಯಾತ್ಮನಿರ್ಭಾಸೋ ಮುಖಾಭಾಸವದಿಷ್ಯತೇ ।**
**ಮುಖವತ್ ಸ್ಮೃತ ಆತ್ಮಾನ್ಯೋ ವಿವಿಕ್ತೌ[3] ತೌ ತಥೈವ ಚ ॥ ೩೨ ॥**

೩೨. ಅಹಂಕಾರದಲ್ಲಿ (ಕಾಣುವ) ಆತ್ಮಾಭಾಸವು ಮುಖಾಭಾಸದಂತೆ ಎಂದು (ನಾವು) ಒಪ್ಪುತ್ತೇವೆ. ಮುಖದಂತೆ ಆತ್ಮನು (ಅದಕ್ಕಿಂತ) ಬೇರೆ ಎನಿಸುವನು. ಆ (ಅಹಂಕಾರ, ಆತ್ಮ) ಇವರಿಬ್ಬರೂ (ಮುಖ, ಮುಖಾಭಾಸ – ಇವು) ಗಳಂತೆಯೇ ವಿಂಗಡವಾಗಿರುತ್ತವೆ.

## ಸಂಸಾರಿ ಯಾರೆಂಬ ಬಗ್ಗೆ ವಾದಿಗಳ ಮತಭೇದ

**ಸಂಸಾರೀ ಚ ಸ ಇತ್ಯೇಕ ಆಭಾಸೋ ಯಸ್ತ್ವಹಙ್ಕೃತಿ[4] ।**
**ವಸ್ತುಚ್ಛಾಯಾ ಸ್ಮೃತೇರನ್ಯಾ್ಮಧುರ್ಯಾದಿ ಚ ಕಾರಣಮ್ ॥೩೩॥**

---

1. ಚಿದಾಭಾಸವಾಗಿ ಚಿದ್ವ್ಯಾಪ್ತವಾಗಿರುವದರಿಂದ ಅದನ್ನು ಆತ್ಮಶಬ್ದಗಳೂ ತಿಳಿಸುತ್ತವೆ; ಆದರೆ ನಿಜವಾಗಿ ಅದು ಆತ್ಮನಲ್ಲವೆಂಬುದು ಅನುಭವದಿಂದ ತಿಳಿಯುತ್ತದೆ.
2. ಅಹಂಕಾರವು ಸ್ವತಂತ್ರವಾಗಿರುವ ಚೇತನವಲ್ಲ.
3. 'ಅವಿವಿಕ್ತೌ' ಎಂಬ ವ್ಯಾಖ್ಯಾನದ ಪಾಠಕ್ಕಿಂತ ಇದೇ ಮೇಲು.
4. 'ಅಹಙ್ಕೃತಿಃ' ಎಂಬ ಅಚ್ಚಿನ ಪಾಠವು ತಪ್ಪು.

೩೩. ಅಹಂಕಾರದಲ್ಲಿ(ಕಾಣುವ) ಈ ಆಭಾಸವೇ ಸಂಸಾರಿ ಎಂದು ಕೆಲವರೆನ್ನುತ್ತಾರೆ. ನೆರಳೆಂಬುದೂ ವಸ್ತುವೇ, ಏಕೆಂದರೆ ಸ್ಮೃತಿಯು[1] ಹಾಗೆಂಬುದಕ್ಕೆ ಪ್ರಮಾಣವು. ಅದರಲ್ಲಿ ತೋರುವ ಹರ್ಷವೇ ಮುಂತಾದದ್ದು[2] (ಅದು ವಸ್ತುವೆನ್ನುವದಕ್ಕೆ) ಇನ್ನೊಂದು ಕಾರಣವು (ಎಂಬುದು ಅವರ ಮತವು).

**ಜ್ಞೈಕದೇಶೋ ವಿಕಾರೋ ವಾ ತದಾಭಾಸಾಶ್ರಯಃ ಪರೇ ।**
**ಅಹಙ್ಕರ್ತೈವ ಸಂಸಾರೀ ಸ್ವತನ್ತ್ರ ಇತಿ ಕೇಚನ ॥ ೩೪ ॥**
**ಅಹಙ್ಕಾರಾದಿಸನ್ತಾನಃ ಸಂಸಾರೀ ನಾನ್ವಯೀ ಕ್ವಚಿತ್ ।**
**ಇತ್ಯೇವಂ ಸೌಗತಾ ಆಹುಸ್ತತ್ರ ನ್ಯಾಯೋ ವಿಚಾರ್ಯತಾಮ್ ॥೩೫॥**

೩೪-೩೫. ಆತ್ಮನ ಅಂಶವು, ಅಥವಾ ಕಾರ್ಯವು, (ಸಂಸಾರಿ ಎಂದು ಕೆಲವರು). ಆ (ಆತ್ಮನ) ಆಭಾಸಕ್ಕೆ ಆಶ್ರಯವಾಗಿರುವ ಸ್ವತಂತ್ರವಾಗಿರುವ ಅಹಂಕಾರವು (ಸಂಸಾರಿ) ಎಂದು ಮತ್ತೆ ಕೆಲವರು. ಅಹಂಕಾರವೇ ಮುಂತಾದ (ವಿಜ್ಞಾನ)ಗಳ ಸಂತಾನವೇ[3] ಸಂಸಾರಿಯು, (ಅವುಗಳಲ್ಲಿ) ಅನುಗತವಾಗಿರುವ ಯಾವ ಆತ್ಮನೂ ಇರುವದಿಲ್ಲ– ಎಂದು ಬೌದ್ಧರು ಹೇಳುತ್ತಾರೆ. ಈ (ಪಕ್ಷ)ಗಳಲ್ಲಿ ನ್ಯಾಯವನ್ನು ವಿಚಾರಿಸಬೇಕು[4].

## ಆಭಾಸವು ಸತ್ಯವೆ?

**ಸಂಸಾರಿಣಾಂ ಕಥಾ ತ್ವಾಸ್ತಾಂ ಪ್ರಕೃತಂ ತ್ವಧುನೋಚ್ಯತೇ ॥ ೩೫½ ॥**

೩೫½. ಸಂಸಾರಿ ಇವರಲ್ಲಿ ಯಾರೆಂಬ ಚರ್ಚೆ ಹಾಗಿರಲಿ. ಪ್ರಕೃತವಾದ (ಆಭಾಸವಿಚಾರವನ್ನೇ) ಈಗ ಹೇಳಲಾಗುವದು.

**ಮುಖಾಭಾಸೋ ಯ ಆದರ್ಶೇ ಧರ್ಮೋ ನಾನ್ಯತರಸ್ಯ ಸಃ ।**
**ದ್ವಯೋರೇಕಸ್ಯ ಚೇದ್ಧರ್ಮೋ ವಿಯುಕ್ತೇ ಚಾನ್ಯತರೇ ಭವೇತ್ ॥೩೬॥**
**ಮುಖೇನ ವ್ಯಪದೇಶಾತ್ ಸ ಮುಖಸ್ಯೈವೇತಿ ಚೇನ್ಮತಮ್ ।**

---

1. ದೊಡ್ಡವರ ನೆರಳನ್ನು ದಾಟಬಾರದು– ಎಂದು ಮುಂತಾಗಿ ಸ್ಮೃತಿಯಿದೆ. (ಮನು. ೪-೧೩೦) ಆದ್ದರಿಂದ ನೆರಳು ವಸ್ತುವೆಂದು ಭಾವ.

2. ಬಿಸಿಲಿನಲ್ಲಿದ್ದವನು ನೆರಳಿಗೆ ಬಂದರೆ ಹರ್ಷವಾಗುತ್ತದೆ, ಆದ್ದರಿಂದ ನೆರಳು ವಸ್ತು ಎಂದು ಭಾವ.

3. ಸಂತಾನವನ್ನೇ ನಾವು ಸಂಸಾರಿಯೆಂದು ವ್ಯವಹರಿಸುವೆವು.

4. ಇವುಗಳು ಯುಕ್ತಿಶುದ್ಧವಾಗಿಲ್ಲ ಎಂದು ಅಭಿಪ್ರಾಯ.

**ನಾದರ್ಶಾನುವಿಧಾನಾಚ್ಚ ಮುಖೇ ಸತ್ಯಪ್ಯಭಾವತಃ[1] ॥ ೩೭ ॥**
**ದ್ವಯೋರೇವೇತಿ ಚೇತ್ ತನ್ನ ದ್ವಯೋರೇವಾಪ್ಯದರ್ಶನಾತ್ ॥೩೭½॥**

೩೬–೩೭½. ಕನ್ನಡಿಯಲ್ಲಿರುವ ಮುಖಾಭಾಸವು ಎರಡರಲ್ಲಿ (ಯಾವ) ದೊಂದರ ಧರ್ಮವೂ ಅಲ್ಲ. ಎರಡರಲ್ಲೊಂದರ ಧರ್ಮವಾಗಿದ್ದರೆ ಅವುಗಳಲ್ಲಿ ಒಂದು ಇಲ್ಲದಿದ್ದರೂ ಇರಬಹುದಾಗುವದು. (ಮುಖದ ಆಭಾಸವೆಂದು) ಮುಖದಿಂದ ಕರೆಯಿಸಿಕೊಳ್ಳುವದರಿಂದ ಅದು ಮುಖದ (ಧರ್ಮವೇ) ಎಂದು (ನಿಮ್ಮ) ಮತವಾದರೆ (ಅದು) ಸರಿಯಲ್ಲ. ಏಕೆಂದರೆ (ಅದು) ಕನ್ನಡಿಯನ್ನು ಅನುಸರಿಸುತ್ತದೆ, ಮುಖವಿದ್ದರೂ[2] ಇರುವದಿಲ್ಲ. ಈ ಎರಡಕ್ಕೂ (ಧರ್ಮವು) ಎಂದರೆ ಅದೂ ಸರಿಯಲ್ಲ ; ಏಕೆಂದರೆ ಎರಡೂ ಇದ್ದರೂ ಕಾಣಿಸುವದಿಲ್ಲ[3].

**ಅದೃಶ್ಯಸ್ಯ ಸತೋ ದೃಷ್ಟಿಃ ಸ್ಯಾದ್ರಾಹೋಶ್ಚನ್ದ್ರಸೂರ್ಯಯೋಃ ।**
**ರಾಹೋಃ ಪ್ರಾಗೇವ ವಸ್ತುತ್ವಂ ಸಿದ್ಧಂ ಶಾಸ್ತ್ರಪ್ರಮಾಣತಃ ॥ ೩೮ ॥**
**ಛಾಯಾಪಕ್ಷೇ ತ್ವವಸ್ತುತ್ವಂ ತಸ್ಯ ಸ್ಯಾತ್ ಪೂರ್ವಯುಕ್ತಿತಃ ॥೩೮½॥**

೩೮–೩೮½. (ಮೊದಲು) ಕಾಣದೆ ಇರುವ ರಾಹುವು ಚಂದ್ರಸೂರ್ಯರಲ್ಲಿ ಕಾಣಬರಬಹುದು; (ಆದರೆ) ರಾಹುವು ವಸ್ತುವೆಂಬುದು ಮೊದಲೇ ಶಾಸ್ತ್ರ ಪ್ರಮಾಣದಿಂದ ಸಿದ್ಧವಾಗಿರುತ್ತದೆ[4]. ನೆರಳೇ ಎಂಬ ಪಕ್ಷದಲ್ಲಿಯಂತೂ ಹಿಂದಿನ ಯುಕ್ತಿಯಿಂದ ಅದು ವಸ್ತುವಲ್ಲವೆಂದೇ ಆಗುತ್ತದೆ[5].

**ಛಾಯಾಕ್ರಾನ್ತೇರ್ನಿಷೇಧೋಽಯಂ ನ ತು ವಸ್ತುತ್ವಸಾಧಕಃ ।**
**ನ ಹ್ಯರ್ಥಾನ್ತರನಿಷ್ಠಂ ಸದ್ವಾಕ್ಯಮರ್ಥಾನ್ತರಂ ವದೇತ್ ॥ ೩೯ ॥**

---

1. 'ಸತ್ಯವಿಭಾವತಃ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವು ಮೇಲು.
2. ಕನ್ನಡಿ ಇಲ್ಲದಿದ್ದರೆ ಎಂದು ಸೇರಿಸಿಕೊಳ್ಳಬೇಕು.
3. ಮುಖವು ಕನ್ನಡಿಯ ಮುಂಗಡೆಯಲ್ಲಿದ್ದಹೊರತು ಕಾಣಿಸುವದಿಲ್ಲ.
4. ಆದ್ದರಿಂದ ನೆರಳು ವಸ್ತುವಾಗಿದ್ದರೂ ರಾಹುವಿನಂತೆ ಕಾಣಿಸದೆ ಇದ್ದು ಆಮೇಲೆ ಕಾಣಿಸಬಹುದು ಎಂಬುದಕ್ಕೆ ಬರುವದಿಲ್ಲ ; ಏಕೆಂದರೆ ನೆರಳು ವಸ್ತುವೆನ್ನುವದಕ್ಕೆ ಯಾವ ಪ್ರಮಾಣವೂ ಇಲ್ಲ ಎಂದು ಭಾವ.
5. ರಾಹುವು ಭೂಮ್ಯಾದಿಗಳ ನೆರಳು ಎಂಬ ಪಕ್ಷದಲ್ಲಿ ಮುಖಾಭಾಸದಂತೆ ಅದೂ ವಸ್ತುವಲ್ಲವೆಂದೇ ಆಗುತ್ತದೆ; ಆಗ ಅದು ದೃಷ್ಟಾಂತವೇ ಆಗುವದಿಲ್ಲ.

**ಮಾಧುರ್ಯಾದಿ ಚ ಯತ್ಕಾರ್ಯಮುಷ್ಣದ್ರವ್ಯಾದ್ಯಸೇವನಾತ್ ।**
**ಛಾಯಾಯಾ ನ ತ್ವದೃಷ್ಟತ್ವಾದಪಾಮೇವ ಚ ದರ್ಶನಾತ್ ॥ ೪೦ ॥**

೩೯–೪೦. ನೆರಳನ್ನು ದಾಟಬಾರದೆಂಬ (ಸ್ಮೃತಿಯ) ನಿಷೇಧವು (ಅದು) ವಸ್ತುವೆಂಬುದನ್ನು ಸಾಧಿಸಲಾರದು. ಏಕೆಂದರೆ ಒಂದು ಅರ್ಥವನ್ನು ತಾತ್ಪರ್ಯದಿಂದ ಹೇಳುವ ವಾಕ್ಯವು ಮತ್ತೊಂದು ಅರ್ಥವನ್ನು ಹೇಳಲಾರದು[1]. ಸಂತೋಷಜನಕತ್ವವೇ ಮುಂತಾದ ಯಾವ ಕಾರ್ಯವುಂಟೋ ಅದು ಉಷ್ಣದ್ರವ್ಯವಾದ (ಬಿಸಿಲು) ಮುಂತಾದದ್ದರ ಸೇವನೆಯಿಲ್ಲದ್ದರಿಂದ (ಆದದ್ದೇ) ಹೊರತು ನೆರಳಿನ (ಧರ್ಮವಲ್ಲ); ಏಕೆಂದರೆ (ಅದರಲ್ಲಿ ಯಾವಾಗಲೂ) ಕಾಣುವದಿಲ್ಲ. (ಅದು) ನೀರಿನ ಧರ್ಮವೇ, ಏಕೆಂದರೆ (ಹಾಗೆ) ಕಂಡಿದೆ[2].

**ಆತ್ಮಾಭಾಸಾಶ್ರಯಾಶ್ಚೈವಂ ಮುಖಾಭಾಸಾಶ್ರಯಾ ಯಥಾ ।**
**ಗಮ್ಯನ್ತೇ ಶಾಸ್ತ್ರಯುಕ್ತಿಭ್ಯಾಮಾಭಾಸಾಸತ್ತ್ವಮೇವ ಚ ॥ ೪೧ ॥**

೪೧. ಈ ರೀತಿಯಲ್ಲಿ ಆತ್ಮ, ಆಭಾಸ, ಅದರ ಆಶ್ರಯ– ಇವು ಮುಖ, ಆಭಾಸ, ಅದರ ಆಶ್ರಯ– ಇವುಗಳಂತೆ (ಎಂದೂ) ಆಭಾಸವು ಸತ್ಯವಲ್ಲವೆಂದೂ ಶಾಸ್ತ್ರಯುಕ್ತಿಗಳಿಂದ ನಿಶ್ಚಯವಾಗುತ್ತದೆ[3].

## ಸಂಸಾರವು ಅವಿದ್ಯಾಮಾತ್ರ

**ನ ದೃಶೇರವಿಕಾರಿತ್ವಾದಾಭಾಸಸ್ಯಾಪ್ಯವಸ್ತುತಃ ।**
**ನಾಚಿತಿತ್ವಾದಹಙ್ಕೃತೇಃ ಕಸ್ಯ ಸಂಸಾರಿತಾ ಭವೇತ್ ॥ ೪೨ ॥**

೪೨. ಸಾಕ್ಷಿಯು ವಿಕಾರವುಳ್ಳದ್ದಲ್ಲದ್ದರಿಂದ ಅದಕ್ಕೆ (ಸಂಸಾರಿತ್ವ) ಇಲ್ಲ; ಆಭಾಸವು ಅಸತ್ಯವಾದದ್ದರಿಂದ ಅದಕ್ಕಿಲ್ಲ; ಅಹಂಕಾರವು ಅಚೇತನ

1. ದಾಟಕೂಡದೆಂದು ಹೇಳುವದಕ್ಕಾಗಿ ಬಂದಿರುವ ಸ್ಮೃತಿಯು ನೆರಳು ವಸ್ತುವೆಂಬುದನ್ನೂ ಹೇಳುತ್ತದೆ ಎಂದರೆ ಏಕವಾಕ್ಯತೆ ತಪ್ಪುತ್ತದೆ. ಆದ್ದರಿಂದ ನೆರಳು ವಸ್ತುವೆಂಬುದು ರಾಹುವಿನಂತೆ ಶಾಸ್ತ್ರಸಿದ್ಧವಲ್ಲ ಎಂದು ಅಭಿಪ್ರಾಯ.

2. ನೆರಳಿನಲ್ಲಿದ್ದಾಗಲೆಲ್ಲ ಹರ್ಷವೂ ತಂಪೂ ಆಗುವದಿಲ್ಲ; ನೆರಳಿನಲ್ಲಿ ಕಾಣುವ ಹರ್ಷವು ಬಿಸಿಲಿನ ಸೆಕೆಯ ತಾಪವಿಲ್ಲದ್ದರಿಂದ ಆದದ್ದು; ತಂಪು ನೀರಿನ ಕಣದಿಂದ ಆದದ್ದು.

3. ಆತ್ಮನು ಮಾಯೆಗಳಿಂದ ಬಹುರೂಪನಾಗಿ ಕಾಣುತ್ತಾನೆ (ಬೃ. ೨–೫–೧೯) ಮುಂತಾದ ಶಾಸ್ತ್ರಗಳು, ಇದುವರೆಗೆ ವರ್ಣಿಸಿರುವಂಥ ಯುಕ್ತಿಗಳು– ಇವುಗಳಿಂದ ಆತ್ಮನು ಕೂಟಸ್ಥನು, ಅಹಂಕಾರವು ಅಚೇತನವಾದ ಉಪಾಧಿಮಾತ್ರ, ಆಭಾಸವು ಅಸತ್ಯ– ಇಷ್ಟೂ ನಿಶ್ಚಯವಾಗುತ್ತವೆ.

ವಾಗಿರುವದರಿಂದ ಅದಕ್ಕೂ ಇಲ್ಲ. ಸಂಸಾರಿತ್ವವು ಯಾರಿಗೆ ಆಗಬೇಕು[1]?

**ಅವಿದ್ಯಾಮಾತ್ರ ಏವಾತಃ ಸಂಸಾರೋಽಸ್ತ್ವವಿವೇಕತಃ ।**
**ಕೂಟಸ್ಥೇನಾತ್ಮನಾ ನಿತ್ಯಮಾತ್ಮವಾನಾತ್ಮನೀವ ಸಃ ॥ ೪೩ ॥**

೪೩. ಆದ್ದರಿಂದ ಸಂಸಾರವು ಅವಿದ್ಯಾಮಾತ್ರ(ವೆಂದೇ) ಆಗಲಿ. (ಸರಿಯಾಗಿ) ವಿಂಗಡಿಸಿ ಅರಿತುಕೊಳ್ಳದ್ದರಿಂದ ಕೂಟಸ್ಥನಾದ ಆತ್ಮನಿಂದ ಅದು ಯಾವಾಗಲೂ ಇರುವಿಕೆಯುಳ್ಳದ್ದಾಗಿರುತ್ತದೆ, ಆತ್ಮನಲ್ಲಿರುವಂತೆ ತೋರುತ್ತದೆ[2].

**ರಜ್ಜುಸರ್ಪೋ ಯಥಾ ರಜ್ಜ್ವಾ ಸಾತ್ಮಕಃ ಪ್ರಾಗ್ವಿವೇಕತಃ ।**
**ಅವಸ್ತುಸನ್ನಪಿ ಹ್ಯೇಷ ಕೂಟಸ್ಥೇನಾತ್ಮನಾ ತಥಾ ॥ ೪೪ ॥**
**ಆತ್ಮಾಭಾಸಾಶ್ರಯಶ್ಚ [ಆತ್ಮಾಪ್ರತ್ಯಯೈಃ ಸ್ವೈರ್ವಿಕಾರವಾನ್][3]**

೪೪. ಹಗ್ಗದ ಹಾವು ಹೇಗೆ ವಿವೇಕಕ್ಕಿಂತ ಮೊದಲು ಹಗ್ಗದಿಂದಲೇ ಸ್ವರೂಪವುಳ್ಳದ್ದಾಗಿರುವದೋ, ಹಾಗೆ ಅಸತ್ಯವಾಗಿದ್ದರೂ ಇದು ಕೂಟಸ್ಥನಾದ ಆತ್ಮನಿಂದಲೇ (ಸ್ವರೂಪವುಳ್ಳದ್ದು). ಆತ್ಮಾಭಾಸಕ್ಕೆ ಆಶ್ರಯ(ವಾಗಿರುವ ಅಹಂಕಾರವೂ ಹೀಗೆಯೇ)[4].

.... .... .... **ಆತ್ಮಾ ಪ್ರತ್ಯಯೈಃ ಸ್ವೈರ್ವಿಕಾರವಾನ್ ।**
**ಸುಖೀ ದುಃಖೀ ಚ ಸಂಸಾರೀ ನಿತ್ಯಮೇವೇತಿ[5] ಕೇಚನ ॥ ೪೫ ॥**
**ಆತ್ಮಾಭಾಸಾಪರಿಜ್ಞಾನಾದ್ಯಾಥಾತ್ಮ್ಯೇನ ವಿಮೋಹಿತಾಃ ।**
**ಅಹಙ್ಕರ್ತಾರಮಾತ್ಮೇತಿ ಮನ್ಯನ್ತೇ ತೇ ನಿರಾಗಮಾಃ ॥ ೪೬ ॥**

---

1. ಈ ಪಕ್ಷದಲ್ಲಿ ಸಂಸಾರಿತ್ವವೇ ಇಲ್ಲವೆಂದಾಗುವದಲ್ಲ! ಶಾಸ್ತ್ರೋಪದೇಶವು ವ್ಯರ್ಥವಾಗುವದಲ್ಲ! - ಎಂದು ಆಕ್ಷೇಪ.

2. ಸಂಸಾರವು ಪರಮಾರ್ಥವೂ ಅಲ್ಲ, ಆತ್ಮನಲ್ಲಿ ನಿಜವಾಗಿ ಇಲ್ಲವೂ ಇಲ್ಲ.

3. ಇದು ಮುಂದಿನ ಶ್ಲೋಕಕ್ಕೆ ಸೇರಿದ್ದು.

4. ಈ ಸಂಸಾರವು ಬರಿಯ ತೋರಿಕೆ; ಹಗ್ಗದ ಹಾವಿನ ತತ್ತ್ವವು ಹಗ್ಗವೇ ಆಗಿರುವಂತೆ ಇದರ ತತ್ತ್ವವು ಆತ್ಮನೇ. ಅಹಂಕಾರವೂ ಬರಿಯ ತೋರಿಕೆಯೇ; ಆದ್ದರಿಂದ ಅದಕ್ಕೂ ತತ್ತ್ವವು ಆತ್ಮನೇ. ಆತ್ಮನಲ್ಲಿಯೇ ಅಹಂಕಾರವೂ, ಆಭಾಸವೂ, ಸಂಸಾರವೂ ಕಲ್ಪಿತವಾಗಿರುವವು ಎಂದು ಅಭಿಪ್ರಾಯ.

5. 'ನಿತ್ಯ ಏವ' ಎಂಬ ಅಚ್ಚಿನ ಪಾಠವನ್ನು ಹೀಗೆಂದು ತಿದ್ದಿಕೊಂಡಿದೆ.

**ಸಂಸಾರೋ ವಸ್ತುಸಂಸ್ತೇಷಾಂ ಕರ್ತೃಭೋಕ್ತೃತ್ವಲಕ್ಷಣಃ ।**
**ಆತ್ಮಾಭಾಸಾಶ್ರಯಾಜ್ಞಾನಾತ್ ಸಂಸರಂತ್ಯವಿವೇಕತಃ ॥ ೪೭ ॥**

೪೫–೪೭. ಆತ್ಮನು ಯಾವಾಗಲೂ ತನ್ನ ಪ್ರತ್ಯಯಗಳಿಂದ ವಿಕಾರವುಳ್ಳವನು, ಸುಖಿಯೂ ದುಃಖಿಯೂ ಆಗಿರುವ ಸಂಸಾರಿಯು– ಎಂದು ಕೆಲವರು (ತಿಳಿಯುತ್ತಾರೆ). ಆತ್ಮ, ಆಭಾಸ– ಇವುಗಳನ್ನು ತತ್ತ್ವದಿಂದ ತಿಳಿಯದೆ ಇರುವದರಿಂದ ಭ್ರಾಂತರಾಗಿ ಅಹಂಕಾರವನ್ನೇ ಆತ್ಮನೆಂದು ತಿಳಿದುಕೊಂಡಿರುತ್ತಾರೆ[1]. ಅವರಿಗೆ (ಯಾವ) ಆಗಮವೂ ಇಲ್ಲ[2]. ಅವರಿಗೆ ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರವು ವಸ್ತುತಃ ಸತ್ಯವಾಗಿರುತ್ತದೆ ಆತ್ಮ, ಆಭಾಸ, ಆಶ್ರಯ –ಇವುಗಳನ್ನು (ವಿಂಗಡಿಸಿ) ಅರಿತುಕೊಳ್ಳದೆ ಇರುವ ಅವಿವೇಕದಿಂದ ಅವರು ಸಂಸಾರದಲ್ಲಿ ತೊಳಲುತ್ತಿರುವರು[3].

## ಆತ್ಮನಲ್ಲಿ ಜ್ಞಾತೃಜ್ಞಾನಜ್ಞೇಯತ್ವವಿಲ್ಲ

**ಚೈತನ್ಯಾಭಾಸತಾ ಬುದ್ಧೇರಾತ್ಮನಸ್ತತ್ಸ್ವರೂಪತಾ ।**
**ಸ್ಯಾಚ್ಚೇತ್ತಂ ಜ್ಞಾನಶಬ್ದೈಶ್ಚ ವೇದಃ ಶಾಸ್ತೀತಿ ಯುಜ್ಯತೇ ॥ ೪೮ ॥**

೪೮. ಬುದ್ಧಿಯು ಚೈತನ್ಯದಂತೆ ತೋರುತ್ತಿರುವದು, ಆತ್ಮನು ಆ (ಚೈತನ್ಯದ) ಸ್ವರೂಪವೇ ಆಗಿರುವದು – ಹೀಗಿದ್ದರೆ ವೇದವು ಆ (ಆತ್ಮನನ್ನು) ಜ್ಞಾನ(ವಾಚಕ)ಶಬ್ದಗಳಿಂದ ತಿಳಿಸಿಕೊಡುತ್ತದೆ ಎಂಬುದು ಯುಕ್ತವಾಗುತ್ತದೆ[4].

---

1. ಅಂತಃಕರಣದಲ್ಲಿ ಪ್ರತ್ಯಯಗಳಿಂದ ಆಗುವ ವಿಕಾರಗಳನ್ನು ಆತ್ಮನಲ್ಲಿ ಆಗುತ್ತವೆ ಎಂದು ಹೇಳುತ್ತಿದಾರೆ.

2. ಅವರಿಗೆ ವೇದಾಂತಸಂಪ್ರದಾಯದ ಗುರುಗಳ ಉಪದೇಶವಿಲ್ಲ, ಶಾಸ್ತ್ರದ ಬಲವೂ ಇಲ್ಲ – ಎಂದು 'ಆಗಮವಿಲ್ಲ' ಎಂಬ ವಾಕ್ಯಕ್ಕೆ ಅರ್ಥವನ್ನು ಮಾಡಿಕೊಳ್ಳಬಹುದು. ಅಹಂಕಾರವು ದೃಶ್ಯ, ಆತ್ಮನು ಅದನ್ನು ನೋಡುತ್ತಿರುವ ಸಾಕ್ಷಿ– ಎಂಬ ಆಗಮಸಂಪ್ರದಾಯವನ್ನು ಅರಿತಿದ್ದರೆ ಎಂದಿಗೂ ಹೀಗೆಂದು ತಿಳಿಯುತ್ತಿರಲಿಲ್ಲ ಎಂದು ಭಾವ.

3. ಸಂಸಾರದಲ್ಲಿ ತೊಳಲುತ್ತಿರುವೆನೆಂದು ಭಾವಿಸಿಕೊಂಡಿರುವರು ಎಂದರ್ಥ.

4. ಬೃ. ೨–೪–೧೪, ೩–೭–೨೩– ಇವುಗಳಲ್ಲಿ ಜ್ಞಾತೃವಾಗಿ; ತೈ. ೨–೧, ಬೃ. ೩–೯–೮ ಇವುಗಳಲ್ಲಿ ಜ್ಞಾನವಾಗಿ; ತೈ. ೨–೧, ಮಾಂ. ೭, ಛಾಂ. ೮–೬ ಇವುಗಳಲ್ಲಿ ಜ್ಞೇಯವಾಗಿ ಶ್ರುತಿ ಹೇಳುತ್ತದೆ. ಈ ಜ್ಞಾನಶಬ್ದಗಳು ನೇರಾಗಿ ಚೈತನ್ಯಕ್ಕೆ ಹೊಂದುವದಿಲ್ಲ; ಚಿದಾಭಾಸಯುಕ್ತವಾದ ಅಹಂಕಾರಕ್ಕೆ ವಾಚಕವಾಗಿ ಚಿದ್ರೂಪನಾದ ಆತ್ಮನನ್ನು ಲಕ್ಷಣೆಯಿಂದ ತಿಳಿಸುತ್ತವೆ.

**ಪ್ರಕೃತಿಪ್ರತ್ಯಯಾರ್ಥೌ ಯೌ ಭಿನ್ನಾವೇಕಾಶ್ರಯೌ ಯಥಾ |**
**ಕರೋತಿ ಗಚ್ಛತೀತ್ಯಾದೌ ದೃಷ್ಟೌ ಲೋಕಪ್ರಸಿದ್ಧಿತಃ ॥ ೪೯ ॥**
**ನಾನಯೋರ್ದ್ವ್ಯಾಶ್ರಯತ್ವಂ ಚ ಲೋಕೇ ದೃಷ್ಟಂ ಸ್ಮೃತೌ ತಥಾ |**
**ಜಾನಾತ್ಯರ್ಥೇಷು ಕೋ ಹೇತುರ್ದ್ವ್ಯಾಶ್ರಯತ್ವೇ ನಿಗದ್ಯತಾಮ್ ||**

೪೯–೫೦. ಮಾಡುತ್ತಾನೆ, ನಡೆಯುತ್ತಾನೆ –ಮುಂತಾದ (ಕಡೆ)ಯಲ್ಲಿ ಹೇಗೋಹಾಗೆ ಪ್ರಕೃತಿಯ ಅರ್ಥವೂ ಪ್ರತ್ಯಯದ ಅರ್ಥವೂ ಭಿನ್ನವಾಗಿರುವವಾದರೂ (ಅವಕ್ಕೆ) ಒಂದೇ ಆಶ್ರಯವಿರುವದು ಲೋಕಪ್ರಸಿದ್ಧಿಯಿಂದ ಕಂಡುಬಂದಿರುತ್ತದೆ[1] ; ಇವೆರಡಕ್ಕೂ ಎರಡು (ಬೇರೆಬೇರೆ) ಆಶ್ರಯವಿರುವದು ಲೋಕದಲ್ಲಾಗಲಿ ಸ್ಮೃತಿಯಲ್ಲಾಗಲಿ[2] ಕಂಡುಬಂದಿಲ್ಲ. ಅರಿವು ಎಂಬರ್ಥದ (ಧಾತುಗಳಲ್ಲಿ) ಮಾತ್ರ ಎರಡು ಆಶ್ರಯಗಳಿರುವದಕ್ಕೆ ಕಾರಣವೇನು ? ಹೇಳಿರಿ.

**ಆತ್ಮಾಭಾಸಸ್ತು ತಿಙ್ವಾಚ್ಯೋ ಧಾತ್ವರ್ಥಶ್ಚ ಧಿಯಃ ಕ್ರಿಯಾ |**
**ಉಭಯಂ ಚಾವಿವೇಕೇನ ಜಾನಾತೀತ್ಯುಚ್ಯತೇ ಮೃಷಾ ॥ ೫೧ ॥**

೫೧. ಆತ್ಮಾಭಾಸವು ತಿಙ್ಪ್ರತ್ಯಯಕ್ಕೆ ವಾಚ್ಯವು, ಧಾತ್ವರ್ಥವಾದ ಕ್ರಿಯೆಯು ಬುದ್ಧಿಗೆ ಸೇರಿದ್ದು. ಇವೆರಡನ್ನೂ ಬಿಡಿಸಿ ತಿಳಿದುಕೊಳ್ಳದೆ (ಸುಳ್ಳು) ಸುಳ್ಳಾಗಿಯೇ 'ಅರಿಯುತ್ತಾನೆ' ಎನ್ನುತ್ತಾರೆ.

**ನ ಬುದ್ಧೇರವಬೋಧೋಽಸ್ತಿ ನಾತ್ಮನೋ ವಿದ್ಯತೇ ಕ್ರಿಯಾ |**
**ಅತೋ ನಾನ್ಯತರಸ್ಯಾಪಿ ಜಾನಾತೀತಿ ಚ ಯುಜ್ಯತೇ ॥ ೫೨ ॥**

೫೨. ಅಂತಃಕರಣಕ್ಕೆ ಜ್ಞಾನವಿಲ್ಲ, ಆತ್ಮನಿಗೆ ವಿಕಾರವಿಲ್ಲ. ಆದ್ದರಿಂದ ಇವೆರಡರಲ್ಲಿ ಒಂದಕ್ಕೂ 'ಅರಿಯುತ್ತಾನೆ' ಎಂಬ ವ್ಯವಹಾರವು ಸಲ್ಲದು[3].

**ನಾಪ್ಯತೋ ಭಾವಶಬ್ದೇನ ಜ್ಞಪ್ತಿರಿತ್ಯಪಿ ಯುಜ್ಯತೇ |**
**ನ ಹ್ಯಾತ್ಮಾ ವಿಕ್ರಿಯಾಮಾತ್ರೋ ನಿತ್ಯ ಆತ್ಮೇತಿ ಶಾಸನಾತ್ ॥ ೫೩ ॥**

೫೩. ಆದ್ದರಿಂದ 'ಅರಿವು' ಎಂಬ ಭಾವಶಬ್ದದಿಂದ (ಹೇಳುವದೂ) ಯುಕ್ತವಾಗುವದಿಲ್ಲ. ಏಕೆಂದರೆ ಆತ್ಮನು ಬರಿಯ ವಿಕಾರರೂಪನಲ್ಲ ; ಆತ್ಮನು ನಿತ್ಯನು ಎಂದು ಶಾಸ್ತ್ರವಿದೆ[4].

---

1. ಮಾಡುತ್ತಾನೆ –ಎಂಬಲ್ಲಿ ಕ್ರಿಯೆಗೂ ಕರ್ತೃತ್ವಕ್ಕೂ ಒಬ್ಬನೇ ಆಶ್ರಯವು.

2. ವ್ಯಾಕರಣದಲ್ಲಾಗಲಿ.

3. ಆತ್ಮನಿಗೆ ಜ್ಞಾತೃತ್ವವು, ಜ್ಞಾನಕರ್ತೃತ್ವವು, ಇಲ್ಲ –ಎಂಬುದಕ್ಕೆ ಕಾರಣವಿದು. ಜ್ಞಾತೃತ್ವವು ಪರಮಾರ್ಥದೃಷ್ಟಿಯಿಂದ ಯಾರಿಗೂ ಇಲ್ಲ ಎಂದು ಪ್ರಸಂಗವಶದಿಂದ ಇಲ್ಲಿ ಹೇಳಿದೆ.

4. ಈ ಅರ್ಥವ ಶ್ರುತಿಗಳಿವೆಯಾದ್ದರಿಂದ ಆತ್ಮನು ಧಾತ್ವರ್ಥರೂಪವಾದ ಕ್ರಿಯೆಯಲ್ಲ.

**ನ ಬುದ್ಧೇರ್ಬುದ್ಧಿವಾಚ್ಯತ್ವಂ ಕರಣಂ ನ ಹ್ಯಕರ್ತೃಕಮ್ |**
**ನಾಪಿ ಜ್ಞಾಯತ ಇತ್ಯೇವಂ ಕರ್ಮಶಬ್ದೈರ್ನಿರೂಪ್ಯತೇ || ೫೪ ||**

೫೪. ಬುದ್ಧಿಗೆ (ಸಲ್ಲುವ) ಬುದ್ಧಿಶಬ್ದವಾಚ್ಯತ್ವವೂ (ಆತ್ಮನಿ)ಗಿಲ್ಲ. ಏಕೆಂದರೆ ಕರ್ತೃವಿಲ್ಲದ ಕರಣವಿರುವದಿಲ್ಲ[1]. ಅರಿಯಲ್ಪಡುತ್ತದೆ ಎಂದಿಂತು ಕರ್ಮಶಬ್ದಗಳಿಂದಲೂ (ಆತ್ಮನನ್ನು) ತಿಳಿಸುವದಕ್ಕೆ ಆಗುವದಿಲ್ಲ[2].

**ನ ಯೇಷಾಮೇಕ ಏವಾತ್ಮಾ ನಿರ್ದುಃಖೋಽವಿಕ್ರಿಯಃ ಸದಾ |**
**ತೇಷಾಂ ಸ್ಯಾಚ್ಛಬ್ದವಾಚ್ಯತ್ವಂ ಜ್ಞೇಯತ್ವಂ ಚಾತ್ಮನಃ ಸದಾ || ೫೫ ||**
**ಯದಾಹಙ್ಕರ್ತುರಾತ್ಮತ್ವಂ ತದಾ ಶಬ್ದಾರ್ಥಮುಖ್ಯತಾ |**
**ನಾಶನಾಯಾದಿಮತ್ತ್ವಾತ್ತು ಶ್ರುತೌ ತಸ್ಯಾತ್ಮತೇಷ್ಯತೇ || ೫೬ ||**

೫೫–೫೬. ಯಾರ (ಮತದಲ್ಲಿ) ಆತ್ಮನು ನಿರ್ದುಃಖನೂ ಅವಿಕ್ರಿಯನೂ ಅದ್ವಿತೀಯನೂ ಅಲ್ಲವೊ, ಅವರ (ಮತದಲ್ಲಿ) ಆತ್ಮನು ಯಾವಾಗಲೂ (ಜ್ಞಾತ್ರಾದಿ)ಶಬ್ದಕ್ಕೆ ವಾಚ್ಯನೂ ಜ್ಞೇಯನೂ ಆಗಿರುವನು[3]. ಯಾವಾಗ ಅಹಂಕರ್ತೃವೇ ಆತ್ಮನೆಂದಾಗುವದೋ ಆಗ ಶಬ್ದಾರ್ಥವು ಮುಖ್ಯಾರ್ಥವೆಂದಾಗುವದು. ಆದರೆ ಹಸಿವು ಮುಂತಾದವುಗಳಿರುವದರಿಂದ ಅದು ಆತ್ಮನೆಂಬುದನ್ನು (ಶ್ರುತಿಯು) ಒಪ್ಪುವದಿಲ್ಲ[4].

## ಜ್ಞಾನಶಬ್ದಗಳ ಗತಿ

**ಪನ್ನ ತರ್ಹಿ ನ ಮುಖ್ಯಾರ್ಥೋ ನಾಪಿ ಗೌಣಃ ಕಥಂಚನ |**
**ಜಾನಾತೀತ್ಯಾದಿಶಬ್ದಸ್ಯ ಗತಿರ್ವಾಚ್ಯಾ ತಥಾಪಿ ತು || ೫೭ ||**
**ಶಬ್ದಾನಾಮಯಥಾರ್ಥತ್ವೇ ವೇದಸ್ಯಾಪ್ಯಪ್ರಮಾಣತಾ |**
**ಸಾ ಚ ನೇಷ್ಟಾ ತತೋ ಗ್ರಾಹ್ಯಾ ಗತಿರಸ್ಯ ಪ್ರಸಿದ್ಧಿತಃ || ೫೮ ||**

1. ಆತ್ಮನು ಕರಣರೂಪವಾದ ಜ್ಞಾನವಾದರೆ, ಎಂದರೆ ಅಂತಃಕರಣದಂತೆ ಕರಣವಾಗಿದ್ದರೆ, ಅವನಿಗೆ ಬೇರೊಬ್ಬ ಕರ್ತೃ ಬೇಕಾಗುವದು. ಆತ್ಮನಿಗಿಂತ ಬೇರೆ ಯಾವ ಕರ್ತೃವೂ ಪ್ರಸಿದ್ಧನಾಗಿಲ್ಲ.

2. ಆತ್ಮನು 'ಜ್ಞೇಯನು' ಎಂದು ಮುಂತಾಗಿ ಕರ್ಮರೂಪದಲ್ಲಿಯೂ ಹೇಳುವದಕ್ಕೆ ಬರುವದಿಲ್ಲ; ಏಕೆಂದರೆ ಅದು ಅವಿಷಯನಾಗಿರುತ್ತಾನೆ.

3. ಆತ್ಮರು ಅನೇಕ, ಆತ್ಮನು ಸುಖದುಃಖಾದಿಗಳುಳ್ಳವನು, ಕ್ರಿಯೆಗಳನ್ನು ಮಾಡುವದರಿಂದ ವಿಕ್ರಿಯೆಗಳುಳ್ಳವನು –ಎಂದು ಹೇಳುವವರು ಆತ್ಮನನ್ನು ಶಬ್ದವಾಚ್ಯನೆಂದು ಹೇಳಬಹುದು; ಆದರೆ ಅವರ ಮತವು ಶ್ರುತಿವಿರುದ್ಧವಾಗುತ್ತದೆ.

4. ಅಹಂಪ್ರತ್ಯಯಗನ್ನುನೇ ಆತ್ಮನೆನ್ನುವವರು ಆತ್ಮನಿಗೆ ಹಸಿವುಬಾಯಾರಿಕೆ ಮುಂತಾದವುಗಳಿವೆಯೆಂಬುದು ಒಪ್ಪಬೇಕಾಗುವದು. ಆದರೆ ಬೃ. ೩-೫-೧ ಮುಂತಾದ ಶ್ರುತಿಗಳಿಗೆ ವಿರುದ್ಧವಾಗಿರುತ್ತದೆ.

೫೭-೫೮. (ಆಕ್ಷೇಪ):– ಸರಿ, ಹಾಗಾದರೆ 'ಅರಿಯುತ್ತಾನೆ' ಮುಂತಾದ ಶಬ್ದಕ್ಕೆ ಹೇಗೂ ಮುಖ್ಯಾರ್ಥವಾಗಲಿ ಗೌಣಾರ್ಥವಾಗಲಿ ಇಲ್ಲ(ವೆಂದಾಯಿತು). ಆದರೂ (ಅವಕ್ಕೆ) ಗತಿಯನ್ನು ಹೇಳಬೇಕು. ಶಬ್ದಗಳು ಯಥಾರ್ಥವಲ್ಲವೆಂದರೆ ವೇದವೂ ಅಪ್ರಮಾಣವಾಗುವದು. ಆದರೆ ಅದು ಇಷ್ಟವಲ್ಲವಲ್ಲ![1] (ಪರಿಹಾರ) :— ಆದ್ದರಿಂದ (ಇದಕ್ಕೆ) ಪ್ರಸಿದ್ಧಿಯಿಂದಲೇ ಗತಿಯನ್ನು ಹೇಳಬೇಕು.[2]

**ಪ್ರಸಿದ್ಧಿರ್ಮೂಢಲೋಕಸ್ಯ ಯದಿ ಗ್ರಾಹ್ಯಾ ನಿರಾತ್ಮಕಾ ।**
**ಲೋಕಾಯತಿಕಸಿದ್ಧಾನ್ತಃ ಸಾ ಚಾನಿಷ್ಟಾ ಪ್ರಸಜ್ಯತೇ ॥ ೫೯ ॥**

**ಅಭಿಯುಕ್ತಪ್ರಸಿದ್ಧಿಶ್ಚೇತ್ ಪೂರ್ವವದ್ದುರ್ವಿವೇಕತಾ ।**
**ಗತಿಶೂನ್ಯಂ ನ ವೇದೋಽಯಂ ಪ್ರಮಾಣಂ ಸಂವದತ್ಯತ ॥ ೬೦ ॥**

೫೯-೬೦. (ಆಕ್ಷೇಪ) :— ಮೂಢಜನರ ಪ್ರಸಿದ್ಧಿಯಾದರೆ ಆತ್ಮನೇ ಇಲ್ಲ(ವೆಂಬ) ಲೋಕಾಯತಿಕರ ಸಿದ್ಧಾಂತವನ್ನೂ ತೆಗೆದುಕೊಳ್ಳಬೇಕು.[3] ಅದು ಅನಿಷ್ಟವಾಗಿರುತ್ತದೆ. ಬಲ್ಲವರ ಪ್ರಸಿದ್ಧಿಯಾದರೆ ಹಿಂದೆ (ಹೇಳಿ)ದಂತೆ (ಜ್ಞಾತೃತ್ವಾದಿಗಳು ಯಾರಿಗೆ ಸೇರಿದವೆಂಬುದನ್ನು) ವಿಂಗಡಿಸುವದು ಆಗುವದಿಲ್ಲ. ಪ್ರಮಾಣವಾದ ವೇದವು (ಯಾವ) ಗತಿಯೂ ಇಲ್ಲದ್ದನ್ನು ಹೇಳಲಾರದು.[4]

**ಆದರ್ಶೇ ಮುಖಸಾಮಾನ್ಯಂ ಮುಖಸ್ಯೇಷ್ಟಂ ಹಿ ಮಾನವೈಃ ।**
**ಮುಖಸ್ಯ ಪ್ರತಿಬಿಮ್ಬೋ ಹಿ ಮುಖಾಕಾರೇಣ ದೃಶ್ಯತೇ ॥ ೬೧ ॥**

**ಯತ್ರ ಯಸ್ಯಾವಭಾಸಸ್ತು ತಯೋರೇವಾವಿವೇಕತಃ ।**
**ಜಾನಾತೀತಿ ಕ್ರಿಯಾಂ ಸರ್ವೋ ಲೋಕೋ ವಕ್ತಿ ಸ್ವಭಾವತಃ ॥ ೬೨ ॥**

---

1. ವೇದವು ಶಬ್ದಾತ್ಮಕವಾಗಿರುವದರಿಂದ ಜಾನಾತಿ (ಅರಿಯುತ್ತಾನೆ) ಮುಂತಾದ ಶಬ್ದಗಳಿರುವ ವಾಕ್ಯಗಳು ಪ್ರಮಾಣವಾಗಬೇಕಾದರೆ ಈ ಶಬ್ದಗಳಿಗೆ ನಿಜವಾದ ಅರ್ಥವಿರಬೇಕು– ಎಂದು ಭಾವ.

2. ವ್ಯವಹಾರಪ್ರಸಿದ್ಧಿಯಿಂದ 'ಜಾನಾತಿ' ಮುಂತಾದ ಶಬ್ದಗಳಿಗೆ ಅರ್ಥವನ್ನು ಹೇಳಬೇಕು; ಪರಮಾರ್ಥವಾಗಿ ಅರ್ಥವಿಲ್ಲದಿದ್ದರೂ ಬಾಧಕವಿಲ್ಲ ಎಂದು ಸಿದ್ಧಾಂತಿಯ ಭಾವ.

3. ಚಾರ್ವಾಕರು ದೇಹವೇ ಆತ್ಮನೆನ್ನುತ್ತಾರೆ; ಅದೂ ಈ ನ್ಯಾಯದಿಂದ ಪ್ರಮಾಣವಾದೀತು.

4. ವೇದಾಂತಿಗಳ ಪ್ರಸಿದ್ಧಿಯಂತೆ ಜಾನಾತಿಶಬ್ದಕ್ಕೆ ಗತಿಯೇ ಇಲ್ಲ; ಆದ್ದರಿಂದ ಶ್ರುತಿಯು ಅದ್ವೈತವನ್ನು ಹೇಳುವದಿಲ್ಲ ಎಂಬುದೇ ಯುಕ್ತ– ಎಂದು ಆಕ್ಷೇಪಕನ ಭಾವ.

೬೧–೬೨. (ಸಮಾಧಾನ) :— ಕನ್ನಡಿಯಲ್ಲಿರುವ ಮುಖದ ಹೋಲಿಕೆಯು ಮುಖಕ್ಕೆ (ಇರುವದೆಂದು) ಜನರು ಒಪ್ಪಿರುತ್ತಾರಲ್ಲವೆ ? ಏಕೆಂದರೆ ಮುಖದ ಪ್ರತಿಬಿಂಬವು ಮುಖದ ಆಕಾರದಲ್ಲಿ ಕಾಣಿಸುತ್ತದೆ ಎಲ್ಲಿ ಯಾವದರ ಆಭಾಸವಿರುವದೋ ಅವೆರಡನ್ನೂ ವಿಂಗಡಿಸಿಕೊಳ್ಳಲಾರದೆ 'ಅರಿಯುತ್ತಾನೆ' ಎಂದು ಕ್ರಿಯೆಯನ್ನು ಜನರೆಲ್ಲರೂ ಸ್ವಭಾವದಿಂದ (ಆತ್ಮನಿಗೆ) ಹೇಳುತ್ತಿದಾರೆ.[1]

**ಬುದ್ಧೇಃ ಕರ್ತೃತ್ವಮಧ್ಯಸ್ಯ ಜಾನಾತೀತಿ ಜ್ಞ ಉಚ್ಯತೇ ।**
**ತಥಾ ಚೈತನ್ಯಮಧ್ಯಸ್ಯ ಜ್ಞತ್ವಂ ಬುದ್ಧೇರಿಹೋಚ್ಯತೇ ॥ ೬೩ ॥**

೬೩. ಅಂತಃಕರಣದ ಕರ್ತೃತ್ವವನ್ನು ಅಧ್ಯಾಸಮಾಡಿ ಆತ್ಮನು ಅರಿಯುತ್ತಾನೆ ಎನ್ನುವರು. ಹಾಗೆಯೇ (ಆತ್ಮನ) ಚೈತನ್ಯವನ್ನು ಅಧ್ಯಾಸಮಾಡಿ ಅಂತಃಕರಣವು ಅರಿಯುತ್ತದೆ ಎನ್ನುವರು.

**ಸ್ವರೂಪಂ ಚಾತ್ಮನೋ ಜ್ಞಾನಂ ನಿತ್ಯಂ ಜ್ಯೋತಿಃಶ್ರುತೇರ್ಯತಃ ।**
**ನ ಬುದ್ಧ್ಯಾ ಕ್ರಿಯತೇ ತಸ್ಮಾನ್ನಾತ್ಮನಾನ್ಯೇನ ವಾ ಸದಾ ॥ ೬೪ ॥**

೬೪. ಆತ್ಮನ ಜ್ಞಾನವು ಜ್ಯೋತಿಃಶ್ರುತಿಯ (ಪ್ರಮಾಣ)ದಿಂದ ಸ್ವರೂಪವೇ ಆಗಿರುವದರಿಂದ ನಿತ್ಯವಾಗಿರುತ್ತದೆ. ಆದರೆ ಅದು ಅಂತಃಕರಣದಿಂದಲಾಗಲಿ ಆತ್ಮನಿಂದಲಾಗಲಿ ಮತ್ತೊಂದರಿಂದಲಾಗಲಿ ಎಂದಿಗೂ ಮಾಡಲ್ಪಡುವದಿಲ್ಲ.[2]

**ದೇಹೇಽಹಂಪ್ರತ್ಯಯೋ ಯದ್ವಜ್ಜಾನಾತೀತಿ ಚ ಲೌಕಿಕಾಃ ।**
**ವದನ್ತಿ ಜ್ಞಾನಕರ್ತೃತ್ವಂ ತದ್ವದ್ಬುದ್ಧೇಸ್ತಥಾತ್ಮನಃ ॥ ೬೫ ॥**

---

1. ಚಿಕ್ಕಮಕ್ಕಳೂ ಅಜ್ಞರಾದವರೂ ಕನ್ನಡಿಯಲ್ಲಿರುವ ಪ್ರತಿಬಿಂಬದ ಧರ್ಮವನ್ನು ಬಿಂಬವಾದ ಮುಖವನ್ನು ಎಂತ ವ್ಯವಹರಿಸುವಂತೆ ಅಂತಃಕರಣದಲ್ಲಿ ಆಗುವ ವಿಕಾರವನ್ನೂ ಆಭಾಸವನ್ನೂ ವಿಂಗಡಿಸಿಕೊಳ್ಳಲಾರದೆ ಆತ್ಮನಿಗೇ ಹೇಳುತ್ತಿದಾರೆ. 'ಜಾನಾತಿ' ಅರಿಯುತ್ತಾನೆ ಎಂಬ ವ್ಯವಹಾರಕ್ಕೆ ಭ್ರಾಂತಿಯೇ ಗತಿ ಎಂದು ಭಾವ.

2. ಆತ್ಮನು ಜ್ಞಾತೃವಲ್ಲ, ಅಂತಃಕರಣವೂ ಅಲ್ಲ; ಎರಡನ್ನೂ ಕಲೆಬೆರಕೆಮಾಡಿ ಅರಿಯುತ್ತಾನೆ ಎಂಬ ವ್ಯವಹಾರವಾಗುತ್ತದೆ ಎಂದು ಅಭಿಪ್ರಾಯ.

೬೫. ದೇಹದಲ್ಲಿ ನಾನು ಎಂಬ ಬುದ್ಧಿಯು ಹೇಗೋ ಅದರಂತೆ ಜನರು 'ಅರಿಯುತ್ತಾನೆ' ಎಂದು ಅಂತಃಕರಣದ ಜ್ಞಾನಕರ್ತೃತ್ವವನ್ನು ಆತ್ಮನಿಗೆ ಹೇಳುತ್ತಾರೆ.[1]

**ಬೌದ್ಧೈಸ್ತು ಪ್ರತ್ಯಯೈರೇಸಂ ಕ್ರಿಯಮಾಣೈಶ್ಚ ಚಿನ್ನಿಭೈಃ ।**
**ಮೋಹಿತಾಃ ಕ್ರಿಯತೇ ಜ್ಞಾನಮಿತ್ಯಾಹುಸ್ತಾರ್ಕಿಕಾ ಜನಾಃ ॥೬೬॥**

೬೬. ಹೀಗೆ ಬುದ್ಧಿಯ ಚಿದಾಭಾಸಪ್ರತ್ಯಯಗಳು ಉಂಟಾಗುತ್ತಿರುವಲ್ಲಿ ತಾರ್ಕಿಕರು ಭ್ರಾಂತಿಯಿಂದ ಜ್ಞಾನವೇ ಉಂಟಾಗುತ್ತದೆ ಎನ್ನುತ್ತಾರೆ.[2]

**ತಸ್ಮಾಜ್ಜ್ಞಾಭಾಸಬುದ್ಧೀನಾಮವಿವೇಕಾತ್ ಪ್ರವರ್ತಿತಾಃ ।**
**ಜಾನಾತೀತ್ಯಾದಿಶಬ್ದಾಶ್ಚ ಪ್ರತ್ಯಯೋ ಯಾ ಚ ತತ್ಸ್ಮೃತಿಃ ॥ ೬೭ ॥**

೬೭. ಆದ್ದರಿಂದ ಆತ್ಮ, ಆಭಾಸ, ಬುದ್ಧಿ – ಇವುಗಳನ್ನು ವಿಂಗಡಿಸಿಕೊಳ್ಳದೆ ಇರುವದರಿಂದ 'ಅರಿಯುತ್ತಾನೆ' ಮುಂತಾದ ಶಬ್ದ, ಪ್ರತ್ಯಯ, ಅದರಿಂದಾದ ಸ್ಮೃತಿ – (ಇವೆಲ್ಲವೂ) ಪ್ರವರ್ತಿಸುತ್ತವೆ.[3]

**ಆದರ್ಶಾನುವಿಧಾಯಿತ್ವಂ ಛಾಯಾಯಾ ಅಸ್ಯತೇ ಮುಖೇ ।**
**ಬುದ್ಧಿಧರ್ಮಾನುಕಾರಿತ್ವಂ ಜ್ಞಾಭಾಸಸ್ಯ ತಥೇಷ್ಯತೇ ॥ ೬೮ ॥**

೬೮. ಪ್ರತಿಬಿಂಬವು ಕನ್ನಡಿಯನ್ನನುಸರಿಸುತ್ತಿರುವದನ್ನು ಮುಖದಲ್ಲಿ ಅಧ್ಯಾಸಮಾಡುತ್ತಾರೆ.[4] ಚಿದಾಭಾಸವು ಅಂತಃಕರಣಧರ್ಮವನ್ನು ಅನುಸರಿಸುವದನ್ನೂ ಹಾಗೆಯೇ ತಿಳಿಯಬೇಕು.[5]

---

1. ದೇಹವನ್ನು ನಾನು ಎಂದು ತಿಳಿಯುವದು ತಪ್ಪೆಂದು ದೇಹವ್ಯತಿರಿಕ್ತನಾಗಿರುವ ಆತ್ಮನನ್ನು ಒಪ್ಪುವ ವಾದಿಗಳೆಲ್ಲರೂ ಹೇಳುತ್ತಾರೆ. ಆತ್ಮನ ಅಹಂಪ್ರತ್ಯಯವಿಷಯತ್ವವನ್ನು ಅವಿವೇಕಿಗಳು ದೇಹದಲ್ಲಿ ಆರೋಪಿಸಿರುತ್ತಾರೆಂದು ಅವರು ಹೇಳುತ್ತಾರೆ. ಇದರಂತೆ ಅಂತಃಕರಣದಲ್ಲಿರುವ ವಿಕಾರವನ್ನು ಆತ್ಮನಲ್ಲಿ ಆರೋಪಿಸಿ ಆತ್ಮನು ಜ್ಞಾನಕರ್ತೃವೆಂದು ತಪ್ಪಾಗಿ ತಿಳಿಯುತ್ತಾರೆ ಎಂದು ವೇದಾಂತಿಗಳು ಹೇಳುವರು.

2. ಜ್ಞಾನವು ಚೈತನ್ಯವಾಗಿರುತ್ತದೆ; ಅದು ಹೊಸದಾಗಿ ಉಂಟಾಗತಕ್ಕದ್ದಲ್ಲ. ಆದರೂ ಚಿದಾಭಾಸಪ್ರತ್ಯಯವು ಉಂಟಾದರೆ ಚಿತ್ತೇ ಉಂಟಾಯಿತೆಂದು ತಪ್ಪಾಗಿ ತಿಳಿಯುತ್ತಾರೆ ಎಂದರ್ಥ. ಜ್ಞಾತೃತ್ವವು ನಿರ್ವಿಕಾರನಾದ ಆತ್ಮನಿಗೆ ಹೇಗೆ ಅಧ್ಯಾಸದಿಂದ ಬಂದದ್ದೋ ಜ್ಞಾನತ್ವವೂ ಹಾಗೆಯೇ ಅಧ್ಯಾಸದಿಂದ ಬಂದದ್ದು ಎಂದು ಭಾವ.

3. ಅರಿಯುತ್ತಾನೆ ಮುಂತಾದ ಎಂದರೆ ಜ್ಞಾನ, ಜ್ಞಾತೃ, ಜ್ಞೇಯತ್ವರೂಪವಾದ. ಈ ಶಬ್ದಗಳ ಪ್ರವೃತ್ತಿಯೂ ಈ ಪ್ರತ್ಯಯಸ್ಮೃತಿಗಳ ಪ್ರವೃತ್ತಿಯೂ ಮೇಲೆ ಹೇಳಿದಂತೆ ಅಧ್ಯಾಸದಿಂದಲೇ ಪ್ರವೃತ್ತಿಸುತ್ತವೆ – ಎಂದು ಉಪಸಂಹಾರಮಾಡಿರುತ್ತದೆ.

4. ಪ್ರತಿಬಿಂಬದ ಧರ್ಮವನ್ನು ಬಿಂಬಕ್ಕೆ ಹುಡುಗರು ಹುಟ್ಟುಗಟ್ಟುತ್ತಾರೆ.

5. ಅದನ್ನೂ ಅವಿವೇಕಿಗಳು ಆತ್ಮನಿಗೆ ಹುಟ್ಟುಗಟ್ಟುತ್ತಾರೆಂದು ಅರಿಯಬೇಕು – ಎಂದು ಅಭಿಪ್ರಾಯ.

## ಪ್ರತ್ಯಯಗಳೇ ಅರಿಯುವವೆಂದು ತಿಳಿಯುವದಕ್ಕೆ ಆಭಾಸದ ಅಜ್ಞಾನವೇ ಕಾರಣ

**ಬುದ್ಧೇಸ್ತು ಪ್ರತ್ಯಯಾಸ್ತಸ್ಮಾದಾತ್ಮಾಭಾಸೇನ ದೀಪಿತಾಃ |**
**ಗ್ರಾಹಕಾ ಇವ ಭಾಸನ್ತೇ ದಹನ್ತೀವೋಲ್ಮುಕಾದಯಃ || ೬೯ ||**

೬೯. ಆದ್ದರಿಂದ ಆತ್ಮಾಭಾಸದಿಂದ ಬೆಳಗುತ್ತಿರುವ ಬುದ್ಧಿಪ್ರತ್ಯಯಗಳು ತಾವೇ ಗ್ರಾಹಕಗಳಾಗಿರುವಂತೆ ತೋರುತ್ತವೆ. ಕೊಳ್ಳಿಯೇ ಮುಂತಾದವುಗಳು ಸುಡುವಂತೆ (ತೋರುವದಿಲ್ಲವೆ) ?[1]

**ಸ್ವಯಮೇವಾವಭಾಸ್ಯನ್ತೇ ಗ್ರಾಹಕಾಃ ಸ್ವಯಮೇವ ಚ |**
**ಇತ್ಯೇವಂ ಗ್ರಾಹಕಾಸ್ತಿತ್ವಂ ಪ್ರತಿಷೇಧನ್ತಿ ಸೌಗತಾಃ || ೭೦ ||**

೭೦. ಬೌದ್ಧರು (ಪ್ರತ್ಯಯಗಳು) ತಾವೇ ಅರಿಯುವವು, ತಾವೇ ಅರಿಯಲ್ಪಡುವವು --ಎಂದಿಂತು ಅರಿಯುವ (ಆತ್ಮನನ್ನು) ಅಲ್ಲಗಳೆಯುತ್ತಾರೆ.[2]

**ಯದ್ಯೇವಂ ನಾನ್ಯದೃಶ್ಯಾಸ್ತೇ ಕಿಂ ತದ್ವಾರಣಮುಚ್ಯತಾಮ್ ।**
**ಭಾವಾಭಾವೌ ಹಿ ತೇಷಾಂ ಯೌ ನಾನ್ಯಗ್ರಾಹ್ಯೌ ಸತಾ ಯದಿ ॥ ೭೧ ॥**

೭೧. ಹೀಗೆ ಅವು ಮತ್ತೊಂದಕ್ಕೆ ದೃಶ್ಯವಲ್ಲವಾದರೆ, ಅವುಗಳ ಭಾವವೂ ಅಭಾವವೂ ಮತ್ತೊಂದು ಇರುವ ವಸ್ತುವಿನಿಂದ ಅರಿಯಲ್ಪಡದೆ ಇದ್ದರೆ ಆ (ಬೌದ್ಧರನ್ನು) ನಿವಾರಿಸುವದು ಹೇಗೆ ? ಹೇಳಿರಿ.[3]

**ಅನ್ವಯೀ ಗ್ರಾಹಕಸ್ತೇಷಾಮಿತ್ಯೇತದಪಿ ತತ್ಸಮಮ್ ।**
**ಅಚಿತಿತ್ವಸ್ಯ ತುಲ್ಯತ್ವಾದನ್ಯಸ್ಮಿನ್ ಗ್ರಾಹಕೇಽಸತಿ || ೭೨ ||**

೭೨. (ಅವುಗಳಲ್ಲಿ) ಅನುಗತವಾಗಿರುವ (ಅಹಂಕಾರವು) ಅವುಗಳನ್ನು ಅರಿಯುವದು ಎಂದು ಹೇಳುವದು ಮತ್ತೊಂದು ಗ್ರಾಹಕವಿಲ್ಲದಿದ್ದರೆ ಅದಕ್ಕೇ

---

1 ಕೊಳ್ಳಿಗಳು ಸುಡುವಂತೆ ಕಂಡರೂ ನಿಜವಾಗಿ ಸುಡುವದು ಬೆಂಕಿಯೇ; ಹಾಗೆ ಪ್ರತ್ಯಯಗಳು ಅರಿಯುವವೆಂಬುದೂ ಹೀಗೆ ಚಿದಾಭಾಸಸಂಪರ್ಕದಿಂದಲೇ.

2. ತನಗೆ ತಾನೇ ವಿಷಯವಾಗಿರುವದೆಂಬ ಆತ್ಮಾಶ್ರಯದೋಷವು ಅವರಿಗೆ ಹತ್ತಿಕೊಂಡಿರುತ್ತದೆ.

3. ಪ್ರತ್ಯಯಗಳು ತಮ್ಮನ್ನು ತಾವಂತೂ ಅರಿಯುವಹಾಗಿಲ್ಲ; ಕ್ಷಣಿಕವಾಗಿರುವದರಿಂದ ಒಂದನ್ನೊಂದು ಅರಿಯುವಂತೆಯೂ ಇಲ್ಲ. ಆದ್ದರಿಂದ ಪ್ರತ್ಯಯಗಳ ಭಾವಾಭಾವಗಳನ್ನು ಅರಿಯುವ ಮತ್ತೊಂದು ಗ್ರಾಹಕವು ಯಾವದು ಎಂಬುದನ್ನು ತಿಳಿಸಿಕೊಟ್ಟೇ ಬೌದ್ಧರನ್ನು ಅಲ್ಲಗಳೆಯಬೇಕು.

ಸಮವಾಗಿರುತ್ತದೆ ಏಕೆಂದರೆ ಅಚೇತನವಾಗಿರುವದೆಂಬುದು ಸಮಾನವಾಗಿರುತ್ತದೆ.[1]

**ಅಧ್ಯಕ್ಷಸ್ಯ ಸಮೀಪೇ ತು ಸಿದ್ಧಿಃ ಸ್ಯಾದಿತಿ ಚೇನ್ಮತಮ್ ।**
**ನಾಧ್ಯಕ್ಷೇಽನುಪಕಾರಿತ್ವಾದನ್ಯತ್ರಾಪಿ ಪ್ರಸಜ್ಯತಃ ॥ ೭೩ ॥**

೭೩. ಸಾಕ್ಷಿಯ ಸಮೀಪದಲ್ಲಿ (ಅಹಂಕಾರವು ಗ್ರಾಹಕವಾಗಿ) ಸಿದ್ಧಿಯಾಗಬಹುದು ಎಂಬುದು (ನಿಮ್ಮ) ಮತವಾದರೆ (ಅದು) ಸರಿಯಲ್ಲ. ಏಕೆಂದರೆ (ಸಾಕ್ಷಿಯು) ಸಾಕ್ಷ್ಯಕ್ಕೆ ಯಾವ ಉಪಕಾರವನ್ನೂ ಮಾಡುವದಿಲ್ಲ.[2] ಮತ್ತೊಂದರಲ್ಲಿಯೂ (ಅದು) ಆಗಬಹುದಾಗುವದು.[3]

## ಆಭಾಸವನ್ನೊಪ್ಪದಿದ್ದರೆ ವಾಕ್ಯೋಪದೇಶವು ಯಾರಿಗೆ?

**ಅರ್ಥೀ ದುಃಖೀ ಚ ಯಃ ಶ್ರೋತಾ ಸತ್ತ್ವಧ್ಯಕ್ಷೋಽಥವೇತರಃ ।**
**ಅಧ್ಯಕ್ಷಸ್ಯ ಚ ದುಃಖಿತ್ವಮರ್ಥಿತ್ವಂ ಚ ನ ತೇ ಮತಮ್ ॥ ೭೪ ॥**

೭೪. (ಪುರುಷಾರ್ಥವನ್ನು) ಬಯಸುವವನೂ ದುಃಖಿಯೂ ಆಗಿರುವ ಶ್ರೋತೃವೇ ಅಧ್ಯಕ್ಷನೊ, ಬೇರೆ ಇನ್ನೊಬ್ಬನೊ? ಅಧ್ಯಕ್ಷನು ದುಃಖಿಯೂ ಅರ್ಥಿಯೂ ಆಗಿರುವನೆಂಬುದಂತೂ ನಿನ್ನ ಮತವಲ್ಲ.[4]

**ಕರ್ತಾಧ್ಯಕ್ಷಃ ಸದಸ್ಮೀತಿ ನೈವ ಸದ್ಗ್ರಹಮರ್ಹತಿ ।**
**ಸದೇವಾಸೀತಿ ಮಿಥ್ಯೋಕ್ತಿಃ ಶ್ರುತೇರಪಿ ನ ಯುಜ್ಯತೇ ॥ ೭೫ ॥**

---

1. ಅಹಂಕಾರವೂ ಪ್ರತ್ಯಯಗಳಂತೆ ಅಚೇತನವಾಗಿರುತ್ತದೆ. ಆದ್ದರಿಂದ ಬಿಡಿಬಿಡಿಯಾದ ಪ್ರತ್ಯಯಗಳು ಅರಿಯುವವೆಂಬುದು ಹೇಗೆ ಸರಿಯಲ್ಲವೋ ಅಹಂಕಾರವು ಪ್ರತ್ಯಯಗಳಲ್ಲೆಲ್ಲ ಅನುಗತವಾಗಿದ್ದು ಅರಿಯುವದೆಂಬುದೂ ಹಾಗೇ ಸರಿಯಲ್ಲ.

2. ಸಾಕ್ಷಿಯು ಸಾನ್ನಿಧ್ಯದಿಂದ ಸಾಕ್ಷ್ಯವಾದ ಅಹಂಕಾರಕ್ಕೆ ಯಾವ ಉಪಕಾರವನ್ನೂ ಮಾಡುವದಿಲ್ಲ; ಏಕೆಂದರೆ ಹಾಗೆ ಮಾಡುವದಾದರೆ ಅದು ಪರಿಣಾಮಿ ಎಂದಾಗುವದು.

3. ಯಾವ ಉಪಕಾರವನ್ನೂ ಮಾಡದಿದ್ದರೆ ಕಟ್ಟಿಗೆ, ಗೋಡೆ ಮುಂತಾದವುಗಳೂ ಏಕೆ ಗ್ರಾಹಕವಾಗಬಾರದು? ಆದ್ದರಿಂದ ಗ್ರಾಹಕತ್ವವನ್ನು ಆಭಾಸವನ್ನೊಪ್ಪದೆ ಸಾಧಿಸುವದಕ್ಕೆ ಆಗುವಂತಿಲ್ಲ ಎಂದು ಭಾವ.

4. ಆದ್ದರಿಂದ ದುಃಖಿಯಾದ ಸಂಸಾರಿಗಿಂತ ಬೇರೆಯಾಗಿರುವ ಅಧ್ಯಕ್ಷನನ್ನು ಎಂದರೆ ಸಾಕ್ಷಿಯನ್ನು ಒಪ್ಪಬೇಕಾಗಿದೆ. ಆದರೆ ಸಾಕ್ಷಿಯು ಶ್ರೋತೃವಲ್ಲವಲ್ಲ!

೭೫. ಕರ್ತೃವಾದ ಅಧ್ಯಕ್ಷನು ನಾನು ಸತ್ತಾಗಿರುವೆನು ಎಂದು ಸದ್ಬ್ರಹ್ಮ ಜ್ಞಾನಕ್ಕೆ ಅರ್ಹನಾಗಿರುವದಿಲ್ಲ.[1] ನೀನು ಸತ್ತೇ ಆಗಿರುತ್ತೀಯೆ ಎಂದು ಸುಳ್ಳು ಹೇಳುವದು ಶ್ರುತಿಗೂ ಯುಕ್ತವಾಗುವದಿಲ್ಲ.[2]

**ಅವಿವಿಚ್ಯೋಭಯಂ ವಕ್ತಿ ಶ್ರುತಿಶ್ಚೇತ್ ಸ್ಯಾದ್ಗ್ರಹಸ್ತಥಾ ।**
**ಅಸ್ಮದಸ್ತು ವಿವಿಚ್ಯೈವ ತ್ವಮೇವೇತಿ ವದೇದ್ಯದಿ ।**
**ಪ್ರತ್ಯಯಾನ್ವಯಿನಿಷ್ಠತ್ವಮುಕ್ತದೋಷಃ ಪ್ರಸಜ್ಯತೇ ॥ ೭೬ ॥**

೭೬. ಎರಡನ್ನೂ ವಿಂಗಡಿಸದೆ ಶ್ರುತಿಯು ಹೇಳುತ್ತದೆ ಎಂದರೆ ಆಗ ಗ್ರಹಣವು ಆಗಬಹುದಾಗುವದು.[3] ಅಸ್ಮದರ್ಥದಿಂದ ವಿಂಗಡಿಸಿಕೊಂಡೇ 'ನೀನೇ (ಬ್ರಹ್ಮವು)' ಎಂದು ಪ್ರತ್ಯಯಗಳಲ್ಲಿ ಅನುಗತವಾಗಿರುವ (ಅಹಂಕಾರದಲ್ಲಿ) ನಿಲುಗಡೆಯನ್ನೇ ಹೇಳಿದರೆ ಹಿಂದೆ ಹೇಳಿದ ದೋಷವು ಬಂದೊದಗುತ್ತದೆ.[4]

## ಆಭಾಸವನ್ನೊಪ್ಪದಿದ್ದರೆ ಅಹಂಕಾರಕ್ಕೂ ಸಾಕ್ಷಿಗೂ ಸಂಬಂಧವಿಲ್ಲ

**ತ್ವಮಿತ್ಯಧ್ಯಕ್ಷನಿಷ್ಠಶ್ಚೇದಹಮಧ್ಯಕ್ಷಯೋಃ ಕಥಮ್ ।**
**ಸಮ್ಬನ್ಧೋ ವಾಚ್ಯ ಏವಾತ್ರ ಯೇನ ತ್ವಮಿತಿ ಲಕ್ಷಯೇತ್ ॥ ೭೭ ॥**

೭೭. ನೀನು ಎಂಬುದು ಅಧ್ಯಕ್ಷನಿಷ್ಠವಾದರೆ[5] ಅಹಂಕಾರ, ಅಧ್ಯಕ್ಷ ಇವೆರಡಕ್ಕೂ ಸಂಬಂಧವು ಹೇಗೆ? ನೀನು ಎಂದು ಲಕ್ಷಣೆಯಿಂದ ಹೇಳಬೇಕಾದರೆ (ಆ) ಸಂಬಂಧವನ್ನು ಹೇಳಬೇಕು.[6]

---

1. ಏಕೆಂದರೆ ಸದ್ರೂಪವಾದ ಬ್ರಹ್ಮದಲ್ಲಿ ಕರ್ತೃತ್ವವಿಲ್ಲ.

2. ಕರ್ತೃವನ್ನು ಬ್ರಹ್ಮವೆಂದು ತಿಳಿಸಿದರೆ ಶ್ರುತಿಗೂ ಅಪ್ರಾಮಾಣ್ಯವು ಬರುತ್ತದೆ.

3. ಹೀಗೆ ಕರ್ತೃವೂ ಬ್ರಹ್ಮವಲ್ಲ, ಸಾಕ್ಷಿಯು ಬ್ರಹ್ಮವಾದರೂ ಶ್ರೋತೃವಲ್ಲ. ಆದ್ದರಿಂದ ಅಹಂಕರ್ತೃವನ್ನೂ ಸಾಕ್ಷಿಯನ್ನೂ ವಿಂಗಡಿಸಿಕೊಳ್ಳದೆ ಇರುವ ದೆಸೆಯಲ್ಲಿಯೇ 'ತತ್ತ್ವಮಸಿ' ಎಂಬ ವಾಕ್ಯದ ಉಪದೇಶವು; ಉಪದೇಶದಿಂದ ಕರ್ತೃತ್ವವು ಬಾಧಿತವಾಗುತ್ತದೆ – ಎಂಬುದೇ ಯುಕ್ತ.

4. ಬರಿಯ ಅಹಂಕಾರವು ಅಚೇತನವಾದ್ದರಿಂದ ಅದಕ್ಕೆ ತತ್ತ್ವಮಸಿ ಎಂಬ ಉಪದೇಶವು ಹೊಂದುವದಿಲ್ಲ_ಎಂದು ಹಿಂದೆ ಹೇಳಿರುವ ದೋಷವೇ ಗಂಟುಬೀಳುತ್ತದೆ.

5. "ನೀನು ಅದಾಗಿರುವೆ" ಎಂಬ ಶ್ರುತಿವಾಕ್ಯದಲ್ಲಿ ನೀನು ಎಂಬ ಮಾತು ಅಹಂಕಾರವನ್ನು ಹೇಳುವದಿಲ್ಲ, ಅಹಂಕಾರವನ್ನು ಹೇಳುವದರಮೂಲಕ ಸಾಕ್ಷಿಯನ್ನು ಹೇಳುತ್ತದೆ ಎಂಬ ಪಕ್ಷದಲ್ಲಿ.

6. 'ಗಂಗೆಯಲ್ಲಿ ಹಳ್ಳಿಯಿದೆ' ಎಂಬಲ್ಲಿ ಗಂಗೆಗೆ ಸಂಬದ್ಧವಾದ ತೀರವನ್ನು 'ಗಂಗೆ' ಎಂಬ ಶಬ್ದವು ಲಕ್ಷಣೆಯಿಂದ ಹೇಳುವಂತೆ ಇಲ್ಲಿ ತ್ವಂ ಶಬ್ದದಿಂದ ಹೇಳಲ್ಪಡುವ ಅಹಂಕಾರಕ್ಕೂ ಸಾಕ್ಷಿಗೂ ಯಾವ ಸಂಬಂಧವಿರುವದರಿಂದ ನೀನು ಎಂಬುದು ಸಾಕ್ಷಿಯನ್ನು ಹೇಳುತ್ತದೆ ?

**ದ್ರಷ್ಟೃದೃಶ್ಯತ್ವಸಂಬನ್ಧೋ ಯದ್ಯಧ್ಯಕ್ಷೇಽಕ್ರಿಯೇ ಕಥಮ್ ॥೭೭½॥**

**ಅಕ್ರಿಯತ್ವೇಽಪಿ ತಾದಾತ್ಮ್ಯಮಧ್ಯಕ್ಷಸ್ಯ ಭವೇದ್ಯದಿ ।**
**ಆತ್ಮಾಧ್ಯಕ್ಷೋ ಮಮಾಸ್ತೀತಿ ಸಂಬನ್ಧಾಗ್ರಹಣೇನ ಧೀಃ ॥ ೭೮ ॥**

೭೭½–೭೮. ದ್ರಷ್ಟೃದೃಶ್ಯತ್ವವೇ ಸಂಬಂಧವಾದರೆ ಕ್ರಿಯೆಯಿಲ್ಲದ ಅಧ್ಯಕ್ಷನಲ್ಲಿ (ಅದು) ಹೇಗೆ (ಇದ್ದೀತು) ?[1] ಅಕ್ರಿಯನಾದರೂ ಅಧ್ಯಕ್ಷನ ತಾದಾತ್ಮ್ಯವಿರಬಹುದು ಎನ್ನುವದಾದರೆ ಸಂಬಂಧವನ್ನು ಅರಿಯದೆ ಇರುವದರಿಂದ 'ನನ್ನ ಆತ್ಮನು ಅಧ್ಯಕ್ಷನಾಗಿರುವನು' ಎಂದು ತಿಳಿವಳಿಕೆಯಾಗಬೇಕು.[2]

**ಸಂಬನ್ಧಗ್ರಹಣಂ ಶಾಸ್ತ್ರಾದಿತಿ ಚೇನ್ಮನ್ಯಸೇ ನ ಹಿ ।**
**ಪೂರ್ವೋಕ್ತಾಸ್ಸ್ಯುಸ್ತ್ರಿಧಾ ದೋಷಾ ಗ್ರಹೋ ವಾ ಸ್ಯಾನ್ಮಮೇತಿ ಚ ॥**

೭೯. ಶಾಸ್ತ್ರದಿಂದ ಸಂಬಂಧದ ಅರಿವಾಗಬಹುದು ಎಂದು (ನೀನು) ತಿಳಿಯುವೆಯಾದರೆ, (ಆ ಪಕ್ಷದಲ್ಲಿ) ಹಿಂದೆ ಹೇಳಿರುವ ಮೂರು ಬಗೆಯ ದೋಷಗಳುಂಟಾಗುವವು ;[3] ಅಥವಾ ನನ್ನ (ಆತ್ಮನು) ಎಂಬ ಅರಿವು ಆಗಬೇಕಾಗುವದು.[4]

## ಆಭಾಸವನ್ನೊಪ್ಪಿದರೇ ಯಾವ ದೋಷವೂ ಇರುವದಿಲ್ಲ

**ಅದೃಶಿರ್ದೃಶಿರೂಪೇಣ ಭಾತಿ ಬುದ್ಧಿರ್ಯದಾ ತದಾ ।**
**ಪ್ರತ್ಯಯಾ ಅಪಿ ತಸ್ಯಾಃ ಸ್ಯುಸ್ತಪ್ತಾಯೋಽವಿಸ್ಫುಲಿಙ್ಗವತ್ ॥ ೮೦ ॥**

---

1. ದ್ರಷ್ಟೃತ್ವವೆಂಬ ಧರ್ಮವು ಸಾಕ್ಷಿಯಲ್ಲಿದ್ದರೆ ಸಾಕ್ಷಿಯು ವಿಕಾರಿಯಾಗುವನು ; ಇಲ್ಲದಿದ್ದರೆ ದ್ರಷ್ಟೃದೃಶ್ಯತ್ವವೆಂಬ ಸಂಬಂಧವೇ ಇಲ್ಲ ಎಂದು ಭಾವ.

2. ಅಹಂಕಾರಕ್ಕೂ ಸಾಕ್ಷಿಗೂ ತಾದಾತ್ಮ್ಯಸಂಬಂಧವಾದರೆ ಆ ಸಂಬಂಧದ ಜ್ಞಾನವಿಲ್ಲವಾದ್ದರಿಂದ 'ನಾನು ಸಾಕ್ಷಿಯು' ಎಂಬ ಜ್ಞಾನವುಂಟಾಗಬಾರದು, ನನ್ನ ಆತ್ಮನು ಇದಾನೆ– ಎಂದೇ ಆಗಬೇಕು.

3. ಅರಿಯುವವರು ಯಾರು ? ಪ್ರತ್ಯಯವು ಜಡ, ಅಹಂಕಾರವೂ ಜಡ, ಸಾಕ್ಷಿಯ ಸನ್ನಿಧಿಯಿಂದ ಅಹಂಕಾರಕ್ಕೆ ಯಾವ ಉಪಕಾರವೂ ಇಲ್ಲವಲ್ಲ! ೭೩ರಿಂದ ೭೫ನೆಯ ಶ್ಲೋಕಗಳನ್ನು ನೋಡಿ.

4. ಹೇಗೋ ಅಹಂಕಾರಕ್ಕೆ ಆತ್ಮನ ಸನ್ನಿಧಿಯಿಂದ ಅರಿವು ಆಗುತ್ತದೆ ಎಂದರೂ 'ನನ್ನ ಆತ್ಮನು' ಎಂದೇಕೆ ಆಗುವದಿಲ್ಲ? 'ನಾನು' ಎಂದೇ ಆಗುವದಕ್ಕೆ ಕಾರಣವೇನು?

೮೦. ದೃಕ್ಕಲ್ಲದ (ಬುದ್ಧಿಯು) ದೃಗ್ರೂಪದಿಂದ ತೋರುತ್ತದೆ ಎಂಬ (ಪಕ್ಷವನ್ನು) ಯಾವಾಗ (ಒಪ್ಪುವೆವೋ), ಆಗ ಅದರ ಪ್ರತ್ಯಯಗಳೂ ಕಾದ ಕಬ್ಬಿಣದ ಕಿಡಿಗಳಂತೆ (ಚಿದಾಭಾಸವಾಗಿ) ಇರಬಹುದಾಗುವದು.[1]

**ಆಭಾಸಸ್ತದಭಾವಶ್ಚ ದೃಶೇಃ ಸಿದ್ಧ್ಯೇನ್ನ ಚಾನ್ಯಥಾ ।**
**ಲೋಕಸ್ಯ ಯುಕ್ತಿತಃ ಸ್ಯಾತಾಂ ತದ್ಗ್ರಹಶ್ಚ ತಥಾ ಸತಿ ॥ ೮೧ ॥**

೮೧. ಹಾಗಾದರೆ ಜನರಿಗೆ ಆಭಾಸವೂ ಅದರ ಅಭಾವವೂ ಸಾಕ್ಷಿಯ ದೆಸೆಯಿಂದಲೇ[2] ತಿಳಿಯುವವೇ ಹೊರತು ಮತ್ತೊಂದು ರೀತಿಯಿಂದ (ಆಗುವ)ದಿಲ್ಲ ಎಂಬುದು ಯುಕ್ತಿಯಿಂದ (ಏರ್ಪಡುತ್ತದೆ);[3] ಅದರ ಜ್ಞಾನವೂ (ಆಗುತ್ತದೆ).[4]

**ನನ್ವೇವಂ ದೃಶಿಸಙ್ಕ್ರಾನ್ತಿರಯಃಪಿಣ್ಡೇಽಗ್ನಿವದ್ ಭವೇತ್ ।**
**ಮುಖಾಭಾಸವದಿತ್ಯೇತದಾದರ್ಶೇ ತನ್ನಿರಾಕೃತಮ್ ॥ ೮೨ ॥**

೮೨. (ಆಕ್ಷೇಪ): ಹೀಗಾದರೆ ಕಬ್ಬಿಣದ ತುಂಡಿನಲ್ಲಿ ಬೆಂಕಿಯಂತೆ ಚೈತನ್ಯವು (ಅಂತಃಕರಣಾದಿಗಳಲ್ಲಿ) ಸೇರಿಕೊಳ್ಳುವದೆಂದಾಯಿತಲ್ಲ! ಮುಖಾಭಾಸದಂತೆ ಎಂದು (ಹೇಳಿದ ದೃಷ್ಟಾಂತದಲ್ಲಿ ಅದನ್ನು ನಿರಾಕರಿಸಿತ್ತಲ್ಲ![5]

---

1. ಅಂತಃಕರಣದಲ್ಲಿ ಚೈತನ್ಯದ ಆಭಾಸವುಂಟಾಗುತ್ತದೆ ಎಂದೊಪ್ಪಿದರೆ ಮೇಲೆ ಹೇಳಿದ ಯಾವ ದೋಷಗಳೂ ಇರುವದಿಲ್ಲ. ಆಗ ಅಹಂಕಾರಕ್ಕೂ ಚೈತನ್ಯಕ್ಕೂ ಆಭಾಸದ ಮೂಲಕ ಆಧ್ಯಾಸಿಕವಾದ ತಾದಾತ್ಮ್ಯಸಂಬಂಧಸಿದ್ಧಿಸುತ್ತದೆ. ಆದ್ದರಿಂದ 'ನಾನು' ಎಂಬ ಅರಿವು ಆತ್ಮಾಂತಃಕರಣಗಳ ವಿವೇಕವಿಲ್ಲದವನಿಗೆ ಉಂಟಾಗುವದು; ನಿಜವಾಗಿ ಯಾರಿಗೂ ಇಲ್ಲ ಎಂದು ಹೇಳಬಹುದು. ಕಾದ ಕಬ್ಬಿಣದ ಬಿಸಿಯು ಅದರಿಂದ ಹಾರಿದ ಕಿಟ್ಟದಲ್ಲಿಯೂ ಕಾಣುವಂತೆ ಪ್ರತ್ಯಯಗಳಲ್ಲಿಯೂ ಚಿದಾಭಾಸವು ಕಾಣಬಹುದಾಗುವದು. ಆದ್ದರಿಂದ ಅಂತಃಕರಣದಲ್ಲಿಯೂ ಪ್ರತ್ಯಯದಲ್ಲಿಯೂ ಆಭಾಸವನ್ನೊಪ್ಪಬೇಕು ಎಂದು ಭಾವ.

2. ಸಾಕ್ಷಿಯನ್ನೂ ಆಭಾಸವನ್ನೂ ಒಪ್ಪಿದರೆ 'ನಾನು' ಎಂಬ ಚಿದಾಭಾಸಯುಕ್ತವಾದ ಅಹಂಕಾರವನ್ನು ಸಾಕ್ಷಿಯು ಅರಿಯುತ್ತಾನೆ ಎಂಬುದು ಯುಕ್ತಿಯಿಂದ ಸಿದ್ಧವಾಗುತ್ತದೆ.

3. ಆಭಾಸವನ್ನು ಒಪ್ಪದಿದ್ದರೆ ಅಂತಃಕರಣವು ತನ್ನನ್ನು ತಾನು ಅರಿಯಲಾರದು, ಅದಕ್ಕಿಂತ ಅತ್ಯಂತನಾಗಿ ಬೇರ್ಪಟ್ಟಿರುವ ನಿರ್ವಿಕಾರನಾದ ಸಾಕ್ಷಿಯು ಅರಿಯಲಾರನು –ಎಂದಾಗುತ್ತದೆ.

4. 'ನೀನು ಅದಾಗಿರುವೆ' ಎಂಬ ವಾಕ್ಯದಲ್ಲಿ ಚಿದಾಭಾಸದ ಮೂಲಕ ಸಾಕ್ಷಿಯನ್ನು ಲಕ್ಷಣೆಯಿಂದ ಹೇಳುತ್ತದೆ ಎಂಬುದೂ ಹೊಂದುತ್ತದೆ.

5. ಹಿಂದೆ ೩೭ರಿಂದ ೪೧ರವರೆಗೆ ಮುಖಾಭಾಸದೃಷ್ಟಾಂತದಿಂದ ಆಭಾಸವು ಅಸತ್ಯವೆಂದು ಪ್ರತಿಪಾದಿಸಿದೆ; ಈಗ ಬೆಂಕಿಯ ದೃಷ್ಟಾಂತದಿಂದ ನಿಜವಾದ ಆತ್ಮನ ಸಂಬಂಧವು ಅಂತಃಕರಣದಲ್ಲಿದೆ ಎಂದಂತಾಯಿತಲ್ಲ! –ಎಂದು ಆಕ್ಷೇಪ. ಬೆಂಕಿಯ ದೃಷ್ಟಾಂತದಿಂದ ನಿಜವಾಗಿ ಆತ್ಮಧರ್ಮವು ಅಂತಃಕರಣಕ್ಕೆ ಸೇರಿದ್ದೆಂದು ಆಗುವದಿಲ್ಲವೆ? –ಎಂದಿಷ್ಟೇ ಆಕ್ಷೇಪವೆಂದೂ ಉಳಿದದ್ದು ಸಮಾಧಾನವೆಂದೂ ಭಾವಿಸುವದಕ್ಕೆ ಬರುತ್ತದೆ.

**ಕೃಷ್ಣಾಯೋಲೋಹಿತಾಭಾಸಮಿತ್ಯೇತದ್ದೃಷ್ಟಮುಚ್ಯತೇ ।**
**ದೃಷ್ಟದಾರ್ಷ್ಟಾನ್ತತುಲ್ಯತ್ವಂ ನ ತು ಸರ್ವಾತ್ಮನಾ ಕ್ವಚಿತ್ ॥ ೪೩ ॥**
**ತಥೈವ ಚೇತನಾಭಾಸಂ ಚಿತ್ತಂ ಚೈತನ್ಯವದ್ ಭವೇತ್ ।**
**ಮುಖಾಭಾಸೋ ಯಥಾದರ್ಶೇ ಆಭಾಸಶ್ಚೋದಿತೋ ಮೃಷಾ ॥೪೪॥**

೪೩. (ಸಮಾಧಾನ): ಕರಿಯ ಕಬ್ಬಿಣವು ಕೆಂಪಗೆ ಕಾಣುತ್ತದೆ ಎಂಬುದನ್ನು ದೃಷ್ಟಾಂತವಾಗಿ ಹೇಳಿರುತ್ತದೆ. ದೃಷ್ಟಾಂತವೂ ದಾರ್ಷ್ಟಾಂತಿಕವೂ ಎಲ್ಲಿಯೂ ಸರ್ವರೂಪದಿಂದಲೂ ಸಮನಾಗಿರುವದಿಲ್ಲ. ಅದರಂತೆಯೇ ಚಿತ್ತವು ಚೇತನದ ಆಭಾಸವುಳ್ಳದ್ದಾಗಿರುವದರಿಂದ ಚೈತನ್ಯದಂತೆಯೇ ಆಗಿರುತ್ತದೆ. ಕನ್ನಡಿಯಲ್ಲಿರುವ ಮುಖಾಭಾಸದಂತೆ (ಈ) ಹೇಳಿದ ಆಭಾಸವು ಹುಸಿಯೂ ಆಗಿರುತ್ತದೆ.[1]

**ಚಿತ್ತಂ ಚೇತನಮಿತ್ಯೇತಚ್ಛಾಸ್ತ್ರಯುಕ್ತಿವಿವರ್ಜಿತಮ್ ।**
**ದೇಹಸ್ಯಾಪಿ ಪ್ರಸಙ್ಗಃ ಸ್ಯಾಚ್ಚಕ್ಷುರಾದೇಸ್ತಥೈವ ಚ ॥ ೪೫ ॥**

೪೫. ಚಿತ್ತವೇ ಚೇತನವೆಂಬುದು ಶಾಸ್ತ್ರಯುಕ್ತಿರಹಿತವಾಗಿರುತ್ತದೆ.[2] (ಹಾಗಿದ್ದರೆ) ದೇಹಕ್ಕೂ (ಚೇತನತ್ವವು) ಇರಬಹುದಾಗುತ್ತದೆ, ಮತ್ತು ಚಕ್ಷುರಿಂದ್ರಿಯವೇ ಮುಂತಾದವುಗಳಿಗೂ (ಇರಬಹುದಾಗುತ್ತದೆ).

**ತದಪ್ಯಸ್ತ್ವಿತಿ ಚೇತ್ ತನ್ನ ಲೌಕಾಯತಿಕಸಙ್ಗತೇಃ ।**
**ನ ಚ ಧೀರ್ದೃಶಿರಸ್ಮೀತಿ ಯದ್ಯಾಭಾಸೋ ನ ಚೇತಸಿ ॥ ೪೬ ॥**

**ಸದಸ್ಮೀತಿ ಧಿಯೋಽಭಾವೇ ವ್ಯರ್ಥಂ ಸ್ಯಾತ್ತತ್ತ್ವಮಸ್ಯಪಿ ॥ ೪೬$\frac{೧}{೨}$ ॥**

೪೬–೪೬$\frac{೧}{೨}$. 'ಅದೂ ಆಗಲಿ, ಎಂದರೆ ಅದು ಸರಿಯಲ್ಲ; ಏಕೆಂದರೆ ಆಗ ಲೋಕಾಯತ (ಸಿದ್ಧಾಂತದ) ಸಂಬಂಧವಾಗುತ್ತದೆ.[3] ಚಿತ್ತದಲ್ಲಿ ಆಭಾಸವು ಇಲ್ಲದಿದ್ದರೆ 'ನಾನು ದೃಗ್ರೂಪವಾದ ಚೈತನ್ಯವಾಗಿರುವೆನು' ಎಂಬ ಅರಿವೂ

---

1. ಕಾದ ಕರಿಯ ಕಬ್ಬಿಣದಲ್ಲಿ ಕೆಂಪುಬಣ್ಣವು ತೋರುತ್ತಿರುತ್ತದೆ, ಚಿತ್ತದಲ್ಲಿ ಚೈತನ್ಯದ ಸ್ವಭಾವವು ತೋರುತ್ತಿರುತ್ತದೆ. ತೋರಿಕೆಯು ಹುಸಿ ಎಂಬುದು ದೃಷ್ಟಾಂತ ದಾರ್ಷ್ಟಾಂತಿಕಗಳಿಗೆ ಸಮಾನವಾಗಿರುತ್ತದೆ. ಚೈತನ್ಯದ ಧರ್ಮವು ನಿಜವಾಗಿ ಚಿತ್ತದಲ್ಲಿ ಸೇರಿರುವದೆಂಬುದು ವಿವಕ್ಷಿತವಲ್ಲ.

2. ಶಾಸ್ತ್ರದಲ್ಲಿ ಆತ್ಮನಿಂದ ಮನಸ್ಸುಂಟಾಗುತ್ತದೆ, ಆತ್ಮನು ಅಂತಃಕರಣದಿಂದ ಕೂಡಿ ಸ್ವಪ್ನವನ್ನೂ ಕಾಣುತ್ತಾನೆ- ಎಂದು ಮುಂತಾಗಿ ಹೇಳಿದೆ; ಆದ್ದರಿಂದ ಚಿತ್ತವೇ ಚೇತನವೆಂಬುದು ಶಾಸ್ತ್ರಪ್ರಮಾಣರಹಿತ ದೃಶ್ಯವು ದೃಕ್ಕಾಗಲಾರದೆಂಬುದು ಯುಕ್ತಿ.

3. ಚಾರ್ವಾಕಸಿದ್ಧಾಂತವನ್ನು ಒಪ್ಪಿದ ಹೊರತು ಅಂತಃಕರಣವೇ ಚೈತನ್ಯವೆಂದು ಅಂಗೀಕರಿಸುವದಕ್ಕೆ ಆಗುವದಿಲ್ಲ.

ಆಗುವದಿಲ್ಲ. ನಾನು ಸದ್ರೂಪನಾದ ಆತ್ಮನು ಎಂಬ ಅರಿವು ಉಂಟಾಗದಿದ್ದರೆ 'ತತ್ತ್ವಮಸಿ' ಎಂಬ ವಾಕ್ಯವೂ ವ್ಯರ್ಥವಾಗುತ್ತದೆ.[1]

## ಆತ್ಮಾನಾತ್ಮವಿವೇಕವುಳ್ಳವನಿಗೇ ವಾಕ್ಯಾರ್ಥಜ್ಞಾನ

**ಯುಷ್ಮದಸ್ಮದ್ವಿಭಾಗಜ್ಞೇ ಸ್ಯಾದರ್ಥವದಿದಂ ವಚಃ । ॥ ೪೭ ॥**
**ಮಮೇದಂಪ್ರತ್ಯಯೌ ಜ್ಞೇಯೌ ಯುಷ್ಮದೇವ ನ ಸಂಶಯಃ ।**

**ಅಹಮಿತ್ಯಸ್ಮದೀಷ್ಟಃ ಸ್ಯಾದಯಮಸ್ಮೀತಿ ಚೋಭಯೋಃ ॥ ೪೮ ॥**
**ಅನ್ಯೋನ್ಯಾಪೇಕ್ಷಯಾ ತೇಷಾಂ ಪ್ರಧಾನಗುಣತೇಷ್ಯತೇ ।**

**ವಿಶೇಷಣವಿಶೇಷ್ಯತ್ವಂ ತಥಾ ಗ್ರಾಹ್ಯಂ ಹಿ ಯುಕ್ತಿತಃ ॥ ೪೯ ॥**

೪೭-೪೯. ಈ ವಾಕ್ಯವು 'ನೀನು' (ವಿಷಯ), 'ನಾನು' (ವಿಷಯಿ)- ಇವುಗಳನ್ನು ವಿಂಗಡಿಸಿ ತಿಳಿದುಕೊಂಡವನ ವಿಷಯದಲ್ಲಿ ಸಾರ್ಥಕವಾಗುವೆದು.[2] (ಹೇಗೆಂದರೆ) : 'ನನ್ನದು', 'ಇದು'- ಎಂಬ ಪ್ರತ್ಯಯಗಳೆರಡೂ ಯುಷ್ಮದರ್ಥ ( ನೀನೆಂಬ ವಿಷಯ )ದಲ್ಲಿಯೇ ( ಆಗುವವೆಂದು ) ಸಂಶಯವಿಲ್ಲದೆ ತಿಳಿಯ ತಕ್ಕದ್ದು.[3] 'ನಾನು' ಎಂಬ (ಪ್ರತ್ಯಯವು) ಅಸ್ಮದರ್ಥ(ವಾದ ಆತ್ಮನಲ್ಲಿಯೇ) ಇಷ್ಟವಾಗಿರುತ್ತದೆ.[4] ' ಇವನಾಗಿರುವೆನು ' ಎಂಬುದು ಎರಡರಲ್ಲಿಯೂ (ಆಗುತ್ತದೆ). ಒಂದಕ್ಕೊಂದನ್ನು ಹೋಲಿಸಿದರೆ ಇವಕ್ಕೆ (ಒಂದು ಪ್ರಧಾನ ವಾಗಿಯೂ ಮತ್ತೊಂದು ಅಪ್ರಧಾನವಾಗಿಯೂ ಇರುವ) ಮುಖ್ಯಗುಣಭಾವವು

---

1. ಆಭಾಸದ ಮೂಲಕವೇ 'ನಾನು ಆತ್ಮನು' ಎಂಬ ಅರಿವು ಆಗಬೇಕಾಗಿರುತ್ತದೆ; ಆದ್ದರಿಂದ ಅದನ್ನು ಒಪ್ಪದಿದ್ದರೆ ಭ್ರಾಂತಿನಾಶರೂಪವಾದ ಜ್ಞಾನವೇ ಆಗದೆಹೋಗಿ ಶ್ರುತಿಪ್ರಾಮಾಣ್ಯವೂ ಇಲ್ಲವಾಗುತ್ತದೆ.

2. 'ಅದು ನೀನು' ಎಂಬ ವಾಕ್ಯದಲ್ಲಿ 'ನೀನು' ಎಂಬ ತ್ವಂಪದದ ಅರ್ಥವನ್ನು ತಿಳಿದಲ್ಲದೆ ವಾಕ್ಯಾರ್ಥವಾಗುವದಿಲ್ಲ; ತ್ವಂಪದದ ಅರ್ಥದಲ್ಲಿ ವಿಷಯಿವಿಷಯಗಳಾದ ಆತ್ಮಾನಾತ್ಮಗಳು ಬೆರೆತಿರುವದರಿಂದ ಇವುಗಳನ್ನು ವಿಂಗಡಿಸಿಕೊಳ್ಳುವದು ಅವಶ್ಯ.

3. ಇದು, ನನ್ನದು- ಎಂದು ಕರೆಯುವದಕ್ಕೆ ಯೋಗ್ಯವಾದ ಹೆಂಡತಿ, ಮಗ, ಮನೆ, ಹೊಲ, ಹಣ_ ಮುಂತಾದದ್ದು ಅನಾತ್ಮವೆಂಬುದರಲ್ಲಿ ಸಂಶಯವೇ ಇಲ್ಲ.

4. 'ನಾನು' ಎಂದು ಯಾವಾಗಲೂ ಅನ್ನಿಸಿಕೊಳ್ಳುವದಕ್ಕೆ ಯೋಗ್ಯವಾದದ್ದು ಆತ್ಮನು.

ಒಪ್ಪಿತವಾಗುತ್ತದೆ.[1] ಹಾಗೆಯೇ ಇವುಗಳಿಗೆ ವಿಶೇಷಣವಿಶೇಷ್ಯಭಾವವನ್ನೂ ಯುಕ್ತಿಯಿಂದ ಗ್ರಹಿಸಬೇಕು.[2]

**ಮಮೇದಂ ದ್ವಯಮಪ್ಯೇತನ್ಮಧ್ಯಮಸ್ಯ ವಿಶೇಷಣಮ್ ।**
**ಧನೀ ಗೋಮಾನ್ ಯಥಾ ತದ್ವದ್ದೇಹೋಽಹಙ್ಕರ್ತುರೇವ ಚ ॥೯೦॥**

**ಬುದ್ಧ್ಯಾರೂಢಂ ಸದಾ ಸರ್ವಂ ಸಾಹಙ್ಕರ್ತ್ರಾ ಚ ಸಾಕ್ಷಿಣಃ ।**
**ತಸ್ಮಾತ್ ಸರ್ವಾವಭಾಸೋಽಜ್ಞಃ ಕಿಞ್ಚಿದಪ್ಯಸ್ಪೃಶನ್ ಸದಾ ॥೯೧॥**

೯೦-೯೧. 'ಹಣವಂತನು', 'ಗೋಗಳುಳ್ಳವನು'- ಎಂಬುದು ಹೇಗೋ ಹಾಗೆ 'ನನ್ನದು', 'ಇದು' ಎಂಬೀ ಎರಡೂ ನಡುವಿನ (ದೇಹಕ್ಕೆ) ವಿಶೇಷಣವು.[3] ಇದರಂತೆ ದೇಹವು ಅಹಂಕರ್ತೃವಿಗೆ ವಿಶೇಷಣವು.[4] ಬುದ್ಧಿಯಲ್ಲಿ ಏರಿಕೊಂಡು ಕಾಣುವ (ವಿಷಯು)ವೆಲ್ಲವೂ, ಯಾವಾಗಲೂ ಆ ಅಹಂಕರ್ತೃವಿನೊಡನೆ ಸಾಕ್ಷಿಗೆ (ವಿಶೇಷಣವು).[5] ಆದ್ದರಿಂದ ಚೈತನ್ಯ(ರೂಪನಾದ ಆತ್ಮನು)

1. 'ನಾನು ಇಂಥವನು' ಎಂಬ- ಉದಾಹರಣೆಗೆ ನಾನು ಮನುಷ್ಯನು, ಕುರುಡನು, ವಿದ್ವಾಂಸನು - ಮುಂತಾದ ಪ್ರತ್ಯಯದಲ್ಲಿ 'ಇಂಥವನು' ಎಂಬ ವಿಶೇಷಣಭಾಗವು ಅನಾತ್ಮವೆಂದು ತಳ್ಳಿ ವಿಶೇಷ್ಯವನ್ನು ಮಾತ್ರ ಮುಖ್ಯನಾದ ಆತ್ಮನೆಂದು ಉಳಿಸಿಕೊಳ್ಳುವದಕ್ಕೆ ಯತ್ನಿಸಬೇಕು.

2. 'ಇದು ನನ್ನದು' ಎಂಬುದು ಅಪ್ರಧಾನವು, ನಾನು ಎಂಬುದು ಪ್ರಧಾನವು; 'ಇಂಥವನು' ಎಂಬುದು ಅಪ್ರಧಾನವಾದ ವಿಶೇಷಣವು, ನಾನು ಎಂಬುದು ಪ್ರಧಾನವಾದ ವಿಶೇಷ್ಯವು. ಪ್ರಧಾನವೂ ವಿಶೇಷ್ಯವೂ ಆದದ್ದನ್ನೇ ಗ್ರಹಿಸುವದಕ್ಕೆ ಯತ್ನಿಸಬೇಕು.

3. ಮೇಲೆ ಹೇಳಿದ ಪ್ರಧಾನಗುಣಭಾವವನ್ನೂ ವಿಶೇಷಣವಿಶೇಷ್ಯಭಾವವನ್ನೂ ಇಲ್ಲಿ ಸ್ಪಷ್ಟಪಡಿಸಿರುತ್ತದೆ. ಜ್ಞೇಯವನ್ನೆಲ್ಲ ಹೊರಗಿನ ವಿಶೇಷಣವು, ನಡುವಿನ ದೇಹವು, ದೇಹಕ್ಕೆ ಒಳಗಿನದು- ಎಂದು ಮೂರು ವಿಭಾಗಗಳನ್ನು ಮಾಡಿಕೊಂಡರೆ ದೇಹವು ನಡುವಿನದಾಗುವದು. ಅದಕ್ಕೆ ಹಣ, ದನ, ಕರು- ಮುಂತಾದ 'ಇದು', 'ನನ್ನದು' ಎಂದು ತೋರುವದೆಲ್ಲವೂ ವಿಶೇಷಣವು, ಅಪ್ರಧಾನವು. ಅವುಗಳಿಗೆ ಹೋಲಿಸಿದರೆ ದೇಹವೇ ಪ್ರಧಾನವು.

4. ಇಲ್ಲಿ ದೇಹವೆಂಬುದನ್ನು ಇಂದ್ರಿಯಾದಿಗಳಿಗೂ ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. 'ನಾನು ಕುಂಟನು, ಕುರುಡನು, ಹಸಿದಿರುವೆನು' ಎಂದು ಮುಂತಾಗಿ ಭಾವಿಸುವಾಗ ದೇಹೇಂದ್ರಿಯಪ್ರಾಣಾದಿಗಳು ವಿಶೇಷಣಗಳು, ಅಪ್ರಧಾನವು; ಅಹಂಕಾರವೇ ಪ್ರಧಾನವಾದ ವಿಶೇಷ್ಯವು.

5. ಇಂದ್ರಿಯಗಳ ಮೂಲಕವಾಗಿ ಅಂತಃಕರಣದಲ್ಲಿ ತೋರುವ ವಿಷಯವೂ ಇವಕ್ಕೆ ವಿಶೇಷ್ಯವಾಗಿರುವ ಸಾಭಾಸವಾದ ಅಹಂಕಾರವೂ ಸಾಕ್ಷಿಗೆ ತಗಲಿಕೊಂಡಿರುತ್ತವೆ.

ಯಾವಾಗಲೂ ಏನನ್ನೂ ಮುಟ್ಟದೆ ಎಲ್ಲವನ್ನೂ ಬೆಳಗುತ್ತಿರುವನು.[1]

**ಪ್ರತಿಲೋಮಮಿದಂ ಸರ್ವಂ ಯಥೋಕ್ತಂ ಲೋಕಬುದ್ಧಿತಃ ।**
**ಅವಿವೇಕಧಿಯಾಮಸ್ತಿ ನಾಸ್ತಿ ಸರ್ವಂ ವಿವೇಕಿನಾಮ್ ॥ ೯೨ ॥**

೯೨. ಲೋಕಬುದ್ಧಿಯನ್ನನುಸರಿಸಿ[2] ಈಗಲೇ ಹೇಳಿದ್ದೆಲ್ಲವೂ ವಿಪರೀತವಾಗಿರುತ್ತದೆ.[3] ಅವಿವೇಕಬುದ್ಧಿಯವರಿಗೆ (ಎಲ್ಲವೂ) ಇರುವದು, ವಿವೇಕಿಗಳಿಗೆ ಯಾವದೂ ಇರುವದಿಲ್ಲ.[4]

## ಅನ್ವಯವ್ಯತಿರೇಕದಿಂದ ತ್ವಂಪದಾರ್ಥಜ್ಞಾನ

**ಅನ್ವಯವ್ಯತಿರೇಕೌ ಹಿ ಪದಾರ್ಥಸ್ಯ ಪದಸ್ಯ ಚ ।**
**ಸ್ಯಾದೇತದಹಮಿತ್ಯತ್ರ ಯುಕ್ತಿರೇವಾವಧಾರಣೇ ॥ ೯೩ ॥**

೯೩. 'ಇದು ನಾನು' ಎಂಬಲ್ಲಿ ಪದದ ಮತ್ತು ಪದಾರ್ಥದ ಅನ್ವಯವ್ಯತಿರೇಕಗಳು (ನಾನು ಎಂಬ ಪದಾರ್ಥವನ್ನು) ನಿರ್ಣಯಿಸುವದಕ್ಕೆ ಯುಕ್ತಿಯೇ ಆಗುವವು.[5]

**ನಾದ್ರಾಕ್ಷಮಹಮಿತ್ಯಸ್ಮಿನ್ ಸುಷುಪ್ತೇಽನ್ಯನ್ಮನಾಗಪಿ ।**
**ನ ವಾರಯತಿ ದೃಷ್ಟಿಂ ಸ್ವಾಂ ಪ್ರತ್ಯಯಂ ತು ನಿಷೇಧತಿ ॥ ೯೪ ॥**
**ಸ್ವಯಂಜ್ಯೋತಿರ್ನ ಹಿ ದ್ರಷ್ಟುರಿತ್ಯೇವಂ ಸಂವಿದೋಽಸ್ತಿತಾಮ್ ।**
**ಕೌಟಸ್ಥ್ಯಂ ಚ ತಥಾ ತಸ್ಯಾಃ ಪ್ರತ್ಯಯಸ್ಯ ತು ಲುಪ್ತತಾಮ್ ॥ ೯೫ ॥**

---

1. ಸಾಕ್ಷಿಯು ವಿಶೇಷ್ಯವೆಂದದ್ದರಿಂದ 'ಕನ್ನಡಿಯಲ್ಲಿ' ಕಪ್ಪು ಸೇರಿಸಿಕೊಂಡಿರುವಂತೆ ಅಹಂಕಾರಾದಿಗಳು ಸಾಕ್ಷಿಚೈತನ್ಯಕ್ಕೆ ಅಂಟಿಕೊಂಡಿರುವವೆಂದು ಭಾವಿಸಬಾರದು. ಚೈತನ್ಯಕ್ಕೂ ಮಿಕ್ಕ ಅಹಂಕಾರಾದಿಯಾದ ಅನಾತ್ಮಕ್ಕೂ ನಿಜವಾಗಿ ಯಾವ ಸಂಬಂಧವೂ ಇಲ್ಲ.

2. ಲೋಕಬುದ್ಧಿ ಎಂದರೆ ಶಾಸ್ತ್ರದೃಷ್ಟಿಯಿಲ್ಲದವರ ವ್ಯವಹಾರದ ಬುದ್ಧಿ.

3. ವ್ಯವಹಾರದೃಷ್ಟಿಯಿಂದ ನೋಡಿದರೆ ಈವರೆಗೆ ವರ್ಣಿಸಿದ್ದಕ್ಕೆ ವಿಪರೀತವಾಗಿಯೇ ಕಾಣುತ್ತದೆ; ಎಂದರೆ ಹೊರಗಿನ ಪುತ್ರಾದಿಗಳಲ್ಲಿಯೂ ತಾನೆಂಬ ಬುದ್ಧಿಯಿರುತ್ತದೆ, ಅನಾತ್ಮವೇ ವಿಶೇಷ್ಯವಾಗಿರುತ್ತದೆ.

4. ಅವಿವೇಕಬುದ್ಧಿಯವರಿಗೆ ಅನಾತ್ಮವೇ ಪ್ರಧಾನವಾಗಿರುತ್ತವೆ, ಆತ್ಮನು ಅಪ್ರಧಾನನಾಗಿ ಅಥವಾ ಇಲ್ಲವೇ ಇಲ್ಲವೆಂದು ಕಾಣಿಸುತ್ತದೆ. ವಿವೇಕಿಗಳಾದವರಿಗೆ ಅನಾತ್ಮವೇ ಇರುವದಿಲ್ಲ. ಗೀ. ಭಾ. ೨-೬೯ (ಭಾ. ಭಾ. ೧೨೭) ನೋಡಿ.

5. ಪದದ ಅನ್ವಯವಿದ್ದರೂ ಪದಾರ್ಥವು ಬೇರ್ಪಟ್ಟರೆ ಆ ಪದವು ಅದನ್ನು ಹೇಳುವದಿಲ್ಲವೆಂದಾಗುವದು. ಈ ಅನ್ವಯವ್ಯತಿರೇಕಗಳನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸಿದೆ.

**ಸ್ವಯಮೇವಾಬ್ರವೀಚ್ಛಾಸ್ತ್ರಂ ಪ್ರತ್ಯಯೂವಗತೀ ಪೃಥಕ್ ॥೯೫½॥**

೯೪-೯೫½. 'ಸುಷುಪ್ತದಲ್ಲಿ ಬೇರೊಂದನ್ನು ಸ್ವಲ್ಪವೂ ನಾನು ಕಾಣಲಿಲ್ಲ' (ಎಂಬಲ್ಲಿ) ತನ್ನ ದೃಷ್ಟಿಯನ್ನು ಇಲ್ಲವೆನ್ನುವದಿಲ್ಲ. ಪ್ರತ್ಯಯುವನ್ನು ಮಾತ್ರ ಇಲ್ಲವೆನ್ನುತ್ತಾನೆ. "ಸ್ವಯಂಜ್ಯೋತಿ"[1] (ಬೃ. ೪-೩-೧೪), "ದ್ರಷ್ಟೃವಿನ (ದೃಷ್ಟಿಗೆ ಲೋಪ)ವಿಲ್ಲವಷ್ಟೆ"[2] (ಬೃ. ೪-೩-೨೩) ಎಂದು ಸಂವಿತ್ತು[3] ಇದೆಯೆಂದೂ ಅದು ಕೂಟಸ್ಥವೆಂದೂ[4] ಆದರೆ ಪ್ರತ್ಯಯುವು ಲೋಪವಾಗಿರುವದೆಂದೂ[5] ಶಾಸ್ತ್ರವು ಪ್ರತ್ಯಯುವನ್ನೂ ಚೈತನ್ಯವನ್ನೂ ತಾನೇ ವಿಂಗಡಿಸಿ ಹೇಳಿರುತ್ತದೆ.

**ಏವಂ ವಿಜ್ಞಾತವಾಚ್ಯಾರ್ಥೇ[6] ಶ್ರುತಿಲೋಕಪ್ರಸಿದ್ಧಿತಃ |**
**ಶ್ರುತಿಸ್ತತ್ತ್ವಮಸೀತ್ಯಾಹ ಶ್ರೋತುರ್ಮೋಹಾಪನುತ್ತಯೇ ॥ ೯೬ ॥**

೯೬. ಹೀಗೆ ಶ್ರುತಿಯಿಂದಲೂ ಲೋಕಪ್ರಸಿದ್ಧಿಯಿಂದಲೂ ವಾಚ್ಯಾರ್ಥವನ್ನು ತಿಳಿದುಕೊಂಡಿರಲಾಗಿ[7] ಶ್ರುತಿಯು ಶ್ರೋತೃವಿನ ಮೋಹವನ್ನು ಕಳೆಯು

---

1. ಕನಸಿನಲ್ಲಿ ಆತ್ಮನು ಚೈತನ್ಯನಾಗಿಯೇ ಇದ್ದಾನೆಂದು ಈ ಶ್ರುತಿಯಲ್ಲಿ ಹೇಳಿದೆ.

2. ಚೈತನ್ಯರೂಪವಾದ ದೃಷ್ಟಿಗೆ ಲೋಪವಿಲ್ಲವೆಂದರ್ಥ.

3. ಚೈತನ್ಯವು.    4. ವಿಕಾರರಹಿತವೆಂದೂ.

5. ಉದಾಹರಿಸಿದ ಶ್ರುತಿಗಳಲ್ಲಿ ಪ್ರತ್ಯಯುವು ಲುಪ್ತವಾಗಿರುವದೆಂಬ ಮಾತಿಲ್ಲ; ಆದರೂ 'ಆತ್ಮನಿಗಿಂತ ವಿಭಕ್ತವಾದ ಎರಡನೆಯದಿಲ್ಲ, ಇದ್ದರೆ ಅರಿಯುತ್ತಿದ್ದನು' (ಬೃ. ೪-೩-೨೩) ಎಂಬ ವಾಕ್ಯಶೇಷದಲ್ಲಿ ಆತ್ಮನೊಬ್ಬನೇ ಇರುತ್ತಾನೆ, ಎರಡನೆಯದಾದ ಅಂತಃಕರಣವು ಇಲ್ಲ ಎಂದು ಹೇಳಿರುತ್ತದೆಯಾದ್ದರಿಂದ 'ನಾನು ಏನನ್ನೂ ಅರಿಯಲಿಲ್ಲ' ಎಂಬುದು ಪ್ರತ್ಯಯನಿಷೇಧವೆಂದು ಸಿದ್ಧವಾಗುತ್ತದೆ.

6. 'ವಿಜ್ಞಾತವಾಕ್ಯಾರ್ಥೇ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ. ಈ ಪಾಠವನ್ನು ನೈಷ್ಕರ್ಮ್ಯಸಿದ್ಧಿಯ ವ್ಯಾಖ್ಯಾನಕಾರರು ಅಂಗೀಕರಿಸಿರುತ್ತಾರೆ.

7. ಉಪದೇಶಸಾಹಸ್ರಿಯ ರಾ॥ತೀ॥ ವ್ಯಾಖ್ಯಾನದಲ್ಲಿ 'ಅವಾಂತರವಾಕ್ಯಾರ್ಥವನ್ನು ತಿಳಿದಿರುವವನಿಗೆ' ಎಂದು ಅರ್ಥವನ್ನು ಕಲ್ಪಿಸಿದೆ. ಆದರೆ ಲೋಕಪ್ರಸಿದ್ಧಿಯಿಂದ ಅವಾಂತರವಾಕ್ಯವನ್ನು ತಿಳಿಯುವದು ಆಗುವದಿಲ್ಲ; ೯೩ನೆಯ ಶ್ಲೋಕದಲ್ಲಿ ಹೇಳಿರುವಂತೆ ನಾನು ಎಂಬುದನ್ನು ಗೊತ್ತುಪಡಿಸುವದಕ್ಕೆ ಇದು ಯುಕ್ತಿಯೂ ಆಗುವದಿಲ್ಲ. ನಾನು ಎಂಬುದು ಚಿದಾಭಾಸವಿಶಿಷ್ಟವಾದ ಅಹಂಕಾರವೇ ವಾಚ್ಯಾರ್ಥವೆಂದೂ ಚೈತನ್ಯವು ಲಕ್ಷ್ಯಾರ್ಥವೆಂದೂ ಮೇಲೆ ಹೇಳಿದ ಸುಷುಪ್ತಿಪರಾಮರ್ಶ ಮತ್ತು ಶ್ರುತಿಗಳಿಂದ ತಿಳಿದುಕೊಂಡವನಿಗೆ ವಾಕ್ಯಾರ್ಥಜ್ಞಾನವಾಗುವದು ಎಂದು ಕಲ್ಪಿಸುವದೇ ಯುಕ್ತವೆಂದು ತೋರುತ್ತದೆ. ಸೂ. ಭಾ. ೪-೧-೨ ನೋಡಿ.

ವದಕ್ಕಾಗಿ 'ತತ್ತ್ವಮಸಿ' (ಅದೇ ನೀನಾಗಿರುವೆ) ಎಂದು ಹೇಳುತ್ತದೆ.[1]

## ಅಧಿಕಾರಿಗೆ ವಾಕ್ಯಾರ್ಥಶ್ರವಣಮಾತ್ರದಿಂದ ಜ್ಞಾನ

**ಬ್ರಹ್ಮಾ ದಾಶರಥೇರ್ಯದ್ವದುಕ್ತ್ಯೈವಾಪಾನುದತ್ತಮಃ ।**
**ತಸ್ಯ ವಿಷ್ಣುತ್ವಸಂಬೋಧೇ ನ ಯತ್ನಾನ್ತರಮೂಚಿವಾನ್ ॥ ೯೭ ॥**

**ಅಹಂಶಬ್ದಸ್ಯ ನಿಷ್ಠಾ ಯಾ ಜ್ಯೋತಿಷಿ ಪ್ರತ್ಯಗಾತ್ಮನಿ ।**
**ಸೈವೋಕ್ತಾ ಸದಸೀತ್ಯೇವಂ ಫಲಂ ತತ್ರ ವಿಮುಕ್ತತಾ ॥ ೯೮ ॥**

೯೭-೯೮. ಬ್ರಹ್ಮನು ದಶರಥರಾಮನ ಅಜ್ಞಾನವನ್ನು ಹೇಗೆ ಉಕ್ತಿಮಾತ್ರದಿಂದ ಕಳೆದನೋ ಆವನಿಗೆ (ತಾನು) ವಿಷ್ಣುವೆಂಬ ಜ್ಞಾನವಾಗುವದಕ್ಕೆ ಬೇರೊಂದು ಯತ್ನವನ್ನು (ಮಾಡಬೇಕೆಂದು) ಹೇಳಲಿಲ್ಲವೋ[2] (ಹಾಗ) ನಾನು ಎಂಬ ಶಬ್ದವು ಪ್ರತ್ಯಗಾತ್ಮಜ್ಯೋತಿಯಲ್ಲಿಯೇ ನಿಲುಗಡೆಯನ್ನು ಹೊಂದುವದಷ್ಟೆ,[3] ಅದನ್ನೇ '(ನೀನು) ಸತ್ತಾಗಿರುವೆ' ಎಂದಿಂತು (ಶ್ರುತಿಯಲ್ಲಿ) ಹೇಳಿರುತ್ತದೆ. ಆದಕ್ಕೆ ಫಲವು ಮುಕ್ತಿಯು.[4]

**ಶ್ರುತಮಾತ್ರೇಣ ಚೇನ್ನ ಸ್ಯಾತ್ ಕಾರ್ಯಂ ತತ್ರ ಭವೇದ್ಧ್ರುವಮ್ ।**
**ವ್ಯವಹಾರಾತ್ ಪುರಾಪೀಷ್ಟಃ ಸದ್ಭಾವಃ ಸ್ವಯಮಾತ್ಮನಃ ॥ ೯೯ ॥**

೯೯. ಶ್ರವಣಮಾತ್ರದಿಂದಲೇ (ಮುಕ್ತಿಫಲವಾಗದಿದ್ದರೆ)[5] ಆ (ಫಲ)

---

1. ನಾನು ಬ್ರಹ್ಮವು ಎಂಬ ಜ್ಞಾನವನ್ನುಂಟುಮಾಡಿ ಅಜ್ಞಾನವನ್ನು ನಾಶಗೊಳಿಸುತ್ತದೆ.

2. ರಾಮನು ವಿಷ್ಣುವೇ ಆಗಿದ್ದನು; ಆದ್ದರಿಂದ ಬ್ರಹ್ಮನು 'ನೀನು ಚಕ್ರಧರನಾದ ನಾರಾಯಣನೇ, ನಾಶರಹಿತವಾದ ಬ್ರಹ್ಮವು' ಎಂದು ಹೇಳಿದನೇ ಹೊರತು, 'ನೀನು ವಿಷ್ಣುವೆಂದು ತಿಳಿದುಕೊಳ್ಳುವದಕ್ಕೆ ಈ ವಾಕ್ಯಜ್ಞಾನವನ್ನೂ ಯುಕ್ತಿಯನ್ನೂ ಅಭ್ಯಾಸಮಾಡಬೇಕು' ಎಂದೇನೂ ಹೇಳಲಿಲ್ಲ. ವಾ. ರಾ. ಯು. ೧೧೭ನೆಯ ಸರ್ಗವನ್ನು ನೋಡಿ.

3. ನಾನು ಎಂಬ ಶಬ್ದವು ಗೌಣಾತ್ಮರಾದ ಪುತ್ರಾದಿಗಳಲ್ಲಿಯೂ ಮಿಥ್ಯಾತ್ಮರಾದ ದೇಹಾದಿಗಳಲ್ಲಿಯೂ ಪ್ರಯುಕ್ತವಾಗಿದ್ದರೂ ವಿಚಾರದ ಕೊನೆಯಲ್ಲಿ ಮುಖ್ಯವಾದ ಪ್ರತ್ಯಗಾತ್ಮನಲ್ಲಿಯೇ ನಿಲ್ಲುತ್ತದೆ. ಸೂ. ಭಾ. ೧-೧-೪ರ ಕೊನೆಯಲ್ಲಿರುವ 'ಗೌಣಮಿಥ್ಯಾತ್ಮನೋಽ' ಎಂಬ ಶ್ಲೋಕದ ಅಭಿಪ್ರಾಯವಿದು.

4. ವಾಕ್ಯಜ್ಞಾನದಿಂದಲೇ ಮುಕ್ತಿಯಾಗುವದು; ಆದಕ್ಕೆ ಪ್ರಸಂಖ್ಯಾನಾದಿ ಕಾರ್ಯವು ಬೇಕಿಲ್ಲ.

5. ಈ ಪೂರ್ವಪಕ್ಷವನ್ನು ಹಿಂದೆ ೯-೧೦ನೆಯ ಶ್ಲೋಕಗಳಲ್ಲಿ ಒಡ್ಡಿತ್ತು.

ಕ್ಕಾಗಿ ಮಾಡತಕ್ಕದ್ದು[1] (ಏನಾದರೂ) ಇದೆ ಎಂದು ಅವಶ್ಯವಾಗಿ ಆಗುವದು. ಆದರೆ (ಈ) ವ್ಯವಹಾರಕ್ಕಿಂತ ಮೊದಲೂ ಆತ್ಮನಿಗೆ ಸದ್ರೂಪತ್ವವು ತಾನೇ (ಇರುವದೆಂಬುದು) ಇಷ್ಟವಾಗಿದೆ.

**ಅಶನಾಯಾದಿನಿರ್ಮುಕ್ತ್ಯೈ ತತ್ಕಾಲಾ ಜಾಯತೇ ಪ್ರಮಾ |**
**ತತ್ತ್ವಮಸ್ಯಾದಿವಾಕ್ಯಾರ್ಥೇ ತ್ರಿಷು ಕಾಲೇಷ್ವಸಂಶಯಃ ॥ ೧೦೦ ॥**
**ಪ್ರತಿಬನ್ಧವಿಹೀನತ್ವಾತ್ ಸ್ವಯಂ ಚಾನುಭವಾತ್ಮನಃ ।**
**ಜಾಯೇತೈವ ಪ್ರಮಾ ತತ್ರ ಸ್ವಾತ್ಮನ್ಯೇವ ನ ಸಂಶಯಃ ॥ ೧೦೧ ॥**

೧೦೦-೧೦೧. ಹಸಿವು ಮುಂತಾದವುಗಳಿಂದ ಬಿಡುಗಡೆಯಾಗುವದೆಂಬ[2] (ಫಲವನ್ನು ಕೊಡುವ) ಪ್ರಮೆಯು ತತ್ಕಾಲದಲ್ಲಿಯೇ ಆಗುವದು.[3] ತತ್ತ್ವಮಸಿ ಮುಂತಾದ ವಾಕ್ಯದ ಅರ್ಥದಲ್ಲಿ ಮೂರು ಕಾಲಗಳಲ್ಲಿಯೂ ಸಂಶಯವಿರುವದಿಲ್ಲ[4] (ಹೀಗೆ) ಪ್ರತಿಬಂಧವು (ಯಾವದೂ) ಇಲ್ಲದ್ದರಿಂದ ತಾನೇ ಅನುಭವಸ್ವರೂಪನಾಗಿರುವದರಿಂದಲೂ ಆದರ ವಿಷಯದಲ್ಲಿ ಪ್ರಮೆಯುಂಟಾಗಲೇಬೇಕು; (ತನ್ನ) ಆತ್ಮನ ವಿಷಯದಲ್ಲಿಯೇ ಸಂಶಯ(ವುಂಟಾಗುವಂತಿಲ್ಲ).[5]

---

1. ವಾಕ್ಯಶ್ರವಣಕ್ಕಿಂತ ಮೊದಲೂ ಮುಕ್ತನೇ ಆಗಿರುತ್ತಾನೆ; ಶ್ರವಣವಾದಮೇಲೆ ಮುಕ್ತಿಯಾಗುವದೆಂದೇನೂ ನಮ್ಮ ಅಭಿಪ್ರಾಯವಲ್ಲ. ಅದ್ದರಿಂದಲೇ 'ಅದು ನೀನಾಗಿರುವೆ' ಎಂದು ವಾಕ್ಯದಲ್ಲಿ ಹೇಳಿದೆ; 'ಅದು ನೀನಾಗುವೆ' ಎಂದು ಹೇಳಿಲ್ಲ. ಸೂ. ಭಾ. ೩-೩-೩೨ನ್ನು ನೋಡಿ ಅದ್ದರಿಂದ ಶ್ರವಣವಾದಬಳಿಕ ಪ್ರಸಂಖ್ಯಾನವನ್ನು ಮಾಡಿದಮೇಲೆ ಮುಕ್ತಿಯಾಗುವದೆಂಬುದು ಸರಿಯಲ್ಲ.

2. ಹಸಿವು ಬಾಯಾರಿಕೆ ಮುಂತಾದ ಸಂಸಾರಿಧರ್ಮಗಳನ್ನು ಮೀರುವ.

3. ವಾಕ್ಯಶ್ರವಣಸಮಕಾಲದಲ್ಲಿಯೇ ನಾನು ಸದ್ರೂಪನಾದ ಆತ್ಮನು ಎಂಬ ಅರಿವಾಗುವದು. ಅದ್ದರಿಂದ ವಾಕ್ಯಜ್ಞಾನವು ವಿಪರೀತಜ್ಞಾನವಲ್ಲ. ಛಾಂ. ೬-೧೬-೩.

4. ತಾನು ಹಿಂದೆ ಸದ್ಬ್ರಹ್ಮವಾಗಿದ್ದೆನೊ ಇಲ್ಲವೊ, ಈಗ ಆಗಿದ್ದೇನೆಯೊ ಇಲ್ಲವೊ? ನಾಳೆ ಆಗಿರುವೆನೊ ಇಲ್ಲವೊ? ಎಂಬ ಸಂಶಯವೇನೂ ಇರುವದಿಲ್ಲ; ಯಾವಾಗಲೂ ಕರ್ತೃಭೋಕ್ತೃವಲ್ಲದ ಬ್ರಹ್ಮವೇ ಎಂಬ ನಿಶ್ಚಯವಿರುತ್ತದೆ. ಸೂ. ಭಾ. ೪-೧-೧೩.

5. ಪ್ರತಿಬಂಧವೆಂದರೆ ಪದಾರ್ಥಜ್ಞಾನಕ್ಕೆ ಇರುವ ಅಜ್ಞಾನ, ಸಂಶಯ, ಮಿಥ್ಯಾಜ್ಞಾನರೂಪವಾದ ಅಡ್ಡಿ. ಸೂ. ಭಾ. ೪-೧-೨. 'ಆಕಾಶಕುಸುಮವಿದೆ' ಎಂಬ ವಾಕ್ಯದಂತೆ ಅನುಭವವೇ ಉಂಟಾಗುವದಿಲ್ಲವೆಂದಾಗಲಿ 'ಹುಂ', 'ಫಟ್' ಮುಂತಾದವುಗಳಿಂದ ಯಾವ ಜ್ಞಾನವೂ ಉಂಟಾಗದೆ ಇರುವಂತೆ 'ತತ್ತ್ವಮಸಿ' ಎಂಬ ವಾಕ್ಯದಲ್ಲಿರುವ ಪದಗಳಿಗೆ ಯಾವ ಅರ್ಥದ ಜ್ಞಾನವೂ ಆಗುವದಿಲ್ಲವೆಂದಾಗಲಿ ಹೇಳುವದಕ್ಕಿಲ್ಲ. ಈಗ ಪರೋಕ್ಷವಾಗಿ ಅರಿತಿದ್ದು ಮುಂದೆ ಅಪರೋಕ್ಷವಾಗಿ ಅನುಭವವಾಗಬೇಕೆಂಬುದೂ ಇಲ್ಲ. ಏಕೆಂದರೆ ತಾನೇ ಅನುಭವಸ್ವರೂಪನಾಗಿರುತ್ತಾನೆ; ಆ ಸ್ವರೂಪವನ್ನೇ ವಾಕ್ಯವು ತಿಳಿಸುತ್ತದೆ. ತನ್ನ ಸ್ವರೂಪದ ವಿಷಯದಲ್ಲಿ ಸಂಶಯವುಂಟಾಗಲು ಕಾರಣವೇ ಇಲ್ಲ.

**ಕಿಂ ಸದೇವಾಹಮಸ್ಮೀತಿ ಕಿಂ ವಾನ್ಯತ್ ಪ್ರತಿಪದ್ಯತೇ ।**
**ಸದೇವ ಚೇದಹಂಶಬ್ದಃ ಸತಾ ಮುಖ್ಯಾರ್ಥ ಇಷ್ಯತಾಮ್ ॥ ೧೦೨ ॥**

**ಅನ್ಯಚ್ಚೇತ್ ಸದಹಂಗ್ರಾಹಪ್ರತಿಪತ್ತಿರ್ಮೃಷೈವ ಸಾ ।**
**ತಸ್ಮಾನ್ಮುಖ್ಯಗ್ರಹೇ ನಾಸ್ತಿ ವಾರಣಾವಗತೇರಿಹ ॥ ೧೦೩ ॥**

೧೦೨-೧೦೩. 'ನಾನು (ಅದಾ)ಗಿರುವೆನು' ಎಂದು ಸತ್ತನ್ನೇ ತಿಳಿದುಕೊಳ್ಳುವನೆ, ಅಥವಾ ಮತ್ತೊಂದನ್ನು ತಿಳಿದುಕೊಳ್ಳುವನೆ? ಸತ್ತನ್ನೇ ಎಂದಾದರೆ 'ನಾನು' ಎಂಬ ಮಾತು ಸತ್ತಿನಿಂದ ಮುಖ್ಯಾರ್ಥವುಳ್ಳದ್ದು ಎಂದು ಒಪ್ಪಬೇಕು.[1] ಮತ್ತೊಂದಾದರೆ 'ನಾನು ಸತ್ತು' ಎಂದು ತಿಳಿಯುವ ಆ ಜ್ಞಾನವು ಭ್ರಾಂತಿಯೇ (ಆಗಿರುತ್ತದೆ).[2] ಆದ್ದರಿಂದ ಇಲ್ಲಿ ಮುಖ್ಯಾರ್ಥವನ್ನಿಟ್ಟುಕೊಂಡರೆ ಅರಿವಾಗುವದೆಂಬುದನ್ನು ಅಲ್ಲಗಳೆಯುವದಕ್ಕೆ ಆಗುವದಿಲ್ಲ.[3]

**ಪ್ರತ್ಯಯೀ ಪ್ರತ್ಯಯಶ್ಚೈವ ಯದಾಭಾಸೌ ತದರ್ಥತಾ ।**
**ತಯೋರಚಿತಿಮತ್ತ್ವಾಚ್ಚ ಚೈತನ್ಯೇ ಕಲ್ಪ್ಯತೇ ಫಲಮ್ ॥೧೦೪॥**
**ಕೂಟಸ್ಥೇಽಪಿ ಫಲಂ ಯೋಗ್ಯಂ ರಾಜನೀವ ಜಯಾದಿಕಮ್ ।**
**ತದನಾತ್ಮತ್ವಹೇತುಭ್ಯಾಂ ಕ್ರಿಯಾಯಾಃ ಪ್ರತ್ಯಯಸ್ಯ ಚ ॥ ೧೦೫ ॥**
**ಆದರ್ಶಸ್ತು ಯದಾಭಾಸೋ ಮುಖಾಕಾರಃ ಸ ಏವ ಸಃ ।**
**ಯಥೈವಂ ಪ್ರತ್ಯಯಾದರ್ಶೋ ಯದಾಭಾಸಸ್ತದಾ ಹ್ಯಹಮ್ ॥೧೦೬॥**
**ಇತ್ಯೇವಂ ಪ್ರತಿಪತ್ತಿಃ ಸ್ಯಾತ್ ಸದಸ್ಮೀತಿ ಚ ನಾನ್ಯಥಾ ॥೧೦೭॥**

---

1. ತನ್ನನ್ನೇ ತಿಳಿದುಕೊಂಡರೆ ಇನ್ನು ಮುಂದೆ ಪ್ರಸಂಖ್ಯಾನವೇಕೆ? ಎಂದರ್ಥ. ನಾನು ಎಂಬ ಶಬ್ದಕ್ಕೆ ಮುಖ್ಯಾರ್ಥವೆಂದರೆ ಶಬ್ದವು ಗುರಿಯಾಗಿಟ್ಟುಕೊಂಡಿರುವ ನಿಜವಾದ ಅರ್ಥ, ವಾಚ್ಯಾರ್ಥವೆಂದೇನೂ ಅಭಿಪ್ರಾಯವಿಲ್ಲ. ಏಕೆಂದರೆ ಹಿಂದೆ ೭೯ನೆಯ ಶ್ಲೋಕದಲ್ಲಿ ಅಹಂಕಾರದಲ್ಲಿರುವ ಆಭಾಸದ ಮೂಲಕ ಆತ್ಮನನ್ನು ಲಕ್ಷಣೆಯಿಂದ ತಿಳಿಸುವದೆಂದೇ ಹೇಳಿದೆ.

2. ಇದುವರೆಗೆ ಪ್ರಮಾಣದೃಷ್ಟಿಯಿಂದ ನೋಡಿ ವಾಕ್ಯದಿಂದ ಅಪರೋಕ್ಷಜ್ಞಾನವಾಗುತ್ತದೆ ಎಂದು ತಿಳಿಸುತ್ತಿತ್ತು. ಈಗ ಪ್ರಶ್ನೆಯುವ ದೃಷ್ಟಿಯಿಂದ ವಿಚಾರಮಾಡಿರುತ್ತದೆ. 'ನೀನು ಸತ್ತು' ಎಂಬ ತಿಳಿವಳಿಕೆಯಲ್ಲಿ ನಾನು ಎಂಬ ಶಬ್ದದಿಂದ ಬ್ರಹ್ಮಕ್ಕಿಂತ ಬೇರೆಯಾದದ್ದನ್ನು ಅರಿತರೆ ಭ್ರಾಂತಿಯಾಗುತ್ತದೆ.

3. ನಾನು ಎಂಬುದು ಸದ್ಬ್ರಹ್ಮವೇ ಆದರೆ ವಾಕ್ಯಶ್ರವಣದಿಂದಲೇ ಅಪರೋಕ್ಷಜ್ಞಾನವಾದಂತಾಯಿತು.

೧೦೪-೧೦೬ ಟೀ. ಪ್ರತ್ಯಯಿಯಾದ (ಅಹಂಕಾರವೂ) ಪ್ರತ್ಯಯವೂ ಯಾವದರ ಆಭಾಸವುಳ್ಳವುಗಳೋ (ಅವು) ಅದಕ್ಕಾಗಿರುವವು.[1] ಅರಿವು ಅಚೇತನವಾಗಿರುವದರಿಂದಲೂ ಚೈತನ್ಯದಲ್ಲಿ ಫಲವನ್ನು ಕಲ್ಪಿಸಬೇಕು.[2] (ಚೈತನ್ಯವು) ಕೂಟಸ್ಥವಾಗಿದ್ದರೂ ಅರಸನಲ್ಲಿ ಜಯವೇ ಮುಂತಾದದ್ದರಂತೆ[3] (ಅದರಲ್ಲಿ) ಫಲವುಂಟಾಗುವದು ಯುಕ್ತವಾಗಿರುತ್ತದೆ. ಅಹಂಕಾರವೂ ಪ್ರತ್ಯಯವೂ ಅದರ ಸ್ವರೂಪವಲ್ಲದ್ದರಿಂದಲೂ ಹೇತುವಾಗಿರುವದರಿಂದಲೂ (ಫಲವನ್ನು ಅದಕ್ಕೆ ಹೇಳುವದು ಯುಕ್ತ)[4] ಹೇಗೆ ಕನ್ನಡಿಯಲ್ಲಿ ಯಾವದರ ಆಭಾಸವಿರುವದೋ ಆ ಮುಖದ ಆಕಾರವು ತಾನು ಅದೇ ಆಗಿರುವದೋ ಹಾಗೆ ಪ್ರತ್ಯಯವೆಂಬ ಕನ್ನಡಿಯಲ್ಲಿ ಯಾವದರ ಆಭಾಸವಿರುವದೋ (ಆ ಚೈತನ್ಯವು ತಾನು ಅದೇ ಆಗಿರುವದು). ಆಗಲೇ 'ನಾನು ಸತ್ತಾಗಿರುವೆನು' ಎಂಬ ಅರಿವು ಉಂಟಾಗುತ್ತದೆ, ಹಾಗಿಲ್ಲದಿದ್ದರೆ ಆಗಲಾರದು.[5]

**ತತ್ತ್ವಮಿತ್ಯುಪದೇಶೋಽಪಿ ದ್ವಾರಾಭಾವಾದನರ್ಥಕಃ ॥ ೧೦೭ ॥**
**ಶ್ರೋತುಃ ಸ್ಯಾದುಪದೇಶಶ್ಚೇದರ್ಥವತ್ತ್ವಂ ತಥಾ ಭವೇತ್ ।**
**ಅಧ್ಯಕ್ಷಸ್ಯ ನ ಚೇದಿಷ್ಟಂ ಶ್ರೋತೃತ್ವಂ ಕಸ್ಯ ತದ್ಭವೇತ್ ॥ ೧೦೮ ॥**
**ಅಧ್ಯಕ್ಷಸ್ಯ ಸಮೀಪೇ ಸ್ಯಾದ್ಬುದ್ಧೇರೇವೇತಿ ಚೇನ್ಮತಮ್ ।**

---

1. ಅಹಂಕಾರವೂ ಪ್ರತ್ಯಯಗಳೂ ಚೈತನ್ಯಕ್ಕಾಗಿ ಅನುಭವವನ್ನುಂಟುಮಾಡುತ್ತಿರುವವು. ಉಪ. ಗದ್ಯ. ೨-೮೫, ೮೬ನೆಯ ಖಂಡಗಳನ್ನು ನೋಡಿ.

2. ಅಹಂಕಾರವೂ ಪ್ರತ್ಯಯಗಳೂ ಪರಾರ್ಥವಾದ್ದರಿಂದಲೂ ಅಚೇತನವಾಗಿರುವದರಿಂದಲೂ ಅವಕ್ಕೆ ಅಪರೋಕ್ಷಜ್ಞಾನವಾಗುವ ಹಾಗಿಲ್ಲ: ಆದ್ದರಿಂದ ಸಾಕ್ಷಿಗೇ ಈ ಫಲರೂಪವಾದ ಜ್ಞಾನವು ಎಂದು ಕಲ್ಪಿಸಬೇಕು.

3. ನಿರ್ವ್ಯಾಪಾರನಾದ ಸಾಕ್ಷಿಗೆ ಫಲವು ಹೇಗೆ? –ಎಂಬ ಆಕ್ಷೇಪಕ್ಕೆ ಈ ದೃಷ್ಟಾಂತ; ಸೇನಾಧಿಪತಿಯ ಜಯಾಪಜಯಗಳು ಸುಮ್ಮನಿರುವ ರಾಜನಿಗೂ ಆಗುವವು. ಇದರಂತೆ ನಾನು ಸದ್ಬ್ರಹ್ಮವು ಎಂಬ ಜ್ಞಾನವು ಸಾಕ್ಷಿಚೈತನ್ಯಕ್ಕೇ ಆದಂತಾಯಿತು. ಸೂ. ಭಾ. ೧-೪-೬ (ಭಾ. ಭಾ. ೩೫೧).

4. ಅಹಂಕಾರವೂ ಪ್ರತ್ಯಯವೂ ಚೈತನ್ಯವಲ್ಲ; ಅನುಭವವುಂಟಾಗುವದಕ್ಕೆ ನಿಮಿತ್ತ. ಆದ್ದರಿಂದ ಹೇತುವಿನಿಂದ ಆತ್ಮನಿಗೆ ಫಲವುಂಟಾಗುತ್ತದೆ ಎಂಬುದು ಸರಿ. ಫಲರೂಪವಾದ ಅನುಭವವು ನಿತ್ಯವಾಗಿದ್ದರೂ ಉಪಾಧಿಯಿಂದ ಹುಟ್ಟುವಂತೆ ಕಾಣುವದೆಂಬುದಕ್ಕೆ ಉಪ. ಗದ್ಯ. ೨-೬೫ ನೋಡಿ.

5. ನಾನು ಎಂಬ ಶಬ್ದವು ಆಭಾಸದಮೂಲಕ ಸದ್ಬ್ರಹ್ಮವಾಗಿರುವ ಚೈತನ್ಯವನ್ನೇ ಹೇಳುತ್ತದೆಯಾದ್ದರಿಂದ 'ನಾನು ಬ್ರಹ್ಮವು' ಎಂಬ ಅರಿವು ಉಂಟಾಗಬಹುದು.

**ನ ತತ್ಕೃತೋಽಪಕಾರೋಽಸ್ತಿ ಕಾಷ್ಠಾದ್ಯದ್ವನ್ನ ಕಲ್ಪ್ಯತೇ ॥ ೧೦೯ ॥**
**ಬುದ್ಧೌ ಚೇತ್ ತತ್ಕೃತಃ ಕಶ್ಚಿನ್ನನ್ವೇವಂ ಪರಿಣಾಮಿತಾ ॥ ೧೦೯ ೧/೨ ॥**

೧೦೭–೧೦೯ ೧/೨. (ಆಗ) 'ಅದೇ ನಾನು' ಎಂಬ ಉಪದೇಶಕ್ಕೂ ದ್ವಾರವಿಲ್ಲದ್ದರಿಂದ ವ್ಯರ್ಥ(ವಾಗುವದು). ಕೇಳುವವನಿಗೆ ಉಪದೇಶವಾದರೆ, ಹಾಗಾದರೆ ಸಾರ್ಥಕವಾದೀತು.[1] ಸಾಕ್ಷಿಗೆ ಶ್ರೋತೃತ್ವವನ್ನೊಪ್ಪದಿದ್ದರೆ, ಅದು ಮತ್ತೆ ಯಾರಿಗೆ ಆಗಬೇಕು? ಸಾಕ್ಷಿಯ ಸಮೀಪದಲ್ಲಿ ಬುದ್ಧಿಗೇ (ಶ್ರೋತೃತ್ವ)ವಿರಬಹುದು ಎಂದು (ನಿಮ್ಮ) ಮತವಾದರೆ[2] ಕಟ್ಟಿಗೆಯಿಂದ ಹೇಗೆ (ಉಪಕಾರವನ್ನು) ಕಲ್ಪಿಸಲಾಗಲಾರದೋ ಹಾಗೆ ಅದರಿಂದಾಗುವ ಉಪಕಾರವು (ಬುದ್ಧಿಯಲ್ಲಿ ಯಾವದೂ) ಇರುವದಿಲ್ಲ. ಬುದ್ಧಿಯಲ್ಲಿ ಅದರಿಂದಾಗುವ ಯಾವದಾದರೂ ಉಪಕಾರವಿರುತ್ತಿದ್ದರೆ, ಆಗ ಅದಕ್ಕೆ ಪರಿಣಾಮಿತ್ವವುಂಟಾಗುವದಿಲ್ಲವೆ ?[3]

**ಆಭಾಸೇಽಪಿ ಚ ಕೋ ದೋಷಃ ಸತಿ ಶ್ರುತ್ಯಾದ್ಯನುಗ್ರಹೇ ॥ ೧೧೦ ॥**
**ಆಭಾಸೇ ಪರಿಣಾಮಶ್ಚೇನ್ನ ರಜ್ಜ್ವಾದಿನಿಭತ್ವವತ್ ।**
**ಸರ್ಪಾದೇಶ್ಚ ತಥಾವೋಚಮಾದರ್ಶೇ ಚ ಮುಖತ್ವವತ್ ॥ ೧೧೧ ॥**

೧೧೦–೧೧೧. ಶ್ರುತ್ಯಾದಿಗಳ ಪ್ರಮಾಣವಿರುವಲ್ಲಿ[4] ಆಭಾಸ(ವನ್ನೊಪ್ಪುವ ಪಕ್ಷ)ದಲ್ಲಾದರೂ ದೋಷವೇನು? ಆಭಾಸವನ್ನೊಪ್ಪಿದರೆ ಪರಿಣಾಮವಾಗು

---

1. ಶ್ರೋತೃವಿಲ್ಲದೆ ಉಪದೇಶವಿಲ್ಲ, ಸಾಕ್ಷಿಯನ್ನು ಬಿಟ್ಟರೆ ಶ್ರೋತೃವೇ ಇಲ್ಲ.

2. ಪ್ರತ್ಯಯಗಳನ್ನು ಗ್ರಹಿಸುವವನು ಯಾರು ?– ಎಂಬ ವಿಚಾರದಲ್ಲಿ ಇವೇ ಶಂಕೆಯನ್ನೂ ಸಮಾಧಾನವನ್ನೂ ೭೩ನೆಯ ಶ್ಲೋಕದಲ್ಲಿ ಕೊಟ್ಟಿರುವದನ್ನು ಹೋಲಿಸಿರಿ. ಇಲ್ಲಿ ಶ್ರೋತೃತ್ವವು ಯಾರಿಗೆ ಎಂಬುವದನ್ನು ನಿರ್ಧರಿಸುವದಕ್ಕೆ ಮತ್ತೆ ಇದೇ ಶಂಕಾಸಮಾಧಾನಗಳನ್ನು ತಂದಿದೆ.

3. ಅಂತಃಕರಣದಲ್ಲಿ ಆತ್ಮನಿಂದ ಯಾವದಾದರೂ ನಿಜವಾದ ಅತಿಶಯವುಂಟಾಗುವದಾದರೆ ಆತ್ಮನಿಗೆ ಪರಿಣಾಮವುಂಟೆಂಬ ಅನಿಷ್ಟವು ಬಂದೊದಗುತ್ತದೆ. ಆದ್ದರಿಂದ ಶ್ರೋತೃತ್ವವನ್ನು ಅಂತಃಕರಣಕ್ಕೆ ಕಲ್ಪಿಸುವದಕ್ಕಾಗುವದಿಲ್ಲ. ಆಭಾಸದ್ವಾರದಿಂದ ಸಾಕ್ಷಿಯಲ್ಲಿಯೇ ಕಲ್ಪಿಸಬೇಕು.

4. ಶ್ರುತಿ(ಬೃ. ೨-೫-೧೯)ಯಲ್ಲಿ ಆತ್ಮಾಭಾಸವನ್ನು ಹೇಳಿವೆ. ಆಭಾಸವನ್ನೊಪ್ಪದಿದ್ದರೆ 'ತತ್ತ್ವಮಸಿ' ಎಂಬ ವಾಕ್ಯದ ಪ್ರಾಮಾಣ್ಯ, ವಾಕ್ಯದಿಂದ ಅರಿಯಬೇಕಾದ ಪ್ರಮೇಯ, ವಾಕ್ಯೋಪದೇಶದಿಂದಾಗುವ ವಿಜ್ಞಾನ, ಉಪದೇಶದ ಸಾರ್ಥಕ್ಯ– ಯಾವದೂ ಸಿದ್ಧಿಸುವದಿಲ್ಲವೆಂಬ ಯುಕ್ತಿಯನ್ನು ಈವರೆಗೆ ವರ್ಣಿಸಿದೆ.

ವದಲ್ಲ!- ಎಂದರೆ ಇಲ್ಲ. ಏಕೆಂದರೆ ಹಾವು ಮುಂತಾದದ್ದು ಹಗ್ಗವೇ ಮುಂತಾದದ್ದರ ಆಭಾಸವಾಗಿರುವಂತೆ (ಈ ಆಭಾಸವು ಅಸತ್ಯವಾಗಿರುತ್ತದೆ). ಆದ್ದರಿಂದಲೇ ಕನ್ನಡಿಯಲ್ಲಿರುವ ಮುಖದ (ಆಭಾಸ)ದಂತೆ (ಎಂಬ ದೃಷ್ಟಾಂತದಲ್ಲಿ)[1] ಹೇಳಿರುತ್ತೇನೆ.

## ಸಾಕ್ಷಿಪ್ರತ್ಯಯಗಳ ವಿಂಗಡ

**ನಾತ್ಮಾಭಾಸತ್ವಸಿದ್ಧಿಶ್ಚೇದಾತ್ಮನೋಽಗ್ರಹಣಾತ್ ಪೃಥಕ್ ।**
**ಮುಖಾದೇಶ್ಚ ಪೃಥಕ್ಸಿದ್ಧಿರಿಹ ತ್ವನ್ಯೋಽನ್ಯಸಂಶ್ರಯಃ ॥ ೧೧೨ ॥**

**ಅಧ್ಯಕ್ಷಸ್ಯ ಪೃಥಕ್ಸಿದ್ಧಾವಾಭಾಸಸ್ಯ ತದೀಯತಾ ।**
**ಆಭಾಸಸ್ಯ ತದೀಯತ್ವೇ ಹ್ಯಧ್ಯಕ್ಷವ್ಯತಿರಿಕ್ತತಾ ॥ ೧೧೩ ॥**

**ನೈವಂ ಸ್ವಪ್ನೇ ಪೃಥಕ್ಸಿದ್ಧೇಃ ಪ್ರತ್ಯಯಸ್ಯ ದೃಶೇಸ್ತಥಾ ।**
**ರಥಾದೇಸ್ತತ್ರ ಶೂನ್ಯತ್ವಾತ್ ಪ್ರತ್ಯಯಸ್ಯಾತ್ಮನಾ ಗ್ರಹಃ ॥ ೧೧೪ ॥**

**ಅವಗತ್ಯಾ ಹಿ ಸಂವ್ಯಾಪ್ತಃ ಪ್ರತ್ಯಯೋ ವಿಷಯಾಕೃತಿಃ ।**
**ಜಾಯತೇ ಸ ಯದಾಕಾರಃ ಸ ಬಾಹ್ಯೋ ವಿಷಯೋ ಮತಃ ॥೧೧೫॥**

೧೧೨-೧೧೪. (ಆಕ್ಷೇಪ):- ಆತ್ಮನನ್ನು ಬೇರೆಯಾಗಿ ಕಾಣದಿರುವದರಿಂದ ಆತ್ಮಾಭಾಸವು ಸಿದ್ಧವಾಗುವದಿಲ್ಲವಲ್ಲ! (ದೃಷ್ಟಾಂತದ) ಮುಖಾದಿಗಳು ಬೇರೆಯಾಗಿ ಸಿದ್ಧವಾಗಿರುತ್ತವೆ; ಆದರೆ ಇಲ್ಲಿ ಅನ್ಯೋನ್ಯಾಶ್ರಯವಾಗಿರುತ್ತದೆ. (ಹೇಗೆಂದರೆ): ಸಾಕ್ಷಿಯು ಬೇರೆಯಾಗಿ ಸಿದ್ಧವಾದರೆ ಆಭಾಸವು ಅವನದು ಎಂದಾಗುತ್ತದೆ; ಆಭಾಸವು ಅವನದಾದರೆ, ಸಾಕ್ಷಿಯು ಬೇರೆ ಎಂದಾಗುತ್ತದೆಯಲ್ಲವೆ?[2] (ಸಮಾಧಾನ): ಹಾಗಲ್ಲ. ಏಕೆಂದರೆ ಕನಸಿನಲ್ಲಿ ಪ್ರತ್ಯಯವೂ ಸಾಕ್ಷಿಯೂ ಬೇರೆಬೇರೆಯಾಗಿ ಸಿದ್ಧವಾಗಿರುತ್ತವೆ. ಅಲ್ಲಿ ರಥಾದಿಗಳು ಇರುವದಿಲ್ಲವಾದ್ದರಿಂದ ಪ್ರತ್ಯಯವನ್ನು ಆತ್ಮನು ಅರಿಯುತ್ತಿರುತ್ತಾನೆ.[3]

---

1. ಈ ಪ್ರಕರಣದ ೪೧ನೆಯ ಶ್ಲೋಕದಲ್ಲಿ ಇದನ್ನು ತಿಳಿಸಿದೆ. ಅಸತ್ಯವಾದ ಆಭಾಸದಿಂದ ಆತ್ಮನಿಗೆ ಪರಿಣಾಮವಾಗಲಾರದು.

2. ಸಾಕ್ಷಿಯು ಸ್ವತಃಸಿದ್ಧನೆಂಬುದನ್ನು ಕಡೆಗಣಿಸಿ ಈ ಪೂರ್ವಪಕ್ಷವನ್ನು ತೆಗೆದಿರುತ್ತದೆ. ಅಹಂಕಾರದಲ್ಲಿರುವದು ಚಿದಾಭಾಸವೆಂದು ಏತಕ್ಕೆ ಕರೆಯಬೇಕು? ಬೇರೆ ಚಿತ್ತನ್ನು ನಾವೆಲ್ಲಿ ಕಂಡಿದ್ದೇವೆ?- ಎಂಬುದು ಆಕ್ಷೇಪದ ಸಾರ.

3. ಬೃ. ೪-೩-೧೦ರ ಸೂಚನೆ ಇಲ್ಲಿದೆ. ರಥಾದಿಗಳಿಲ್ಲದೆ ರಥಾದಿರೂಪವಾದ ಪ್ರತ್ಯಯಗಳನ್ನೇ ಕನಸಿನಲ್ಲಿ ನಾವು ರಥಾದಿಗಳೆಂದು ಭಾವಿಸುತ್ತೇವೆ; ಅವುಗಳನ್ನು ನೋಡುವ ನಮ್ಮ ಸ್ವರೂಪವೇ ಸಾಕ್ಷಿ ಎಂದು ಅಭಿಪ್ರಾಯ.

**ಕರ್ಮೇಪ್ಸಿತತಮತ್ವಾತ್ ಸ ತದ್ವಾನ್ ಕಾರ್ಯೇ ನಿಯುಜ್ಯತೇ ।**
**ಆಕಾರೋ ಯತ್ರ ಚಾರ್ಪ್ಯೇತ ಕರಣಂ ತದಿಹೋಚ್ಯತೇ ॥ ೧೧೬ ॥**

**ಯದಾಭಾಸೇನ ಸಂವ್ಯಾಪ್ತಃ ಸ ಜ್ಞಾತೇತಿ ನಿಗದ್ಯತೇ ।**
**ತ್ರಯಮೇತದ್ ವಿವಿಚ್ಯಾತ್ರ ಯೋ ಜಾನಾತಿ ಸ ಆತ್ಮವಿತ್ ॥೧೧೭॥**

೧೧೫-೧೧೭. ಚೈತನ್ಯದಿಂದ ಪೂರ್ಣವಾಗಿ ವ್ಯಾಪ್ತವಾಗಿಯಲ್ಲವೆ ಪ್ರತ್ಯಯವು ವಿಷಯಾಕಾರವುಳ್ಳದ್ದಾಗುತ್ತದೆ?[1] ಅದು ಯಾವದರ ಆಕಾರವುಳ್ಳದ್ದಾಗಿ ಹುಟ್ಟುತ್ತದೆಯೋ ಅದು ಹೊರಗಿನ **ವಿಷಯ**ವೆನಿಸುವದು. ಅದೇ ಪಡೆಯುವದಕ್ಕೆ ಇಷ್ಟತಮವಾಗಿರುವದರಿಂದ **ಕರ್ಮ**ವು.[2] ಆ (ಇಷ್ಟತಮವಾದ ಕರ್ಮ)ವುಳ್ಳವನು ಕಾರ್ಯದಲ್ಲಿ ನಿಯುಕ್ತನಾಗುತ್ತಾನೆ.[3] (ವಿಷಯದ) ಆಕಾರವು ಏತರಲ್ಲಿ ಉಂಟಾಗುವದೋ ಆ (ಪ್ರತ್ಯಯವು) **ಕರಣ**ವೆನಿಸುವದು.[4] ಯಾವದರ ಆಭಾಸದಿಂದ (ಪ್ರತ್ಯಯವು) ಸಂವ್ಯಾಪ್ತವಾಗಿರುವದೋ ಅವನು **ಜ್ಞಾತೃ**ವೆನಿಸುವನು.[5] ಈ ಮೂರನ್ನೂ ಇಲ್ಲಿ ವಿಂಗಡಿಸಿಕೊಂಡು ಯಾವನು ಅರಿಯುವನೋ ಅವನೇ **ಆತ್ಮಜ್ಞಾನಿಯು**.[6]

---

1. ಪ್ರತ್ಯಯವು ವಿಷಯಾಕಾರವಾಗಿ ಅದನ್ನು ಬೆಳಗುವದಕ್ಕೆ ಚೈತನ್ಯದ ಆಭಾಸವುಳ್ಳದ್ದಾಗಿರುತ್ತದೆ ; ಚೈತನ್ಯವ್ಯಾಪ್ತವಾಗಿಯೂ ಇರುತ್ತದೆ ಎಂದು ಹಿಂದೆ ತಿಳಿಸಿದೆ.

2. ಘಟ, ಘಟಾಕಾರಪ್ರತ್ಯಯ- ಎರಡೂ ಜಾಗ್ರದವಸ್ಥೆಯಲ್ಲಿ ಸಾಕ್ಷಿವಿಷಯವಾಗಿರುತ್ತದೆ ಎಂದು ಭಾವ. ಕರ್ತೃವಿಗೆ ಈಪ್ಸಿತತಮವಾದದ್ದು ಕರ್ಮವು ಎಂದು ವೈಯಾಕರಣರು ಹೇಳುವರು.

3. ಕರ್ಮವಾದ ವಿಷಯವು ಬೇಕೆನ್ನುವವನೇ ಕರ್ಮದಲ್ಲಿ ತೊಡಗುವವನು. ಅವನೇ ಕರ್ತೃ.

4. ಅಂತಃಕರಣವು ವಿಷಯಾಕಾರವಾಗಿ ಪರಿಣಮಿಸಿದರೆ ಅದೇ ಪ್ರಮಾಣವು; ವಿಷಯವು ಪ್ರಮೇಯವು.

5. ಯಾವ ಸಾಕ್ಷಿಚೈತನ್ಯದ ಆಭಾಸದಿಂದ ಪ್ರತ್ಯಯವು ವ್ಯಾಪ್ತವಾಗಿರುವದೋ ಅದೇ ಜ್ಞಾತೃ ಎಂದರ್ಥ. ಬರಿಯ ಸಾಕ್ಷಿಯು ಪ್ರಮಾತೃವಲ್ಲ ; ಅಂತಃಕರಣದಲ್ಲಿ ಆಭಾಸವನ್ನು ವಿಂಗಡಿಸಿಕೊಳ್ಳದೆ ಇರುವಾಗ ಪ್ರಮೇಯದ ಅಪೇಕ್ಷೆಯಿಂದ ಪ್ರಮಾತೃವೆನಿಸುತ್ತದೆ. ೧೦೪ನೆಯ ಶ್ಲೋಕದಲ್ಲಿ ಶ್ರೋತೃವು ಸಾಕ್ಷಿಯೇ ಎಂಬದೂ ಹೀಗೆಯೇ. ೭೬ನೆಯ ಶ್ಲೋಕವನ್ನು ನೋಡಿ.

6. ಪ್ರಮಾತೃ, ಪ್ರಮಾಣ, ಪ್ರಮೇಯ –ಈ ಮೂರನ್ನೂ ವಿಂಗಡಿಸಿ ಯಾರು ತಿಳಿದುಕೊಳ್ಳುವರೋ ಅವನು ಆತ್ಮಜ್ಞಾನಿಯು ; ಏಕೆಂದರೆ ಪ್ರಮಾತೃವನ್ನು ವಿಂಗಡಿಸಿಕೊಂಡರೆ ನಿತ್ಯಚೈತನ್ಯಸ್ವರೂಪವೇ ಆಗಿ ನಿಲ್ಲುತ್ತಾನೆ. ಉಪ. ಗದ್ಯ. ೨-೬ನ್ನು ನೋಡಿ.

**ಸಮ್ಯಕ್ಸಂಶಯಮಿಥ್ಯೋಕ್ತಾಃ ಪ್ರತ್ಯಯಾ ವ್ಯಭಿಚಾರಿಣಃ |**
**ಏಕೈವಾವಗತಿಸ್ತೇಷು ಭೇದಸ್ತು ಪ್ರತ್ಯಯಾರ್ಪಿತಃ ॥ ೧೧೮ ॥**

**ಆಧಿಭೇದಾದ್ಯಥಾ ಭೇದೋ ಮಣೇರವಗತೇಸ್ತಥಾ |**
**ಅಶುದ್ಧಿಃ ಪರಿಣಾಮಶ್ಚ ಸರ್ವಂ ಪ್ರತ್ಯಯಸಂಶ್ರಯಾತ್ ॥ ೧೧೯ ॥**

**ಪ್ರಥನಂ ಗ್ರಹಣಂ ಸಿದ್ಧಿಃ ಪ್ರತ್ಯಯಾನಾಮಿಹಾನ್ಯತಃ |**
**ಆಪರೋಕ್ಷ್ಯಾತ್ ತದೇವೋಕ್ತಮನುಮಾನಂ ಪ್ರದೀಪವತ್ ॥ ೧೨೦ ॥**

೧೧೮–೧೨೦. ಸರಿಯಾದದ್ದು, ಸಂಶಯರೂಪವಾದದ್ದು, ತಪ್ಪಾದದ್ದು –ಎಂಬ ಪ್ರತ್ಯಯಗಳು ಬೇರೆಬೇರೆಯಾಗುತ್ತಿರುವವು. ಅವುಗಳಲ್ಲಿರುವ ಅವಗತಿಯು ಒಂದೇ, ಭೇದವಾದರೋ ಪ್ರತ್ಯಯಗಳಿಂದಾದದ್ದು.[1] ಉಪಾಧಿಯ ಭೇದದಿಂದ ಹೇಗೆ (ಸ್ಫಟಿಕ)ಮಣಿಗೆ ಭೇದವುಂಟಾಗುವದೋ ಹಾಗೆ ಅವಗತಿಗೆ ಅಶುದ್ಧಿಯೂ ಪರಿಣಾಮವೂ ಎಲ್ಲವೂ ಪ್ರತ್ಯಯದ ಆಶ್ರಯದಿಂದಲೇ ಆಗುತ್ತದೆ.[2] ಇಲ್ಲಿ ಪ್ರತ್ಯಯಗಳು ಹೊಳೆಯುವದು, ಅರಿಯಲ್ಪಡುವದು, ಇರುವದು –(ಇವೆಲ್ಲವೂ) ಅಪರೋಕ್ಷಸ್ವಭಾವದ ಮತ್ತೊಂದರಿಂದ; ದೊಡ್ಡದೀಪದಂತೆ –ಎಂದು ಹೇಳಿರುವದೇ ಅನುಮಾನವು.[3]

## ಶಿಷ್ಯಬೋಧನೆಗೆ ಆಭಾಸಯುಕ್ತಪ್ರಮಾಣವು ಬೇಕು

**ಕಿಮಜ್ಞಂ[4] ಗ್ರಾಹಯೇತ್ ಕಶ್ಚಿತ್ ಪ್ರಮಾಣೇನ ತು ಕೇನಚಿತ್ |**
**ವಿನೈವ ತು ಪ್ರಮಾಣೇನ ನಿವೃತ್ತ್ಯಾನ್ಯಸ್ಯ ಶೇಷತಃ ॥ ೧೨೧ ॥**

**ಶಬ್ದೇನೈವ ಪ್ರಮಾಣೇನ ನಿವೃತ್ತಿಶ್ಚೇದಿಹೋಚ್ಯತೇ ।**
**ಅಧ್ಯಕ್ಷಸ್ಯಾಪ್ರಸಿದ್ಧತ್ವಾಚ್ಛೂನ್ಯತೈವ ಪ್ರಸಜ್ಯತೇ ॥ ೧೨೨ ॥**

---

1. ಸಮ್ಯಗ್ಜ್ಞಾನ, ಸಂಶಯಜ್ಞಾನ, ಮಿಥ್ಯಾಜ್ಞಾನ – ಎಲ್ಲವೂ ಜ್ಞಾನವೇ ; ಸಮ್ಯಕ್ತ್ವಾದಿಗಳು ಬೇರೆಬೇರೆ ಪ್ರತ್ಯಯದಿಂದಾದ ಭೇದವು. ಉಪ. ಗದ್ಯ. ೨-೮೮, ೬೬ ನೋಡಿ.

2. ಚೈತನ್ಯವು ಸ್ವತಃ ಅಸಂಗವಾಗಿದೆ, ಕೂಟಸ್ಥವೂ ಆಗಿದೆ ; ಪ್ರತ್ಯಯದಿಂದಲೇ ಅದಕ್ಕೆ ವಿಷಯಸಂಪರ್ಕವು ಮತ್ತು ಮಾರ್ಪಾಡುಗಳು.

3. ವಿಷಯವಾದ ಪದಾರ್ಥಗಳು ದೀಪವೇ ಮುಂತಾದ ಬೆಳಕಿನಿಂದ, ಬೆಳಕು ಇಂದ್ರಿಯಗಳ ಬೆಳಕಿನಿಂದ, ಇಂದ್ರಿಯಗಳು ಮನಸ್ಸಿನ ಬೆಳಕಿನಿಂದ ತೋರುತ್ತವೆ. ಅವುಗಳ ಇರವೂ ಅರಿವೂ ಮತ್ತೊಂದರ ಅವಲಂಬನದಿಂದಲೇ. ಪ್ರತ್ಯಯದ ಇರವೂ ಅರಿವೂ ತೋರಿಕೆಯೂ ಇತರಿಂದ ಆಗುವದೋ ಅದೇ ಸಾಕ್ಷಿ.

4. ಅನ್ಯತ್ ಎಂಬ ಮೈ॥ ಪಾಠವನ್ನು ಹೀಗೆಂದು ತಿದ್ದಿಕೊಂಡಿದೆ. ಇದು ಬೋಧನಿಧಿಯ ಪಾಠ.

೧೨೧–೧೨೨. ಯಾವನಾದರೂ (ಗುರುವು) ಅಜ್ಞನಾದವನಿಗೆ ಯಾವದಾದರೊಂದು ಪ್ರಮಾಣದಿಂದ ತಿಳಿಸಿಕೊಡಬೇಕೊ, ಅಥವಾ ಪ್ರಮಾಣವಿಲ್ಲದೆ ಮತ್ತೊಂದನ್ನು ನಿಷೇಧಿಸಿ ಉಳಿಸುವದರಿಂದ ತಿಳಿಸಬೇಕೊ?[1] ಶಬ್ದಪ್ರಮಾಣದಿಂದಲೇ ನಿವೃತ್ತಿಯೇ ಇಲ್ಲಿ ಉಕ್ತವಾಗಿದೆ ಎಂದರೆ ಸಾಕ್ಷಿಯು ಅಪ್ರಸಿದ್ಧನಾಗಿರುವದರಿಂದ ಶೂನ್ಯತ್ವವೇ ಬಂದೊದಗುತ್ತದೆ.[2]

**ಚೇತನಸ್ತ್ವಂ ಕಥಂ ದೇಹ ಇತಿ ಚೇನ್ನಾಪ್ರಸಿದ್ಧಿತಃ ।**
**ಚೇತನಸ್ಯಾನ್ಯತಃ[3] ಸಿದ್ಧಾವೇವಂ ಸ್ಯಾದನ್ಯಹಾನತಃ ॥ ೧೨೩ ॥**

**ಅಧ್ಯಕ್ಷಃ ಸ್ವಯಮಸ್ತ್ಯೇವ ಚೇತನಸ್ಯ ಪರೋಕ್ಷತಃ ।**
**ತುಲ್ಯ ಏವಂ ಪ್ರಬೋಧಃ ಸ್ಯಾದಜ್ಞಸ್ಯಾ[4]ಸತ್ತ್ವವಾದಿನಾ ॥ ೧೨೪ ॥**

೧೨೩–೧೨೪. ಚೇತನನಾದ ನೀನು ದೇಹವು ಹೇಗೆ (ಆದೀಯೆ) ?– (ಎಂದು ಶಬ್ದವು ಹೇಳುತ್ತದೆ) ಎಂದರೆ ಹಾಗಲ್ಲ. ಏಕೆಂದರೆ (ಅದು) ಪ್ರಸಿದ್ಧವಾಗಿರುವದಿಲ್ಲ. ಚೇತನವು ಮತ್ತೊಂದರಿಂದ ಸಿದ್ಧವಾಗಿದ್ದರೆ ಹೀಗೆ

---

1. ಇಲ್ಲಿಂದ ಮುಂದಕ್ಕೆ ಎಂಟು ಶ್ಲೋಕಗಳ ತಾತ್ಪರ್ಯವನ್ನು ಗೊತ್ತುಪಡಿಸುವದು ಬಹಳ ಕಷ್ಟವಾಗಿರುತ್ತದೆ. ಆತ್ಮಸಿದ್ಧಿಯು ಬರಿಯ ನಿಷೇಧಮುಖಪ್ರಮಾಣದಿಂದಲ್ಲ, ವಿಧಿಮುಖಪ್ರಮಾಣದಿಂದಲೂ ಸಿದ್ಧವಾಗುತ್ತದೆ - ಎಂದು ಈ ಪ್ರಕರಣದಲ್ಲಿ ಹೇಳಿವೆ ಎಂತ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಇದು ಗೀ. ಭಾ. ೨-೧೮, ೧೩-೧೨, ಬೃ. ೨-೩-೬, ೪-೪-೨೦, ಮಾಂ. ಕಾ. ಭಾ. ೨-೩೨, ಸೂ. ಭಾ. ೧-೧-೪ ಮುಂತಾದ ಭಾಷ್ಯಗಳಿಗೆ ವಿರುದ್ಧವಾಗಿರುತ್ತದೆ. ಆದ್ದರಿಂದ ಆಭಾಸವನ್ನೊಪ್ಪಿದರೆ ಸಾಕ್ಷಿಚೈತನ್ಯವನ್ನು ತಿಳಿಸುವದಕ್ಕೆ ಇರುವ ಸೌಕರ್ಯವನ್ನು ತಿಳಿಸುವದಕ್ಕೆ ಈ ಪ್ರಕರಣವು ಬಂದಿದೆ ಎಂದು ನಾವು ವಿವರಿಸುತ್ತೇವೆ.

2. ಪ್ರಮಾಣದಿಂದಲೇ ಗುರುವು ತಿಳಿಸಿಕೊಡುತ್ತಾನೆ; ಶಬ್ದವೇ ಪ್ರಮಾಣವು; ಶಬ್ದವು ದೇಹಾದಿಗಳು ನೀನಲ್ಲ ಎಂದೇ ತಿಳಿಸಿಕೊಡುತ್ತದೆ – ಎಂದರೆ ಬರಿಯ ನಿಷೇಧವು ಶೂನ್ಯದಲ್ಲಿಯೂ ಪರ್ಯವಸಾನವಾಗಬಹುದು – ಎಂದು ಅಭಿಪ್ರಾಯ.

3. 'ಅನ್ಯತಾಸಿದ್ಧೌ' ಎಂದು **ಬೋಧನಿಧಿಯ** ಪಾಠ. ಅಚ್ಚಿನ ಮೈ॥ ಪಾಠದಲ್ಲಿ 'ಅನ್ಯತಃ' ಎಂದಿದೆ; ಆದರೆ ವ್ಯಾಖ್ಯಾನಕಾರನು ಯಾವ ಪಾಠವನ್ನು ಅನುಸರಿಸುತ್ತಾನೆಂಬುದು ಸ್ಪಷ್ಟವಾಗುವದಿಲ್ಲ. ನಾವು 'ಮತ್ತೊಂದು ಪ್ರಮಾಣದಿಂದ' ಎಂಬರ್ಥದಲ್ಲಿ 'ಅನ್ಯತಃ' ಪ್ರಯೋಗವಾಗಿದೆ ಎಂದು ಹಿಡಿದಿದ್ದೇವೆ.

4. 'ಅನ್ಯಸ್ಯ' ಎಂಬ ಮೈ॥ ಪಾಠಕ್ಕಿಂತ ಈ **ಬೋಧನಿಧಿಯ** ಪಾಠವೇ ಮೇಲು.

ಮುಷ್ಟ್ರೊಂದರ ನಿವೃತ್ತಿಯಿಂದ (ಆತ್ಮನನ್ನು ತಿಳಿಸುವದು) ಆಗುತ್ತಿತ್ತು.[1]

( ಪೂರ್ವಪಕ್ಷಿ): ಚೇತನವೆಂಬುದು ಅಪರೋಕ್ಷವಾಗಿರುವದರಿಂದ ಸಾಕ್ಷಿಯು ತಾನೇ ಇದ್ದುಕೊಂಡಿದೆಯಲ್ಲ! (ಸಿದ್ಧಾಂತಿ): ಅಸತ್ತ್ವವಾದಿಯಿಂದಲೂ ಅಜ್ಞನಿಗೆ[2] ಇದಕ್ಕೆ ಸಮಾನವಾದ ಉಪದೇಶವು ಹೀಗೆಯೇ ಆಗಬಹುದು.[3]

**ಅಹಮಜ್ಞಾಸಿಷಂ ಚೇದಮಿತಿ ಲೋಕಸ್ಮೃತೇರಿಹ ।**
**ಕರಣಂ ಕರ್ಮ ಕರ್ತಾ ಚ ಸಿದ್ಧಾಸ್ತ್ವೇಕಕ್ಷಣೇ ಕಿಲ ॥ ೧೨೫ ॥**
**ಪ್ರಾಮಾಣ್ಯೇಽಪಿ ಸ್ಮೃತೇಃ ಶೈಘ್ರ್ಯಾದ್ಯೌಗಪದ್ಯಂ ವಿಭಾವ್ಯತೇ ।**
**ಕ್ರಮೇಣ ಗ್ರಹಣಂ ಪೂರ್ವಂ ಸ್ಮೃತಿಃ ಪಶ್ಚಾತ್ ತಥೈವ ಚ ॥ ೧೨೬ ॥**

೧೨೫-೧೨೬. 'ನಾನು ಇದನ್ನು ಅರಿತೆನು' ಎಂದು ಜನಕ್ಕೆ ಆಗುವ ಸ್ಮೃತಿಯ (ಬಲ)ದಿಂದ ಕರಣ, ಕರ್ಮ, ಕರ್ತೃ –(ಇವು ಮೂರೂ) ಒಂದೇ ಕ್ಷಣದಲ್ಲಿ ಸಿದ್ಧವಾಗುವವು (ಎಂದು ಪೂರ್ವಪಕ್ಷದವರ ಅಭಿಪ್ರಾಯ)ವಂತೆ.[4] (ಆದರೆ) ಸ್ಮೃತಿಯು ಪ್ರಮಾಣವೆಂದು (ಒಪ್ಪಿದರೂ) ಶೀಘ್ರವಾಗಿ ಆಗುವದರಿಂದ ಒಂದೇ ಕಾಲದಲ್ಲಿ ಇವು ಆಗುವವೆಂದು ತೋರುವದೇ (ಹೊರತು ನಿಜವಾಗಿ ಒಂದು

---

1. ಚೇತನವು ಬೇರೆ, ಅಚೇತನವು ಬೇರೆ –ಎಂದೂ ಚೇತನತ್ವವೂ ಅಚೇತನತ್ವವೂ ಒಂದಕ್ಕೊಂದು ವಿಲಕ್ಷಣವಾಗಿರುವವು ಅಥವಾ ವಿರುದ್ಧಸ್ವಭಾವದವಾಗಿರುವವು ಎಂದೂ ಬೇರೆ ಪ್ರಮಾಣದಿಂದ ಸಿದ್ಧವಾಗಿಲ್ಲ – ಎಂದರ್ಥ. ಉಪ. ಗದ್ಯ. ಖಂಡ ೪ನ್ನು ನೋಡಿ. 'ನಾನು ಅರಿಯುತ್ತೇನೆ' ಎಂಬ ವ್ಯವಹಾರದ ಬಲದಿಂದ ಅಂತಃಕರಣವನ್ನೇ ಅಜ್ಞನು ನಾನು ಎಂದು ತಿಳಿದುಕೊಳ್ಳುವನೆಂಬುದು ಸ್ವಾಭಾವಿಕವಾಗಿದೆ. ಸಿದ್ಧಾಂತದಲ್ಲಿ ಆಭಾಸವನ್ನು ಒಪ್ಪಿರುವದರಿಂದ, ಅಜ್ಞನು ಆಭಾಸವಿಶಿಷ್ಟವಾದ ಅಹಂಕಾರವನ್ನೇ ತಾನೆಂದು ತಿಳಿದುಕೊಂಡಿರುವದರಿಂದ ಅವಸ್ಥಾತ್ರಯವಿಚಾರದಿಂದ ಆತ್ಮನನ್ನು ಬಿಂಗಡಿಸಿಕೊಟ್ಟು 'ಯಾವ ಆಭಾಸವು ಅಹಂಕಾರದಲ್ಲಿ ತೋರುವದೋ ಅದೇ ನೀನು' ಎಂದು ಉಪದೇಶಿಸಬಹುದಾಗಿದೆ – ಎಂದು ಭಾವ.

2. ಸಾಕ್ಷಿಯು ಸ್ವತಃಸಿದ್ಧನೆಂದು ಅರಿತುಕೊಂಡಿರುವವನು ಅಹಂಕಾರಾದಿಗಳನ್ನು ತಾನೆಂದು ಭ್ರಮಿಸುವದಿಲ್ಲವಾದ್ದರಿಂದ ಅವನು ಅಜ್ಞನಾಗಲಾರನು. ಆದ್ದರಿಂದ ಪ್ರಕೃತ ಸಂದರ್ಭಕ್ಕೆ ಸ್ವತಃಸಿದ್ಧತ್ವವಾದವನ್ನು ಉಪಯೋಗಿಸುವ ಹಾಗಿಲ್ಲ –ಎಂದು ಭಾವ.

3. ಶೂನ್ಯವಾದಿಯು ಶೂನ್ಯವೂ ಪ್ರಮಾಣವನ್ನು ಬಯಸದೆ ತಾನೇ ಸಿದ್ಧವಾಗಿದೆ ಎಂದು ಅಜ್ಞನಿಗೆ ಬೋಧಿಸಬಹುದು.

4. 'ನಾನು ಇದನ್ನು ಅರಿತೆನು' ಎಂಬ ನೆನಪು ನನಗೆ ಆಗುತ್ತದೆಯಷ್ಟೆ; ಇಲ್ಲಿ ಕರ್ತೃ, ಕರ್ಮ, ಕರಣ – ಈ ಮೂರೂ ಒಂದೇ ಕಾಲದಲ್ಲಿ ತೋರುತ್ತವೆ. ಆದ್ದರಿಂದ ಅನುಭವದಲ್ಲಿಯೂ ಇದಕ್ಕೆ ಅನುಗುಣವಾಗಿ ಮೂರೂ ಒಂದೇ ಕಾಲದಲ್ಲಿ ತೋರಿರಬೇಕು. ಆದ್ದರಿಂದ ಈ ಮೂರನ್ನೂ ಒಂದೇ ಕಾಲದಲ್ಲಿ ಅನುಭವಿಸುವವನೇ ಆತ್ಮನು –ಎಂದು ಸಾಕ್ಷಿಯನ್ನು ಸ್ಮೃತಿಪ್ರಮಾಣದಿಂದ ಸಾಧಿಸಬಹುದು ಎಂದು ಪೂರ್ವಪಕ್ಷಿಯ ಆಶಯ.

ಕಾಲದಲ್ಲಿ ಇವು ಆಗುವದಿಲ್ಲ. ಏಕೆಂದರೆ) ಮೊದಲು ಅನುಭವವೂ ಮತ್ತು ಆ ಮೇಲೆ ಸ್ಮೃತಿಯೂ ಕ್ರಮವಾಗಿಯೇ (ಆಗುತ್ತವೆ).[1]

**ಅಜ್ಞಾಸಿಷಮಿದಂ ಮಾಂ ಚೇತ್ಯಪೇಕ್ಷಾ ಜಾಯತೇ ಧ್ರುವಮ್ |**
**ವಿಶೇಷೋಽಪೇಕ್ಷತೇ ಯತ್ರ ತತ್ರ ನೈವೈಕಕಾಲತಾ || ೧೨೭ ||**
**ಆತ್ಮನೋ ಗ್ರಹಣೇ ಚಾಪಿತ್ರಯಾಣಾಮಿಹ ಸಂಭವಾತ್ |**
**ಆತ್ಮಸ್ಥಾಸಕ್ತಕರ್ತೃತ್ವಂ ನ ಸ್ಯಾತ್ಕರಣಕರ್ಮಣೋಃ || ೧೨೮ ||**

೧೨೭–೧೨೮. 'ಇದನ್ನೂ ನನ್ನನ್ನೂ ಅರಿತುಕೊಂಡೆನು' ಎಂದು ಅವಶ್ಯ ನಾಗಿ (ವಿಶೇಷದ) ಅಪೇಕ್ಷೆಯುಂಟಾಗುತ್ತದೆ. ಎಲ್ಲಿ ವಿಶೇಷದ ಅಪೇಕ್ಷೆಯಿರು ವದೋ ಅಲ್ಲಿ ಏಕಕಾಲತ್ವವು ಇರುವದೇ ಇಲ್ಲ.[2] ಆತ್ಮನನ್ನು ಅರಿಯುವದಕ್ಕೂ (ಈ) ಮೂರೂ ಇಲ್ಲಿ ಸಂಭವಿಸುವದರಿಂದ[3] (ಇದು ಸರಿಯಲ್ಲ). ಆತ್ಮನ(ನ್ನರಿ ಯುವದರ)ಲ್ಲಿ ತೊಡಗಿರುವ ಕರ್ತೃತ್ವವು ಕರಣಕರ್ಮಗಳಲ್ಲಿ ಇಲ್ಲದೆ ಹೋಗುವದು.[4]

**ವ್ಯಾಪ್ತುಮಿಷ್ಟಂ ಚ ಯತ್ಕರ್ತುಃ ಕ್ರಿಯಯಾ ಕರ್ಮ ತತ್ ಸ್ಮೃತಮ್ |**
**ಅತೋ ಹಿ ಕರ್ತೃತನ್ತ್ರತ್ವಂ[5] ತಸ್ಯೇಷ್ಟಂ ನಾನ್ಯತನ್ತ್ರತಾ || ೧೨೯ ||**

---

1. ಸ್ಮೃತಿಯು ಅನುವಾದಮಾತ್ರವಾದ್ದರಿಂದ ಪ್ರಮಾಣವಲ್ಲ. ಒಂದು ವೇಳೆ ಪ್ರಮಾಣವೆಂದು ಒಪ್ಪಿದರೂ ಒಂದೇ ಕಾಲದಲ್ಲಿ ಸ್ಮರಣೆಯಾಗುವದೆಂಬುದೂ ಸರಿಯಲ್ಲ. ಕರ್ತೃವು ಒಳಗೆ, ಕರ್ಮವು ಹೊರಗೆ; ಎರಡನ್ನೂ ಏಕಕಾಲಕ್ಕೆ ಅರಿಯುವದು ಹೇಗೆ? ಸ್ಮರಣೆಯು ತಾನೆ ಏಕಕಾಲಕ್ಕೆ ಹೇಗಾದೀತು? ಆದ್ದರಿಂದ ಕ್ರಮವಾಗಿ ಆಗುವ ಎರಡು ಅನುಭವಗಳನ್ನೇ ಒಂದೇ ಕಾಲದಲ್ಲಿ ಆಗುವವೆಂದು ಪೂರ್ವಪಕ್ಷಿಯು ಭ್ರಮಿಸಿರು ತ್ತಾನೆ ಎನ್ನಬೇಕಾಯಿತು.

2. ಒಂದೇ ಕಾಲದಲ್ಲಿ ಕರ್ತೃ, ಕರಣ, ಕರ್ಮ- ಮೂರನ್ನೂ ಅರಿಯುವದಾದರೆ ಇದನ್ನು ಅರಿತುಕೊಂಡೆನು, ನನ್ನನ್ನು ಅರಿತುಕೊಂಡೆನು- ಎಂದು ವಿಶೇಷವಾಗಿಯೂ ಅರಿಯಬಹುದಾಗುವದು. ಹೀಗೆ ವಿಶೇಷದ ಆಕಾಂಕ್ಷೆಯಿದ್ದರೆ ಇವುಗಳ ಅನುಭವಕ್ಕೆ ಒಂದೇ ಕಾಲವು ಹೇಗಾದೀತು? ಒಂದೇ ಕಾಲದಲ್ಲಿ ಅನುಭವವಾದದ್ದನ್ನು ಹೀಗೆ ಬಿಡಿಸಿ ಬಿಡಿಸಿ ನೆನಪಿಗೆ ತಂದುಕೊಳ್ಳುವದು ಹೇಗೆತಾನೆ ಸಾಧ್ಯ?

3. ತನ್ನನ್ನೇ ಅರಿಯುವಾಗಲೂ ಕರ್ತೃ, ಕರಣ, ಕರ್ಮ- ಈ ಮೂರನ್ನೂ ಅರಿಯಬೇಕಾಗುವದು. ಹೀಗೆಯೇ ಕರಣವನ್ನು ಅರಿಯುವಾಗಲೂ ಕರ್ಮವನ್ನರಿಯು ವಾಗಲೂ ಮೂರೂ ಆಗಬಹುದಾಗುವದು. ಇದೂ ಅನಿಷ್ಟವು. ಆದ್ದರಿಂದ ಏಕಕಾಲದ ಸ್ಮರಣೆಯಿಲ್ಲ.

4. ತನ್ನನ್ನರಿಯುವದಕ್ಕೆ ವ್ಯಾಪಾರಮಾಡುವಾಗಲೇ ಕರಣವನ್ನಾಗಲಿ ಕರ್ಮ ವನ್ನಾಗಲಿ ಅರಿಯುವದಕ್ಕೆ ಹೇಗೆ ವ್ಯಾಪಾರಮಾಡುವದು? ಇದೂ ಅನುಭವವಿರುದ್ಧ.

5. 'ಕರ್ಮಕರ್ತೃತ್ವಂ' ಎಂಬ ಬೋಧನಿಧಿಯ ಪಾಠಕ್ಕಿಂತ ಇದೇ ಮೇಲು.

೧೨೯. ಕರ್ತೃವು ಕ್ರಿಯೆಯಿಂದ ಯಾವದನ್ನು ಪಡೆಯಲಿಚ್ಛಿಸುವನೋ ಅದು ಕರ್ಮವು ಎಂದು ಸ್ಮೃತಿಯಿರುವದು.[1] ಆದ್ದರಿಂದ ಅದು ಕರ್ತೃವಿಗೆ ಅಧೀನವಾಗಿರುವದೇ ಹೊರತು ಮತ್ತೊಂದಕ್ಕೆ ಅಧೀನವಾಗಿರುವದೆಂಬುದು ಇಷ್ಟವಲ್ಲ.[2]

**ಶಬ್ದಾದ್ವಾನುಮಿತೇರ್ವಾಽಪಿ ಪ್ರಮಾಣಾದ್ವಾ ತತೋಽನ್ಯತಃ |**
**ಸಿದ್ಧಿಃ ಸರ್ವಪದಾರ್ಥಾನಾಂ ಸ್ಯಾದಜ್ಞಂ ಪ್ರತಿ ನಾನ್ಯಥಾ ॥ ೧೩೦ ॥**
**ಅಧ್ಯಕ್ಷಸ್ಯಾಪಿ ಸಿದ್ಧಿಃ ಸ್ಯಾತ್ ಪ್ರಮಾಣೇನ ವಿನೈವ ವಾ |**
**ವಿನಾ ಸ್ವಸ್ಯ ಪ್ರಸಿದ್ಧಿಸ್ತು ನಾಜ್ಞಂ ಪ್ರತ್ಯುಪಯುಜ್ಯತೇ ॥ ೧೩೧ ॥**

೧೩೦-೧೩೧. ಆದ್ದರಿಂದ ಅಜ್ಞನಿಗೆ ಯಾವ ಪದಾರ್ಥಗಳ ಸಿದ್ಧಿಯೇ ಆಗಲಿ, ಶಬ್ದದಿಂದ, ಅನುಮಾನದಿಂದ, ಅಥವಾ ಮತ್ತೊಂದು ಪ್ರಮಾಣದಿಂದಲೇ ಆಗಬೇಕು, ಬೇರೆಯ ರೀತಿಯಿಂದ ಆಗಲಾರದು.[3] ಸಾಕ್ಷಿಯ ಸಿದ್ಧಿಯೂ ಪ್ರಮಾಣದಿಂದ ಅಥವಾ ಪ್ರಮಾಣವಿಲ್ಲದೆಯೇ ಆಗಬೇಕಷ್ಟೆ.[4] ಆದರೆ ಪ್ರಮಾಣವಿಲ್ಲದೆ (ಆಗುವ) ಆತ್ಮಸಿದ್ಧಿಯು ಅಜ್ಞನಿಗೆ ಉಪಯೋಗವಾಗುವದಿಲ್ಲ.[5]

**ತಸ್ಯೈವಾಜ್ಞತ್ವಮಿಷ್ಟಂ ಚೇಜ್ಜ್ಞತ್ವೇಽನ್ಯಾ[6] ಮತಿರ್ಭವೇತ್ |**
**ಅನ್ಯಸ್ಯೈವಾಜ್ಞತಾಯಾಂ ಚ ತದ್ವಿಜ್ಞಾನೇ ಧ್ರುವಾ ಭವೇತ್ ॥೧೩೨॥**

೧೩೨. ಅವನೇ ಅಜ್ಞನೆಂದು ಇಟ್ಟುಕೊಂಡರೆ[7] ಅವನು ಜ್ಞಾನನಾಗುವದಕ್ಕೆ ಮತ್ತೊಂದು ಜ್ಞಾನವು ಬೇಕಾಗುವದು. ಮತ್ತೊಬ್ಬನು ಅಜ್ಞನೆಂದಾ

---

1. ಪಾಣಿನಿ ೧-೪-೪೯ 'ಕರ್ತುರೀಪ್ಸಿತತಮಂ ಕರ್ಮ' ಎಂಬ ಸೂತ್ರದಲ್ಲಿ ಹೇಗೆಂದಿದೆ.

2. ಸಾಕ್ಷಿಗೆ ಅಧೀನವೆನ್ನುವದಕ್ಕೆ ಪ್ರಮಾಣವಿಲ್ಲ; ಏಕೆಂದರೆ ಸಾಕ್ಷಿಗೆ ಕರ್ತೃತ್ವವಿಲ್ಲ. ಆದ್ದರಿಂದ 'ನಾನು ಇದನ್ನು ಅರಿತೆನು' ಎಂಬ ಸ್ಮೃತಿಯ ಬಲದಿಂದ ಸಾಕ್ಷಿಯನ್ನು ಸಾಧಿಸುವದಕ್ಕೆ ಆಗುವದಿಲ್ಲ ಎಂದು ಇಲ್ಲಿಗೆ ಉಪಸಂಹಾರಮಾಡಿಕೊಳ್ಳಬೇಕು.

3. ಸುಮ್ಮನೆ ಇದಲ್ಲನೆಂದು ಅಲ್ಲಗಳೆಯುವದರಿಂದ ಸಿದ್ಧಿಯಾಗಲಾರದು. ಏಕೆಂದರೆ ಅಜ್ಞಾನವು ಪ್ರಮಾಣದಿಂದಲೇ ಹೋಗಬೇಕಾಗಿರುತ್ತದೆ.

4. 'ತತ್ತ್ವಮಸಿ' ಎಂಬ ಶಬ್ದಪ್ರಮಾಣದಿಂದ, ಅಥವಾ ಪ್ರಮಾಣವಿಲ್ಲದೆ ಸ್ವತಃ ಸಿದ್ಧನೆಂಬ ಕಾರಣದಿಂದ.

5. ಏಕೆಂದರೆ ಅಜ್ಞನು ತಾನು ಪ್ರಮಾತೃವೆಂದೇ ತಿಳಿದುಕೊಂಡಿರುತ್ತಾನಾಗಿ ಅವನಿಗೆ ಪ್ರಮಾಣವೇ ಬೇಕು.

6. 'ಜ್ಞಾನತ್ವೇ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೆ ಮೇಲು.

7. ಸಾಕ್ಷಿಯೇ ಅಜ್ಞನೆಂದರೆ ಎಂದರ್ಥ. ಸಾಕ್ಷಿಯೇ ಶ್ರೋತೃವೆಂದು ೧೨೦ರಲ್ಲಿ ಹೇಳಿರುವ ನ್ಯಾಯದಿಂದ ಸಾಕ್ಷಿಯೇ ಅಜ್ಞನೆಂಬ ವ್ಯವಹಾರಕ್ಕೆ ವಿಷಯನೆಂದೇ ಹೇಳಬೇಕಾಗುತ್ತದೆ ಎಂಬುದನ್ನು ಇಲ್ಲಿ ನೆನಪಿಡಬೇಕು.

ದರೂ ಅವನನ್ನು ಅರಿಯುವದಕ್ಕೆ[1] ಪ್ರಮಾಣವು ಜ್ಞಾನವು ಅವಶ್ಯವಾಗಿ ಬೇಕಾಗುವದು.

**ಜ್ಞಾತತಾ ಸ್ವಾತ್ಮಲಾಭೋ ವಾ ಸಿದ್ಧಿಃ ಸ್ಯಾದನ್ಯದೇವ ವಾ ।**
**ಜ್ಞಾತತ್ವೇಽನನ್ತರೋಕ್ತೌ ತ್ವಂ ಪಕ್ಷೌ ಸಂಸ್ಮರ್ತುಮರ್ಹಸಿ ॥ ೧೩೩ ॥**
**ಸಿದ್ಧಿಃ ಸ್ಯಾತ್ ಸ್ವಾತ್ಮಲಾಭಶ್ಚೇದ್ಯತ್ನಸ್ತತ್ರ ನಿರರ್ಥಕಃ ।**
**ಸರ್ವಲೋಕಪ್ರಸಿದ್ಧತ್ವಾತ್ ಸ್ವಹೇತುಭ್ಯಸ್ತು ವಸ್ತುನಃ ॥ ೧೩೪ ॥**
**ಜ್ಞಾನಜ್ಞೇಯಾದಿವಾದೇಽತಃ ಸಿದ್ಧಿರ್ಜ್ಞಾತತ್ವಮುಚ್ಯತೇ ।**
**ಅಧ್ಯಕ್ಷಾಧ್ಯಕ್ಷ್ಯಯೋಃ ಸಿದ್ಧಿರ್ಜ್ಞೇಯತ್ವಂ ನಾತ್ಮಲಾಭತಾ ॥ ೧೩೫ ॥**

೧೩೩–೧೩೫. ಜ್ಞಾತವಾಗುವದೇ ಸಿದ್ಧಿಯೊ, ಹುಟ್ಟುವದೇ ಸಿದ್ಧಿಯೊ" ಇನ್ನುಬೇರೆ ಯಾವದಾದರೂ ಒಂದೊ ? ಜ್ಞಾತವಾಗುವದೇ ಎಂದರೆ ಹಿಂದೆ ಹೇಳಿದ ಎರಡು ಪಕ್ಷಗಳನ್ನು ನೀನು ನೆನಪಿಸಿಕೊಳ್ಳಬೇಕು.[2] ಹುಟ್ಟುವದೇ ಸಿದ್ಧಿಯಾದರೆ ಅದಕ್ಕಾಗಿ ಯತ್ನವನ್ನು ಮಾಡುವದು ವ್ಯರ್ಥವು; ಏಕೆಂದರೆ ಆಯಾ ಹೇತುಗಳಿಂದ ವಸ್ತು ಹುಟ್ಟುವದೆಂಬುದು ಎಲ್ಲ ಜನರಿಗೂ ತಿಳಿದೇ ಇದೆ. ಆದ್ದರಿಂದ ಜ್ಞಾನ, ಜ್ಞೇಯ – ಮುಂತಾದವುಗಳ ವಿಚಾರದಲ್ಲಿ ಜ್ಞಾತತ್ವವೇ ಸಿದ್ಧಿಯೆನಿಸುತ್ತದೆ.[3] ಸಾಕ್ಷಿಯೂ ಸಾಕ್ಷ್ಯವೂ ಸಿದ್ಧಿಯಾಗುವದೆಂದರೆ ತಿಳಿಯ ಬರುವದೇ ಹೊರತು ಹುಟ್ಟುವದಲ್ಲ.[4]

**ಸ್ಪೃಷ್ಟತ್ವಂ ಕರ್ಮಕರ್ತ್ರಾದೇಃ ಸಿದ್ಧಿತಾ ಯದಿ ಕಲ್ಪ್ಯತೇ ।**
**ಸ್ಪೃಷ್ಟತಾಸ್ಪೃಷ್ಟತೇ ಸ್ಯಾತಾಮನ್ಯಸ್ಯೈವ ನ ಚಾತ್ಮನಃ ॥ ೧೩೬ ॥**

---

1. ಸಾಕ್ಷಿಯನ್ನು ಅರಿಯುವದಕ್ಕೆ ಎಂದರ್ಥ. ಪ್ರಮಾಣದ ಹಂಗಿಲ್ಲದೆ ಅಜ್ಞನಿಗೆ ಬೋಧೆಯನ್ನು ಮಾಡುವದಕ್ಕೆ ಆಗಲಾರದು; ಆದ್ದರಿಂದ ಶಬ್ದಪ್ರಮಾಣವು ಆಭಾಸದ ಮೂಲಕ ಚೈತನ್ಯವನ್ನು ತಿಳಿಸುತ್ತದೆ ಎಂಬುದೇ ಸಿದ್ಧಾಂತವು ಎಂಬ ಉಪಸಂಹಾರ.

2. ಜ್ಞಾತವಾಗುವದೇ ಸಿದ್ಧಿಯೆಂದೊಪ್ಪಿದರೆ ಅದಕ್ಕೆ ಪ್ರಮಾಣವು ಬೇಕೆಂಬುದನ್ನು ಹಿಂದೆ ೧೩೦ರಿಂದ ೧೩೨ನೆಯ ಶ್ಲೋಕದಲ್ಲಿ ತೋರಿಸಿಯೇ ಇದೆ.

3. ಗಡಿಗೆಯು ಸಿದ್ಧವಾಯಿತು ಎಂದರೆ ಹುಟ್ಟಿತು ಎಂದರ್ಥ ; ಈ ಅರ್ಥದ ಸಿದ್ಧಿಗೆ ಕುಂಬಾರ, ಮಣ್ಣು, ದಂಡ ಮುಂತಾದ ಹೇತುಗಳು ಬೇಕು. ಆದರೆ ಸಾಕ್ಷಿಯು ಸಿದ್ಧಿ ಹೇಗಾಗುತ್ತದೆ? –ಎಂಬ ಪ್ರಶ್ನೆಗೆ ಅದು ತಾನೇ ಸಿದ್ಧವಾಗಿದೆ, ಉಂಟಾಗಬೇಕಾದದ್ದಿಲ್ಲ ಎಂಬ ಉತ್ತರವು ಸಲ್ಲದು. ಪ್ರಕೃತದಲ್ಲಿ ಆತ್ಮಲಾಭ, ಹುಟ್ಟುವದು- ಎಂಬ ಸಿದ್ಧಿಯ ವಿಚಾರವಿಲ್ಲ.

4. ಸಾಕ್ಷಿಯು ಅಜ್ಞನಿಗೆ ಜ್ಞೇಯವೇ ಆಗಿರುವದರಿಂದ ಅವನೂ ವೇದಾಂತಪ್ರಮಾಣ ದಿಂದಲೇ ಸಿದ್ಧವಾಗಬೇಕಾಗಿದೆ.

**ಅದ್ರಷ್ಟುರ್ನೈವ ಚಾನ್ಧಸ್ಯ ಸ್ಪಷ್ಟೀಭಾವೋ ಘಟಸ್ಯ ತು ।**
**ಕರ್ತ್ರಾದೇಃ ಸ್ಪಷ್ಟತೇಷ್ಟಾ ಚೇದ್ದ್ರಷ್ಟೃತಾಧ್ಯಕ್ಷಕರ್ತೃಕಾ ॥ ೧೩೭ ॥**

೧೩೬–೧೩೭ ಸಿದ್ಧಿಯಾಗುವದೆಂದರೆ ಸ್ಪಷ್ಟವಾಗುವದು ಎಂದು ಕಲ್ಪಿಸುವದಾದರೆ[1] ಕರ್ಮ, ಕರ್ತೃ – ಮುಂತಾದ ಮತ್ತೊಂದಕ್ಕೆ ಸ್ಪಷ್ಟತೆ, ಅಥವಾ ಅಸ್ಪಷ್ಟತೆ ಆದೀತೇ ಹೊರತು ಆತ್ಮನಿಗೆ ಆಗಲಾರದು.[2] ದ್ರಷ್ಟೃವಲ್ಲದ ಕುರುಡನಿಗೆ ಎಂದಿಗೂ ಗಡಿಗೆಯು ಸ್ಪಷ್ಟವಾಗಲಾರದು.[3] ಕರ್ತೃತ್ವಾದಿಗಳಿಗೆ ಸ್ಪಷ್ಟತ್ವವಾಗಬೇಕಾದರೆ ದ್ರಷ್ಟೃತ್ವವೆಂಬುದು ಸಾಕ್ಷಿಯದಾಗಿರಬೇಕು.[4]

## ಕ್ಷಣಿಕವಿಜ್ಞಾನವಾದದಲ್ಲಿ ದೋಷ

**ಅನುಭೂತೇಃ ಕಿಮನ್ಯಸ್ಮಿನ್ ಸ್ಯಾತ್ತವಾಪೇಕ್ಷಯಾ ವದ ।**
**ಅನೂಭವಿತರೀಷ್ಟಾ ಸ್ಯಾತ್ ಸೋಽಪ್ಯನೂಭೂತಿರೇವ ನಃ ॥ ೧೩೮ ॥**
**"ಅಭಿನ್ನೋಽಪಿ ಹಿ ಬುದ್ಧ್ಯಾತ್ಮಾ ವಿಪರ್ಯಾಸಿತದರ್ಶನೈಃ ।**
**ಗ್ರಾಹ್ಯಗ್ರಾಹಕಸಂವಿತ್ತಿಭೇದವಾನಿವ ಲಕ್ಷ್ಯತೇ ॥ ೧೩೯ ॥**
**ಭೂತಿರ್ಯೈಷಾಂ ಕ್ರಿಯಾ ಸೈವ ಕಾರಕಂ ಸೈವ ಚೋಚ್ಯತೇ"[5] ॥೧೩೯ ½**

---

1. ಪ್ರಮಾಣದಿಂದ ವಿಷಯದ ಅಸ್ಪಷ್ಟತೆಯು ಹೋಗಿ ಸ್ಪಷ್ಟತೆ ಎಂಬ ಧರ್ಮವು ಅದರಲ್ಲಿ ಉಂಟಾಗುತ್ತದೆ ಎಂಬುದು ಮೀಮಾಂಸಕರ ವಾದವು.

2. ಆತ್ಮನು ಯಾವಾಗಲೂ ಪ್ರಕಾಶಸ್ವರೂಪನು; ಅವನಲ್ಲಿ ಅಸ್ಪಷ್ಟತೆಯೇ ಇಲ್ಲ.

3. ಇದರಂತೆ ಅಚೇತನವಾದ ಅಹಂಕಾರ, ಪ್ರತ್ಯಯಗಳು – ಇವುಗಳಿಗೆ ಯಾವದೂ ಸ್ಪಷ್ಟ ಅಥವಾ ಅಸ್ಪಷ್ಟವಾಗಲಾರದು ಎಂದು ಭಾವ.

4. ಸಾಕ್ಷಿಯಲ್ಲಿ ದ್ರಷ್ಟೃತ್ವವು ಸ್ವಾಭಾವಿಕವಾದರೆ ಅದರ ಆಭಾಸದ ನೆರವಿನಿಂದ ವಿಷಯದ ಸ್ಪಷ್ಟತೆ ಅಥವಾ ಅಸ್ಪಷ್ಟತೆ ಆಗಬಹುದು ಎಂದು ಅಭಿಪ್ರಾಯ.

5. ಇವು ಧರ್ಮಕೀರ್ತಿಯ ವಾಕ್ಯಗಳು. ಈ ಶ್ಲೋಕವೂ ಶ್ಲೋಕಾರ್ಧವೂ ಮೂಲದಲ್ಲಿದ್ದವೋ ಇಲ್ಲವೋ ಹೇಳಲಾಗುವದಿಲ್ಲ. ಮೊದಲನೆಯ ಶ್ಲೋಕವನ್ನು ಬೋಧನಿಧಿಯ ವ್ಯಾಖ್ಯಾನದೊಳಗೆ ಸೇರಿಸಿಕೊಂಡಿದೆ; ಆಲ್ಲಿ ಮೂಲಗ್ರಂಥಕ್ಕೆ ಇದನ್ನು ಸೇರಿಸಿಲ್ಲ. ಎರಡನೆಯ ಶ್ಲೋಕಾರ್ಧವು ಆ ವ್ಯಾಖ್ಯಾನದಲ್ಲಿ ಇಲ್ಲವೇ ಇಲ್ಲ. ಅದರ ಪೂರ್ವಾರ್ಧವು ಹೀಗಿದೆ: "ಕ್ಷಣಿಕಾಃ ಸರ್ವಸಂಸ್ಕಾರಾ ಅಸ್ಥಿರಾಣಾಂ ಕುತಃ ಕ್ರಿಯಾಃ" ॥ 'ಭೂತಿರ್ಯೈಷಾಮ್' ಎಂಬಲ್ಲಿ ಏಷಾಮ್ (ಇವುಗಳ) ಎಂಬ ಮಾತು ಸಂಸ್ಕಾರಗಳನ್ನು ಪರಾಮರ್ಶಿಸುತ್ತದೆ. ಇದನ್ನು ಮನಸ್ಸಿಗೆ ತಾರದೆ ವ್ಯಾಖ್ಯಾನಕಾರನು 'ಭೂತಿರ್ಯೇಷಾಮ್' ಎಂಬ ಪಾಠವನ್ನು ಇಟ್ಟುಕೊಂಡಿರುತ್ತಾನೆಂದು ತೋರುತ್ತದೆ.

೧೪೮–೧೪೯. (ವಿಜ್ಞಾನವಾದಿ) :– ಅನುಭವಕ್ಕೆ ಮತ್ತೊಂದರ ಅಪೇಕ್ಷೆಯಿಂದ ನಿನಗೆ ಆಗಬೇಕಾದದ್ದೇನು? ಹೇಳು. ಅನುಭವಿಸುವವನ ಅಪೇಕ್ಷೆಯಿರಬೇಕು ಎಂದರೆ ಅದೂ ನಮ್ಮ (ಮತದಲ್ಲಿ) ಅನುಭವವೇ.[1] "ಬುದ್ಧ್ಯಾತ್ಮನು ಯಾವ ಭೇದವೂ ಇಲ್ಲದವನಾದರೂ ಮಿಥ್ಯಾದೃಷ್ಟಿಯವರಿಗೆ ಗ್ರಾಹ್ಯ, ಗ್ರಾಹಕ, ಸಂವಿತ್ತಿ – ಎಂಬ ಭೇದವುಳ್ಳವನಂತೆ ಕಾಣುತ್ತಾನೆ.[2] ಇವುಗಳ ಅನುಭವವಿದೆಯಲ್ಲ, ಅದೇ ಕ್ರಿಯೆ, ಅದೇ ಕಾರಣವೆನಿಸುತ್ತದೆ."[3]

**ಸತ್ತ್ವಂ ನಾಶಿತ್ವಮಸ್ಯಾಶ್ಚೇತ್ ಸಕರ್ತೃತ್ವಂ ತಥೇಷ್ಯತಾಮ್ |**
**ನ ಕಶ್ಚಿಚ್ಚೇಷ್ಯತೇ ಧರ್ಮ ಇತಿ ಚೇತ್ ಪಕ್ಷಹಾನತಾ ॥ ೧೫೦ ॥**

೧೫೦. (ಸಿದ್ಧಾಂತಿ) :– ಇದರ[4] ಸತ್ತ್ವವೆಂಬುದು ನಾಶಿತ್ವವೇ ಆದರೆ[5] ಹಾಗೆಯೇ (ಅದಕ್ಕೆ) ಕರ್ತೃವಿರುವದೆಂಬುದನ್ನೂ ಒಪ್ಪಿರಿ.[6] ಯಾವ ಧರ್ಮವನ್ನೂ ಒಪ್ಪುವದಿಲ್ಲ ಎನ್ನುವದಾದರೆ (ನಿಮ್ಮ) ಪಕ್ಷವನ್ನು ಬಿಟ್ಟಂತಾಗುವದು.[7]

---

1. ಕೆಲವರು ಬೌದ್ಧರು ಕ್ಷಣಿಕಜ್ಞಾನರೂಪವಾದ ಅನುಭವವೇ ಆತ್ಮನೆನ್ನುತ್ತಾರೆ: ಅನುಭವಕ್ಕೆ ಅನುಭವಿಸುವವನೊಬ್ಬನು ಬೇಕಲ್ಲ! -ಎಂದರೆ ಅನುಭವಿಸುವವನು ಎಂಬುದೂ ವಿಜ್ಞಾನವೇ ಎಂದು ಅವರು ಹೇಳುತ್ತಾರೆ.

2. ಕೂಟಸ್ಥಚೈತನ್ಯವೇ ಜ್ಞಾತೃಜ್ಞಾನಜ್ಞೇಯವಾಗಿ ತೋರುವದೆಂದು ವೇದಾಂತಿಗಳು ಹೇಳುವಂತೆಯೇ ಕ್ಷಣಿಕವಿಜ್ಞಾನರೂಪವಾದ ಆತ್ಮನನ್ನೇ ಜ್ಞಾತೃಜ್ಞಾನಜ್ಞೇಯಗಳೆಂದು ಜನರು ವ್ಯವಹರಿಸುತ್ತಾರೆ ಎಂದು ವಿಜ್ಞಾನವಾದಿಗಳೆನ್ನುತ್ತಾರೆ. ಈ ಅರ್ಥಕ್ಕೆ ಧರ್ಮಕೀರ್ತಿಯ ವಾಕ್ಯವನ್ನು ಪ್ರಮಾಣವಾಗಿ ಉದಾಹರಿಸಿದೆ. ಮೂಲಶ್ಲೋಕದ ವಿಷಯಕ್ಕೆ ಅದರ ೫ನೆಯ ಟಿಪ್ಪಣಿಯನ್ನು ನೋಡಿ.

3. ಎಲ್ಲಾ ಸಂಸ್ಕಾರಗಳೂ ಕ್ಷಣಿಕವಾಗಿರುವವು; ಅವುಗಳಲ್ಲಿ ಬೇರೆ ಕ್ರಿಯೆಯಿಲ್ಲ, ಅವೇ ಕ್ರಿಯಾಕಾರಕರೂಪವಾಗಿರುತ್ತವೆ -ಎಂಬುದು ವಾಕ್ಯದ ಅರ್ಥ.

4. ವಿಜ್ಞಾನದ.

5. ಕ್ಷಣಿಕವಲ್ಲದ್ದು ಅರ್ಥಕ್ರಿಯೆಯನ್ನುಂಟುಮಾಡಲಾರದಾದ್ದರಿಂದ ಸತ್ತ್ವವೆಂದರೂ ಕ್ಷಣಿಕವೆಂದರೂ ಒಂದೇ; ನಾಶಿತ್ವವೇ ಸತ್ತ್ವವು -ಎಂಬುದು ಕ್ಷಣಿಕವಿಜ್ಞಾನವಾದಿಗಳ ಮತ.

6. ವಿಜ್ಞಾನಕ್ಕೆ ಕ್ಷಣಿಕತ್ವವೆಂಬ ಧರ್ಮದಂತೆ ಸಕರ್ತೃತ್ವವೆಂಬ ಧರ್ಮವನ್ನೂ ಒಪ್ಪಿರಿ, ಎಂದರ್ಥ.

7. ಕ್ಷಣಿಕತ್ವವೂ ಧರ್ಮವಲ್ಲವೆನ್ನುವದಾದರೆ ಎಲ್ಲವೂ ಕ್ಷಣಿಕ ಎಂಬ ಮಾತಿಗೆ ಅರ್ಥವೇನು? ಕ್ಷಣಿಕಸಂಬಂಧವಿಲ್ಲದಿದ್ದರೆ ಕ್ಷಣಿಕತ್ವವಿಲ್ಲವೆಂದಂತಾಗಿ ನಿಮ್ಮ ಪಕ್ಷವೇ ಇಲ್ಲವಾಗುವದು. ಆ ಸಂಬಂಧವಿದೆ ಎಂದರೆ ಕರ್ತೃವಿನ ಸಂಬಂಧವೇತಕ್ಕೆ ಇರಬಾರದು? -ಎಂದು ಆಕ್ಷೇಪ.

ನನ್ವಸ್ತಿತ್ವಾದಯೋ ಧರ್ಮಾ ನಾಸ್ತಿತ್ವಾದಿನಿವೃತ್ತಯಃ ।
ನ ಭೂತೇಸ್ತರ್ಹಿ ನಾಶಿತ್ವಂ ಸ್ವಾಲಕ್ಷಣ್ಯಂ ಮತಂ ಹಿ ತೇ ॥ ೧೪೧ ॥
ಸ್ವಲಕ್ಷಣಾವಧಿರ್ನಾಶೋ ನಾಶೋಽನಾಶನಿವೃತ್ತಿತಾ ।
ಅಗೋರಸತ್ತ್ವಂ ಗೋತ್ವಂ ತೇ ನ ತು ತದ್ಗೋಃ ಸ್ವಲಕ್ಷಣಮ್[1] ॥ ೧೪೨ ॥
ಕ್ಷಣವಾಚ್ಯೋಽಪಿ ಯೋಽರ್ಥಃ ಸ್ಯಾತ್ ಸೋಽಪ್ಯನ್ಯಾಭಾವ ಏವ ತೇ ॥
ಭೇದಾಭಾವೇಽಪ್ಯಭಾವಸ್ಯ ಭೇದೋ ನಾಮಭಿರಿಷ್ಯತೇ ।
ನಾಮಭೇದೈರನೇಕತ್ವಮೇಕಸ್ಯ ಸ್ಯಾತ್ ಕಥಂ ತವ ॥ ೧೪೩ ॥
ಅಪೋಹೋ ಯದಿ ಭಿನ್ನಾನಾಂ ವೃತ್ತಿಸ್ತಸ್ಯ ಕಥಂ ಗವಿ ॥ ೧೪೩½ ॥
ನಾಭಾವಾ ಭೇದತಾಃ ಸರ್ವೇ ವಿಶೇಷಾ ವಾ ಕದಾಚನ ।
ನಾಮಜಾತ್ಯಾದಯೋ ಯದ್ವತ್ ಸಂವಿದಸ್ತೇಽವಿಶೇಷತಃ ॥ ೧೪೪ ॥

೧೪೧-೧೪೪. (ವಿಜ್ಞಾನವಾದಿ):- ಅಸ್ತಿತ್ವಾದಿಧರ್ಮಗಳೂ ನಾಸ್ತಿತ್ವವೇ ಮುಂತಾದವುಗಳ ಅಭಾವಗಳೇ (ಆಗಿರುತ್ತವಲ್ಲ)![2] (ಸಿದ್ಧಾಂತಿ): ಹಾಗಾದರೆ ಅನುಭವಕ್ಕೆ ನಾಶಿತ್ವವಿಲ್ಲ; ಏಕೆಂದರೆ ನಿಮ್ಮ ಮತದಲ್ಲಿ ಅನುಭವವು ಸ್ವಲಕ್ಷಣವಾಗಿರುತ್ತದೆ.[3] ಸ್ವಲಕ್ಷಣದವರೆಗೆ ನಾಶವಿರುವದು, ನಾಶವೆಂದರೆ ಅನಾಶದ ನಿವೃತ್ತಿಯು,[4] ಅಗೋವಿನ ಅಸತ್ತ್ವವೇ ನಿಮ್ಮ ಮತದಲ್ಲಿ ಗೋತ್ವವು; ಆದರೆ ಅದು ಗೋವಿನ ಸ್ವಲಕ್ಷಣವಲ್ಲ.[5] ಕ್ಷಣವೆಂಬ ಶಬ್ದಕ್ಕೆ ವಾಚ್ಯವಾಗಿರು

---

1. 'ಗೋತ್ವಲಕ್ಷಣಮ್' ಎಂಬ ವ್ಯಾ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

2. ಅಸ್ತಿತ್ವವೆಂಬ ಧರ್ಮವಾಗಲಿ ಕ್ಷಣಿಕತ್ವವೆಂಬ ಧರ್ಮವಾಗಲಿ ವಿಜ್ಞಾನಕ್ಕೆ ಇರುವದಿಲ್ಲ. ವಿಜ್ಞಾನವು ಇದೆ ಎಂದರೆ ನಾಸ್ತಿತ್ವದ ಅಭಾವವು ಅದರಲ್ಲಿದೆ ಎಂದು ಅರ್ಥ; ಹೀಗೆಯೇ ಕ್ಷಣಿಕತ್ವವೆಂದರೆ ಅಕ್ಷಣಿಕತ್ವದ ಅಭಾವವು - ಎಂದು ಬೌದ್ಧರು ಹೇಳುವರುಂಟು; ಇದಕ್ಕೆ **'ಅಪೋಹವಾದ'**ವೆಂದು ಹೆಸರು.

3. ನಾಶಿತ್ವವು ಅಥವಾ ಕ್ಷಣಿಕತ್ವವು ವಿಜ್ಞಾನದ ಧರ್ಮವಲ್ಲ. ವಿಜ್ಞಾನವು ಸ್ವಲಕ್ಷಣವು, ತನ್ನ ಸ್ವರೂಪವೇ ಆದ ಲಕ್ಷಣವುಳ್ಳದ್ದು, ಎನ್ನುವವರಿಗೆ ಕ್ಷಣಿಕತ್ವವನ್ನು ಹೇಳುವದಕ್ಕೆ ಬರುವದಿಲ್ಲ.

4. ಸ್ವಲಕ್ಷಣದವರೆಗೆ ಎಲ್ಲವೂ ನಾಶವಾಗುವದು; ಆದರೆ ಸ್ವಲಕ್ಷಣಕ್ಕೆ ನಾಶವಿಲ್ಲ; ನಾಶವೂ ಅನಾಶದ ಅಭಾವವೇ ಆದ್ದರಿಂದ ಅದು ವಿಜ್ಞಾನಕ್ಕೆ ಸೇರಿದ್ದಲ್ಲ.

5. ಗೋತ್ವವು ಅಪೋಹಮಾತ್ರವಾಗಿರುವದರಿಂದ ವೈಶೇಷಿಕರಂತೆ ವಿಜ್ಞಾನವಾದಿಗಳು ಗೋತ್ವಕ್ಕೂ ಗೋವಿಗೂ ಸಂಬಂಧವನ್ನು ಹೇಳುವದಕ್ಕೆ ಆಗುವದಿಲ್ಲ.

ವದೂ ನಿನ್ನ ಮತದಲ್ಲಿ ಮತ್ತೊಂದರ ಅಭಾವವೇ ಆಗಿರುತ್ತದೆ.[1] ಅಭಾವಕ್ಕೆ ಭೇದಗಳಿಲ್ಲದಿದ್ದರೂ ಬೇರೆಬೇರೆಯ ಹೆಸರುಗಳಿಂದ ಅದಕ್ಕೆ ಭೇದವನ್ನು ಒಪ್ಪುತ್ತೀಯೆ, ಹೆಸರು ಬೇರೆಯಾದರೆ ನಿನ್ನ ಮತದಲ್ಲಿ ಒಂದೇ ಅನೇಕವು ಹೇಗೆತಾನೆ ಆಗುವದು ?[2] ಬೇರೆಬೇರೆಯ ಪದಾರ್ಥಗಳ ಅಪೋಹವಾದರೆ ಅದು ಗೋವಿನಲ್ಲಿರುವದು ಹೇಗೆ ?[3] ಯಾವ ಅಭಾವಗಳಾಗಲಿ, ನಾಮ, ಜಾತಿ ಮುಂತಾದ (ಯಾವ) ವಿಶೇಷಗಳಾಗಲಿ ಸಂವಿತ್ತಿಗೆ ಭೇದಕಗಳಲ್ಲ; ಏಕೆಂದರೆ (ಅದು) ನಿನ್ನ (ಮತದಲ್ಲಿ) ನಿರ್ವಿಶೇಷವಾಗಿರುತ್ತದೆ.[4]

**ಪ್ರತ್ಯಕ್ಷಮನುಮಾನಂ ವಾ ವ್ಯವಹಾರೇ ಯದಿಚ್ಛಸಿ[5] ।**
**ಕ್ರಿಯಾಕಾರಕಭೇದೈಸ್ತದಭ್ಯುಪೇಯಂ ಧ್ರುವಂ ಭವೇತ್ ॥ ೧೪೫ ॥**
**ತಸ್ಮಾನ್ನೀಲಂ ತಥಾ ಪೀತಂ ಘಟಾದಿರ್ವಾ ವಿಶೇಷಣಮ್ ।**
**ಸಂವಿದಸ್ತದುಪೇಯಂ ಸ್ಯಾದ್ಯೇನ ಚಾಪ್ಯನುಭೂಯತೇ ॥ ೧೪೬ ॥**

೧೪೫–೧೪೬. ಪ್ರತ್ಯಕ್ಷವನ್ನೇ ಆಗಲಿ ಅನುಮಾನವನ್ನೇ ಆಗಲಿ ವ್ಯವಹಾರದಲ್ಲಿ ಒಪ್ಪುವೆಯಷ್ಟೆ. ಆದ್ದರಿಂದ ಅದನ್ನು ಕ್ರಿಯೆ, ಕಾರಕ– ಇವುಗಳ ಭೇದದೊಡನೆ ಅವಶ್ಯವಾಗಿ ಒಪ್ಪಬೇಕಾಗುವದು.[6] ಆದ್ದರಿಂದ ಕಪ್ಪು, ಹಳದಿ, ಅಥವಾ ಗಡಿಗೆ ಮುಂತಾದ ವಿಶೇಷಣವನ್ನು[7] (ವಿಜ್ಞಾನಕ್ಕೆ) ಒಪ್ಪ

---

1. ಕ್ಷಣಿಕವೆಂದರೆ ಕ್ಷಣದ ಸಂಬಂಧವು; ಆದರೆ ಕ್ಷಣವೆಂದರೂ ಅಪೋಹವಾದ ವಂತೆ ಆ ಕ್ಷಣದ ಅಭಾವವಾಗಿರುವದರಿಂದ ಅದಕ್ಕೂ ವಿಜ್ಞಾನಸ್ವಲಕ್ಷಣಕ್ಕೂ ಸಂಬಂಧವಿಲ್ಲ.

2. ಒಂದು ಗೋವಿನಲ್ಲಿ ಅನೇಕ ಅಪೋಹಗಳನ್ನು – ಉದಾಹರಣೆಗೆ ಅಶ್ವತ್ವ, ಗರ್ದಭತ್ವ– ಮುಂತಾದವುಗಳನ್ನು – ಒಪ್ಪಿದರೆ ಅಗೋತ್ವದ ಅಪೋಹವೇ ಗೋತ್ವವು ಎಂಬ ಮಾತು ಸುಳ್ಳಾಗುವದು. ಏಕೆಂದರೆ ಅಗೋತ್ವವು ಒಂದಲ್ಲ, ಅದರ ಅಪೋಹವೂ ಒಂದಲ್ಲ.

3. ಗೋತ್ವವೆಂಬುದು ಒಂದೆಂಬುದು ಹೇಗೆ ?

4. ವಿಜ್ಞಾನಸ್ವಲಕ್ಷಣವು ನಿರ್ವಿಶೇಷವಾಗಿರುವದರಿಂದ ಅದರಲ್ಲಿ ನಾಮಜಾತ್ಯಾದಿ ವಿಶೇಷಗಳಿರುವದು ಸಾಧ್ಯವಿಲ್ಲ.

5. 'ಯದೀಚ್ಛತಿ' ಎಂದು ಬೋಧನಿಧಿಯ ಪಾಠ.

6. ಪ್ರತ್ಯಯವಾಗಲಿ ಅನುಮಾನವಾಗಲಿ ಪ್ರಮಾಣವಾಗಿರುವದರಿಂದ ಪ್ರಮಾತೃ ಪ್ರಮೇಯಗಳನ್ನು ಒಪ್ಪಲೇಬೇಕು. ಏಕೆಂದರೆ ವ್ಯವಹಾರದಲ್ಲಿ ಪ್ರಮಾಣಾದಿಗಳು ಮೂರೂ ಸಿದ್ಧವಾಗಿರುತ್ತವೆ. ವಿಜ್ಞಾನವಾದಿಯು ಪ್ರತ್ಯಕ್ಷಾನುಮಾನಗಳನ್ನು ಒಪ್ಪುತ್ತಾನೆ; ಆದ್ದರಿಂದ ಅವನು ಪ್ರಮಾತೃವನ್ನೂ ಒಪ್ಪಬೇಕು, ಪ್ರಮೇಯವನ್ನೂ ಒಪ್ಪಬೇಕು ಎಂದು ಹೇಳಿವೆ.

7. ವಿಷಯವನ್ನು ಎಂದರ್ಥ. ನೀಲಪೀತಾದಿಗಳು ನೀಲಪೀತಾದಿ ವಿಜ್ಞಾನಗಳೇ ಎಂಬ ಮಾತು ಒಪ್ಪತಕ್ಕದ್ದಲ್ಲವೆಂದು ಭಾವ.

ಬೇಕು.[1] ಮತ್ತು ಯಾವನಿಂದ ಅದು ಅನುಭವಿಸಲ್ಪಡುವದೋ ಅವನನ್ನೂ ಒಪ್ಪಬೇಕು.[2]

**ರೂಪಾದೀನಾಂ ಯಥಾನ್ಯಃ ಸ್ಯಾದ್ ಗ್ರಾಹ್ಯತ್ವಾದ್ಗ್ರಾಹಕಸ್ತಥಾ ।**
**ಪ್ರತ್ಯಯಸ್ಯ ತಥಾನ್ಯಃ ಸ್ಯಾದ್ವ್ಯಞ್ಜಕತ್ವಾತ್ ಪ್ರದೀಪವತ್ ॥೧೪೭॥**

೧೪೭. ರೂಪಾದಿಗಳು ಗ್ರಾಹ್ಯವಾಗಿರುವದರಿಂದ ಹೇಗೆ (ಅವುಗಳ) ಗ್ರಾಹಕವಾದ (ಇಂದ್ರಿಯವು) ಬೇರೆಯಾಗಿರುವದೋ, ಹಾಗೆಯೇ ಪ್ರತ್ಯಯವು ದೀಪವಂತೆ ವ್ಯಂಜಕವಾಗಿರುವದರಿಂದ (ಅದಕ್ಕೆ ಗ್ರಾಹಕನು) ಬೇರೆ ಇರಬೇಕು.[3]

## ಸಾಕ್ಷಿಸಾಕ್ಷ್ಯಗಳ ಸಂಬಂಧ

**ಅಧ್ಯಕ್ಷಸ್ಯ ದೃಶೇಃ ಕೀದೃಕ್ಸಂಬನ್ಧಃ ಸಂಭವಿಷ್ಯತಿ ।**
**ಅಧ್ಯಕ್ಷ್ಯೇಣ ತು ದೃಶ್ಯೇನ ಮುಕ್ತ್ವಾನ್ಯೋ ದ್ರಷ್ಟೃದೃಶ್ಯತಾಮ್ ।**
**ಅಧ್ಯಕ್ಷೇಣ ಕೃತಾ ದೃಷ್ಟಿರ್ದೃಶ್ಯಂ ವ್ಯಾಪ್ನೋತ್ಯಥಾಪಿ ವಾ ।**
**ನಿತ್ಯಾಧ್ಯಕ್ಷಕೃತಃ ಕಶ್ಚಿದುಪಕಾರೋ ಭವೇದ್ಧಿಯಾಮ್ ॥ ೧೪೯ ॥**
**ಸ ಚೋಕ್ತಸ್ತನ್ನಿಭತ್ವಂ ಪ್ರಾಕ್ಸಂವ್ಯಾಪ್ತಿಶ್ಚ ಘಟಾದಿಷು ।**
**ಯಥಾಲೋಕಾದಿಸಂವ್ಯಾಪ್ತಿರ್ವ್ಯಞ್ಜಕತ್ವಾದ್ಧಿಯಸ್ತಥಾ ॥ ೧೫೦ ॥**
**ಆಲೋಕಸ್ಥೋ ಘಟೋ ಯದ್ವದ್ಬುದ್ಧ್ಯಾರೂಢೋ ಭವೇತ್ ತಥಾ ।**
**ಧೀವ್ಯಾಪ್ತಿಃ ಸ್ಯಾದ್ ಘಟಾರೋಹೋ ಧಿಯೋ ವ್ಯಾಪ್ತೌ ಕ್ರಮೋ ಭವೇತ್ ॥ ೧೫೧ ॥**
**ಪೂರ್ವಂ ಸ್ಯಾದ್ ಪ್ರತ್ಯಯವ್ಯಾಪ್ತಿಸ್ತತೋಽನುಗ್ರಹ ಆತ್ಮನಃ ।**
**ಕೃತ್ಸ್ನಾಧ್ಯಕ್ಷಸ್ಯ ನೋ ಯುಕ್ತಃ ಕಾಲಾಕಾಶಾದಿವತ್ ಕ್ರಮಃ ॥೧೫೨॥**

---

1. ಇಲ್ಲದಿದ್ದರೆ ಬರಿಯ ವಿಜ್ಞಾನದಲ್ಲಿ ನೀಲಪೀತಾದಿವೈಚಿತ್ರ್ಯಗಳಾಗಲು ಕಾರಣವಿಲ್ಲ.

2. ಜ್ಞಾನಕ್ಕೆ ವಿಷಯವು ಹೇಗೆ ವ್ಯವಹಾರದಲ್ಲಿ ತೋರುತ್ತಿರುವದೋ ಹಾಗೆಯೇ ಜ್ಞಾತೃವೂ ಒಬ್ಬನು ತೋರುತ್ತಿದಾನೆ. ಆದ್ದರಿಂದ ಜ್ಞಾತೃವನ್ನೂ ಒಪ್ಪಬೇಕು. ವಿಜ್ಞಾನವು ಅನುಭವದಲ್ಲಿ ತೋರುವದರಿಂದ ಒಪ್ಪುತ್ತೇವೆ; ವಿಜ್ಞಾನಕ್ಕಿಂತ ಬೇರೆಯಾಗಿರುವ ವಿಷಯವನ್ನು ಒಪ್ಪುವದಿಲ್ಲ ಎಂಬ ವಾದದ ಖಂಡನೆಯಿದು. ಸೂ. ಭಾ. ೨-೨-೮ ನೋಡಿ.

3. ಗ್ರಾಹ್ಯಕ್ಕಿಂತ ಗ್ರಾಹಕವು ಭಿನ್ನವಾಗಿರುವದೆಂಬುದು ರೂಪದೃಷ್ಟಾಂತದಿಂದ ಸಿದ್ಧವಾಗುತ್ತದೆ. ಆದ್ದರಿಂದ ವಿಜ್ಞಾನಕ್ಕಿಂತ ಬೇರೆಯಾಗಿ ಸಾಕ್ಷಿಯನ್ನು ಒಪ್ಪಬೇಕು ಎಂದು ಅಭಿಪ್ರಾಯ. ಇದೇ ೧೨೦ನೆಯ ಶ್ಲೋಕದಲ್ಲಿ ಉದಾಹರಿಸಿರುವ ಅನುಮಾನವು.

೧೪೮-೧೫೨. ದೃಗ್ರೂಪನಾದ ಸಾಕ್ಷಿಯಾದವನಿಗೆ ದೃಶ್ಯವಾದ ಸಾಕ್ಷ್ಯ ದೊಡನೆ ದ್ರಷ್ಟೃದೃಶ್ಯತ್ವವನ್ನು ಬಿಟ್ಟರೆ ಮತ್ತೆ ಯಾವ ಸಂಬಂಧವಿದ್ದೀತು ?[1] ಸಾಕ್ಷಿಯಾದವನು ಉಂಟುಮಾಡುವ ದೃಷ್ಟಿಯು ದೃಶ್ಯವನ್ನು ವ್ಯಾಪಿಸುತ್ತದೆ ಯೊ, ಅಥವಾ ನಿತ್ಯನಾದ ಸಾಕ್ಷಿಯಿಂದ ಪ್ರತ್ಯಯಗಳಿಗೆ ಯಾವದಾದರೂ ಉಪ ಕಾರವಾಗುತ್ತದೆಯೊ ? (ಎಂದು ಕೇಳಿದರೆ) ಆ ಸಂಬಂಧವು ಆ (ಸಾಕ್ಷಿ. ಚೈತನ್ಯವು) ಆಗಿರುವದೇ ಎಂದೂ ಗಡಿಗೆ ಮುಂತಾದವುಗಳಲ್ಲಿ (ಚಿದಾಭಾಸ ಸಹಿತ) ವ್ಯಾಪಿಸುವದೆಂದೂ ಹಿಂದೆ[2] ಹೇಳಲಾಗಿದೆ. ಗಡಿಗೆಯು ಬೆಳಕಿನಲ್ಲಿರು ವದೆಂಬುದು ಹೇಗೋ ಬುದ್ಧಿಯನ್ನು ಏರುವದೂ ಹಾಗೆಯೇ.[3] ಬುದ್ಧಿಯು ವ್ಯಾಪಿಸಿಕೊಳ್ಳುವದೆಂಬುದೇ ಗಡಿಗೆಯು (ಬುದ್ಧಿಯನ್ನು) ಏರಿಕೊಳ್ಳುವದಾ ಗಿದೆ.[4] ಬುದ್ಧಿಯು ವ್ಯಾಪಿಸಿಕೊಳ್ಳುವಲ್ಲಿ ಕ್ರಮವುಂಟು : ಮೊದಲು ಪ್ರತ್ಯಯವು ವ್ಯಾಪಿಸಿಕೊಳ್ಳುವದು ಆಗುತ್ತದೆ ; ಆಮೇಲೆ ಆತ್ಮನ ಅನುಗ್ರಹವಾಗುತ್ತದೆ.[5] (ಆದರೆ) ಎಲ್ಲಕ್ಕೂ ಸಾಕ್ಷಿಯಾಗಿರುವ ಆತ್ಮನಿಗೆ ಕಾಲ, ಆಕಾಶ- ಇವುಗಳಂತೆ ಯೇ ಕ್ರಮವಿರುವದಿಲ್ಲ.[6]

---

1. ಮತ್ತೆ ಯಾವ ಸಂಬಂಧವೂ ಇಲ್ಲ ಎಂದರ್ಥ. ಈ ಸಂಬಂಧವು ಸಿದ್ಧ ವಾಗುವದಕ್ಕೆ ಆಭಾಸವನ್ನು ಒಪ್ಪಬೇಕು ಎಂಬುದನ್ನು ತೋರಿಸುವದಕ್ಕೆ ಈ ವಿಚಾರವನ್ನು ಪ್ರಾರಂಭಿಸಿರುತ್ತದೆ.

2. ೧೦೬ನೆಯ ಶ್ಲೋಕದಿಂದ ಮುಂದಿನ ಕೆಲವು ಶ್ಲೋಕಗಳಲ್ಲಿ ಸಾಕ್ಷಿಗೂ ಸಾಕ್ಷ್ಯ ವಾದ ಪ್ರತ್ಯಯಕ್ಕೂ ಚಿದಾಭಾಸವೆಂಬ ಸಂಬಂಧವಿದೆ ಎಂದು ಪ್ರತಿಪಾದಿಸಿರುತ್ತದೆ. ಸಾಕ್ಷಿಯು ದೃಷ್ಟಿಕರ್ತೃವೆಂದರೆ ಅವನಿಗೆ ಅನಿತ್ಯತ್ವವು ಬರುವದು ; ನಿಜವಾದ ಯಾವದಾದ ರೊಂದು ಉಪಕಾರವು ಆಗುವದೆಂದರೂ ಹಾಗೆಯೇ.

3. ಗಡಿಗೆಯು ನೆಲದಮೇಲಿದ್ದರೂ ಅದನ್ನು ಬೆಳಕು ವ್ಯಾಪಿಸಿಕೊಂಡಿರುವದರಿಂದ ಗಡಿಗೆಯು ಬೆಳಕಿನಲ್ಲಿದೆ ಎಂದು ಹೇಳುವಂತೆ, ಗಡಿಗೆಯು ಬುದ್ಧಿಗೆ ಹತ್ತಿರುತ್ತದೆ ಎಂಬ ಮಾತನ್ನೂ ತಿಳಿಯಬೇಕು.

4. ಬುದ್ಧಿಯು ಗಡಿಗೆಯನ್ನು ವ್ಯಾಪಿಸಿಕೊಳ್ಳುವದನ್ನೇ ಹೀಗೆಂದು ಕರೆಯುತ್ತೇವೆ; ಹೊರಗಿರುವ ಗಡಿಗೆಯು ನಿಜವಾಗಿ ಅಂತಃಕರಣದೊಳಕ್ಕೆ ಬಂದು ಸೇರಿಕೊಳ್ಳುವದೆಂದೇನೂ ಅಭಿಪ್ರಾಯವಿಲ್ಲ.

5. ಬುದ್ಧಿಯು ಒಂದೊಂದು ವಿಷಯದಾಕಾರವಾಗಿ ಪರಿಣಮಿಸಿಯೇ ಅದನ್ನು ವ್ಯಾಪಿಸಿಕೊಂಡು, ತನ್ನಲ್ಲಿರುವ ಚಿದಾಭಾಸದಿಂದ ವಿಷಯವನ್ನು ತಿಳಿಸಬೇಕು. ಆದ್ದರಿಂದ ಅದು ಕ್ರಮಕ್ರಮವಾಗಿಯೇ ವಿಷಯವನ್ನು ತಿಳಿಸಬೇಕು.

6. ಕಾಲಾಕಾಶಗಳಲ್ಲಿ ವಸ್ತುಗಳೆಲ್ಲವೂ ಒಟ್ಟಿಗೆ ಇರುವವು ; ಅವು ವಿಷಯಗಳನ್ನು ಒಂದೊಂದಾಗಿ ವ್ಯಾಪಿಸುವದಿಲ್ಲ. ಆತ್ಮಚೈತನ್ಯವೂ ಹಾಗೆಯೇ. ಆದ್ದರಿಂದಲೇ ಆತ್ಮನು ಸರ್ವಜ್ಞನೆನಿಸಿರುತ್ತಾನೆ. ೧೫-೧೭, ೭-೩- ಉಪ. ಸಾ. ಗದ್ಯ ೨-೮೯ ಇವುಗಳನ್ನು ನೋಡಿ

**ವಿಷಯಗ್ರಹಣಂ ಯಸ್ಯ ಕರಣಾಪೇಕ್ಷಯಾ ಭವೇತ್ ।**
**ಸತ್ಯೇವ ಗ್ರಾಹ್ಯಶೇಷೇ ಚ ಪರಿಣಾಮೀ ಸ ಚಿತ್ತವತ್ || ೧೫೩ ||**
**ಅಧ್ಯಕ್ಷೋಽಹಮಿತಿ ಜ್ಞಾನಂ ಬುದ್ಧೇರೇವ ವಿನಿಶ್ಚಯಃ ।**
**ನಾಧ್ಯಕ್ಷಸ್ಯಾವಿಶೇಷತ್ವಾನ್ನ ತಸ್ಯಾಸ್ತಿ ಪರೋ ಯತಃ || ೧೫೪ ||**

೧೫೩-೧೫೪. ಯಾವನಿಗೆ ವಿಷಯದ ಗ್ರಹಣವು ಕರಣದ ಅಪೇಕ್ಷೆಯಿಂದ ಆಗುವದೋ, ತಿಳಿದುಕೊಳ್ಳಬೇಕಾದ (ವಿಷಯವೂ) ಉಳಿದಿದ್ದರೇ (ಗ್ರಹಣವಾಗುವದೋ) ಅವನು ಪರಿಣಾಮಿಯು; ಉದಾಹರಣೆಗೆ ಚಿತ್ತವು (ಹೀಗಿರುತ್ತದೆ).[1] 'ನಾನು ಸಾಕ್ಷಿಯು' ಎಂಬ ಜ್ಞಾನವು ಬುದ್ಧಿಗೇ ಆಗುವದೆಂಬುದು ನಿಶ್ಚಯವು;[2] (ಇದು) ಸಾಕ್ಷಿಗೆ ಅಲ್ಲ, ಏಕೆಂದರೆ ಅವನಿಗಿಂತ ಬೇರೊಬ್ಬನು (ಗ್ರಾಹಕನು) ಇರುವದಿಲ್ಲವಾಗಿ ಅವನಲ್ಲಿ (ಯಾವ) ವಿಶೇಷವೂ ಆಗುವದಿಲ್ಲ.[3]

## ಜ್ಞಾನಫಲವು ಆತ್ಮನಿಗೇ

**ಕರ್ತಾ ಚೇದಹಮಿತ್ಯೇವಮನುಭೂಯೇತ ಮುಕ್ತತಾ ।**
**ಸುಖದುಃಖವಿನಿರ್ಮೋಕೋ[4] ನಾಹಙ್ಕರ್ತರಿ ಯುಜ್ಯತೇ ॥ ೧೫೫ ॥**
**ದೇಹಾದಾವಭಿಮಾನೋತ್ಥೋ ದುಃಖೀತಿ ಪ್ರತ್ಯಯೋ ಧ್ರುವಮ್ ।**
**ಕುಣ್ಡಲೀಪ್ರತ್ಯಯೋ ಯದ್ವತ್ ಪ್ರತ್ಯಗಾತ್ಮಾಭಿಮಾನಿನಾ[5] ॥ ೧೫೬ ॥**
**ಬಾಧ್ಯತೇ ಪ್ರತ್ಯಯೋನೇಹ ವಿವೇಕೇನಾವಿವೇಕವಾನ್ ।**
**ವಿಪರ್ಯಯೋಽಸದನ್ತಂ ಸ್ಯಾತ್ ಪ್ರಮಾಣಸ್ಯಾಪ್ರಮಾಣತಃ ||೧೫೭||**

---

1. ಚಿತ್ತಕ್ಕೆ ನೇತ್ರಾದಿಕರಣಗಳು ಬೇಕು; ಅದು ಯಾವ ವಿಷಯವನ್ನು ತಿಳಿದುಕೊಂಡರೂ ಮತ್ತೂ ತಿಳಿಯಬೇಕಾಗಿರುವ ವಿಷಯಗಳು ಉಳಿವೇ ಇರುತ್ತವೆ. ಅದು ಆಯಾ ವಿಷಯದ ರೂಪವಾಗಿ ಪರಿಣಮಿಸಿಯೇ ತಿಳಿಯಬೇಕಾಗಿರುವನೇ ಇದಕ್ಕೆ ಕಾರಣ. ಆದರೆ ಸಾಕ್ಷಿಯು ಹೀಗಲ್ಲ, ಎಲ್ಲವನ್ನೂ ಕರಣದ ಬಯಕೆಯಿಲ್ಲದೆ ಅರಿಯುತ್ತಾನೆ.

2. ಹಾಗಾದರೆ ನಾನು ಬ್ರಹ್ಮವು ಎಂಬ ಜ್ಞಾನವೂ ಸಾಕ್ಷಿಗೆ ಅಲ್ಲವೆಂದಾಯಿತು; ಏಕೆಂದರೆ ಸಾಕ್ಷಿಯು ಪರಿಣಾಮಿಯಲ್ಲ. ಆದರೆ ಸಾಕ್ಷಿಯಲ್ಲವೆ ಅಜ್ಞಾನಾದ ಶ್ರೋತೃವೆಂದು ನೀವು ಹಿಂದೆ ೧೦೮, ೧೩೨ರಲ್ಲಿ ಹೇಳಿದ್ದು ?- ಎಂಬ ಶಂಕೆಗೆ ಸಮಾಧಾನವಿದು.

3. ಪರಿಣಾಮವು ಬುದ್ಧಿಗೇ; ಏಕೆಂದರೆ ಆತ್ಮನು ಪರಿಣಾಮಿಯಾದನೆಂದು ಅರಿಯುವ ಮತ್ತೊಬ್ಬನು ಇಲ್ಲ. ಬುದ್ಧಿಯ ಪರಿಣಾಮವನ್ನು ಮಾತ್ರ ಆತ್ಮನು ನಿರ್ವಿಶೇಷನಾಗಿದ್ದುಕೊಂಡು ಅರಿಯುತ್ತಿದಾನೆ. ಆದರೆ ಫಲವು ಮಾತ್ರ ಆತ್ಮನಿಗೇ. ಇದು ಹೇಗೆಂಬುದು ಮುಂದೆ ಸ್ಫುಟವಾಗುವದು.

4. "ವಿನಿರ್ಮೋಕ್ಷೋ" ಬೋಧನಿಧಿ.

5. 'ಪ್ರತ್ಯಗಾತ್ಮಾಭಿಗಾಮಿನಾ' ಎಂದೂ ಪಾಠಾಂತರವಿದೆ. ಅರ್ಥಭೇದವಿಲ್ಲ.

೧೫೫-೧೫೭. ಅಹಂಕಾರವೇ ನಾನು (ಬ್ರಹ್ಮವು) ಎಂದಿಂತು ಮುಕ್ತತ್ವವನ್ನು ಅನುಭವಿಸುವದಾಗಿದ್ದರೆ, ಸುಖದುಃಖಗಳ ಬಿಡುಗಡೆ ಎಂಬುದು ಅಹಂಕಾರಕ್ಕೆ ಹೊಂದುವದಿಲ್ಲ.[1] ದೇಹಾದಿಗಳಲ್ಲಿರುವ 'ದುಃಖಿ' ಎಂಬ ಅವಿವೇಕವುಳ್ಳ ಪ್ರತ್ಯಯವು ಪ್ರತ್ಯಗಾತ್ಮನು ನಾನೆಂಬ ಅಭಿಮಾನವುಳ್ಳ ವಿವೇಕಪ್ರತ್ಯಯದಿಂದ 'ನಾನು ಕುಂಡಲಿಯು' ಎಂಬ ಪ್ರತ್ಯಯದಂತೆ ಅವಶ್ಯವಾಗಿ ಬಾಧಿತವಾಗುತ್ತದೆ.[2] (ಇದಕ್ಕೆ) ವಿಪರೀತವಾದರೆ ಪ್ರಮಾಣವು ಅಪ್ರಮಾಣವಾಗುವದರಿಂದ ಶೂನ್ಯದಲ್ಲಿ ಪರ್ಯವಸಾನವಾಗುವದು.[3]

## ಆತ್ಮನಿಗೆ ಅಧ್ಯಾಸದಿಂದ ದುಃಖಿತ್ವ

**ದಾಹಚ್ಛೇದವಿನಾಶೇಷು ದುಃಖಿತ್ವಂ ನಾನ್ಯಥಾತ್ಮನಃ ।**
**ನೈವ ಹ್ಯನ್ಯಸ್ಯ ದಾಹಾದಾವನ್ಯೋ ದುಃಖೀ ಭವೇತ್ ಕ್ವಚಿತ್ ॥೧೫೮॥**
**ಅಸ್ಪರ್ಶತ್ವಾದದೇಹತ್ವಾನ್ನಾಹಂ ದಾಹ್ಯೋ ಯತಃ ಸದಾ ।**
**ತಸ್ಮಾನ್ಮಿಥ್ಯಾಭಿಮಾನೋತ್ಥಂ ಮೃತೇ ಪುತ್ರೇ ಪಿತುರ್ಯಥಾ[4] ॥೧೫೯॥**
**ಕುಣ್ಡಲ್ಯಹಮಿತಿ ಹ್ಯೇತದ್ ಬಾಧ್ಯೇತೈವ ವಿವೇಕಿನಾ ।**
**ದುಃಖೀತಿ ಪ್ರತ್ಯಯಸ್ತದ್ವತ್ ಕೇವಲಾಹಂಧಿಯಾ ಸದಾ[5] ॥ ೧೬೦ ॥**

---

1. ಏಕೆಂದರೆ ಕರ್ತೃವಿನಲ್ಲಿ ಸುಖದುಃಖಗಳು ಪ್ರತ್ಯಕ್ಷವಾಗಿ ಕಾಣುತ್ತಿರುವದರಿಂದ ಅವುಗಳ ಅಭಾವವು ಅನುಭವಕ್ಕೆ ಬರುವಂತೆಯೇ ಇಲ್ಲ. ಬರಿಯ ಅಹಂಕಾರವು ಅಚೇತನವೂ ಆಗಿದೆ.

2. ನಾನು ಕುಂಡಲಿ ಎಂಬ ಅಭಿಮಾನವು ಒಂಟೆಯನ್ನು ಹಾಕಿಕೊಂಡಿರುವವನಿಗೆ ಇರುತ್ತದೆ; ಅದನ್ನು ತೆಗೆದುಹಾಕಿದವನಿಗೆ ಇರುವದಿಲ್ಲ. ಇದರಂತೆ ದೇಹಾತ್ಮಜ್ಞಾನವಿರುವವನಿಗೆ ಇರುವ ದುಃಖಿತ್ವಪ್ರತ್ಯಯವು ನಾನು ಅದೇಹನು ಎಂಬ ವಿವೇಕಪ್ರತ್ಯಯವುಂಟಾದರೆ ಬಾಧಿತವಾಗುತ್ತದೆ.

3. ದುಃಖಿತ್ವಪ್ರತ್ಯಯದಿಂದ 'ನಾನು ಅದುಃಖಿಯಾದ ಆತ್ಮನು' ಎಂಬ ಪ್ರತ್ಯಯವೇ ಏತಕ್ಕೆ ಬಾಧಿತವಾಗಬಾರದು? –ಎಂದರೆ ಅದುಃಖಿತ್ವಪ್ರತ್ಯಯವು ಪ್ರಮಾಣವಾದ ವೇದದಿಂದುಂಟಾಗಿರುವದರಿಂದ. ಪ್ರಮಾಣವು ಅಪ್ರಮಾಣದಿಂದ ಬಾಧಿತವಾಗಬಹುದಾದರೆ ಪ್ರತ್ಯಕ್ಷಾದಿವ್ಯವಹಾರವೂ ಬಾಧಿತವಾಗಬಹುದೆಂದಾಗುವದು; ಆಗ ಶೂನ್ಯವಾದವೇ ಕೊನೆಗೆ ನಿಲ್ಲುವದು.

4. 'ಮೃತಿಃ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ. ಇದೇ ಬೋಧನಿಧಿಗೆ ಒಪ್ಪಿಂತ ಕಾಣುತ್ತದೆ.

5. 'ಸಹ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

೧೫೮-೧೬೦. ಸುಡುವದು, ಕತ್ತರಿಸುವದು, ನಾಶವಾಗುವದು- (ಇವುಗಳು) ಆಗುವಲ್ಲಿ ಆತ್ಮನಿಗೆ ದುಃಖಿತ್ವವುಂಟಾಗುವದು ; ಬೇರೆಯ ಪ್ರಕಾರದಿಂದ ಆಗಲಾರದು. ಏಕೆಂದರೆ ಒಬ್ಬನಿಗೆ ದಾಹಾದಿಗಳಾದರೆ ಮತ್ತೊಬ್ಬನು ಎಂದಿಗೂ ದುಃಖಿಯಾಗಲಾರನಷ್ಟೆ ?[1] ಸ್ಪರ್ಶವಿಲ್ಲದ್ದರಿಂದಲೂ ದೇಹವಿಲ್ಲದ್ದರಿಂದಲೂ ನಾನು ಎಂದಿಗೂ ದಾಹ್ಯನಲ್ಲ. ಆದ್ದರಿಂದ ಮಗನು ಸತ್ತರೆ ತಂದೆಗೆ ಆಗುವಂತೆ ಮಿಥ್ಯಾಭಿಮಾನದಿಂದಲೇ (ದುಃಖಿತ್ವವು) ಉಂಟಾಗುತ್ತದೆ.[2] ನಾನು ಒಂಟಿಯನ್ನಿಟ್ಟುಕೊಂಡಿರುವೆನು ಎಂಬ ಪ್ರತ್ಯಯವು ವಿವೇಕರೂಪವಾದ (ಪ್ರತ್ಯಯದಿಂದ) ಬಾಧಿತವಾಗಿಯೇ ತೀರುತ್ತದೆ; ಅದರಂತೆ ದುಃಖಿ ಎಂಬ ಪ್ರತ್ಯಯವು ಕೇವಲಾಹಂಬುದ್ಧಿಯಿಂದ ನಿತ್ಯವಾಗಿ ಬಾಧಿತವಾಗುತ್ತದೆ.[3]

**ಸಿದ್ಧೇ ದುಃಖಿತ್ವ ಇಷ್ಟಂ ಸ್ಯಾತ್ ತಚ್ಛಕ್ತಿತ್ವಂ ಸದಾತ್ಮನಃ ।[4]**
**ಮಿಥ್ಯಾಭಿಮಾನತೋ ದುಃಖೀ ತೇನಾರ್ಥಾಪಾದನಕ್ಷಯಃ[5] ॥ ೧೬೧ ॥**

೧೬೧. ಸದ್ರೂಪನಾದ ಆತ್ಮನಿಗೆ ದುಃಖಿತ್ವವು ಸಿದ್ಧವಾದರೆ ಅದರ ಶಕ್ತಿಯಿದೆ ಎಂಬುದನ್ನು ಒಪ್ಪಬಹುದಾಗುವದು.[6] ಮಿಥ್ಯಾಭಿ

---

1. ಇದರಂತೆ ದೇಹದಲ್ಲಿ ಸುಡುವಿಕೆ ಮುಂತಾದವುಗಳಾದರೆ ಅದಕ್ಕಿಂತ ಬೇರೆಯಾಗಿರುವ ಆತ್ಮನಿಗೆ ನಿಜವಾಗಿ ದುಃಖವಾಗುವದಕ್ಕೆ ಕಾರಣವಿಲ್ಲ.

2. ಸತ್ತ ಮಗನು ತನಗಿಂತ ಬೇರೆ ಎಂಬುದು ಸ್ಪಷ್ಟವಾಗಿದೆ. ಆದರೂ ಅವನೇ ತಾನೆಂಬ ಅಭಿಮಾನದಿಂದ ತಂದೆಯು ದುಃಖಿಯಾಗುತ್ತಾನೆ. ಗೌಣಾತ್ಮನ ವಿಷಯದಲ್ಲಿರುವಂತೆಯೇ ಮಿಥ್ಯಾತ್ಮನಾದ ದೇಹಾತ್ಮನ ಅಭಿಮಾನದಿಂದಲೇ ದುಃಖಿತ್ವವು ಕಲ್ಪಿತವಾಗಿರುವನೆಂದು ಇದರಿಂದ ಸಿದ್ಧವಾಗುತ್ತದೆ.

3. ಕೇವಲಾಹಂಬುದ್ಧಿ ಎಂದರೆ ಅದ್ವಿತೀಯಾತ್ಮಬುದ್ಧಿ. ಇದು ಪ್ರಮಾಣದಿಂದ ಉಂಟಾದದ್ದಾದರಿಂದ ಕುಂಡಲ್ಯಭಿಮಾನದಂತೆ ಮಿಥ್ಯಾಭಿಮಾನದಿಂದ ಆದ ದುಃಖಿತ್ವವನ್ನು ಬಾಧಿಸುತ್ತದೆ.

4. ' ತಚ್ಛಕ್ತಿಶ್ಚನ್ನಸಾತ್ಮನಃ ' ಎಂಬ ವ್ಯಾ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

5. ' ಅರ್ಥಾಪಾದನಕ್ಷಮಃ ' ಎಂಬ ವ್ಯಾ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

6. ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರದುಃಖವು ಶಕ್ತಿರೂಪದಿಂದ ನಿಜವಾಗಿಯೇ ಇದ್ದರೂ ಅದರ ಕಾರ್ಯವನ್ನು ಕಳೆದುಕೊಂಡರೆ ಸಾಕಲ್ಲವೆ?- ಎಂಬವರ ಶಂಕೆಗೆ ಪರಿಹಾರವಿದು.

ಮಾನದಿಂದ ದುಃಖಿಯಾಗಿರುತ್ತಾನೆ; ಅದರಿಂದ ಅರ್ಥಾಪತ್ತಿಯು ಕ್ಷಯ ವಾಗುತ್ತದೆ.[1]

**ಅಸ್ಪರ್ಶೋಽಪಿ ಯಥಾ ಸ್ಪರ್ಶಮಚಲಶ್ಚಲನಾದಿ ಚ ।**
**ಅವಿವೇಕಾತ್ ತಥಾ ದುಃಖಂ ಮಾನಸಂ ಚಾತ್ಮನೀಕ್ಷತೇ ॥ ೧೬೨ ॥**
**ವಿವೇಕಾತ್ಮಧಿಯಾ ದುಃಖಂ ನುದ್ಯತೇ ಚಲನಾದಿವತ್ ।**
**ಅವಿವೇಕಸ್ವಭಾವೇನ ಮನೋ ಗಚ್ಛತ್ಯನಿಚ್ಛತಃ ॥ ೧೬೩ ॥**
**ತದಾ ತು ದೃಶ್ಯತೇ ದುಃಖಂ ನೈಶ್ಚಲ್ಯೇ ನೈವ ತಸ್ಯ ತತ್ ।**
**ಪ್ರತ್ಯಗಾತ್ಮನಿ ತಸ್ಮಾತ್ ತದ್ದುಃಖಂ ನೈವೋಪಪದ್ಯತೇ ॥ ೧೬೪ ॥**

೧೬೨-೧೬೪. ಸ್ಪರ್ಶವಿಲ್ಲದವನಾದರೂ ಸ್ಪರ್ಶವನ್ನೂ ಅಚಲನಾದರೂ ಚಲನೆಯೇ ಮುಂತಾದದ್ದನ್ನೂ ಆತ್ಮನಲ್ಲಿ ಹೇಗೆ ಅವಿವೇಕದಿಂದ ಕಾಣುತ್ತಾನೋ ಹಾಗೆಯೇ ಮನಸ್ಸಿನ ದುಃಖವನ್ನು ತನ್ನಲ್ಲಿ ಕಾಣುತ್ತಾನೆ; ವಿವೇಕರೂಪವಾದ ಬುದ್ಧಿಯಿಂದ ಚಲನಾದಿಗಳಂತೆ ದುಃಖವು ತೊಲಗುತ್ತದೆ.[2] ಅವಿವೇಕಸ್ವಭಾವದಿಂದ ಮನಸ್ಸು ಬೇಡವೆಂದರೂ ಹರಿದಾಡುತ್ತದೆ; ಆಗಲೇ ದುಃಖವು ಉಂಟಾಗುತ್ತದೆ. ಅದು ನಿಶ್ಚಲವಾದರೆ ಅವನಿಗೆ ಅದು (ಕಾಣುವದೇ) ಇಲ್ಲ.[3] ಆದ್ದರಿಂದ ಪ್ರತ್ಯಗಾತ್ಮನಲ್ಲಿ ಆ ದುಃಖವು (ಇದೆಯೆಂಬುದು) ಯುಕ್ತವೇ ಅಲ್ಲ.[4]

---

1. ಅರ್ಥಾಪತ್ತಿಯು ಕ್ಷಯವಾಗುತ್ತದೆ ಎಂದರೆ ದುಃಖಿತ್ವವು ತೋರುತ್ತಿರುವದರಿಂದ ದುಃಖಿತ್ವಶಕ್ತಿಯಿರಲೇ ಬೇಕು ಎಂಬ ಅರ್ಥಾಪತ್ತಿಪ್ರಮಾಣಕ್ಕೆ ಬೇರೆಯ ರೀತಿಯಿಂದಲೇ ಸಮಾಧಾನವನ್ನು ಹೇಳಬಹುದು ಎಂದರ್ಥ.

2. ದೇಹದಲ್ಲಿರುವ ಸ್ಪರ್ಶಚಲನಾದಿಗಳನ್ನು ಆತ್ಮನಲ್ಲಿ ಅಧ್ಯಾಸಮಾಡುತ್ತಾರೆಂಬುದನ್ನು ತಾರ್ಕಿಕಾದಿಗಳೂ ಒಪ್ಪುತ್ತಾರೆ; ಆತ್ಮಸ್ವರೂಪವನ್ನು ತಿಳಿದುಕೊಂಡರೆ ತಾನು ಅಸ್ಪರ್ಶನು, ನಿಶ್ಚಲನು- ಎಂದು ಮುಂತಾದ ಸಮ್ಯಗ್ಜ್ಞಾನದಿಂದ ಆ ಮಿಥ್ಯಾಜ್ಞಾನವು ತೊಲಗುವದೆಂಬುದನ್ನೂ ಒಪ್ಪುತ್ತಾರೆ. ಅದರಂತೆಯೇ ದುಃಖಿತ್ವಾದಿಮಾನಸಧರ್ಮವು ಅಧ್ಯಸ್ತವಾಗಿದೆಯೆಂದೂ ತಾನು ಆನಂದರೂಪನಾದ ಅದ್ವಿತೀಯಾತ್ಮನು ಎಂದೂ ಜ್ಞಾನವಾಗಲು ದುಃಖಿತ್ವವು ತೊಲಗುತ್ತದೆ ಎಂದು ತಿಳಿಯಬೇಕು- ಎಂದರ್ಥ.

3. ಮನಸ್ಸಿನ ಚಲನೆಯಿಂದ ಎಚ್ಚರಕನಸುಗಳಲ್ಲಿ ದುಃಖಿತ್ವವಿರುತ್ತದೆ; ಚಲನೆಯಿಲ್ಲದ ಸುಷುಪ್ತಿಯಲ್ಲಿ ದುಃಖವಿರುವದಿಲ್ಲ.

4. ಪ್ರತ್ಯಗಾತ್ಮನ ಸ್ವಭಾವವೇ ಆಗಿದ್ದರೆ ದುಃಖವು ಯಾವಾಗಲೂ ಇರಬೇಕಿತ್ತು; ಆದರೆ ಹಾಗಿಲ್ಲದ್ದರಿಂದ ಅದು ಆತ್ಮನ ಧರ್ಮವಲ್ಲ ಎಂದರ್ಥ.

## ತತ್ತ್ವಮಸಿವಾಕ್ಯದ ಅರ್ಥವು ತಿಳಿಯುವ ರೀತಿ

**ತ್ವಂಸತೋಸ್ತುಲ್ಯನೀಡತ್ವಾನ್ನೀಲಾಶ್ವವದಿದಂ ಭವೇತ್ ॥ ೧೬೪೨ ॥**

**ನಿರ್ದುಃಖವಾಚಿನಾ ಯೋಗಾತ್ ತ್ವಂಶಬ್ದಸ್ಯ ತದರ್ಥತಾ ।**
**ಪ್ರತ್ಯಗಾತ್ಮಾಭಿಧಾನೇನ ತಚ್ಛಬ್ದಸ್ಯ ತದರ್ಥತಾ[1] ॥ ೧೬೫ ॥**

೧೬೪೨ -೧೬೫. ನೀನು, ಸತ್ತು, (ಇವುಗಳನ್ನು ಹೇಳುವ ಪದಗಳು) ಸಮಾನಾಶ್ರಯವಾಗಿರುವದರಿಂದ[2] ಈ (ವಾಕ್ಯವು) "ಕುದುರೆಯು ಕರಿಯದು" ಎಂಬಂತೆ ಆಗುವದು.[3] 'ನೀನು' (ತ್ವಮ್) ಎಂಬ ಶಬ್ದವು ನಿರ್ದುಃಖವಾದ (ವಸ್ತುವನ್ನು) ಹೇಳುವ ('ತತ್' ಅದು ಎಂಬ ಪದದೊಡನೆ) ಸಂಬಂಧವುಳ್ಳದ್ದಾಗಿರುವದರಿಂದ ಆ ಅರ್ಥವನ್ನು (ಕೊಡುತ್ತದೆ),[4] ಅದು (ತತ್) ಎಂಬ ಶಬ್ದಕ್ಕೆ ಪ್ರತ್ಯಗಾತ್ಮನನ್ನು ಹೇಳುವ ಶಬ್ದದೊಡನೆ (ಸಂಬಂಧವುಳ್ಳದ್ದಾಗಿರುವದರಿಂದ) ಆ ಅರ್ಥವನ್ನು ಹೇಳುತ್ತದೆ.[5]

**ದಶಮಸ್ತ್ವಮಸೀತ್ಯೇವಂ ವಾಕ್ಯಂ ಸ್ಯಾತ್ ಪ್ರತ್ಯಗಾತ್ಮನಿ ॥ ೧೬೫೨ ॥**

**ಸ್ವಾರ್ಥಸ್ಯ ಹ್ಯಪ್ರಹಾಣೇನ ವಿಶಿಷ್ಟಾರ್ಥಸಮರ್ಪಕೌ ।**
**ಪ್ರತ್ಯಗಾತ್ಮಾವಗತ್ಯನ್ತೌ ನಾನ್ಯೋಽರ್ಥೋಽರ್ಥಾದ್ವಿರೋಧ್ಯತಃ ॥೧೬೬**
**ನವಬುದ್ಧ್ಯಪಹಾರಾದ್ಧಿ ಸ್ವಾತ್ಮಾನಂ ದಶಪೂರಣಮ್ ।**

---

1. 'ಯುತೇಸ್ತಥಾ' ಎಂಬ ವ್ಯಾ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

2. ಸಾಮಾನಾಧಿಕರಣ್ಯವುಳ್ಳವಾಗಿರುವದರಿಂದ, ಒಂದೇ ವಸ್ತುವನ್ನು ಹೇಳುವದರಿಂದ ಎಂದರ್ಥ.

3. ಈ ವಾಕ್ಯದಲ್ಲಿ 'ಕುದುರೆಯು' ಎಂಬ ಪದವು ಕರಿಯದಲ್ಲದ್ದನ್ನು ಬಿಟ್ಟು ಕರಿಯದಾದ ಕುದುರೆಯನ್ನೇ ಹೇಳುತ್ತದೆ; 'ಕರಿಯದು' ಎಂಬ ಪದವು ಕುದುರೆಯಲ್ಲದ್ದನ್ನು ಬಿಟ್ಟು ಕುದುರೆಯಲ್ಲಿರುವ ಕಪ್ಪನ್ನೇ ಹೇಳುತ್ತದೆ.

4. ನೀನು ಎಂಬ ಪದವು ಸಂಸಾರಿಯಾದ ಆತ್ಮನನ್ನು ತಿಳಿಸದೆ ನಿರ್ದುಃಖನಾದ ಆತ್ಮನನ್ನೇ ತಿಳಿಸುವದು.

5. ಅದು ಎಂಬ ಶಬ್ದವು ಪರೋಕ್ಷವಾದ ಆತ್ಮನನ್ನು ತಿಳಿಸದೆ ಶ್ರೋತೃವಿನ ಪ್ರತ್ಯಗಾತ್ಮನನ್ನೇ ತಿಳಿಸುತ್ತದೆ. ಆದ್ದರಿಂದ 'ತತ್ತ್ವಮಸಿ' ಎಂಬ ವಾಕ್ಯವು ಅಪರೋಕ್ಷವಾಗಿರುವ ಪ್ರತ್ಯಗಾತ್ಮನು ನಿರ್ದುಃಖನಾದ ಸಚ್ಛಬ್ದದಿಂದ ಹೇಳಿದ ಪರಮಾತ್ಮನೇ ಎಂದು ತಿಳಿಸುತ್ತದೆ ಎಂದು ಭಾವ.

**ಅಪಶ್ಯಞ್ ಜ್ಞಾತುಮೇವೇಚ್ಛೇತ್ ಸ್ವಮಾತ್ಮಾನಂ ಜನಸ್ತಥಾ**
**ಅವಿದ್ಯಾಬದ್ಧಚಕ್ಷುಷ್ಟ್ವಾತ್ ಕಾಮಾಪಹೃತಧೀಃ ಸದಾ ।**
**ವಿವಿಕ್ತಂ ದೃಶಿಮಾತ್ಮಾನಂ ನೇಕ್ಷತೇ ದಶಮಂ ಯಥಾ ॥ ೧೬೮ ॥**
**ದಶಮಸ್ತ್ವಮಸೀತ್ಯೇವಂ ತತ್ತ್ವಮಸ್ಯಾದಿವಾಕ್ಯತಃ ।**
**ಸ್ವಮಾತ್ಮಾನಂ ವಿಜಾನಾತಿ ಕೃತ್ಸ್ನಾನ್ತಃಕರಣೇಕ್ಷಣಮ್ ॥ ೧೬೯ ॥**

೧೬೫ರಿಂ – ೧೬೮. 'ಹತ್ತನೆಯವನು ನೀನಾಗಿರುವೆ' ಎಂಬಂತೆ[1] ಈ ವಾಕ್ಯವು ಪ್ರತ್ಯಗಾತ್ಮವಿಷಯಕವಾಗಿರುತ್ತದೆ. ಈ ಶಬ್ದಗಳೆರಡೂ ತಮ್ಮ ಅರ್ಥವನ್ನು ಬಿಡದೆ ಒಂದು ವಿಶಿಷ್ಟಾರ್ಥವನ್ನು ಹೇಳುತ್ತಾ[2] ಪ್ರತ್ಯಗಾತ್ಮನ ಜ್ಞಾನದಲ್ಲಿ ಕೊನೆಗಾಣುತ್ತವೆ. ಈ ಅರ್ಥಕ್ಕೆ ವಿರೋಧಿಯಾದ ಮತ್ತೆ ಯಾವ ಅರ್ಥವೂ ವಾಕ್ಯಕ್ಕೆ ಆಗುವದಿಲ್ಲ.[3] ಒಂಬತ್ತು ಎಂಬ ಬುದ್ಧಿಯಿಂದ ಅಪಹೃತವಾಗಿರುವವರಿಂದ ಹತ್ತನೆಯವನಾದ ತನ್ನನ್ನು ಕಾಣದೆ ತನ್ನನ್ನು ತಿಳಿಯಬೇಕೆಂದೇ ಮನುಷ್ಯನು ಬಯಸುತ್ತಾನೆ. ಅಲ್ಲವೆ ? ಹಾಗೆ ಅವಿದ್ಯೆಯಿಂದ ಕಟ್ಟುವಡೆದಿರುವ ಜ್ಞಾನವುಳ್ಳವನಾಗಿರುವದರಿಂದ ಕಾಮದಿಂದ ಜ್ಞಾನವನ್ನು ಕಳೆದುಕೊಂಡು[4] ಯಾವಾಗಲೂ ಶುದ್ಧನಾಗಿರುವ ದೃಕ್ಸ್ವರೂಪನಾದ ತನ್ನ ಸ್ವರೂಪವನ್ನು ಹತ್ತನೆಯವನನ್ನು ಹೇಗೋ ಹಾಗೆ ಕಾಣದೆ ಇರುತ್ತಾನೆ.

---

1. ಮೊದಲೇ ಇರುವ ವಿಷಯಗಳನ್ನು ತಿಳಿಸಿದರೂ ಅಜ್ಞಾನದಿಂದ ಮರೆತಿದ್ದ ತಾನು ಹತ್ತನೆಯವನೆಂಬ ವಿಷಯವನ್ನು ಈ ವಾಕ್ಯವು ತಿಳಿಸಿಕೊಟ್ಟಿತು. ಹತ್ತು ಜನರು ಮಂಕರು ತಮ್ಮಲ್ಲಿ ಹತ್ತನೆಯವನು ಇಲ್ಲವೆಂದು ಭಾವಿಸಿ ಹೊರಗಿನ ಒಂಬತ್ತು ಜನರನ್ನೇ ಎಣಿಸಿಕೊಳ್ಳುತ್ತಾ ತನ್ನನ್ನು ಎಣಿಸದೆ ಕೈಬಿಟ್ಟಾಗ ಒಬ್ಬ ದಾರಿಹೋಕನು ಹೇಳಿದ ವಾಕ್ಯವಿದು.

2. ನೀನು ಎಂಬುದು ಪ್ರತ್ಯಕ್ಷವಾಗಿರುವ ಪ್ರತ್ಯಗಾತ್ಮನನ್ನೂ ಅದು ಎಂಬುದು ನಿರ್ದುಃಖಿಯಾದ ಚೈತನ್ಯವನ್ನೂ ತಿಳಿಸಿತು ; ಎರಡೂ ಪದಗಳು 'ಆಗಿದೀಯೆ' ಎಂಬ ಮಾತಿನೊಡನೆ ಸೇರಿ 'ನಿರ್ದುಃಖಪ್ರತ್ಯಗಾತ್ಮಚೈತನ್ಯವನ್ನು' ತಿಳಿಸಿಕೊಟ್ಟವು.

3. ಪೂರ್ವಪಕ್ಷಿಗಳು ಹೇಳುವಂತೆ ಪ್ರಸಂಖ್ಯಾನವನ್ನು ಮಾಡಿದಬಳಿಕ ನೀನು ಬ್ರಹ್ಮವಾಗುವೆ ಎಂದು ಅರ್ಥಮಾಡಿದರೆ ವಾಕ್ಯಾರ್ಥಕ್ಕೆ ವಿರುದ್ಧವಾದ ಅರ್ಥವಾಗುವದು. ಏಕೆಂದರೆ ವಾಕ್ಯಶ್ರವಣದಿಂದ ತಾನು ಸದ್ಬ್ರಹ್ಮವೆಂದು ತಿಳಿದವನು ಪ್ರಸಂಖ್ಯಾನಮಾಡಬೇಕು ಎನ್ನುವದು ಅದಕ್ಕೆ ವಿರುದ್ಧವಾಗಿರುತ್ತದೆ. ಸಿದ್ಧಾಂತದಲ್ಲಿ ಪದಗಳು ತಮ್ಮ ಲಕ್ಷ್ಯಾರ್ಥವನ್ನೇ ತಿಳಿಸುವದರಿಂದ ತಮ್ಮ ಅರ್ಥಕ್ಕೆ ವಿರುದ್ಧವಾದದ್ದನ್ನು ತಿಳಿಸಿದಂತೆ ಆಗುವದಿಲ್ಲ.

4. ತತ್ತ್ವವನ್ನು ತಿಳಿಯದೆ ತಾನು ಸಂಸಾರಿಯೆಂದು ತಿಳಿದುಕೊಂಡಿರುವದು ಅವಿದ್ಯೆಯು ; ಅವಿದ್ಯೆಯಿಂದ ಹೊರಗಿನ ವಿಷಯಗಳಲ್ಲಿ ಉಂಟಾಗಿರುವ ಇಚ್ಛೆಯು ಕಾಮವು. ಅದು ನಿಜವಾದ ಜ್ಞಾನವನ್ನು ಕಳೆದಿರುವುದು ಎಂದು ಭಾವ.

ನೀನು ಹತ್ತನೆಯವನಾಗಿರುವೆ ಎಂದಂತೆ 'ನೀನು ಆ (ಪರಬ್ರಹ್ಮ)ವಾಗಿರುವೆ' ಮುಂತಾದ ವಾಕ್ಯದಿಂದ, ಅಂತಃಕರಣವೆಲ್ಲವನ್ನೂ ನೋಡುತ್ತಿರುವ ತನ್ನ ಆತ್ಮನನ್ನು ಅರಿತುಕೊಳ್ಳುತ್ತಾನೆ.[1]

## ವಾಕ್ಯಾರ್ಥಜ್ಞಾನಕ್ಕೆ ಉಪಾಯ

**ಇದಂ ಪೂರ್ವಮಿದಂ ಪಶ್ಚಾತ್ ಪದಂ ವಾಕ್ಯೇ ಭವೇದಿತಿ ।**
**ನಿಯಮೋ ನೈವ ವೇದೇಽಸ್ತಿ ಪದಸಾಙ್ಗತ್ಯಮರ್ಥತಃ ॥೧೭೦॥**
**ವಾಕ್ಯೇ ಹಿ ಶ್ರೂಯಮಾಣಾನಾಂ ಪದಾನಾಮರ್ಥಸಂಸ್ಮೃತಿಃ ।[2]**
**ಅನ್ವಯವ್ಯತಿರೇಕಾಭ್ಯಾಂ ತತೋ ವಾಕ್ಯಾರ್ಥಬೋಧನಮ್ ॥೧೭೧॥**
**ಯದಾ ನಿತ್ಯೇಷು ವಾಕ್ಯೇಷು ಪದಾರ್ಥಸ್ತು ವಿವಿಚ್ಯತೇ ।**
**ವಾಕ್ಯಾರ್ಥಜ್ಞಾನಸಙ್ಕ್ರಾನ್ತ್ಯೈ ತದಾ ಪ್ರಶ್ನೋ ನ ಯುಜ್ಯತೇ ॥೧೭೨॥**
**ಅನ್ವಯವ್ಯತಿರೇಕೋಕ್ತಿಃ ಪದಾರ್ಥಸ್ಮರಣಾಯ ತು ।**
**ಸ್ಮೃತ್ಯಭಾವೇ ನ ವಾಕ್ಯಾರ್ಥೋ ಜ್ಞಾತುಂ ಶಕ್ಯೋ ಹಿ ಕೇನಚಿತ್ ॥**

೧೭೦-೧೭೩. ವಾಕ್ಯದಲ್ಲಿ ಇದು ಮೊದಲು, ಈ ಪದವು ಆಮೇಲೆ ಇರಬೇಕು -ಎಂಬ ನಿಯಮವು ವೇದದಲ್ಲಿಲ್ಲವೇ ಇಲ್ಲ. ಪದಗಳ ಸಂಬಂಧವನ್ನು ಅರ್ಥದಿಂದ ತಿಳಿದುಕೊಳ್ಳಬೇಕು.[3] ವಾಕ್ಯದಲ್ಲಿ ಹೇಳಿರುವ ಪದಗಳ ಅರ್ಥದ ಸ್ಮರಣೆಯು ಅನ್ವಯವ್ಯತಿರೇಕಗಳಿಂದಲೇ (ಆಗುತ್ತದೆ). ಆದರಿಂದ

---

1. ಹತ್ತನೆಯವನು ನೀನು ಎಂಬ ವಾಕ್ಯದ ಶ್ರವಣದಿಂದ ಹತ್ತನೆಯವನಾಗಬೇಕು ಎಂದೇನೂ ಅರ್ಥವಾಗುವದಿಲ್ಲ; ಇದರಂತೆ 'ಅದು ನೀನಾಗಿರುವೆ' ಎಂಬ ವಾಕ್ಯಕ್ಕೂ ಅದು ನೀನಾಗಬೇಕು ಎಂದು ಅರ್ಥವಾಗುವದಿಲ್ಲ. ಅಂತಃಕರಣವೃತ್ತಿಗಳಿಗೆಲ್ಲ ಸಾಕ್ಷಿಯಾಗಿರುವ ಪ್ರತ್ಯಗಾತ್ಮಚೈತನ್ಯವನ್ನು ತಾನು ಎಂದರಿತವನು ಅಂತಃಕರಣಕೃತ್ಯವಾದ ಪ್ರಸಂಖ್ಯಾನವನ್ನು ಹೇಗೆತಾನೆ ಮಾಡಿಯಾನು?

2. ಮೈ॥ ಪಾಠದಲ್ಲಿ ಈ ಶ್ಲೋಕದ ಪೂರ್ವೋತ್ತರಾರ್ಧಗಳು ವಿಪರೀತಕ್ರಮದಲ್ಲಿವೆ. ಈ ಬೋಧನಿಧಿಯ ಪಾಠವು ಸರಳವಾಗಿ ಅನ್ವಯವನ್ನು ತಿಳಿಸುವಂತಿದೆ.

3. 'ತ್ವಂ' ಎಂಬುದು ಸಂಸಾರಿತ್ವವನ್ನು ಹೇಳುತ್ತದೆ; ಅದನ್ನುದ್ದೇಶಿಸಿ ಪರಬ್ರಹ್ಮತ್ವವನ್ನು ಉಪದೇಶಿಸಿರುತ್ತದೆ. ಆದ್ದರಿಂದ ಮೊದಲು ತ್ವಂಪದವಿರಬೇಕಲ್ಲವೆ ?- ಎಂಬ ಶಂಕೆಗೆ ಉತ್ತರವಿದು. 'ಆಹರ ಪಾತ್ರಮ್', 'ಪಾತ್ರಮಾಹರ' ಈ ಎರಡು ವಾಕ್ಯಗಳಲ್ಲಿ ಪದಗಳ ಅನುಕ್ರಮವು ಬೇರೆಬೇರೆಯಾಗಿದ್ದರೂ ಅರ್ಥವು ಒಂದೇ. ಅರ್ಥಕ್ಕೆ ಅನುಗುಣವಾಗಿ ಅನ್ವಯವನ್ನು ಮಾಡಿಕೊಳ್ಳಬೇಕು. 'ಅಹಂ ಬ್ರಹ್ಮಾಸ್ಮಿ' ಎಂಬ ವಾಕ್ಯದಂತೆಯೇ ಪ್ರಕೃತವಾಕ್ಯದಲ್ಲಿ ಪದಗಳಿಗೆ ಅರ್ಥಾನುಗುಣವಾಗಿ ಅನ್ವಯವನ್ನು ಮಾಡಿಕೊಳ್ಳಬೇಕು-ಎಂದು ಅಭಿಪ್ರಾಯ.

ವಾಕ್ಯಾರ್ಥದ ಜ್ಞಾನವಾಗುತ್ತದೆ.[1] ಯಾವಾಗ ನಿತ್ಯವಾದ (ವೇದ)ವಾಕ್ಯಗಳಲ್ಲಿ ವಾಕ್ಯಾರ್ಥಜ್ಞಾನದ ಪ್ರಾಪ್ತಿಗಾಗಿ ಪದಾರ್ಥವನ್ನು ವಿವೇಕಮಾಡಿಕೊಂಡು ಅರಿಯುವೆವೋ[2] ಆಗ ಪ್ರಶ್ನೆಯು ಯುಕ್ತವಾಗುವದಿಲ್ಲ.[3] ಅನ್ವಯವ್ಯತಿರೇಕಗಳನ್ನು ಹೇಳಿರುವದು ಪದಾರ್ಥಗಳ ನೆನಪಿಗಾಗಿಯೇ; ಏಕೆಂದರೆ (ಅವುಗಳ) ನೆನಪಿಲ್ಲದೆ ವಾಕ್ಯಾರ್ಥವನ್ನು ಅರಿಯುವದು ಯಾವನಿಂದಲೂ ಆಗಲಾರದು.

**ತತ್ತ್ವಮಸ್ಯಾದಿವಾಕ್ಯೇಷು ತ್ವಂಪದಾರ್ಥಾವಿವೇಕತಃ |**
**ವ್ಯಜ್ಯತೇ ನೈವ ವಾಕ್ಯಾರ್ಥೋ ನಿತ್ಯಮುಕ್ತೋಽಹಮಿತ್ಯತಃ ॥ ೧೭೮ ॥**
**ಅನ್ವಯವ್ಯತಿರೇಕೋಕ್ತಿಸ್ತದ್ವಿವೇಕಾಯ ನಾನ್ಯಥಾ ॥ ೧೭೮ ೧/೨ ॥**
**ತ್ವಂಪದಾರ್ಥವಿವೇಕೇ ಹಿ ಪಾಣಾವರ್ಪಿತಬಿಲ್ವವತ್ |**
**ವಾಕ್ಯಾರ್ಥೋ ವ್ಯಜ್ಯತೇ ಚೈವಂ ಕೇವಲಾಹಂಪದಾರ್ಥತಃ[4] ॥ ೧೭೯ ॥**
**ದುಃಖೀತ್ಯೇತದಪೋಹೇನ ಪ್ರತ್ಯಗಾತ್ಮವಿನಿಶ್ಚಯಾತ್ ॥ ೧೭೯ ೧/೨ ॥**

೧೭೮–೧೭೯ ೧/೨. 'ತತ್ತ್ವಮಸಿ' ಮುಂತಾದ ವಾಕ್ಯಗಳಲ್ಲಿ ತ್ವಂಪದದ ಅರ್ಥವನ್ನು ವಿಂಗಡಿಸಿ ಅರಿತುಕೊಳ್ಳದೆ ಇರುವದರಿಂದ ನಾನು ನಿತ್ಯಮುಕ್ತನು ಎಂಬ ವಾಕ್ಯಾರ್ಥವು ವ್ಯಕ್ತವಾಗುವದಿಲ್ಲ. ಆದ್ದರಿಂದ ಅನ್ವಯವ್ಯತಿರೇಕಗಳನ್ನು ಹೇಳಿರುವದು ಅದನ್ನು ವಿಂಗಡಿಸಿ ಅರಿತುಕೊಳ್ಳುವದಕ್ಕೇ ಹೊರತು

---

1. ಶ್ರುತಿಯಲ್ಲಿ ಅನ್ವಯವ್ಯತಿರೇಕಗಳನ್ನು ಅವಸ್ಥಾತ್ರಯಪರೀಕ್ಷೆಯಿಂದ ತಿಳಿಸಿಕೊಟ್ಟಿದೆ. ಇವರಿಂದ ತ್ವಂಪದದ ಅರ್ಥದ ಸ್ಮರಣೆಯುಂಟಾಗುತ್ತದೆ.

2. ಪದಾರ್ಥಜ್ಞಾನವೇ ವಾಕ್ಯಾರ್ಥಜ್ಞಾನಕ್ಕೆ ಉಪಾಯವಾಗಿರುವದರಿಂದ ಅನ್ವಯವ್ಯತಿರೇಕಗಳಿಂದ ಪದಾರ್ಥವಿವೇಕವನ್ನು ಮಾಡಿಕೊಂಡ ಮೇಲೆ ವಾಕ್ಯಾರ್ಥವು ಗೊತ್ತಾಗುತ್ತದೆ.

3. ಮತ್ತೆ ಯಾವ ಶಂಕೆಯೂ ವಾಕ್ಯಾರ್ಥದಮೇಲೆ ಹುಟ್ಟುವದಿಲ್ಲ- ಎಂದರ್ಥ.

4. 'ಕೇವಲೋಽಹಂ ಪದಾರ್ಥತಃ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು. 'ಕೇವಲಾಹಂ' ಎಂಬ ಮಾತು ಅದ್ವಿತೀಯಾತ್ಮ ಎಂಬರ್ಥದಲ್ಲಿ ೧೬೦ನೆಯ ಶ್ಲೋಕದಲ್ಲಿ ಪ್ರಯುಕ್ತವಾಗಿರುತ್ತದೆ.

ಮತ್ತೆ ಬೇರೆ ಅಲ್ಲ.[1] ಏಕೆಂದರೆ ತ್ವಂಪದಾರ್ಥವನ್ನು ವಿಂಗಡಿಸಿ ಅರಿತುಕೊಂಡರೆ (ನಾನು) ದುಃಖಿ ಎಂಬುದನ್ನು ತೆಗೆದುಹಾಕಿ ಪ್ರತ್ಯಗಾತ್ಮನನ್ನೇ ನಿಶ್ಚಯಿಸಿಕೊಳ್ಳುವದರಿಂದ ಶುದ್ಧಾಹಂಪದಾರ್ಥವೇ ವಾಕ್ಯಾರ್ಥವೆಂಬುದು ಅಂಗೈಯಲ್ಲಿಟ್ಟ ಬಿಲ್ವದಂತೆ ವ್ಯಕ್ತವಾಗುತ್ತದೆ.[2]

## ವಾಕ್ಯಜ್ಞಾನವು ಪ್ರತ್ಯಕ್ಷಬಾಧಿತವಲ್ಲ

**ತತ್ರೈವಂ ಸಂಭವತ್ಯರ್ಥೇ ಶ್ರುತಹಾನಾಶ್ರುತಾರ್ಥಧೀಃ ।**
**ನೈವ ಕಲ್ಪಯಿತುಂ ಯುಕ್ತಾ ಪದವಾಕ್ಯಾರ್ಥಕೋವಿದೈಃ ॥ ೧೭೬ ॥**

೧೭೬. ಇಲ್ಲಿ ಹೀಗೆ ಅರ್ಥವು ಹೊಂದುತ್ತಿರುವಲ್ಲಿ ಶ್ರುತಿಯಲ್ಲಿ ಹೇಳಿದ್ದನ್ನು ಬಿಟ್ಟು ಅಶ್ರುತವಾದ ಅರ್ಥದ ಜ್ಞಾನವನ್ನು ಕಲ್ಪಿಸುವದು[3] ಪದಾರ್ಥವನ್ನೂ ವಾಕ್ಯಾರ್ಥವನ್ನೂ ಬಲ್ಲವರಿಗೆ ಎಂದಿಗೂ ಯುಕ್ತವಲ್ಲ.[4]

**ಪ್ರತ್ಯಕ್ಷಾದೀನಿ ಬಾಧೇರನ್ ಕೃಷ್ಣಲಾದಿಷು ಪಾಕವತ್ ।**
**ಅಕ್ಷಜಾದಿನಿಭೈರೇತೈಃ ಕಥಂ ಸ್ಯಾದ್ವಾಕ್ಯಬಾಧನಮ್ ॥ ೧೭೭ ॥**

೧೭೭. ಕೃಷ್ಣಲಾದಿಗಳನ್ನು ಬೇಯಿಸುವದೆಂಬುದನ್ನು ಹೇಗೋ ಹಾಗೆ

---

1. ವಾಕ್ಯಾರ್ಥವು ಗೊತ್ತಾದಬಳಿಕ ಪ್ರಸಂಖ್ಯಾನವೇ ಮುಂತಾದದ್ದನ್ನು ತಿಳಿಸುವದಕ್ಕಲ್ಲ ಮತ್ತೆಮತ್ತೆ ಶ್ವೇತಕೇತುವಿನ ಪ್ರಶ್ನೆಯೂ ಉದ್ದಾಲಕನ ಉತ್ತರವೂ ಬಂದಿರುವದು; ತ್ವಂಪದಾರ್ಥದ ವಿವೇಕಕ್ಕಾಗಿಯೇ ಅದು ಬಂದಿದೆ- ಎಂದರ್ಥ. ಅನ್ವಯವೆಂದರೆ ಆತ್ಮನು ಇದ್ದುಕೊಂಡೇ ಇರುವದು; ವ್ಯತಿರೇಕವೆಂದರೆ ಅನಾತ್ಮವು ಇಲ್ಲದಿರುವದು.

2. ಅನಾತ್ಮಗಳಿಂದೊಡಗೂಡಿದ ಚೈತನ್ಯವೇ ತಾನೆಂದು ಅರಿತುಕೊಂಡವನಿಗೆ ಶುದ್ಧಾಹಂಪದಾರ್ಥವನ್ನು ತಿಳಿಸಿದರೆ 'ನಾನು ನಿತ್ಯಮುಕ್ತನು' ಎಂಬ ವಾಕ್ಯಾರ್ಥವು ಅಪರೋಕ್ಷವಾಗಿ ತಿಳಿಯಬರುತ್ತದೆ. ಆಗ ಪ್ರಸಂಖ್ಯಾನಾದಿಗಳು ಯಾವವೂ ಬೇಕಾಗುವದಿಲ್ಲ; ಏಕೆಂದರೆ ಆಗ 'ನಾನು ದುಃಖಿ' ಎಂಬ ಅರಿವು ಮಿಥ್ಯಾಜ್ಞಾನವಾದ್ದರಿಂದ ಬಾಧಿತವಾಗಿಬಿಟ್ಟಿರುತ್ತದೆ ಎಂದರ್ಥ.

3. ವಾಕ್ಯವು ಬ್ರಹ್ಮಾತ್ಮೈಕ್ಯವನ್ನು ಹೇಳುತ್ತದೆ, ಪ್ರಸಂಖ್ಯಾನವನ್ನು ಹೇಳುವದಿಲ್ಲ. ಅದು ಹೇಳದೆ ಇರುವದನ್ನು ಕಲ್ಪಿಸುವದು ಸರಿಯಲ್ಲ.

4. ಪ್ರಸಂಖ್ಯಾನವಾದಿಗಳು ಪದಾರ್ಥವನ್ನೂ ವಾಕ್ಯಾರ್ಥವನ್ನೂ ಅರಿಯರೆಂಬ ಅಭಿಪ್ರಾಯವು ಇದರಲ್ಲಿ ಅಡಗಿರುತ್ತದೆ.

ಪ್ರತ್ಯಕ್ಷಾದಿ (ಪ್ರಮಾಣ)ಗಳು ವಾಕ್ಯವನ್ನು ಬಾಧಿಸಬಹುದು.[1] (ಆದರೆ) ಈ ಪ್ರತ್ಯಕ್ಷವೇ ಮುಂತಾದವು ಆಭಾಸಗಳಿಂದ[2] ವಾಕ್ಯವನ್ನು ಬಾಧಿಸುವದು ಹೇಗಾದೀತು?[3]

**ದುಃಖ್ಯಸ್ಮೀತಿ ಸತಿ ಜ್ಞಾನೇ ನಿರ್ದುಃಖೀತಿ ನ ಜಾಯತೇ ।**
**ಪ್ರತ್ಯಕ್ಷಾದಿನಿಭತ್ವೇಽಪಿ ವಾಕ್ಯಾನ್ನ ವ್ಯಭಿಚಾರತಃ ॥ ೧೭೮ ॥**

**ಸ್ವಪ್ನೇ ದುಃಖ್ಯಹಮದ್ಯಾಸಂ ದಾಹಚ್ಛೇದಾದಿಹೇತುತಃ ।**
**ತತ್ಕಾಲಭಾವಿಭಿರ್ವಾಕ್ಯೈರ್ನ ಬಾಧಃ ಕ್ರಿಯತೇ ಯದಿ ॥ ೧೭೯ ॥**

**ಸಮಾಪ್ತೇಃ ಸ್ತುರ್ಹಿ ದುಃಖಸ್ಯ ಪ್ರಾಕ್ಚ ತದ್ಬಾಧ ಇಷ್ಯತಾಮ್ ।**
**ನ ಹಿ ದುಃಖಸ್ಯ ಸನ್ತಾನೋ ಭ್ರಾನ್ತೇರ್ವಾ ದೃಶ್ಯತೇ ಕ್ವಚಿತ್॥ ೧೮೦ ॥**

೧೭೮–೧೮೦. (ಆಕ್ಷೇಪ): ಪ್ರತ್ಯಕ್ಷಾದಿಗಳ ಆಭಾಸವಾದರೂ 'ದುಃಖಿಯಾಗಿರುವೆನು' ಎಂಬ ಜ್ಞಾನವು ಇರುವಲ್ಲಿ '(ನಾನು) ನಿರ್ದುಃಖಿಯು' ಎಂಬ (ಜ್ಞಾನವು) ವಾಕ್ಯದಿಂದ ಹುಟ್ಟಲಾರದಲ್ಲ![4] (ಪರಿಹಾರ): ಹಾಗಲ್ಲ. ಏಕೆಂದರೆ (ಇದಕ್ಕೆ) ಬದಲಾವಣೆಯುಂಟು. ಸುಡುವದು, ಕತ್ತರಿಸುವದು– ಮುಂತಾದ ಕಾರಣದಿಂದ 'ಕನಸಿನಲ್ಲಿ ನಾನು ದುಃಖಿಯಾಗಿದ್ದೆನು' (ಎಂಬ ಜ್ಞಾನವು ಬಾಧಿತವಾಗುವದು ಕಂಡಿದೆ.[5] (ಆಕ್ಷೇಪ): ಆ ಕಾಲದಲ್ಲಿರುವ ವಾಕ್ಯಗಳಿಂದ

---

1. 'ಕೃಷ್ಣಲ' ಎಂದರೆ ಚಿನ್ನದ ಉದ್ದಿನಕಾಳುಗಳು ಎಂದು ಕೆಲವರು; ಸಣ್ಣ ಕರಿಯ ಕಲ್ಲು ಹರಳುಗಳು ಎಂದು ಮತ್ತೆ ಕೆಲವರು. ಬೃ.ವಾ. ೧–೪–೮೮೧ರ ಟೀಕೆಯನ್ನು ನೋಡಿ. ಕೃಷ್ಣಲಗಳನ್ನು ಬೇಯಿಸಿ ಮೆತ್ತಗೆ ಮಾಡುವದು ಪ್ರತ್ಯಕ್ಷಕ್ಕೆ ವಿರುದ್ಧವಾಗಿರುವದರಿಂದ 'ಕೃಷ್ಣಲಗಳನ್ನು ಬೇಯಿಸಬೇಕು' ಎಂಬ ವೇದವಾಕ್ಯಕ್ಕೆ ಮೆತ್ತಗೆ ಮಾಡಬೇಕು ಎಂಬ ಅರ್ಥವಲ್ಲ; ಬೇಯಿಸುವದಕ್ಕೆ ಮಾಡುವ ಪ್ರಯತ್ನವನ್ನು ಮಾಡಬೇಕು; ಅದರಿಂದ ಅದೃಷ್ಟವಾದ ಸಂಸ್ಕಾರವಾಗುವದು ಎಂದು ಮೀಮಾಂಸಕರು ಕಲ್ಪಿಸಿರುತ್ತಾರೆ.

2. ನಾನು ದುಃಖಿಯು ಎಂಬುದು ಪ್ರತ್ಯಕ್ಷವಲ್ಲ, ಪ್ರತ್ಯಕ್ಷಾಭಾಸ; ಏಕೆಂದರೆ ಮನಃಸ್ಪಂದನವಿಲ್ಲದ ಸುಷುಪ್ತ್ಯಾದಿಗಳಲ್ಲಿ ದುಃಖಿತ್ವವಿರುವದಿಲ್ಲ ಎಂದು ಹಿಂದೆ ೧೬೪ರಲ್ಲಿ ತಿಳಿಸಿದ್ದಾಗಿದೆ.

3. ವಾಕ್ಯವು ಪ್ರಮಾಣ; ಆದ್ದರಿಂದ ನಿರ್ದುಃಖಾತ್ಮಜ್ಞಾನವು ಪ್ರಮಾಣಜನ್ಯ. ದುಃಖಿತ್ವಜ್ಞಾನವು ಪ್ರತ್ಯಕ್ಷಾಭಾಸಜನ್ಯ. ಆದ್ದರಿಂದ ಈ ಪ್ರತ್ಯಕ್ಷದಿಂದ ವಾಕ್ಯಾರ್ಥಜ್ಞಾನವು ಭಾಧಿತವಾಗಲಾರದು ಎಂದರ್ಥ. ಇದು ೧೩ನೆಯ ಶ್ಲೋಕದಲ್ಲಿ ಒಡ್ಡಿದ್ದ ಪೂರ್ವಪಕ್ಷದ ಖಂಡನೆ.

4. ದುಃಖಿತ್ವಜ್ಞಾನವು ಪ್ರತ್ಯಕ್ಷಾದ್ಯಾಭಾಸವಾದರೂ ಒಂದು ಜ್ಞಾನವಿರುವಾಗ ಮತ್ತೊಂದು ಉಂಟಾಗುವದು ಹೇಗೆ ?_ ಎಂದು ಆಕ್ಷೇಪ.

5. ಎಚ್ಚರದಲ್ಲಿ ಅದೆಲ್ಲ ಸುಳ್ಳು ಎಂದು ಗೊತ್ತಾಗುತ್ತದೆ.

ಬಾಧೆಯಾಗುವದಿಲ್ಲವಲ್ಲ![1] (ಪರಿಹಾರ): ಹಾಗಾದರೆ ದುಃಖವು ಮುಗಿದ ಮೇಲೆ ಅಥವಾ ಮೊದಲು ಅದು ಬಾಧಿತವಾಗುತ್ತದೆ ಎಂದು ಒಪ್ಪಬೇಕು.[2] ದುಃಖದ ಅಥವಾ ಭ್ರಾಂತಿಯ ಸಂತಾನವು ಯಾವಾಗಲೂ ಕಂಡುಬಂದಿಲ್ಲವಷ್ಟೆ ?[3]

**ಪ್ರತ್ಯಗಾತ್ಮನ ಆತ್ಮತ್ವಂ ದುಃಖ್ಯಸ್ಮೀತ್ಯಸ್ಯ ಬಾಧಯಾ |**
**ದಶಮಂ ನವಮಸ್ಯೇವ ವೇದ ಚೇದವಿರುದ್ಧತಾ　　॥ ೧೮೧ ॥**

೧೮೧. "ದುಃಖಿಯಾಗಿರುತ್ತೇನೆ" ಎಂಬ (ಜ್ಞಾನವನ್ನು) ಬಾಧಿಸಿ ಪ್ರತ್ಯಗಾತ್ಮನೇ ನಾನು ಎಂದು ಒಂಬತ್ತನೆಯವ(ನೆಂಬ ಜ್ಞಾನದ) ಬಾಧೆಯಿಂದ ಹತ್ತನೆಯವನನ್ನು (ಅರಿತುಕೊಳ್ಳು)ವಂತೆ ಅರಿತುಕೊಂಡರೆ (ಯಾವ) ವಿರೋಧವೂ ಇರುವದಿಲ್ಲ.[4]

**ನಿತ್ಯಮುಕ್ತತ್ವವಿಜ್ಞಾನಂ ವಾಕ್ಯಾದ್ಭವತಿ ನಾನ್ಯತಃ |**
**ವಾಕ್ಯಾರ್ಥಸ್ಯಾಪಿ ವಿಜ್ಞಾನಂ ಪದಾರ್ಥಸ್ಮೃತಿಪೂರ್ವಕಮ್ ॥ ೧೮೨ ॥**
**ಅನ್ವಯವ್ಯತಿರೇಕಾಭ್ಯಾಂ ಪದಾರ್ಥಃ ಸ್ಮರ್ಯತೇ ಧ್ರುವಮ್ |**
**ಏವಂ ನಿರ್ದುಃಖಮಾತ್ಮಾನಮಕ್ರಿಯಂ ಪ್ರತಿಪದ್ಯತೇ　　॥ ೧೮೩ ॥**

೧೮೨-೧೮೩. (ನಾನು) ನಿತ್ಯಮುಕ್ತನೆಂಬ ಅರಿವು ವಾಕ್ಯದಿಂದಲೇ ಆಗುವದೇ ಹೊರತು ಮತ್ತೊಂದರಿಂದ[5] ಆಗುವದಿಲ್ಲ. ವಾಕ್ಯಾರ್ಥದ ಅರಿವು

---

1. ವಾಕ್ಯದಿಂದ ಪ್ರತ್ಯಕ್ಷಾದಿಗಳ ಆಭಾಸಜ್ಞಾನವು ಹೋಗುವದಕ್ಕೆ ಅದು ಹೇಗೆ ದೃಷ್ಟಾಂತವು ?– ಎಂದು ಆಕ್ಷೇಪಕನ ಆಶಯ.

2. ಎಚ್ಚರ ಕನಸುಗಳಲ್ಲಿ ಅದು ಇರುವದಿಲ್ಲವೆಂದು ನೀವೇ ಒಪ್ಪಿದೀರಷ್ಟೆ– ಎಂದು ಭಾವ. ಕನಸು ಆದ್ಯಂತಗಳಿರುವದರಿಂದ ಮಿಥ್ಯೆಯೆಂದು ವಾಕ್ಯಜ್ಞಾನದಿಂದ ಬಾಧಿತವಾಗಬಹುದಷ್ಟೆ. ಹಾಗೆಯೇ ದುಃಖಿತ್ವಜ್ಞಾನವೂ ಆಗಲಿ ಎಂದು ಭಾವ.

3. ದುಃಖಿತ್ವವಾಗಲಿ ಭ್ರಾಂತಿಯಾಗಲಿ ಸಂತತವಾಗಿ ಇರುವದೇ ಇಲ್ಲ; ಆದ್ದರಿಂದಲೇ ಅದು ಆತ್ಮನ ಧರ್ಮವಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಅದನ್ನು ವಾಕ್ಯಜ್ಞಾನವು ಬಾಧಿಸಬಹುದಾಗಿದೆ ಎಂದು ಅಭಿಪ್ರಾಯ.

4. ಪ್ರತ್ಯಕ್ಷಾದಿಪ್ರಮಾಣಗಳಿಗೆ ವಿರೋಧವಿಲ್ಲ; ಏಕೆಂದರೆ 'ನಾನು ದುಃಖಿ' ಎಂಬುದು ಪ್ರಮಾಣಜನ್ಯಜ್ಞಾನವಲ್ಲ. ಇದಕ್ಕೆ ವಾಕ್ಯದಿಂದ 'ನಾನು ಸದ್ಬ್ರಹ್ಮವು' ಎಂದು ತಿಳಿದುಕೊಂಡು ಮತ್ತೆ ಪ್ರಸಂಖ್ಯಾನಾದಿಗಳನ್ನು ಮಾಡಬೇಕು ಎಂದು ಕಲ್ಪಿಸಿದರೆ ಹಿಂದೆ ಹೇಳಿದಂತೆ ಶ್ರುತಹಾನಿ, ಅಶ್ರುತಕಲ್ಪನೆ, ವೇದಕ್ಕೆ ಅಪ್ರಾಮಾಣ್ಯ, ಮುಕ್ತಿಗೆ ಅನಿತ್ಯತ್ವ– ಮುಂತಾದ ದೋಷಗಳು ಬರುತ್ತವೆ– ಎಂದು ಭಾವ.

5. ಪ್ರಸಂಖ್ಯಾನಾದಿಗಳಿಂದ.

ಕೂಡ ಪದಾರ್ಥಗಳ ಸ್ಮೃತಿಯು ವೊದಲಾಪರೇ (ಆಗುತ್ತವೆ). ಅನ್ವಯ ವ್ಯತಿರೇಕಗಳಿಂದ ಅವಶ್ಯವಾಗಿ ಪದಾರ್ಥದ ನೆನಪು ಉಂಟಾಗುತ್ತದೆ. ಈರೀತಿಯಲ್ಲಿ ತಾನು ನಿರ್ದುಃಖನೆಂದೂ ಕರ್ತೃತ್ವರಹಿತನೆಂದೂ ಅರಿತುಕೊಳ್ಳುತ್ತಾನೆ.[1]

**ಸದೇವೇತ್ಯಾದಿವಾಕ್ಯೇಭ್ಯಃ ಪ್ರಮಾ ಸ್ಫುಟತರಾ ಭವೇತ್ ।**
**ದಶಮಸ್ತ್ವಮಸೀತ್ಯಸ್ಮಾದ್ಯಥೈವಂ ಪ್ರತ್ಯಗಾತ್ಮನಿ ॥ ೧೮೪ ॥**

**ಪ್ರಬೋಧೇನ ಯಥಾ ಸ್ವಾಪ್ನಂ ಸರ್ವದುಃಖಂ ನಿವರ್ತತೇ ।**
**ಪ್ರತ್ಯಗಾತ್ಮಧಿಯಾ ತದ್ವದ್ದುಃಖಿತ್ವಂ ಸರ್ವಥಾತ್ಮನಃ[2] ॥ ೧೮೫ ॥**

**ಕೃಷ್ಣಲಾದೌ ಪ್ರಮಾಜನ್ಮ ತದನ್ಯಾರ್ಥಾನ್ಮೃದುತ್ವತಃ ।**
**ತತ್ತ್ವಮಸ್ಯಾದಿವಾಕ್ಯೇಷು ನತ್ವೇವಮವಿರೋಧತಃ ॥ ೧೮೬ ॥**

೧೮೪–೧೮೬. "ಸದೇವ" (ಛಾಂ. ೬-೨-೨) ಮುಂತಾದ ವಾಕ್ಯಗಳಿಂದ 'ಹತ್ತನೆಯವನು ನೀನು' ಎಂಬ ವಾಕ್ಯದಿಂದ ಹೇಗೋ ಹಾಗೆ ಪ್ರತ್ಯಗಾತ್ಮನಲ್ಲಿ ಸ್ಫುಟತರವಾದ ಪ್ರಮೆಯುಂಟಾಗುವದು.[3] ಎಚ್ಚರದಿಂದ ಹೇಗೆ ಕನಸಿನ ಎಲ್ಲಾ ದುಃಖವೂ ತೊಲಗುತ್ತದೆಯೋ ಹಾಗೆ ಪ್ರತ್ಯಗಾತ್ಮಜ್ಞಾನದಿಂದ ಆತ್ಮನಿಗೆ ಎಲ್ಲಾ ಬಗೆಯ ದುಃಖಿತ್ವವೂ ತೊಲಗುವದು.[4] "ಕೃಷ್ಣಲ"(ಗಳನ್ನು ಬೇಯಿಸಬೇಕು) ಮುಂತಾದ ವಾಕ್ಯಗಳಲ್ಲಿ ಪ್ರಮೆಯುಂಟಾಗದಿರುವದಕ್ಕೆ (ಕಾರಣವೇನೆಂದರೆ) ಅದಕ್ಕಿಂತ ಬೇರೆ ಅರ್ಥವಿರುವದು,[5] ಕೃಷ್ಣಲಗಳು ಮೃದು

---

1. ಹೀಗೆ ಅರಿತುಕೊಂಡದ್ದು ಪ್ರಮಾಣದಿಂದಾದ್ದರಿಂದ ಬಾಧಿತವಾಗುವದಿಲ್ಲ. ಆ ಬಳಿಕ ಮಾಡಬೇಕಾದ ಪ್ರಸಂಖ್ಯಾನಾದಿಗಳಿಗೂ ಅವಕಾಶವಿರುವದಿಲ್ಲ– ಎಂದು ಭಾವ.

2. 'ಸರ್ವದಾ' ಎಂಬ ಮೈ॥ ಪಾಠವನ್ನು ಬಿಟ್ಟು ಈ ಬೋಧನಿಧಿಯ ಪಾಠವನ್ನು ತೆಗೆದುಕೊಂಡಿದೆ.

3. ವಾಕ್ಯವು ಅಬೋಧಕವೆಂಬ ಅಪ್ರಾಮಾಣ್ಯಪ್ರಸಕ್ತಿಯಿಲ್ಲ ಎಂದು ಭಾವ. ಒಂದು ಸಲ ವಾಕ್ಯವನ್ನು ಕೇಳಿದರೆ ಅರಿವಾಗುವದಿಲ್ಲ ಎಂಬ ೧೦ನೆಯ ಶ್ಲೋಕದ ಪೂರ್ವಪಕ್ಷಕ್ಕೆ ಉತ್ತರವಿದು.

4. ವಾಕ್ಯಜ್ಞಾನವು ಮಿಥ್ಯಾಜ್ಞಾನವನ್ನೂ ಅದರ ಕಾರ್ಯವನ್ನೂ ತೊಲಗಿಸುವದಿಲ್ಲ ಎಂಬ ೧೫ನೆಯ ಶ್ಲೋಕದ ಪೂರ್ವಪಕ್ಷಕ್ಕೆ ಉತ್ತರವಿದು. ಜ್ಞಾನಕ್ಕೆ ನಿಷ್ಫಲತ್ವವೆಂಬ ಅಪ್ರಾಮಾಣ್ಯವಿಲ್ಲ ಎಂದು ಭಾವ.

5. ಕೃಷ್ಣಲಗಳನ್ನು ಬೇಯಿಸಿ ಮೆತ್ತಗೆ ಮಾಡಬೇಕೆಂಬ ತಾತ್ಪರ್ಯವೇ ವೇದಕ್ಕಿಲ್ಲ; ಅವು ಮೆತ್ತಗಾಗುವದಿಲ್ಲವೆಂಬುದು ಪ್ರತ್ಯಕ್ಷಪ್ರಮಾಣದಿಂದಲೂ ತಿಳಿಯುತ್ತದೆ. ಆದ್ದರಿಂದ ಆ ವಾಕ್ಯಗಳಿಗೆ ಆ ಅಂಶದಲ್ಲಿ ಪ್ರಾಮಾಣ್ಯವು ಬಾಧಿತವಾಗುತ್ತದೆ. ಆದರೆ ಇಲ್ಲಿ 'ತತ್ತ್ವಮಸಿ' ಎಂದು ತಾತ್ಪರ್ಯದಿಂದ ವಾಕ್ಯವು ಹೇಳುತ್ತದೆ; ಬಾಧಕಪ್ರಮಾಣವೂ ಇಲ್ಲ. ಆದ್ದರಿಂದ ವಿಪರೀತಬೋಧಕತ್ವವೆಂಬ ಅಪ್ರಾಮಾಣ್ಯವಿಲ್ಲ ಎಂದು ಭಾವ. ವಾಕ್ಯಜ್ಞಾನವು ಪ್ರತ್ಯಕ್ಷಬಾಧಿತವೆನ್ನುವ ೧೩ನೆಯ ಶ್ಲೋಕದ ಪೂರ್ವಪಕ್ಷಕ್ಕೆ ಉತ್ತರವಿದು. ವಾಕ್ಯವು ಸರ್ವಥಾ ಪ್ರಮಾಣವು ಎಂದು ಉಪಸಂಹಾರಮಾಡಿದಂತೆ ಆಯಿತು.

ವಾಗದಿರುವದು. ಆದರೆ 'ತತ್ತ್ವಮಸಿ' ಮುಂತಾದ ವಾಕ್ಯಗಳಲ್ಲಿ ಹೀಗಿಲ್ಲ; ಏಕೆಂದರೆ (ಇಲ್ಲಿ ಯಾವ) ವಿರೋಧವೂ ಇಲ್ಲ.[1]

## ತತ್ತ್ವಮಸಿವಾಕ್ಯದಲ್ಲಿ ಪದಗಳ ಕೃತ್ಯ

**ವಾಕ್ಯೇ ತತ್ತ್ವಮಸೀತ್ಯಸ್ಮಿನ್ ಜ್ಞಾತಾರ್ಥಂ ತದಸಿ ದ್ವಯಮ್ ।**
**ತ್ವಮರ್ಥಸ್ಮೃತಸಾಹಾಯ್ಯಾ[2]ದ್ವಾಕ್ಯಂ ನೋತ್ಪಾದಯೇತ್ ಪ್ರಮಾಮ್**

**ತತ್ತ್ವಯೋಸ್ತುಲ್ಯನೀಡಾರ್ಥಮಸೀತ್ಯೇತತ್ ಪದಂ ಭವೇತ್ ॥೧೮೭॥**

**ತಚ್ಛಬ್ದಃ ಪ್ರತ್ಯಗಾತ್ಮಾರ್ಥಸ್ತಚ್ಛಬ್ದಾರ್ಥಸ್ತ್ವಮಸ್ತಥಾ ।**
**ದುಃಖಿತ್ವಾಪ್ರತ್ಯಗಾತ್ಮತ್ವಂ ವಾರಯೇತಾಮುಭಾವಪಿ　　॥ ೧೮೮ ॥**

**ಏವಂ ಚ ನೇತಿನೇತ್ಯರ್ಥಂ ಗಮಯೇತಾಂ ಪರಸ್ಪರಮ್　　॥ ೧೮೮ ॥**

೧೮೭-೧೮೮. 'ತತ್ತ್ವಮಸಿ' ಎಂಬೀ ವಾಕ್ಯದಲ್ಲಿ 'ತತ್' 'ಅಸಿ' ಎಂಬ ಎರಡಕ್ಕೂ ಅರ್ಥವು ತಿಳಿದರೂ ತ್ವಂಪದದ ಅರ್ಥದ ಸ್ಮೃತಿಯಾಗದಿದ್ದರೆ ಸಹಾಯವಿಲ್ಲದ್ದರಿಂದ[3] (ಈ) ವಾಕ್ಯವು ಪ್ರಮೆಯನ್ನುಂಟುಮಾಡಲಾರದು.[4] 'ತತ್' ಮತ್ತು 'ತ್ವಮ್' (ಎಂಬ ಪದಗಳು) ಏಕಾರ್ಥವೃತ್ತಿಗಳೆಂದು (ತಿಳಿಸು)ವದಕ್ಕೆ 'ಅಸಿ' ಎಂಬೀ ಪದವು ಇರಬೇಕು.[5] 'ತತ್' ಎಂಬ ಶಬ್ದವು ಪ್ರತ್ಯಗಾತ್ಮನೆಂಬ ಅರ್ಥವುಳ್ಳದ್ದಾಗಿ 'ತ್ವಮ್' ಎಂಬ (ಪದ)ಕ್ಕೆ 'ತತ್' (ಎಂಬ) ಶಬ್ದದ ಅರ್ಥವೂ (ಬಂದರೆ ಈ) ಎರಡೂ (ಸೇರಿ) ದುಃಖಿತ್ವವನ್ನೂ ಅಪ್ರತ್ಯಗಾತ್ಮತ್ವವನ್ನೂ ಕಳೆಯುವವು.[6] (ಅಂತೂ) ಈ ರೀತಿಯಲ್ಲಿ (ಇವು)

---

1. 'ತತ್ತ್ವಮಸಿ' ವಾಕ್ಯವು ಬ್ರಹ್ಮಾತ್ಮೈಕ್ಯವನ್ನು ಹೊರತು ಮತ್ತೇನನ್ನೂ ಹೇಳುವದಕ್ಕೆ ಬಂದಿಲ್ಲ; ಆ ವಾಕ್ಯದಿಂದಾಗುವ ಜ್ಞಾನವು ಮತ್ತೊಂದು ಪ್ರಮಾಣಕ್ಕೆ ವಿಷಯವೂ ಅಲ್ಲ.

2. 'ಅಸತ್ಯಸಾಹಾಯ್ಯಾತ್' ಎಂಬ ಮ್ನೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವು ಮೇಲು.

3. ಪದಾರ್ಥಗಳ ಸ್ಮೃತಿಯೇ ವಾಕ್ಯಾರ್ಥಜ್ಞಾನಕ್ಕೆ ಬೇಕಾದ ಪರಸ್ಪರ ಸಹಾಯವು.

4. ಆದ್ದರಿಂದ ತ್ವಂಪದಾರ್ಥಸ್ಮೃತಿಯೂ ಬೇಕು.

5. ಹಾಗಿಲ್ಲದಿದ್ದರೆ ಅದೇ ಆತ್ಮನೇ ಜಗತ್ಕಾರಣನು ಮತ್ತು ಪ್ರತ್ಯಗಾತ್ಮನು ಎಂಬ ವಾಕ್ಯಾರ್ಥಜ್ಞಾನವಾಗಲಾರದು.

6. ಸಾಮಾನಾಧಿಕರಣ್ಯವಿರುವದರಿಂದ ತತ್‌ಪದದ ಪಾರೋಕ್ಷ್ಯಾರ್ಥತ್ವವನ್ನು ತ್ವಂಪದವು ಬಿಡಿಸುವದು; ತ್ವಂಪದದ ದುಃಖಿತ್ವಾರ್ಥತ್ವವನ್ನು ತತ್ಪದವು ಬಿಡಿಸುವದು.

ಒಂದನ್ನೊಂದು 'ನೇತಿನೇತಿ' (ಬೃ. ೨-೩-೬) ಎಂಬ (ವಾಕ್ಯದ) ಅರ್ಥವನ್ನು ತಿಳಿಸುವಂತೆ ಮಾಡುವವು.[1]

## ಅನುಭವಕ್ಕಾಗಿ ಪ್ರಸಂಖ್ಯಾನವಿಧಿ ಎಂಬುದು ಸರಿಯಲ್ಲ

**ಏವಂ ತತ್ತ್ವಮಸೀತ್ಯಸ್ಯ ಗಮ್ಯಮಾನೇ ಫಲೇ ಕಥಮ್ ।**
**ಅಪ್ರಮಾಣತ್ವಮಸ್ಯೋಕ್ತ್ವಾ[2] ಕ್ರಿಯಾಪೇಕ್ಷತ್ವಮುಚ್ಯತೇ ॥ ೧೮೯ ॥**

೧೮೯. ಹೀಗೆ 'ತತ್ತ್ವಮಸಿ' ಎಂಬುದಕ್ಕೆ ಫಲವು ಕಾಣುತ್ತಿರುವಲ್ಲಿ ಇದು ಅಪ್ರಮಾಣವೆಂದು ಹೇಳಿ ಇದಕ್ಕೆ ಕ್ರಿಯೆಯ ಅಪೇಕ್ಷೆಯಿರುವದೆಂದು ಹೇಗೆ ಹೇಳುತ್ತೀರಿ ?[3]

**ತಸ್ಮಾದಾದ್ಯನ್ತಮಧ್ಯೇಷು ಕುರ್ವಿತ್ಯೇತತ್ ವಿರೋಧ್ಯತಃ ।**
**ನ ಕಲ್ಪ್ಯಮ[4] ಶ್ರುತತ್ವಾಚ್ಚ ಶ್ರುತತ್ಯಾಗೋಽಪ್ಯನರ್ಥತಃ ॥ ೧೯೦ ॥**

೧೯೦. ಆದ್ದರಿಂದ ಮೊದಲು, ಕೊನೆಯಲ್ಲಿ ಅಥವಾ ನಡುವೆ- ಇದಕ್ಕೆ ವಿರೋಧಿಯಾದ ಮಾಡು ಎಂಬ ಅರ್ಥವನ್ನು ಕಲ್ಪಿಸತಕ್ಕದ್ದಲ್ಲ.[5] ಶ್ರುತಿಯಲ್ಲಿ

---

1. ತತ್ಪದತ್ವಂಪದಗಳೆರಡೂ ಸೇರಿದ್ದರಿಂದ ಎರಡರರ್ಥವೂ ಬರಲಿ ಎಂಬ ಶಂಕೆಗೆ ಕಾರಣವಿಲ್ಲ; ಏಕೆಂದರೆ ಈ ಎರಡೂ ಒಂದು ವಸ್ತುವಿನಲ್ಲಿರುವದು ವಿರುದ್ಧ ವಾಗಿದೆ. ಆದ್ದರಿಂದ ನಿರ್ವಿಶೇಷಚಿನ್ಮಾತ್ರವೇ ವಾಕ್ಯಾರ್ಥವಾಗುವದು ಎಂದು ಭಾವ.

2. 'ಉಕ್ತಾಂ' ಎಂಬ ಮೈ॥ ಪಾಠವು ಅಚ್ಚಿನ ತಪ್ಪು.

3. ವಾಕ್ಯವು ಅನುಭವರೂಪವಾದ ಫಲವನ್ನುಂಟುಮಾಡುತ್ತದೆ, ಜ್ಞಾನದಿಂದ ಅನರ್ಥನಿವೃತ್ತಿರೂಪವಾದ ಫಲವೂ ತೋರುತ್ತಿದೆ. ಹೀಗಿರುವಲ್ಲಿ ವಾಕ್ಯಕ್ಕೆ ಅಪ್ರಾಮಾಣ್ಯ ವನ್ನು ಹೇಳುವದು ಹೇಗೆ? ನಿಷ್ಪ್ರಯೋಜನವಾದ ಕ್ರಿಯೆಯನ್ನು ಕಲ್ಪಿಸುವದಾದರೂ ಏತಕ್ಕೆ?

4. 'ಕಲ್ಪ್ಯಮೋ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

5. 'ತತ್ತ್ವಮಸಿ' ವಾಕ್ಯಕ್ಕೆ ಜ್ಞಾನವುಂಟಾಗುವದೆಂದು ನೀವೇ ಒಪ್ಪುವದರಿಂದ ಮೊದಲು ಜ್ಞಾನಕ್ಕಾಗಿ ವಿಧಿಯು ಬೇಕಿಲ್ಲ. 'ನಡುವೆ ಅಜ್ಞಾನದಿಂದ ವಾಕ್ಯಜನ್ಯಜ್ಞಾನವು ಬಾಧಿತವಾಗುತ್ತದೆ ಎಂದು ಹೇಳುತ್ತೀರಿ ; ಅದು ಅಯುಕ್ತವೆಂದು ನಾವು ತೋರಿಸಿದೇವೆ. ಆದ್ದರಿಂದ ಆಗಲೂ ವಿಧಿ ಬೇಕಿಲ್ಲ. ಕೊನೆಯಲ್ಲಿ ಅನುಭವವಾದಮೇಲೆ ವಿಧಿಯನ್ನು ನೀವೂ ಒಪ್ಪುವದಿಲ್ಲ. ಆದ್ದರಿಂದ ಶ್ರುತಜ್ಞಾನಕ್ಕೆ ವಿರುದ್ಧವಾಗಿ ವಿಧಿಯನ್ನು ಕಲ್ಪಿಸಬಾರದು.

(ಹೇಳದೆ) ಇರುವದರಿಂದಲೂ[1] (ಅದನ್ನು ಕಲ್ಪಿಸತಕ್ಕದ್ದಲ್ಲ) ; ಶ್ರುತಿಯಲ್ಲಿ ಹೇಳಿದ್ದನ್ನು ಬಿಡುವದೂ ನಿಷ್ಪ್ರಯೋಜನವು.[2]

**ಯಥಾಸುಭೂಯತೇ ತೃಪ್ತಿರ್ಭುಜೇರ್ವಾಕ್ಯಾನ್ನ ಗಮ್ಯತೇ ।**
**ವಾಕ್ಯಸ್ಯ ವಿವೃತಿ[3]ಸ್ತದ್ವದ್ಗೋಶಕೃತ್ಪಾಯಸೀಕ್ರಿಯಾ ॥ ೧೯೧ ॥**

**ಸತ್ಯಮೇವಮನಾತ್ಮಾರ್ಥವಾಕ್ಯಾತ್ ಪಾರೋಕ್ಷ್ಯಬೋಧನಮ್ ।**
**ಪ್ರತ್ಯಗಾತ್ಮನಿ ನ ತ್ವೇವಂ ಸಙ್ಖ್ಯಾಪ್ರಾಪ್ತಿವದಬ್ರುವಮ್[4] ॥ ೧೯೨ ॥**

೧೯೧–೧೯೨. (ಆಕ್ಷೇಪ); ಊಟದಿಂದ ಹೇಗೆ ತೃಪ್ತಿಯಾಗುತ್ತದೆಯೋ (ವಾಕ್ಯದಿಂದ ಅನುಭವಕ್ಕೆ ಬರುವದಿಲ್ಲವೋ,[5] ವಾಕ್ಯದ ವಿವರಣೆಯೂ ಹಾಗೆಯೇ ಸಗಣಿಯಿಂದ ಪಾಯಸವನ್ನು ಮಾಡುವ (ಪ್ರಯತ್ನವಾಗುತ್ತದೆ).[6] (ಸಮಾಧಾನ): ನಿಜ. ಅನಾತ್ಮವನ್ನು ಹೇಳುವ ವಾಕ್ಯದಿಂದ ಹೀಗೆ ಪರೋಕ್ಷ ಜ್ಞಾನವೇ ಆಗುತ್ತದೆ. ಆದರೆ ಪ್ರತ್ಯಗಾತ್ಮನಲ್ಲಿ ಹೀಗಲ್ಲ; (ಹತ್ತನೆಯವನೆಂಬ) ಸಂಖ್ಯಾಪ್ರಾಪ್ತಿಯಂತೆ (ಎಂದು ಹಿಂದೆ)[7] ಹೇಳಿದೇನೆ.

---

1. ವಿಧಿಯೂ ಶ್ರುತಿಯಲ್ಲಿಲ್ಲ; ನಾವೇ ಕಲ್ಪಿಸಿದ್ದು ಅತೀಂದ್ರಿಯವಾದದ್ದರ ಜ್ಞಾನವನ್ನುಂಟುಮಾಡಲಾರದು.

2. 'ನೀನು ಸದ್ಬ್ರಹ್ಮವಾಗಿರುವೆ' ಎಂದು ಶ್ರುತಿಯಲ್ಲಿ ಹೇಳಿದೆ; ಅದನ್ನು ಕೈಬಿಡುವದು ನಿಷ್ಪ್ರಯೋಜನ, ಮತ್ತು ಅನರ್ಥಕರ.

3. 'ವಿವೃತೀಃ' ಎಂಬುದು ಮೈ॥ ಪಾಠ; ಇಲ್ಲಿ ಕೊಟ್ಟಿರುವದು ಬೋಧನಿಧಿಯ ಪಾಠ.

4. 'ಅಧ್ರುವಮ್' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

5. ಊಟದಿಂದಲೇ ಅಪರೋಕ್ಷವಾದ ತೃಪ್ತಿಯ ಅನುಭವವಾಗುವಂತೆ ಊಟದ ವಾಕ್ಯದಿಂದ ಆಗುವದಿಲ್ಲ.

6. ಸಗಣಿಯಿಂದ ಪಾಯಸವು ಆಗದಿರುವಂತೆ ತತ್ತ್ವಮಸಿವಾಕ್ಯವನ್ನು ವಿವರಿಸಿದ ಮಾತ್ರದಿಂದ ಅದ್ವೈತಾನುಭವವಾಗಲಾರದು– ಎಂದು ಅಭಿಪ್ರಾಯ. ವಾಕ್ಯವು ಅನುಭವ ಹೇತುವಲ್ಲ ಎಂಬುದು ಪೂರ್ವಪಕ್ಷಿಯ ಭಾವ.

7. ವಾಕ್ಯದಿಂದ ವಸ್ತುವಿನ ಅನುಭವವುಂಟಾಗುವದಿಲ್ಲವೆಂಬುದು ಅನಾತ್ಮವಾಕ್ಯಗಳಿಗೆ ಹೊಂದುವದು ; ತನ್ನ ವಿಷಯದಲ್ಲಿ ಅಪರೋಕ್ಷಾನುಭವವಾಗುವದಕ್ಕೆ ದಶಮನ ದೃಷ್ಟಾಂತವನ್ನು ಹಿಂದೆ ೧೮೯ನೆಯ ಶ್ಲೋಕದಲ್ಲಿ ಕೊಟ್ಟಿರುತ್ತದೆ.

**ಸ್ವಯಂವೇದ್ಯತ್ವ[1] ಪರ್ಯಾಯಃ ಸ್ವಪ್ರಮಾಣಕ ಇಷ್ಯತಾಮ್ ।**
**ನಿವೃತ್ತಾವಹಮಃ[2] ಸಿದ್ಧಂ ಸ್ವಾತ್ಮತೋಽ[3]ನುಭವಶ್ಚ ನಃ ॥ ೧೯೩ ॥**

೧೯೩. ಆತ್ಮನು ಸ್ವಪ್ರಮಾಣಕನೆಂಬುದು ಸ್ವಯಂವೇದ್ಯನೆಂಬುದಕ್ಕೆ ಪರ್ಯಾಯವೆಂದು ಒಪ್ಪಬೇಕು.[4] ಅಹಂಕಾರವು ನಿವೃತ್ತವಾಗಲು, ತನ್ನ ಸ್ವರೂಪವಾಗಿರುವದರಿಂದ ಅನುಭವವೂ ನಮಗೆ ಸಿದ್ಧವಾಗುತ್ತದೆ.[5]

**ಬುದ್ಧೀನಾಂ ವಿಷಯೋ ದುಃಖಂ ತಾ[6] ಯಸ್ಯ ವಿಷಯಾ ಮತಾಃ ।**
**ಕುತೋಽಸ್ಯ ದುಃಖಸಂಬನ್ಧೋ ದೃಶೇಃ ಸ್ಯಾತ್ ಪ್ರತ್ಯಗಾತ್ಮನಃ ॥೧೯೪**

೧೯೪. ದುಃಖವು ಬುದ್ಧಿ(ವೃತ್ತಿ)ಗಳಿಗೆ ವಿಷಯವು; ಅವು ಯಾವನಿಗೆ ವಿಷಯವೆಂದು ಅಭಿಮತವಾಗಿರುತ್ತದೆಯೋ ಆ ಪ್ರತ್ಯಗಾತ್ಮನಾದ ಸಾಕ್ಷಿಗೆ ದುಃಖಸಂಬಂಧವು ಹೇಗೆ ಇದ್ದೀತು ?[7]

**ದೃಶಿರೇವಾನುಭೂಯೇತ ಸ್ವೇನೈವಾನುಭವಾತ್ಮನಾ ।**
**ತದಾಭಾಸತಯಾ ಜನ್ಮ ಧಿಯೋಽಸ್ಯಾನುಭವಃ ಸ್ಮೃತಃ ॥ ೧೯೫ ॥**

---

1. 'ಸ್ವಸಂವೇದ್ಯತ್ವ' ಬೋ. ನಿ.

2. 'ಇದಮಃ' ಬೋ. ನಿ.

3. 'ಸ್ವಾತ್ಮನಃ' ಎಂದೇ ವ್ಯಾಖ್ಯಾನದಲ್ಲಿ ಒಪ್ಪಿರುವ ಪಾಠ; 'ಸ್ವಾತ್ಮತಃ' ಎಂಬುದರಲ್ಲಿ ಹೆಚ್ಚಿನ ಸ್ವಾರಸ್ಯವಿದೆ.

4. ತನ್ನನ್ನು ತಾನು ಅರಿಯುವನೆಂಬ ಅರ್ಥವಿಲ್ಲ; ಅನ್ಯನಿರಪೇಕ್ಷವಾಗಿ ಸ್ವಯಂಪ್ರಕಾಶನು ಎಂದರ್ಥ.

5. ಆತ್ಮನನ್ನು ಅರಿಯುವದಕ್ಕೆ ಮತ್ತೊಂದು ಪ್ರಮಾಣವು ಬೇಡವೆನ್ನುವದೇಕೆಂದರೆ ಮಿಕ್ಕ ವಸ್ತುಗಳು ಅಚೇತನವಾಗಿರುವದರಿಂದ ಅವಕ್ಕೆ ಅನುಭವದ ಸಂಬಂಧದಿಂದ ಜ್ಞಾತತ್ವವೆಂಬ ಪ್ರಸಿದ್ಧಿಯಾಗಬೇಕು; ಆದರೆ ಆತ್ಮನು ಅನುಭವರೂಪನೇ ಆಗಿರುವದರಿಂದ ಈ ಸಂಬಂಧದ ಆವಶ್ಯಕತೆಯಿಲ್ಲ.

6. 'ನೋ' ಎಂಬ ವ್ಯಾ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವು ಮೇಲು.

7. ದುಃಖವು ಬುದ್ಧಿಗಿಂತ ಹೊರಗಿದೆ; ಬುದ್ಧಿಯ ವೃತ್ತಿಗಳೇ ಆತ್ಮನಿಗೆ ವಿಷಯವಾಗಿರುವದರಿಂದ ಆತ್ಮನ ಧರ್ಮವಲ್ಲದಿರುವಾಗ ಅವಕ್ಕೂ ಹೊರಚ್ಚಾಗಿರುವ ದುಃಖವು ಹೇಗೆ ಆತ್ಮಧರ್ಮವಾದೀತು ?

೧೯೫. ಸಾಕ್ಷಿಯೇ ತನ್ನದೇ ಆಗಿರುವ ಅನುಭವರೂಪದಿಂದ ಅನುಭೂತವಾಗುತ್ತದೆ. ಅದರ ಆಭಾಸದಿಂದೊಡಗೂಡಿ ಉಂಟಾಗುವದೇ ಬುದ್ಧಿಗೆ ಆಗುವ ಇವನ ಅನುಭವವೆನಿಸುತ್ತದೆ.[1]

**ಅಶನಾಯಾದಿವಿನಿರ್ಮುಕ್ತಃ ಸಿದ್ಧೋ ಮೋಕ್ಷಸ್ತ್ವಮೇವ ಸಃ ।**
**ಶ್ರೋತವ್ಯಾದಿ ತವೇತ್ಯೇತದ್ ವಿರುದ್ಧಂ ಕಥಮುಚ್ಯತೇ ॥ ೧೯೬ ॥**

೧೯೬. ಹಸಿವು ಮುಂತಾದವುಗಳಿಲ್ಲದ ಸಿದ್ಧವಾಗಿರುವ ಮೋಕ್ಷವೇ ನೀನು, ನಿನಗೆ ಶ್ರವಣವೇ ಮುಂತಾದದ್ದು ಉಂಟು – ಎಂಬೀ ವಿರುದ್ಧ (ವಿಷಯವನ್ನು) ಹೇಳುವದು ಹೇಗೆ?[2]

**ಸೇತ್ಸ್ಯತೀತ್ಯೇವ ಚೇತ್ ತತ್ಸ್ಯಾಚ್ಛ್ರವಣಾದಿ ತದಾ[3] ಭವೇತ್ ।**
**ಮೋಕ್ಷಸ್ಯಾನಿತ್ಯತೈವಂ ಸ್ಯಾತ್ ವಿರೋಧ್ಯೇವಾನ್ಯಥಾ ವಚಃ[4] ॥೧೯೭॥**

೧೯೭. (ಮೋಕ್ಷವು ಮುಂದೆ) ಸಿದ್ಧವಾಗುವದು ಎಂದೇ ಅದನ್ನು ಹೇಳಿದ್ದರೆ, ಆಗ ಶ್ರವಣಾದಿಗಳು ಆಗಬಹುದು[5]. (ಆದರೆ) ಹಾಗಾದರೆ ಮೋಕ್ಷವು ಅನಿತ್ಯವೆಂದಾಗುವದು ; ಇಲ್ಲದಿದ್ದರೆ ವಚನವು ವಿರುದ್ಧವೇ ಆಗುವದು[6].

---

1. ಆತ್ಮನ ಅನುಭವವೆಂಬುದು ಆತ್ಮಸ್ವರೂಪವೇ ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಇದನ್ನು ಅರಿತುಕೊಂಡಾಗ ಬುದ್ಧಿಯಲ್ಲಿ ಆಗುವ ಆಭಾಸಸಹಿತವಿಕಾರವೂ ಆತ್ಮಾನುಭವವೆಂದು ವ್ಯವಹರಿಸಲ್ಪಡುತ್ತದೆ. ಆದರೆ ಈ ಅನುಭವವೂ ಅನುಭವರೂಪನಾದ ಆತ್ಮನಿಗೆ ವಿಷಯವೇ ಆಗಿದೆ ಎಂಬುದನ್ನು ಮರೆಯಬಾರದು.

2. ವಾಕ್ಯದಿಂದ ಅನುಭವವೇ ಆಗುವದೆಂಬುದನ್ನು ತೋರಿಸಿದ್ದಾಯಿತು. ಆದರೆ ವಾಕ್ಯಾರ್ಥಜ್ಞಾನಿಗೆ ಹೊಸದಾಗಿ ಶ್ರವಣಾದಿಗಳಿಂದ ಅನುಭವವಾಗುವದೆನ್ನುವ ಪ್ರಸಂಖ್ಯಾನಾದಿವಾದಿಗಳ ಮತವು ತನಗೆ ತಾನೇ ವಿರುದ್ಧವೆಂಬುದನ್ನು ಇಲ್ಲಿ ತಿಳಿಸಿದೆ.

3. 'ಶ್ರವಣಾಧೀನತಾ ಭವೇತ್' ಎಂಬ ಬೋಧನಿಧಿಯ ಪಾಠಕ್ಕಿಂತ ಇದೇ ಮೇಲು.

4. ವಿರೋಧೇ ನಾನ್ಯಥಾ ವಚಃ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವು ಮೇಲು.

5. ಏಕೆಂದರೆ ಶ್ರವಣಾದಿಗಳನ್ನು ಮಾಡಿದ ಬಳಿಕ ಮೋಕ್ಷವು ಬರತಕ್ಕದ್ದಾಗಿರುವದು. ಬೋಧನಿಧಿಯ ಪಾಠದಲ್ಲಿ 'ಶ್ರವಣಕ್ಕೆ ಅಧೀನವಾಗಿರುವದು' ಎಂದರ್ಥ.

6. ಹೊಸದಾಗಿ ಹುಟ್ಟುವದಾದರೆ ಮೋಕ್ಷವು ಅನಿತ್ಯವಾಗುವದು ; ಹಾಗಿಲ್ಲದೆ ಈಗಲೇ ಇದ್ದೇ ಇರುವದಾದರೆ ಮೋಕ್ಷಕ್ಕಾಗಿ ಶ್ರವಣಾದಿಗಳನ್ನು ಹೇಳುವ ವಚನವು ವ್ಯಾಹತವಾಗುವದು.

**ಶ್ರೋತೃಶ್ರೋತವ್ಯಯೋ ರ್ಭೇದೋ ಯದೀಷ್ಟಃ ಸ್ಯಾದ್ಭವೇದಿದಮ್ ।**
**ಇಷ್ಟಾರ್ಥಕೋಪ ಏವಂ ಸ್ಯಾನ್ನ ಯುಕ್ತಂ ಸರ್ವಥಾ ವಚಃ ॥ ೧೯೮ ॥**
**ಸಿದ್ಧೋ ಮೋಕ್ಷೋಽಹಮಿತ್ಯೇವ[1] ಜ್ಞಾತ್ವಾತ್ಮಾನಂ ಭವೇದ್ಯದಿ ।**
**ಚಿಕೀರ್ಷುರ್ಯಃ ಸ ಮೂಢಾತ್ಮಾ ಶಾಸ್ತ್ರಂ ಚೋದ್ಘಾಟಯತ್ಯಪಿ ॥**
**ನ ಹಿ ಸಿದ್ಧಸ್ಯ ಕರ್ತವ್ಯಂ ಸಕಾರ್ಯಸ್ಯ ನ ಸಿದ್ಧತಾ ।**
**ಉಭಯಾಲಮ್ಬನಂ ಕುರ್ವನ್ನಾತ್ಮಾನಂ ವಞ್ಚಯತ್ಯಪಿ[2] ॥ ೨೦೦ ॥**

೧೯೮–೨೦೦. ಶ್ರವಣಮಾಡುವವನು, ಶ್ರವಣಮಾಡಿಸಿಕೊಳ್ಳುವವನು –(ಇಬ್ಬರಿಗೂ) ಭೇದವು ಇಷ್ಟವಾದರೆ ಇದು[3] ಆಗಬಹುದು; ಹಾಗಾದರೆ ನಿಮ್ಮ ಸಿದ್ಧಾಂತಕ್ಕೆ ವಿರೋಧವಾಗುವದು.[4] ವಚನವು ಸರ್ವಥಾ ಯುಕ್ತವಾಗದು.[5] ನಾನು ಸಿದ್ಧವಾಗಿರುವ ಮೋಕ್ಷಸ್ವರೂಪನು ಎಂದೇ ತನ್ನನ್ನು ತಿಳಿದುಕೊಂಡು ಯಾವನು (ಸಾಧನವನ್ನು) ಮಾಡಲಿಚ್ಛಿಸುವವನಾಗಿರುವನೋ ಅವನು ಮೂಢಬುದ್ಧಿಯೂ ಆಗಿರುತ್ತಾನೆ, ಶಾಸ್ತ್ರವನ್ನು ತೆಗೆಯುತ್ತಲೂ ಇರುತ್ತಾನೆ.[6] ಏಕೆಂದರೆ ಸಿದ್ಧವಾದರೆ ಕರ್ತವ್ಯವಿಲ್ಲ, ಕರ್ತವ್ಯವಿರುವದು ಸಿದ್ಧವಲ್ಲ[7]; ಈ ಎರಡನ್ನೂ ಅವಲಂಬಿಸಿ (ಅವನು) ತನ್ನನ್ನು (ತಾನೇ) ವಂಚಿಸಿಕೊಳ್ಳುತ್ತಲೂ ಇರುತ್ತಾನೆ.[8]

---

1. 'ಏವಂ' ಬೋ. ನಿ.

2. 'ವಞ್ಚಯತ್ಯಸೌ' ಬೋ. ನಿ.

3. ಶ್ರವಣಾದಿಗಳನ್ನು ವಾಕ್ಯಜ್ಞಾನವಾದ ಬಳಿಕವೂ ವಿಧಿಸಿವೆ ಎಂಬುದು.

4. ಏಕೆಂದರೆ ಮೋಕ್ಷವು ಸಿದ್ಧವಾಗಿದೆ, ಶ್ರೋತವ್ಯನಾದ ಪರಮಾತ್ಮನೂ ಶ್ರೋತೃವಾದ ಜೀವನೂ ಬೇರೆಬೇರೆಯಲ್ಲ ಎಂಬುದೇ ಪ್ರಸಂಖ್ಯಾನವಾದಿಗಳ ಸಿದ್ಧಾಂತ.

5. ಪ್ರಸಂಖ್ಯಾನವಾದದಲ್ಲಿ ಪರಮಾತ್ಮನು ಶ್ರೋತೃವಿಗಿಂತ ಭಿನ್ನನಾದರೂ ಅಭಿನ್ನನಾದರೂ ಅಯುಕ್ತವಾದದ್ದನ್ನೇ ಹೇಳಿದಂತೆ ಆಗುವದು. ಭಿನ್ನನಾದರೆ ಅವನೇ ನೀನು ಎಂಬುದು ಅಯುಕ್ತ; ಅಭಿನ್ನನಾದರೆ ಮುಕ್ತಿಯು ಹೊಸದಾಗಿ ಸಿದ್ಧವಾಗಬೇಕಾಗಿರುವದಿಲ್ಲ.

6. ಊರಿಗೆ ಹೋದವನೇ ಊರಿಗೆ ಹೋಗಬೇಕೆಂದು ಪ್ರಯತ್ನಿಸುವಂತೆ ಅವನು ಸಾಧನಕ್ಕೆ ಹವಣಿಸುವದರಿಂದ ಮೂಢನು. ಮತ್ತು ತನಗೆ ತಿಳಿಯದ ಶಾಸ್ತ್ರಾರ್ಥವನ್ನು ಮತ್ತೊಬ್ಬರಿಗೆ ಹೇಳುವವನೂ ಆಗಿರುತ್ತಾನೆ. ಏಕೆಂದರೆ ಶಾಸ್ತ್ರವು ವ್ಯಾಹತವಾದದ್ದನ್ನು ಹೇಳಲಾರದು.

7. ನಾನು ಮುಕ್ತನು ಎಂದು ಅರಿತಿರುವವನಿಗೆ ಪ್ರಸಂಖ್ಯಾನವಿರುವಹಾಗಿಲ್ಲ; ಪ್ರಸಂಖ್ಯಾನಾದಿಗಳು ಇರುವದಾದರೆ ಸಿದ್ಧ ಮುಕ್ತಿಯನ್ನು ಹೇಳುವ ವಾಕ್ಯದ ಜ್ಞಾನವಿಲ್ಲ.

8. ನಾನು ಮುಕ್ತನು, ಸಾಧನೆಯನ್ನು ಮಾಡುತ್ತೇನೆ– ಎಂಬವನು ಆತ್ಮವಂಚಕನು; ಏಕೆಂದರೆ ಈ ಹೇಳಿಕೆಯು ತನ್ನ ಅನುಭವಕ್ಕೇ ವಿರುದ್ಧ.

**ಸಿದ್ಧೋ ಮೋಕ್ಷಸ್ತ್ವಮಿತ್യೇತದ್ವಸ್ತುಮಾತ್ರಂ ಪ್ರದರ್ಶ್ಯತೇ |**
**ಶ್ರೋತುಸ್ತಥಾತ್ವವಿಜ್ಞಾನೇ ಪ್ರವೃತ್ತಿಃ ಸ್ಯಾತ್ ಕಥಂ ನ್ವಿತಿ[1] || ೨೦೧ ||**

**ಕರ್ತಾ ದುಃಖ್ಯಹಮಸ್ಮೀತಿ ಪ್ರತ್ಯಕ್ಷೇಣಾನುಭೂಯತೇ |**
**ಕರ್ತಾ ದುಃಖೀ ಚ ಮಾ ಭೂವಮಿತಿ ಯತ್ನೋ ಭವೇತ್ತತಃ || ೨೦೨ ||**

**ತದ್ವಿಜ್ಞಾನಾಯ ಯುಕ್ತ್ಯಾದಿ ಕರ್ತವ್ಯಂ ಶ್ರುತಿರಬ್ರವೀತ್ |**
**ಕರ್ತೃತ್ವಾದ್ಯನುವಾದೇನ ಸಿದ್ಧತ್ವಾನುಭವಾಯ ತು || ೨೦೩ ||**

೨೦೧-೨೦೩. (ಪ್ರಸಂಖ್ಯಾನವಾದಿ): ಸಿದ್ಧವಾದ ಮೋಕ್ಷವು ನೀನು ಎಂದು ವಸ್ತುಮಾತ್ರವನ್ನು (ಶ್ರುತಿಯಲ್ಲಿ) ತಿಳಿಸಿರುತ್ತದೆ.[2] ಶ್ರವಣಮಾಡುವವನಿಗೆ ಹಾಗಿರುವನೆಂಬುದನ್ನು ಅರಿತುಕೊಳ್ಳುವದರಲ್ಲಿ ಹೇಗಾದರೂ ಪ್ರಯತ್ನವಾಗಲಿ ಎಂದೇ (ಈ ಉಪದೇಶವನ್ನು ಮಾಡಿದೆ). ನಾನು ಕರ್ತೃವೂ ದುಃಖಿಯೂ ಆಗಿರುವೆನು ಎಂದು ಪ್ರತ್ಯಕ್ಷವಾಗಿ ಅನುಭವದಲ್ಲಿರುತ್ತದೆ; ಆದ್ದರಿಂದ ಕರ್ತೃವೂ ದುಃಖಿಯೂ ಆಗದೆ ಇರಬೇಕೆಂದು ಪ್ರಯತ್ನವನ್ನು ಮಾಡಬಹುದಾಗಿದೆ. ಆ ಜ್ಞಾನವಾಗುವದಕ್ಕಾಗಿ ಯುಕ್ತಿಯೇ ಮುಂತಾದ (ಸಾಧನವನ್ನು) ಮಾಡಬೇಕೆಂದು ಶ್ರುತಿಯಲ್ಲಿ ಕರ್ತೃತ್ವವೇ ಮುಂತಾದದ್ದನ್ನು ಅನುವಾದಮಾಡಿಕೊಂಡು (ಮೋಕ್ಷತ್ವವು) ಸಿದ್ಧವಾಗಿರುವದೆಂಬದನ್ನು ಅನುಭವಕ್ಕೆ ತಂದುಕೊಳ್ಳುವದಕ್ಕಾಗಿ ಹೇಳಿರುತ್ತದೆ.[3]

**ನಿರ್ದುಃಖೋ ನಿಷ್ಕ್ರಿಯೋಽಕಾಮಃ ಸಿದ್ಧೋ ಮೋಕ್ಷೋಽಹಮಿತ್ಯಪಿ**
**ಗೃಹೀತ್ವೈವ ವಿರುದ್ಧಾರ್ಥಮಾದದ್ಯಾತ್[4] ಕಥಮೇವ ಸಃ || ೨೦೪ ||**

---

1. 'ಕಥಂ ತ್ವಿತಿ' ಮೈ||

2. ಇಷ್ಟು ತಿಳಿಸಿದ ಮಾತ್ರದಿಂದಲೇ ಜ್ಞಾನವಾಗಬೇಕಾದದ್ದೇನೂ ಇಲ್ಲ.

3. ಪ್ರತ್ಯಕ್ಷವಾಗಿ ನಾನು ದುಃಖಿ ಎಂಬ ಅನುಭವವಿರುವದರಿಂದ 'ತತ್ತ್ವಮಸಿ' ಎಂಬ ವಾಕ್ಯವು ಕೂಡಲೆ ಅನುಭವವನ್ನು ಉಂಟುಮಾಡುವದಕ್ಕೆ ಹೇಳಿದ್ದಲ್ಲ; ಮುಂದೆ ಪ್ರಸಂಖ್ಯಾನದಿಂದ ಅರಿತುಕೊಳ್ಳಬಹುದಾದ್ದನ್ನು ಈಗಲೇ ಹೇಳಿದೆ; ಅಷ್ಟೆ. ಆದ್ದರಿಂದ ಇಲ್ಲಿ ಯಾವ ವಿರೋಧವೂ ಇಲ್ಲ ಎಂದು ಪೂರ್ವಪಕ್ಷಿಯ ಭಾವ. ಇದು ಹಿಂದೆ ೧೭೭ನೆಯ ಶ್ಲೋಕದಲ್ಲಿ ಹೇಳಿದ್ದರ ವಿವರವೇ ಆಗಿದೆ.

4. 'ಆದಧ್ಯಾತ್' ಎಂಬ ಮೈ|| ಪಾಠವು ಅಚ್ಚಿನ ತಪ್ಪು.

೨೦೪. (ಸಿದ್ಧಾಂತಿ): ನಾನು ನಿರ್ದುಃಖನು, ನಿಷ್ಕ್ರಿಯನು, ಕಾಮರಹಿತನು, ಸಿದ್ಧವಾದ ಮೋಕ್ಷಸ್ವರೂಪನು ಎಂದೂ ತಿಳಿದುಕೊಂಡೇ ಅದಕ್ಕೆ ವಿರುದ್ಧವಾದ ಅರ್ಥವನ್ನು ಅವನು ಹೇಗೆತಾನೆ ಸ್ವೀಕರಿಸಿಯಾನು ?[1]

## ಸಂಸಾರಿತ್ವಾನುಭವಕ್ಕೆ ಗತಿ

**ಸಕಾಮಃ ಸಕ್ರಿಯೋಽಸಿದ್ಧ ಇತಿ ಮೇಽನುಭವಃ ಕಥಮ್ ।**
**ಅತೋ ಮೇ ವಿಪರೀತಸ್ಯ ತದ್ಭವಾನ್ ವಕ್ತುಮರ್ಹತಿ ॥ ೨೦೫ ॥**

೨೦೫. (ಪ್ರಸಂಖ್ಯಾನವಾದಿ):– ನಾನು ಕಾಮಗಳುಳ್ಳವನು, ಕ್ರಿಯೆಗಳನ್ನು ಮಾಡುವವನು, ಸಿದ್ಧ(ವಾದ ಮೋಕ್ಷಸ್ವರೂಪ)ನಲ್ಲ ಎಂದು, ಇದಕ್ಕೆ ವಿರುದ್ಧಸ್ವರೂಪನಾದ ನನಗೆ ಅನುಭವ (ವಿದೆಯಲ್ಲ, ಇದು) ಹೇಗೆ ? ಅದನ್ನು ತಾವು ಹೇಳಬೇಕು.[2]

**ಇಹೈವ ಘಟತೇ ಪ್ರಶ್ನೋ ನ ಮುಕ್ತತ್ವಾನುಭೂತಯೇ ।**
**ಪ್ರಮಾಣೇನ ವಿರೋಧೀ ಯಃ ಸೋಽತ್ರಾರ್ಥಃ ಪ್ರಶ್ನಮರ್ಹತಿ ॥೨೦೬**
**ಅಹಂ ನಿರ್ಮುಕ್ತ ಇತ್ಯೇವ ಸದಸೀತ್ಯನ್ಯಮಾನಜಃ ।[3]**
**ಪ್ರತ್ಯಕ್ಷಾಭಾಸಜನ್ಯತ್ವಾದ್ದುಃಖಿತ್ವಂ ಪ್ರಶ್ನಮರ್ಹತಿ ॥ ೨೦೭ ॥**

೨೦೬–೨೦೭. ಇಲ್ಲಿಯೇ ಕೇಳತಕ್ಕದ್ದು ಹೊಂದುತ್ತದೆಯೇ ಹೊರತು ಮುಕ್ತತ್ವವನ್ನು ಅನುಭವಿಸುವ ವಿಷಯದಲ್ಲಲ್ಲ.[4] (ಏಕೆಂದರೆ) ಪ್ರಮಾಣಕ್ಕೆ ಯಾವದು ವಿರೋಧಿಯಾದ ಅರ್ಥವೋ ಅದೇ ಇಲ್ಲಿ ಪ್ರಶ್ನೆಗೆ ತಕ್ಕದ್ದು.

---

1. ಶ್ರುತಿಯು ನಾನು ನಿರ್ದುಃಖನೆಂದು ಹೇಳುತ್ತದೆಯೆಂದು ತಿಳಿದಮೇಲೆ ನಾನು ಸಾಧನವನ್ನು ಮಾಡಬೇಕು ಎಂಬ ವಿರುದ್ಧಬುದ್ಧಿಯು ಬರಲಾರದು– ಎಂಬುದು ಸಿದ್ಧಾಂತಿಯ ಅಭಿಪ್ರಾಯ. ಇದುವರೆಗೆ 'ವಾಕ್ಯವು ವಿಧಿಶೇಷವಾಗಿಲ್ಲ, ವಸ್ತುವನ್ನೇ ತಿಳಿಸುತ್ತದೆಯಾದ್ದರಿಂದ ಅಷ್ಟರಿಂದಲೇ ಅನುಭವವಾಗುತ್ತದೆ' ಎಂದು ಹೇಳಿದ್ದರ ಸಂಗ್ರಹವೇ ಇದು.

2. ವಾಕ್ಯವು ಸಿದ್ಧವಾದ ಮೋಕ್ಷಸ್ವರೂಪನು ನೀನು ಎಂದು ಹೇಳುವದೆಂದರೆ ಪ್ರತ್ಯಕ್ಷಕ್ಕೆ ಗತಿಯೇನು ?– ಎಂದು ಪ್ರಶ್ನೆ.

3. 'ಅನ್ಯಮಾನಜಃ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವೇ ಮೇಲು.

4. ನಾನು ಮುಕ್ತಿಯನ್ನು ಅನುಭವಿಸುವದಕ್ಕೆ ಏನು ಮಾಡಲಿ ?– ಎಂದು ಪ್ರಶ್ನೆಯಿಲ್ಲ.

ನಾನು ಯಾವಾಗಲೂ ಮುಕ್ತನು ಎಂದೇ 'ಸತ್ತಾಗಿರುವೆ' ಎಂಬ ಅಂತ್ಯ ಪ್ರಮಾಣದಿಂದ[1] ಉಂಟಾದ (ಜ್ಞಾನವು) ; ದುಃಖಿತ್ವವು ಪ್ರತ್ಯಕ್ಷಾಭಾಸದಿಂದುಂಟಾಗಿರುವದರಿಂದ ಪ್ರಶ್ನೆಗೆ ತಕ್ಕದ್ದಾಗಿದೆ.[2]

**ಪೃಷ್ಟಮಾಕಾಙ್ಕ್ಷಿತಂ ವಾಚ್ಯಂ ದುಃಖಾಭಾವಮಭೀಪ್ಸಿತಮ್**
**ಕಥಂ ಹೀದಂ ನಿವರ್ತೇತ ದುಃಖಂ ಸರ್ವಾತ್ಮನಾ ಮಮ ।**
**ಇತಿ ಪ್ರಶ್ನಾನುರೂಪಂ ಯದ್ ವಾಚ್ಯಂ ದುಃಖನಿವರ್ತಕಮ್ ॥೨೦೮**

೨೦೭ $\frac{1}{2}$ –೨೦೮. (ಪ್ರಸಂಖ್ಯಾನವಾದಿ): ಯಾವದನ್ನು ಕೇಳಿದೆಯೋ ಯಾವದು ಇಷ್ಟವಾದದ್ದೋ ಅದನ್ನು ಹೇಳಬೇಕು. ದುಃಖವು ಇರಬಾರದೆಂಬುದೇ ಇಷ್ಟ. ಈ ದುಃಖವು ನನಗೆ ಸಂಪೂರ್ಣವಾಗಿ ಹೇಗೆ ತೊಲಗೀತು?– ಎಂಬ ಪ್ರಶ್ನೆಗೆ ಅನುಗುಣವಾದದ್ದು ಯಾವದೋ ಅಂಥ ದುಃಖನಿವರ್ತಕ್ರವನ್ನೇ ಹೇಳಬೇಕಲ್ಲವೆ?[3]

**ಶ್ರುತೇಃ ಸ್ವಾತ್ಮನಿ ನಾಶಙ್ಕಾ ಪ್ರಾಮಾಣ್ಯೇ ಸತಿ ವಿದ್ಯತೇ ।**
**ತಸ್ಮಾದಾತ್ಮವಿಮುಕ್ತತ್ವಂ ಪ್ರತ್ಯಾಯಯತಿ ತದ್ವಚಃ ॥ ೨೦೯ ॥**
**ವಕ್ತವ್ಯಂ ತತ್ ತಥಾರ್ಥಂ ಸ್ಯಾದ್ವಿರೋಧೇಽಸತಿ ಕೇನಚಿತ್ ॥೨೦೯ $\frac{1}{2}$ ॥**

---

1. ನೀನು ಸದ್ಬ್ರಹ್ಮವಾಗಿರುವೆ ಎಂದು ಪ್ರಮಾಣವಾದ ಶಾಸ್ತ್ರವು ಹೇಳಿದಮೇಲೆ, ನಾನು ದುಃಖಿ ಎಂಬ ಅನುಭವಕ್ಕೇನು ಗತಿ ? ಎಂದಿಷ್ಟೇ ಕೇಳಬೇಕು. ನಾನು ಸತ್ತಾಗಿರುವೆನು ಎಂಬ ಅನುಭವವುಂಟಾದಮೇಲೆ ಮತ್ತೆ ಪ್ರಮಾತೃಪ್ರಮಾಣಪ್ರಮೇಯವ್ಯವಹಾರವೇ ಇರುವದಿಲ್ಲ; ಆದ್ದರಿಂದ ವಾಕ್ಯವು ಅಂತ್ಯಪ್ರಮಾಣವು ; ಅದರಿಂದ ಜ್ಞಾನವಾದಬಳಿಕ ಪ್ರಶ್ನೆಯೇ ಹುಟ್ಟುವಹಾಗಿಲ್ಲ.

2. ಆದ್ದರಿಂದಲೇ ಅದನ್ನು ಶಾಸ್ತ್ರವು ಅನ್ವಯವ್ಯತಿರೇಕಗಳಿಂದ ಆಭಾಸವೆಂದು ತೋರಿಸಿಯೂ ಕೊಟ್ಟಿದೆ.

3. ನಾನು ಯಾರು ? ಎಂದು ಶಿಷ್ಯನು ಕೇಳುವಂತಿಲ್ಲವಾದ್ದರಿಂದ ನೀನು ಸದ್ಬ್ರಹ್ಮವು ಎಂಬ ಉತ್ತರವನ್ನು ಹೇಳುವಂತೆಯೂ ಇಲ್ಲ. ದುಃಖವು ಹೇಗೆ ಹೋಗುವದು?– ಎಂದರೆ ಪ್ರಸಂಖ್ಯಾನದಿಂದಾದ ಆತ್ಮಾನುಭವವುಂಟಾದರೆ ಹೋಗುವದು– ಎಂಬ ಉತ್ತರವು ಹೊಂದುತ್ತದೆ ಎಂದು ಭಾವ. ಇದನ್ನು ಸಿದ್ಧಾಂತಕ್ಕೆ ವ್ಯಾಖ್ಯಾನದಲ್ಲಿ ಹೊಂದಿಸಿರುತ್ತಾರೆ. ಆದರೆ ಇದು ಪೂರ್ವಪಕ್ಷಿಗೇ ಹೆಚ್ಚು ಹೊಂದುತ್ತದೆ ಎಂದು ನಮ್ಮ ಅಭಿಪ್ರಾಯ. ಸಿದ್ಧಾಂತದಲ್ಲಿ ದುಃಖವು ಹೋಗುವದು ಹೇಗೆ? ಎಂಬ ಪ್ರಶ್ನೆಯಿಲ್ಲ ; ಒಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದು ಹೇಗೆ?– ಎಂಬ ಪ್ರಶ್ನೆಯಿದೆ.

೨೦೯–೨೦೯½. ಶ್ರುತಿಯು ಸ್ವತಃಪ್ರಮಾಣವಾಗಿರುವದರಿಂದ ತನ್ನಲ್ಲಿ (ಯಾವ) ಆಶಂಕೆಯೂ ಇರುವದಿಲ್ಲ.[1] ಆದ್ದರಿಂದ ಆ ವಾಕ್ಯವು ಆತ್ಮನು ವಿಮುಕ್ತನೆಂಬುದನ್ನು ತಿಳಿಸುತ್ತದೆ.[2] ಆ ವಾಕ್ಯವು ಮತ್ತೆ ಯಾವದಕ್ಕೂ ವಿರೋಧವಿಲ್ಲದಿದ್ದರೆ ಯಥಾರ್ಥವೇ ಆಗುವದು.[3]

**ಇತೋಽನ್ಯೋಽನುಭವಃ ಕಶ್ಚಿದಾತ್ಮನೋ ನೋಪಪದ್ಯತೇ ।**
**ಅವಿಜ್ಞಾತಂ ವಿಜಾನತಾಂ ವಿಜ್ಞಾತಾರಮಿತಿ ಶ್ರುತೇಃ ॥ ೨೧೦ ॥**

೨೧೦. ಇದಕ್ಕಿಂತ ಬೇರೆಯ[4] ಆತ್ಮಾನುಭವವೆಂಬುದು ಯಾವದೂ ಯುಕ್ತವಾಗುವದಿಲ್ಲ.[5] "ಅರಿತವರಿಗೆ ಅರಿಯಲ್ಪಡದ್ದಾಗಿರುವದು" (ಕೇ.೨-೩) "ಅರಿಯುವಾತನನ್ನು (ಏತರಿಂದ ಅರಿತುಕೊಂಡಾನು? ಬೃ. ೨-೪-೧೪) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ.)[6]

## ಸಿದ್ಧಾಂತದಲ್ಲಿ ಸಂನ್ಯಾಸದ ವಿನಿಯೋಗ

**ತ್ವಂಪದಾರ್ಥವಿವೇಕಾಯ ಸಂನ್ಯಾಸಃ ಸರ್ವಕರ್ಮಣಾಮ್ ।**
**ಸಾಧನತ್ವಂ ವ್ರಜತ್ಯೇವ ಶಾನ್ತೋದಾನ್ತಾನುಶಾಸನಾತ್ ॥ ೨೧೧ ॥**

---

1. ಪ್ರತ್ಯಕ್ಷದಂತೆ ಶ್ರುತಿಯೂ ಪ್ರಮಾಣವಾಗಿರುತ್ತದೆ; ಆದ್ದರಿಂದ ಪ್ರತ್ಯಕ್ಷವು ತಿಳಿಸಿದ್ದರ ಮೇಲೆ ಇದೇಕೆ?– ಎಂಬ ಶಂಕೆಯು ಇರುವದಕ್ಕೆ ಹೇಗೆ ಅವಕಾಶವಿಲ್ಲವೋ ಹಾಗೆಯೇ ಶ್ರುತಿಯ ವಿಷಯದಲ್ಲಿಯೂ ಶಂಕೆಯಿರುವದಕ್ಕೆ ಅವಕಾಶವಿಲ್ಲ.

2. ಆತ್ಮನು ವಿಮುಕ್ತನೆಂಬುದನ್ನು ಶಾಸ್ತ್ರವು ತಿಳಿಸಿಯೇ ತಿಳಿಸುವದರಿಂದ ಅದಕ್ಕೆ ಅಬೋಧಕತ್ವರೂಪವಾದ ಅಪ್ರಾಮಾಣ್ಯವಿಲ್ಲವೆಂದು ೧೮೪ರಲ್ಲಿ ಹೇಳಿದೆ.

3. ಆತ್ಮನ ವಿಷಯದಲ್ಲಿ ಪ್ರತ್ಯಕ್ಷಾದಿಗಳು ತೊಡಗುವದಿಲ್ಲವಾದ್ದರಿಂದ ಅವುಗಳಿಗೆ ಇದು ವಿರುದ್ಧವೆಂಬುದೂ ಸರಿಯಲ್ಲ. ಆದ್ದರಿಂದ ವಿಪರೀತಬೋಧಕತ್ವವೂ ಇಲ್ಲ. ಹೀಗೆ ಅಜ್ಞಾನ, ಸಂಶಯ, ವಿಪರೀತಜ್ಞಾನಗಳನ್ನುಂಟುಮಾಡದೆ ಸ್ವಾರ್ಥವನ್ನು ತಿಳಿಸುವದರಿಂದ ಶ್ರುತಿಯ ಪ್ರಾಮಾಣ್ಯಕ್ಕೆ ಯಾವ ಅಡ್ಡಿಯೂ ಇಲ್ಲ– ಎಂದರ್ಥ. ಇದನ್ನು ೧೮೪ರಿಂದ ೧೮೬ರವರೆಗಿನ ಶ್ಲೋಕಗಳಲ್ಲಿ ಹೇಳಿಯೇ ಇದೆಯಾದರೂ ಇಲ್ಲಿ ವಾಕ್ಯದಿಂದ ಆಗದೆ ಇರುವ ಅನುಭವವು ಮತ್ತೊಂದಿಲ್ಲವಾದ್ದರಿಂದ ಅದಕ್ಕಾಗಿ ಪ್ರಸಂಖ್ಯಾನದ ಅಗತ್ಯವಿಲ್ಲ ಎಂಬುದನ್ನು ತಿಳಿಸುವ ಪ್ರಸಂಗದಿಂದ ಮತ್ತೆ ಹೇಳಿದೆ.

4. ವಾಕ್ಯಜ್ಞಾನಕ್ಕಿಂತ ಬೇರೆಯಾದ.

5. ಏಕೆಂದರೆ ಆತ್ಮನ ಅನುಭವವು ಉಂಟಾಗತಕ್ಕದ್ದಲ್ಲ.

6. ಆತ್ಮನನ್ನು ವಿಷಯವಾಗಿಸಿಕೊಂಡು ಅರಿಯುವದಾಗದೆಂಬುದನ್ನು ಈ ಶ್ರುತಿಗಳು ತಿಳಿಸುತ್ತವೆ.

೨೧೧. ತ್ವಂಪದಾರ್ಥವನ್ನು ವಿವೇಚಿಸುವದಕ್ಕೆ ಸರ್ವಕರ್ಮಗಳ ಸಂನ್ಯಾಸವು ಸಾಧನತ್ವವನ್ನು ಹೊಂದಿಯೇ ತೀರುತ್ತದೆ.[1] ಏಕೆಂದರೆ 'ಶಾನ್ತೋ ದಾನ್ತಃ' (ಬೃ.೪-೪-೨೩) ಎಂದು ಶಾಸ್ತ್ರವಿಧಿಯಿದೆ.[2]

**ತ್ವಮರ್ಥಂ ಪ್ರತ್ಯಗಾತ್ಮಾನಂ ಪಶ್ಯೇದಾತ್ಮಾನಮಾತ್ಮನಿ |**
**ವಾಕ್ಯಾರ್ಥಂ ತತ ಆತ್ಮಾನಂ ಸರ್ವಂ ಪಶ್ಯತಿ ಕೇವಲಮ್ || ೨೧೨ ||**
**ಸರ್ವಮಾತ್ಮೇತಿ ವಾಕ್ಯಾರ್ಥೇ ವಿಜ್ಞಾತೇಽಸ್ಯ ಪ್ರಮಾಣತಃ |**
**ಅಸತ್ತ್ವೇ ಹ್ಯನ್ಯಮಾನಸ್ಯ ವಿಧಿಸ್ತಂ ಯೋಜಯೇತ್ ಕಥಮ್ ||೨೧೩**

೨೧೨-೨೧೩. ತ್ವಂಪದದ ಅರ್ಥವಾದ ಆತ್ಮನನ್ನು ಪ್ರತ್ಯಗಾತ್ಮನೆಂದು ತನ್ನಲ್ಲಿಯೇ ಕಂಡುಕೊಳ್ಳಬೇಕು. ಆಮೇಲೆ ವಾಕ್ಯಾರ್ಥವಾದ ಸರ್ವಸ್ವರೂಪನಾದ ಅದ್ವಿತೀಯನಾದ ಆತ್ಮನನ್ನು ಕಾಣುತ್ತಾನೆ.[3] ಎಲ್ಲವೂ ಆತ್ಮನೇ ಎಂಬ ವಾಕ್ಯಾರ್ಥವನ್ನು ತಿಳಿದುಕೊಂಡ ಬಳಿಕ ಇವನಿಗೆ ಮತ್ತೆ (ಯಾವ) ಪ್ರಮಾಣವೂ ಇಲ್ಲವೆಂದಾಗಲು[4] ಅವನನ್ನು ವಿಧಿಯು ಹೇಗೆ ಕಟ್ಟುಮಾಡುವದು ?[5]

## ವಾಕ್ಯಜ್ಞಾನವಾದ ಬಳಿಕ ಯಾವ ವಿಧಿಯೂ ಇಲ್ಲ

**ತಸ್ಮಾದ್ ವಾಕ್ಯಾರ್ಥವಿಜ್ಞಾನಾನ್ನೋರ್ಧ್ವಂ ಕರ್ಮವಿಧಿರ್ಭವೇತ್ |**
**ನ ಹಿ ಬ್ರಹ್ಮಾಸ್ಮಿ ಕರ್ತೇತಿ ವಿರುದ್ಧೇ ಭವತೋ ಧಿಯೌ || ೨೧೪ ||**

---

1. ಶಾಸ್ತ್ರವಾಕ್ಯದಿಂದಲೇ ಆತ್ಮಜ್ಞಾನವಾಗುತ್ತಿರುವಲ್ಲಿ ಸಂನ್ಯಾಸವನ್ನೇಕೆ ಶಾಸ್ತ್ರದಲ್ಲಿ ವಿಧಿಸಬೇಕು ? -ಎಂಬ (೧೬ನೆಯ ಶ್ಲೋಕದ) ಆಕ್ಷೇಪಕ್ಕೆ ಸಮಾಧಾನವಿದು.

2. "ತಸ್ಮಾದೇವಂವಿಚ್ಛಾನ್ತೋ ದಾನ್ತಃ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾಽತ್ಮನ್ಯೇ ವಾತ್ಮಾನಂ ಪಶ್ಯತಿ" ಎಂಬ (ಬೃ. ೪-೪-೨೩) ವಾಕ್ಯದಲ್ಲಿ ಶಮಾದಿಗಳ ಜೊತೆಗೆ ಉಪರತಿಯನ್ನೂ ಹೇಳಿದೆ. ಇದೇ ಸಂನ್ಯಾಸವು. ಈ ಕಾಣ್ವಪಾಠದಲ್ಲಿ ವಿಧಿಯಿಲ್ಲವಾದರೂ ಮಾಧ್ಯಂದಿನಪಾಠದಲ್ಲಿ ಇದೇ ವಾಕ್ಯದಲ್ಲಿ "ಉಪರತಸ್ತಿತಿಕ್ಷುಃ ಶ್ರದ್ಧಾವಿತ್ತೋ ಭೂತ್ವಾತ್ಮನ್ಯೇವಾತ್ಮಾನಂ ಪಶ್ಯೇತ್" ಎಂದು ಪ್ರತ್ಯಕ್ಷವಾಗಿ ವಿಧಿಯಿದೆ.

3. 'ಪಶ್ಯೇತ್' ಎಂದು ಶಮಾದಿಸಹಿತಸಂನ್ಯಾಸವನ್ನು ತ್ವಂಪದಾರ್ಥವಿವೇಕಕ್ಕಾಗಿ ವಿಧಿಸಿರುವ ವಾಕ್ಯ. ಇದರ ಮುಂದಿರುವ ಸರ್ವಮಾತ್ಮಾನಂ ಪಶ್ಯತಿ (ಕಾಣ್ವ), 'ಸರ್ವಮೇನಂ ಪಶ್ಯತಿ' ಎಂಬುದು 'ಆತ್ಮನೇ ಎಲ್ಲವೂ ಎಂದು ಕಾಣುತ್ತಾನೆ' ಎಂಬ ವಾಕ್ಯಾರ್ಥಜ್ಞಾನವನ್ನು ತಿಳಿಸುವ ವಾಕ್ಯ - ಎಂದು ಭಾವ.

4. "ಆಗ ಯಾವನು ಏತರಿಂದ ಏನನ್ನು ಕಂಡಾನು ?" (ಬೃ. ೪-೫-೧೫) ಎಂಬ ಶ್ರುತಿಪ್ರಮಾಣದಿಂದ ವಾಕ್ಯಾರ್ಥಜ್ಞಾನವಾದ ಬಳಿಕ ಮತ್ತೆ ಪ್ರಮಾಣವ್ಯವಹಾರವಿರುವದಿಲ್ಲ.

5. ಕ್ರಿಯಾಕಾರಕಫಲಗಳನ್ನು ಕಾಣದೆ ಪ್ರಮಾಣಾದಿವ್ಯವಹಾರವನ್ನು ಕಾಣದವನಿಗೆ ಶಾಸ್ತ್ರವಿಧಿಯಿರದಲಾರದು ಎಂದರ್ಥ.

೨೧೪. ಆದ್ದರಿಂದ ವಾಕ್ಯಾರ್ಥವನ್ನು ಅರಿತಮೇಲೆ ಕರ್ಮವಿಧಿಯಿರಲಾರದು. 'ಬ್ರಹ್ಮವಾಗಿರುವೆನು' '(ನಾನು) ಕರ್ತೃ' ಎಂಬ (ಒಂದಕ್ಕೊಂದು) ವಿರುದ್ಧವಾದ ಬುದ್ಧಿಗಳು (ಎರಡೂ ಒಂದೇ ಕಾಲಕ್ಕೆ) ಇರಲಾರವಷ್ಟೆ ?

**ಬ್ರಹ್ಮಾಸ್ಮೀತಿ ಚ[1] ವಿದ್ಯೇಯಂ ನೈವ ಕರ್ತೇತಿ ಬಾಧ್ಯತೇ ।**
**ಸಕಾಮೋ ಬದ್ಧ ಇತ್ಯೇವಂ ಪ್ರಮಾಣಾಭಾಸಜಾತಯಾ || ೨೧೫ ||**

೨೧೫. ಮತ್ತು[2] 'ಬ್ರಹ್ಮವಾಗಿರುವೆನು' ಎಂಬ ವಿದ್ಯೆಯು ಕರ್ತೃವೆಂದೂ ಸಕಾಮನು, ಬದ್ಧನು –ಎಂಬೀ ರೀತಿಯ ಪ್ರಮಾಣಾಭಾಸದಿಂದ ಹುಟ್ಟಿರುವ (ಬುದ್ಧಿ)ಯಿಂದ[3] ಎಂದಿಗೂ ಬಾಧಿತವಾಗುವದಿಲ್ಲ.

**ಶಾಸ್ತ್ರಾದ್ ಬ್ರಹ್ಮಾಸ್ಮಿ ನಾನ್ಯೋಽಹಮಿತಿ ಬುದ್ಧಿರ್ಭವೇದ್ದೃಢಾ ।**
**ಯದಾ ಯುಕ್ತಾ ತದೈವಂಧೀ ರ್ಯಥಾ ದೇಹಾತ್ಮಧೀರಿತಿ || ೨೧೬ ||**

೨೧೬. ಶಾಸ್ತ್ರದಿಂದ "ನಾನು ಬ್ರಹ್ಮವಾಗಿರುವೆನು, ಬೇರೆ ಯಾವನೂ ಅಲ್ಲ" ಎಂಬ ಬುದ್ಧಿಯು ಯಾವಾಗ ಗಟ್ಟಿಯಾಗುತ್ತದೆಯೋ ಆಗ ಈ ರೀತಿಯಾದ ಬುದ್ಧಿಯು ದೇಹಾತ್ಮಬುದ್ಧಿಯಂತೆ ಅಯುಕ್ತವಾಗುತ್ತದೆ.[4]

## ಜ್ಞಾನಿಯೂ ಮುಮುಕ್ಷುವೂ ಮತ್ತೆ ಕರ್ತೃತ್ವವನ್ನು ಬಯಸರು

**ಸಭಯಾದಭಯಂ ಪ್ರಾಪ್ತಸ್ತದರ್ಥಂ ಯತತೇ ಚ ಯಃ ।**
**ಸ ಪುನಃ ಸಭಯಂ ಗನ್ತುಂ ಸ್ವತನ್ತ್ರಶ್ಚೇನ್ನ ಹೀಚ್ಛತಿ || ೨೧೭ ||**

---

1. 'ಹಿ' ಬೋ. ನಿ.

2. ಬೋಧನಿಧಿಯ ಪಾಠದಲ್ಲಿ 'ಏಕೆಂದರೆ' ಎಂದು ಕನ್ನಡಿಸಬೇಕಾಗುವದು.

3. 'ವಿದ್ಯೇಯಂ' ಎಂಬ ಪಾಠವೇ ವ್ಯಾಖ್ಯಾನಕಾರರು ಒಪ್ಪಿರುವದು. ಆದರೆ 'ಇತ್ಯೇವಂ' ಎಂಬುದಕ್ಕೆ ಇದನ್ನು ಹೊಂದಿಸುವದಕ್ಕೆ ಆಗುವದಿಲ್ಲ; ಆದ್ದರಿಂದ 'ಧಿಯಾ' ಎಂಬ ಮಾತನ್ನು ಬೋಧನಿಧಿಯು ಅಧ್ಯಾಹಾರಮಾಡಿಕೊಂಡಿರುತ್ತಾನೆ. 'ಧೀಃ' ಎಂಬ ಮಾತು ಹಿಂದುಮುಂದಿನ ಶ್ಲೋಕಗಳಲ್ಲಿವೆ. ಇಲ್ಲಿಯೂ 'ವಿದ್ಯೇಯಂ' ಎಂಬುದರ ಬದಲು 'ಧೀಃ' ಎಂದೇ ಇಟ್ಟುಕೊಂಡು 'ಬ್ರಹ್ಮಾಸ್ಮೀತಿ ಹಿ ಧೀಶ್ಚೇಯಂ' ಎಂಬ ಪಾಠವನ್ನು ಇಟ್ಟುಕೊಂಡಿದ್ದರೆ ಯಾವ ಕ್ಲೇಶವೂ ಇರುತ್ತಿರಲಿಲ್ಲ.

4. ದೇಹವೇ ನಾನೆಂಬ ಬುದ್ಧಿಯು ದೇಹವ್ಯತಿರಿಕ್ತಾತ್ಮಜ್ಞಾನದಿಂದ ಬಾಧಿತವಾಗುವಂತೆ ನಾನು ಕರ್ತೃ, ಸಕಾಮನು, ಬದ್ಧನು –ಎಂಬೀ ಬುದ್ಧಿಯು ನಾನು ಬ್ರಹ್ಮ – ಎಂಬ ಬುದ್ಧಿಯಿಂದ ಬಾಧಿತವಾಗುತ್ತದೆ.

೨೧೭. ಭಯಯುಕ್ತವಾದ ಸ್ಥಲದಿಂದ ಅಭಯವಾದ ಸ್ಥಲಕ್ಕೆ ಹೋದವನೂ ಮತ್ತು ಆ (ಅಭಯಪ್ರಾಪ್ತಿಗಾಗಿ) ಯತ್ನಮಾಡುವವನೂ ಸ್ವತಂತ್ರನಾಗಿದ್ದರೆ ಮತ್ತೆ ಭಯಯುಕ್ತವಾದ ಸ್ಥಲಕ್ಕೆ ಹೋಗುವದಕ್ಕೆ ಇಚ್ಛಿಸಲಾರನಷ್ಟೆ ?[1]

**ಯಥೇಷ್ಟಾಚರಣಾಪ್ರಾಪ್ತಿಃ ಸಂನ್ಯಾಸಾದಿವಿಧೌ ಕುತಃ ।**
**ಪದಾರ್ಥಾಜ್ಞಾನಬದ್ಧಸ್ಯ[2] ವಾಕ್ಯಾರ್ಥಾನುಭವಾರ್ಥಿನಃ ॥ ೨೧೮ ॥**

೨೧೮. ಪದಾರ್ಥದ ಅಜ್ಞಾನದಿಂದ ಬದ್ಧನಾಗಿ ವಾಕ್ಯಾರ್ಥದ ಅನುಭವವನ್ನು ಬಯಸುತ್ತಿರುವವನಿಗೆ ಸಂನ್ಯಾಸವೇ ಮುಂತಾದವುಗಳ ವಿಧಿಯು ಇರುವಲ್ಲಿ, ಯಥೇಷ್ಟಾಚರಣೆಯು ಬಂದೊದಗುವದು ಹೇಗೆ ?[3]

**ಅತಃ ಸರ್ವಮಿದಂ ಸಿದ್ಧಂ ಯತ್ ಪ್ರಾಗಸ್ಮಾಭಿರೀರಿತಮ್ ॥೨೧೮-೧ ॥**
**ಯೋ ಹಿ ಯಸ್ಮಾದ್[4] ವಿರಕ್ತಃ ಸ್ಯಾನ್ನಾಸೌ ತಸ್ಮೈ ಪ್ರವರ್ತತೇ ।**
**ಲೋಕತ್ರಯಾದ್ವಿರಕ್ತತ್ವಾನ್ಮುಮುಕ್ಷುಃ ಕಿಮಿತೀಹತೇ ॥ ೨೧೯ ॥**
**ಕ್ಷುಧಯಾ ಪೀಡ್ಯಮಾನೋಽಪಿ ನ ವಿಷಂ ಹ್ಯತ್ತುಮಿಚ್ಛತಿ ।**
**ಮೃಷ್ಟಾನ್ನಧ್ವಸ್ತತೃಡ್ ಜಾನನ್ನಾಮೂಢಸ್ತಜ್ಜಿಘತ್ಸತಿ[5] ॥ ೨೨೦ ॥**

---

1. ಕರ್ತೃತ್ವಾದಿಯುಕ್ತವಾದ ಸಂಸಾರವು ಸಭಯವು, ಅಕರ್ತೃತ್ವಜ್ಞಾನದಿಂದ ಬರುವ ಮುಕ್ತಿಯು ಅಭಯವು. ಅದನ್ನು ಪಡೆದುಕೊಂಡವನು ಎಂದಿಗೂ ಮತ್ತೆ ಕರ್ತೃತ್ವವನ್ನು ಅಂಗೀಕರಿಸನು ; ಅದಕ್ಕಾಗಿ ಯತ್ನವನ್ನು ಮಾಡುತ್ತಿರುವ ಮುಮುಕ್ಷುವೂ ಅಂಗೀಕರಿಸುವದಿಲ್ಲ –ಎಂದರ್ಥ. 'ಸ್ವತಂತ್ರನಾಗಿದ್ದರೆ' ಎಂದರೆ ಮುಕ್ತನೇ ಆಗಿದ್ದರೆ ಎಂದರ್ಥ ; ಮುಮುಕ್ಷುವು ಪರತಂತ್ರನಾದರೂ ಏಕೆ ಇಚ್ಛಿಸುವದಿಲ್ಲ ಎಂಬುದನ್ನು ಮುಂದಿನ ಶ್ಲೋಕದಲ್ಲಿ ತಿಳಿಸಿದೆ.

2. 'ಪದಾರ್ಥಜ್ಞಾನಬುದ್ಧಸ್ಯ' ಎಂಬ ಮೈ॥ ಪಾಠಕ್ಕಿಂತ ಬೋಧನಿಧಿಯ ಪಾಠವು ಮೇಲು.

3. ಅಜ್ಞಾನದಿಂದ ನಾನು ಬದ್ಧನಾಗಿದ್ದೇನೆ, ಇದರಿಂದ ಮುಕ್ತನಾಗಬೇಕು ಎಂದು ತ್ವಂಪದಾರ್ಥಜ್ಞಾನಕ್ಕಾಗಿ ಯತ್ನಮಾಡುವ ಮುಮುಕ್ಷುವಿಗೆ ಈ ಸಂನ್ಯಾಸವನ್ನು ವಿಧಿಸಿದೆ ಎಂದು ೨೧೧ನೆಯ ಶ್ಲೋಕದಲ್ಲಿ ಹೇಳಿದೆ. ಇಂಥ ಮುಮುಕ್ಷುವು ಮತ್ತೆ ಶಾಸ್ತ್ರೀಯ ಕರ್ಮವನ್ನೇ ಮಾಡುವಂತಿಲ್ಲ ; ಯಥೇಚ್ಛೆಯಿಂದ ಹೇಗೆ ವರ್ತಿಸುವನು ? ಇದು ೧೨ನೆಯ ಶ್ಲೋಕದ ಪೂರ್ವಪಕ್ಷಕ್ಕೆ ಉತ್ತರ. 'ಪದಾರ್ಥಜ್ಞಾನಬುದ್ಧಸ್ಯ' ಎಂಬ ಮೈ॥ ಪಾಠದಲ್ಲಿ ಜ್ಞಾನಿಗೆ ವಿಧಿ ಎಂಬ ಅನಿಷ್ಟಾರ್ಥವಾಗುತ್ತದೆ.

4. ನೈ. ಸಿ. ೬೫ರಲ್ಲಿ 'ಯತ್ರ' ಎಂಬ ಪಾಠವಿದೆ.

5. ೨೧೯-೨೨೦- ಈ ಎರಡು ಶ್ಲೋಕಗಳೂ ಬೋಧನಿಧಿಯ ಪಾಠದಲ್ಲಿಲ್ಲ ನೈಷ್ಕರ್ಮ್ಯಸಿದ್ಧಿ ೪-೬೫, ೬೬ರಲ್ಲಿವೆ. ಇವನ್ನೂ ೨೧೮-೧ನ್ನೂ ಯಾರೋ ಸೇರಿಸಿರುವರೋ ಮೂಲದಲ್ಲಿಯೇ ಇವೂ ಇದ್ದವೋ ತಿಳಿಯದು.

೨೧೮ರ್ತಿ ೨೨೦. ಆದ್ದರಿಂದ ನಾವು ಹೇಳಿದ್ದೆಲ್ಲವೂ ಸಿದ್ಧವಾಯಿತು.[1] ಯಾವನು ಏತರಲ್ಲಿ ವಿರಕ್ತನಾಗಿರುವನೋ ಅವನು ಅದರಲ್ಲಿ ಪ್ರವೃತ್ತನಾಗುವದಿಲ್ಲ; ಮುಮುಕ್ಷುವಾದವನು ಮೂರು ಲೋಕಗಳಲ್ಲಿಯೂ ವಿರಕ್ತನಾಗಿರುವದರಿಂದ ಏತಕ್ಕೆ ತೊಡಗುವನು? ಹಸಿವಿನಿಂದ ಸಂಕಟಪಡುತ್ತಿರುವವನು ಕೂಡ ವಿಷವನ್ನು ತಿನ್ನುವದಕ್ಕೆ ಬಯಸಲಾರನಷ್ಟೆ; ಮೃಷ್ಟಾನ್ನವನ್ನುಂಡು ಹಸಿವನ್ನು ನೀಗಿಸಿಕೊಂಡವ (ಅದು ವಿಷವೆಂದು) ತಿಳಿದಿರುವವ ವಿವೇಕಿಯು ಅದನ್ನು ತಿನ್ನುವದಕ್ಕೆ ಎಂದಿಗೂ ಇಚ್ಛಿಸನು.[2]

## ಮಂಗಲ

**ವೇದಾನ್ತವಾಕ್ಯಪುಷ್ಪೇಭ್ಯೋ ಜ್ಞಾನಾಮೃತಮಧೂತ್ತಮಮ್ ।**
**ಉಜ್ಜಹಾರಾಲಿವದ್ಯೋ ನ ಸ್ತಸ್ಮೈ ಸದ್ಗುರವೇನಮಃ ॥ ೨೨೧ ॥**

೨೨೧. ವೇದಾಂತವಾಕ್ಯಗಳೆಂಬ ಪುಷ್ಪಗಳಿಂದ ಉತ್ತಮವಾದ ಜ್ಞಾನಾಮೃತಮಧುವನ್ನು ಭ್ರಮರದಂತೆ ಯಾರು ಎತ್ತಿಕೊಟ್ಟಿರುವನೋ ಅಂಥ ನಮ್ಮ ಸದ್ಗುರುವಿಗೆ ನಮಸ್ಕಾರ!



---

1. ತತ್ತ್ವಮಸಿ ಎಂಬ ವಾಕ್ಯವು ನಿತ್ಯಮುಕ್ತಸ್ಥಿತಿಯನ್ನೇ ತಿಳಿಸುತ್ತದೆ; ಬಂಧವು ಅಧ್ಯಾಸದಿಂದಲೇ ಆಗಿದೆ. ಆ ವಾಕ್ಯದಿಂದ ದಶಮವಾಕ್ಯದಂತೆ ಅಪರೋಕ್ಷಜ್ಞಾನವೇ ಆಗುತ್ತದೆ. ಪದಾರ್ಥಜ್ಞಾನವಿಲ್ಲದವನಿಗೆ ವಾಕ್ಯಜ್ಞಾನವಾಗುವದಿಲ್ಲ; ತ್ವಂಪದಾರ್ಥವಿವೇಕಕ್ಕಾಗಿ ಶಾಂತ್ಯಾದಿಸಾಧನಯುಕ್ತನಾಗಿ ಅನ್ವಯವ್ಯತಿರೇಕಗಳಿಂದ ಆತ್ಮಸ್ವರೂಪವನ್ನು ತಿಳಿದುಕೊಳ್ಳಬೇಕು. ಆ ಬಳಿಕ ಆತ್ಮನೇ ಎಲ್ಲವೂ ಎಂಬ ವಾಕ್ಯಜ್ಞಾನವಾಗುತ್ತದೆ. ಅದರಿಂದ ಕರ್ತೃತ್ವಜ್ಞಾನವು ಬಾಧಿತವಾಗುತ್ತದೆ. ವಾಕ್ಯಜ್ಞಾನವಾದವನಿಗೆ ಮತ್ತೇನೂ ಮಾಡತಕ್ಕದ್ದಿರುವದಿಲ್ಲ; ಶಾಸ್ತ್ರದಲ್ಲಿ ವಾಕ್ಯಜ್ಞಾನಿಗೆ ಪ್ರಸಂಖ್ಯಾನಾದಿಗಳನ್ನು ವಿಧಿಸಿದೆ ಎಂಬುದು ಸರಿಯಲ್ಲ- ಎಂದು ಹೇಳಿದ್ದೆಲ್ಲವೂ ಸಿದ್ಧವಾಯಿತು ಎಂದರ್ಥ. ಈ ಶ್ಲೋಕಾರ್ಥವು ಪ್ರಕರಣದ ಕೊನೆಯಲ್ಲಿದ್ದರೆ ಹೆಚ್ಚು ಒಪ್ಪುತ್ತಿತ್ತೆಂದು ನಮ್ಮ ಅಭಿಪ್ರಾಯ.

2. ಮುಮುಕ್ಷುವೇ ತೊಡಗದಿರುವಲ್ಲಿ ಜ್ಞಾನದಿಂದ ಕೃತಕೃತ್ಯನಾದವನು ವಿಘ್ನಯುಕ್ತ ಸಾಧನದಲ್ಲಿ ಮತ್ತೇಕೆ ತೊಡಗುವನು?- ಎಂದು ಅಭಿಪ್ರಾಯ.

# ತತ್ತ್ವಮಸಿಪ್ರಕರಣದ ಸಾರ

೧–೨ ಸಕಲಮನೋವೃತ್ತಿಗಳಿಗೂ ಆತ್ಮನಾಗಿರುವ ಪರಮಾತ್ಮನಿಗೂ ಉತ್ತಮ ಯುಕ್ತಿಗಳಿಂದ ವೇದವಿರುದ್ಧವಾದಗಳನ್ನು ಖಂಡಿಸಿ ವೇದಾಂತಸಿದ್ಧಾಂತವನ್ನು ರಕ್ಷಿಸಿರುವ ಪರಮಗುರುಗಳಿಗೂ ನಮಸ್ಕಾರ!

೩–೮. "ತತ್ತ್ವಮಸಿ" ಎಂಬ ಶ್ರುತಿವಾಕ್ಯವು ಪ್ರಮಾಣವಾದ್ದರಿಂದ ನಾನು ಯಾವಾಗಲೂ ಮುಕ್ತನಾಗಿರುವ ಸದ್ಬ್ರಹ್ಮವೇ ಎಂಬುದು ಸಿದ್ಧಾಂತವು. ಕರ್ತೃತ್ವವು ಪ್ರತ್ಯಕ್ಷಾಭಾಸವಾದ ಜ್ಞಾನದಿಂದ ತೋರುತ್ತದೆ, ಶಾಸ್ತ್ರವು ಲೋಕಸಿದ್ಧವಾದ ಈ ಕರ್ತೃತ್ವವನ್ನು ಅನುವಾದಮಾಡಿಕೊಂಡೇ ಕರ್ಮವನ್ನು ವಿಧಿಸುತ್ತದೆಯಾದ್ದರಿಂದ ಅದು ಕರ್ತೃತ್ವವು ಸತ್ಯವೆನ್ನುವದಕ್ಕೆ ಪ್ರಮಾಣವಲ್ಲ.

೯–೧೮. ಆದರೆ ಪ್ರಸಂಖ್ಯಾನವಾದಿಗಳು ಹೀಗೆನ್ನುತ್ತಾರೆ: ತತ್ತ್ವಮಸಿ ಎಂಬ ವಾಕ್ಯದಿಂದಲೇ ಸ್ಥಿರವಾದ ಅಪರೋಕ್ಷಜ್ಞಾನವಾಗುವದಿಲ್ಲ. ಒಂದು ಸಲ ಶ್ರವಣಮಾಡಿದ ಮಾತ್ರದಿಂದ ಜ್ಞಾನವು ದೃಢವಾಗುವದಿಲ್ಲವಾದ್ದರಿಂದಲೇ ವಾಕ್ಯಯುಕ್ತಿಗಳ ಅಭ್ಯಾಸ ರೂಪವಾದ ಪ್ರಸಂಖ್ಯಾನವನ್ನು ಶ್ರುತಿಯು ವಿಧಿಸುತ್ತದೆ. ಅಪರೋಕ್ಷಜ್ಞಾನವುಂಟಾಗುವ ವರೆಗೆ ವಿಧಿಬದ್ಧನಾಗಿಯೇ ಇರಬೇಕು; ಇಲ್ಲದಿದ್ದರೆ ಜ್ಞಾನಿಯು ಸ್ವೇಚ್ಛೆಯಿಂದ ನಡೆಯಬಹುದೆಂದಾಗುತ್ತದೆ. ವಾಕ್ಯದಿಂದುಂಟಾದ ಜ್ಞಾನವು ಪ್ರತ್ಯಕ್ಷದಿಂದಾಗಿರುವ ಜ್ಞಾನದ ಅನಾದಿಸಂಸ್ಕಾರದಿಂದ ಬಾಧಿತವಾಗುತ್ತದೆ. ಇದಲ್ಲದೆ ಶ್ರುತಿಯಿಂದ ಸಾಮಾನ್ಯ ಜ್ಞಾನವಾಗುತ್ತದೆಯೇ ಹೊರತು ವಿಶೇಷಾನುಭವವುಂಟಾಗದು. ಅದಕ್ಕೆ ಪ್ರಸಂಖ್ಯಾನವು ಬೇಕು. ಯಾರಿಗಾದರೂ ವಾಕ್ಯಶ್ರವಣಮಾತ್ರದಿಂದ ಅನುಭವವುಂಟಾದರೆ ಹಿಂದಿನ ಜನ್ಮದಲ್ಲಿ ಅವರು ಪ್ರಸಂಖ್ಯಾನವನ್ನು ಮಾಡಿರಬೇಕೆಂದು ಕಲ್ಪಿಸಬೇಕು. ಪ್ರಸಂಖ್ಯಾನವು ಬೇಕಿಲ್ಲವೆನ್ನುವವರು ಸಂನ್ಯಾಸಾಶ್ರಮವು ಶಾಸ್ತ್ರವಿಹಿತವೆಂದು ಹೇಳುವದಕ್ಕೆ ಆಗುವದಿಲ್ಲ. ಆದ್ದರಿಂದ 'ತತ್ತ್ವಮಸಿ' ಎಂದು ಹೇಳಿರುವದು ಮುಂದೆ ಆಗುವ ಅನುಭವರೂಪವಾದ ಫಲವು; ಅದಕ್ಕಾಗಿ ಪ್ರಸಂಖ್ಯಾನವನ್ನು- ಶ್ರವಣಮನನನಿದಿಧ್ಯಾಸನಗಳನ್ನು- ಮಾಡಬೇಕೆಂಬುದೇ ಶಾಸ್ತ್ರದ ಉಪದೇಶವು.

೧೯–೨೩. ಈ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಶಾಸ್ತ್ರವು ಅಧ್ಯಸ್ತವಾದ ಅನಾತ್ಮಧರ್ಮವನ್ನು ಕಳೆಯುವವರಲ್ಲಿಯೇ ಪರ್ಯವಸಾನವಾಗಿದೆ. ಕರ್ಮಕಾಂಡದಂತೆ ಇಲ್ಲಿ ಯಾವ ವಿಧಿಯೂ ಕಂಡುಬರುವದಿಲ್ಲ. ಆತ್ಮನಲ್ಲಿ ನಿಜವಾಗಿ ಅನಾತ್ಮಧರ್ಮವು ಬಂದು ಸೇರಿಲ್ಲ; ಆದ್ದರಿಂದ ಅವನ್ನು ನಿಜವಾಗಿ ಸಾಧನದಿಂದ ಕಳೆದುಕೊಳ್ಳಬೇಕಾದದ್ದೂ ಇರುವದಿಲ್ಲ: ಶ್ರುತಿಯಲ್ಲಿ ನೇತಿನೇತಿ ಎಂದು ಹೇಳಿರುವದು ಅಪ್ರಾಪ್ತ ನಿಷೇಧವೇ ಆಗಿರುತ್ತದೆ.

೩೮–೩೦. ಆತ್ಮನನ್ನು ಯಾವ ಶಬ್ದದಿಂದಲೂ ತಿಳಿಸುವದಕ್ಕೆ ಆಗುವದಿಲ್ಲ; ಅವನು ಯಾವ ಪ್ರತ್ಯಯಕ್ಕೂ ಗೋಚರನಲ್ಲ. ಆದ್ದರಿಂದ ಆತ್ಮನನ್ನು ಯಾವ ಸಾಧನ ದಿಂದಲಾದರೂ ತಿಳಿಯಬೇಕೆಂದು ಶ್ರುತಿಯು ಉಪದೇಶಿಸುತ್ತದೆ ಎಂಬುದು ಆಗದ ಮಾತು. ಆತ್ಮನನ್ನೂ ಚಿದಾಭಾಸದಿಂದ ಕೂಡಿದ ಅಹಂಕಾರವನ್ನೂ ವಿಂಗಡಿಸಿ ತಿಳಿದುಕೊಳ್ಳಲಾರದೆ ಇರುವ ಸ್ಥಿತಿಯಲ್ಲಿ ಆತ್ಮಾದಿಶಬ್ದಗಳು ಸಾಭಾಸಾಹಂಕಾರದ ಮೂಲಕ ಆತ್ಮನನ್ನು ಲಕ್ಷಣೆಯಿಂದ ತಿಳಿಸುತ್ತವೆ.

೩೧–೪೩. ಮುಖ, ಕನ್ನಡಿ- ಇವುಗಳಲ್ಲಿ ಯಾವದೊಂದರ ಧರ್ಮವೂ ಅಲ್ಲದ ಮುಖದ ಪ್ರತಿಬಿಂಬವು ಆವೆರಡೂ ಒಂದಾನೊಂದು ರೀತಿಯಿಂದ ಸಂಬದ್ಧವಾದಾಗ ತೋರುವಂತೆ ಆತ್ಮನೂ ಅಲ್ಲದ, ಅಹಂಕಾರವೂ ಅಲ್ಲದ, ಚಿದಾಭಾಸವು ಅಹಂಕಾರದಲ್ಲಿ ತೋರುತ್ತಿರುತ್ತದೆ. ಇದನ್ನು ತಿಳಿಯದೆ ಸಂಸಾರಿಜೀವನ ಸ್ವರೂಪದ ವಿಷಯಕ್ಕೆ ವಾದಿಗಳಲ್ಲಿ ವಿವಾದವುಂಟಾಗಿರುತ್ತದೆ. ಈ ಆಭಾಸವು ಪರಮಾರ್ಥವೆಂದು ಕೆಲವರು ಹೇಳುತ್ತಾರೆ. ಇದು ವಸ್ತುವಿನ ನೆರಳಿನಂತೆ ಬರಿಯ ತೋರಿಕೆ. ನೆರಳೂ ಸತ್ಯವೆಂದು ಕೆಲವರು ವಾದಿಸುವದು ಸಾಹಸವು. ಆತ್ಮನು ಕೂಟಸ್ಥನಾಗಿರುವದರಿಂದಲೂ ಅಹಂ ಕಾರವು ಅಚೇತನವಾಗಿರುವದರಿಂದಲೂ ಆಭಾಸವು ಬರಿಯ ತೋರಿಕೆಯಾಗಿರುವದರಿಂದ ಲೂ ಸಂಸಾರವು ಯಾರಿಗೂ ಇಲ್ಲವೆಂದಾಗುವದಲ್ಲ! ಆಗ ಶಾಸ್ತ್ರೋಪದೇಶವೇ ವ್ಯರ್ಥ ವಾಗುವದಲ್ಲ!- ಎಂದು ಕೆಲವರು ಶಂಕಿಸುವರು. ಆದರೆ ಸಂಸಾರವು ಆವಿದ್ಯಕವೇ ಆಗಿ ಆತ್ಮನಲ್ಲಿ ತೋರುತ್ತಿರುವದರಿಂದ ಅವಿದ್ಯಾನಾಶಕ್ಕಾಗಿ ಶಾಸ್ತ್ರಪ್ರವೃತ್ತಿ ಎಂಬ ನಮ್ಮ ಸಿದ್ಧಾಂತದಲ್ಲಿ ಯಾವ ಆಕ್ಷೇಪಕ್ಕೂ ಎಡೆಯಿಲ್ಲ.

೪೪–೭೩. ಆತ್ಮನು ಚೈತನ್ಯಸ್ವರೂಪನೇ ಆಗಿರುತ್ತಾನೆ, ಅಂತಃಕರಣವು ಚೈತನ್ಯ ದಂತೆ ತೋರುತ್ತಿರುವದು. ಇವೆರಡರ ವಿವೇಕವನ್ನು ಮಾಡಿಕೊಳ್ಳದೆ ಇರುವಾಗ 'ಆತ್ಮನು ಅರಿಯುತ್ತಾನೆ' ಎಂಬ ವ್ಯವಹಾರವಾಗುವದು. ಆತ್ಮನಲ್ಲಿ ವಿಕಾರವಿಲ್ಲ, ಅಂತಃಕರಣದಲ್ಲಿ ವಿಕಾರವಿದ್ದರೂ ಜ್ಞಾನವಿರುವದಿಲ್ಲ. ಆತ್ಮನು ಜ್ಞಾನವೆಂದರೆ ಅರಿಯುವದೆಂಬ ಧಾತ್ವರ್ಥ ರೂಪವಾದ ಕ್ರಿಯೆಯಲ್ಲ; ಏಕೆಂದರೆ ಆತ್ಮನು ನಿತ್ಯನು. ಆತ್ಮನು ಅರಿಯುವ ಕರಣ ವಲ್ಲ, ಅರಿಯಲ್ಪಡುವ ಜ್ಞೇಯವೂ ಅಲ್ಲ. ಆತ್ಮನು ಜ್ಞಾತೃ ಎಂದು ತಿಳಿಯುವದೂ ಜ್ಞಾನವು ಉಂಟಾಗುತ್ತದೆಯೆಂದು ತಿಳಿಯುವದೂ ಆತ್ಮಚೈತನ್ಯ, ಅಂತಃಕರಣ, ಅದರಲ್ಲಿ ರುವ ಚಿದಾಭಾಸ- ಈ ಮೂರನ್ನೂ ವಿಂಗಡಿಸಿ ಅರಿತುಕೊಳ್ಳದಿರುವ ಅವಿದ್ಯಾವ್ಯವಹಾರವೇ. ಈ ವಿವೇಕವಿಲ್ಲದ್ದರಿಂದಲೇ ಬೌದ್ಧರು ಪ್ರತ್ಯಯಗಳೇ ಸ್ವಯಂಪ್ರಕಾಶವೆನ್ನುತ್ತಾರೆ. ಅವರನ್ನು ನಿರಾಕರಣೆಮಾಡುವದಕ್ಕೆ ವೇದಾಂತಿಗಳು ಚಿದಾಭಾಸವನ್ನು ಅವಶ್ಯವಾಗಿ ಒಪ್ಪಬೇಕು; ಇಲ್ಲದಿದ್ದರೆ ಪ್ರತ್ಯಯಗಳ ಗ್ರಾಹಕನು ಯಾರೆಂಬುದೇ ಸಿದ್ಧಿಯಾಗುವದಿಲ್ಲ.

೭೪–೮೬. 'ತತ್ತ್ವಮಸಿ' ಎಂಬ ವಾಕ್ಯದಲ್ಲಿ ತ್ವಂಪದಾರ್ಥವು ಆತ್ಮನು. ಆದರೆ ಆತ್ಮನು ಶಬ್ದವಾಚ್ಯನಲ್ಲವಾದ್ದರಿಂದ ಆತ್ಮ, ಅಹಂಕಾರ, ಆಭಾಸ- ಇವುಗಳನ್ನು ವಿಂಗಡಿಸಿಕೊಳ್ಳದೆ ಇರುವ ವ್ಯವಹಾರದ ದೃಷ್ಟಿಯಿಂದಲೇ ತ್ವಂಶಬ್ದವನ್ನು ಉಪಯೋಗಿ ಸಿರುತ್ತದೆ. ಅಹಂಕಾರವು ಚೇತನವಲ್ಲ; ಚೈತನ್ಯವು ಅದರಲ್ಲಿ ತಾನೇ ಸೇರಿಕೊಂಡಿರು ತ್ತದೆ ಎಂಬುದೂ ಯುಕ್ತವಾಗುವದಿಲ್ಲ; ಏಕೆಂದರೆ ಚೈತನ್ಯವು ಕೂಟಸ್ಥವಾಗಿರುತ್ತದೆ.

ಆದ್ದರಿಂದ 'ತತ್ತ್ವಮಸಿ' ಎಂಬ ವಾಕ್ಯವು ಅರ್ಥವಾಗುವದಕ್ಕೆ ಚಿದಾಭಾಸವನ್ನು ಒಪ್ಪಬೇಕು. ಆಗ ಆಭಾಸದ ಮೂಲಕ ಆತ್ಮನನ್ನು ತ್ವಂಪದವು ತಿಳಿಸುತ್ತದೆ ಎಂದು ಏರ್ಪಡುತ್ತದೆ.

೮೭-೯೬. ತತ್ತ್ವಮಸಿ ವಾಕ್ಯಾರ್ಥಕ್ಕೆ ಆತ್ಮಾನಾತ್ಮವಿವೇಕವುಳ್ಳವನೇ ಅಧಿಕಾರಿಯು. ನಾನು ಎಂದು ಯಾವಾಗಲೂ ಕರೆಯಿಸಿಕೊಳ್ಳುವದಕ್ಕೆ ಅರ್ಹವಾದದ್ದು ಆತ್ಮನು; 'ನನ್ನ' 'ಇದು' ಎಂದು ಕರೆಯಿಸಿಕೊಳ್ಳುವದಕ್ಕೆ ಅರ್ಹವಾದದ್ದು ಅನಾತ್ಮವು. 'ನಾನು ಇಂಥವನು' ಎಂಬಲ್ಲಿ ಆತ್ಮ, ಅನಾತ್ಮ- ಎರಡು ಅಂಶಗಳೂ ಸೇರಿಕೊಂಡಿರುವವು. ಇವುಗಳಲ್ಲಿ ಅನಾತ್ಮವನ್ನು ತಳ್ಳಿಹಾಕಬೇಕು. ಯಾವದು ಪರಾರ್ಥವಾದ ವಿಶೇಷಣವೋ ಅದೆಲ್ಲವೂ ಅನಾತ್ಮವೇ. ಹೊರಗಿನ ಪದಾರ್ಥಗಳು ದೇಹಿಗೂ, ದೇಹವು ಅಹಂಕರ್ತೃವಿಗೂ ದೇಹಸಹಿತವಾದ ಅಹಂಕರ್ತೃವು ಆತ್ಮನಿಗೂ ಪರಾರ್ಥವಾದ ವಿಶೇಷಣವಾಗುತ್ತವೆ. ಆತ್ಮನು ಇವುಗಳಲ್ಲಿ ಯಾವದೊಂದನ್ನೂ ಮುಟ್ಟದೆ ಎಲ್ಲವನ್ನೂ ತನ್ನ ಚೈತನ್ಯದ ಬೆಳಕಿನಿಂದ ಬೆಳಗುತ್ತಿರುತ್ತಾನೆ. ಆತ್ಮನು ಸ್ವತಂತ್ರನಾಗಿರುತ್ತಾನೆ; ಮಿಕ್ಕದ್ದು ಎಲ್ಲವೂ ಅವಿವೇಕದಶೆಯಲ್ಲಿ ಮಾತ್ರ ಇರುವಂತೆ ಕಾಣುತ್ತದೆ. ಅನ್ವಯವ್ಯತಿರೇಕಗಳಿಂದ 'ನಾನು' ಯಾರು?- ಎಂಬುದನ್ನು ನಿರ್ಣಯಿಸಿಕೊಳ್ಳಬೇಕು, ಆಗ 'ತತ್ತ್ವಮಸಿ' ಎಂಬ ವಾಕ್ಯದಲ್ಲಿ ತ್ವಂಪದಾರ್ಥದ ವಿವೇಕವಾಗುವದು. 'ಸುಷುಪ್ತಿಯಲ್ಲಿ ನಾನು ಏನನ್ನೂ ಅರಿಯಲಿಲ್ಲ' ಎಂಬ ಪರಾಮರ್ಶದಲ್ಲಿ ಅಹಂಕಾರವಾಗಲಿ ಪ್ರತ್ಯಯಗಳಾಗಲಿ ಇರಲಿಲ್ಲವೆಂದೂ ಅದನ್ನು ನೋಡುವ ಚೈತನ್ಯಸ್ವರೂಪವು ಇದ್ದೇ ಇತ್ತೆಂದೂ ಕಂಡುಬರುತ್ತದೆ. ಆತ್ಮನು ಸ್ವಯಂಜ್ಯೋತಿಯು, ಅವನ ದೃಷ್ಟಿಗೆ ಲೋಪವಿಲ್ಲ, ಅವನಿಗಿಂತ ವ್ಯತಿರಿಕ್ತವಾದದ್ದು ಏನೂ ಇರುವದಿಲ್ಲವಾದ್ದರಿಂದ ಸುಷುಪ್ತಿಯಲ್ಲಿ ಯಾವದೂ ಕಾಣಬರುವದಿಲ್ಲ- ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಹೀಗೆ ಆಭಾಸವಿಶಿಷ್ಟ ಅಹಂಕಾರವೇ ತ್ವಂಪದಕ್ಕೆ ವಾಚ್ಯಾರ್ಥವೆಂದೂ ಆತ್ಮನು ಲಕ್ಷ್ಯಾರ್ಥವೆಂದೂ ಶ್ರುತಿಯುಕ್ತಿಗಳ ಬಲದಿಂದ ಗ್ರಹಿಸಿಕೊಂಡಿರುವವನಿಗೆ ವಾಕ್ಯಾರ್ಥವು ಅವಶ್ಯವಾಗಿ ಉಂಟಾಗುತ್ತದೆ.

೯೭-೧೧೧. ಚತುರ್ಮುಖಬ್ರಹ್ಮನು ರಾಮನಿಗೆ ವಿಷ್ಣುತ್ವವನ್ನು ತಿಳಿಸಿದಂತೆ ಈ ವಾಕ್ಯವು ಸದ್ಬ್ರಹ್ಮವೇ ನೀನು ಎಂದು ತಿಳಿಸಿಕೊಡುತ್ತದೆ. ಅದರಿಂದಲೇ ಮುಕ್ತಿಯಾಗುತ್ತದೆ. ಈ ವಾಕ್ಯದ ಶ್ರವಣಕ್ಕಿಂತಲೂ ಮೊದಲೇ ಶ್ರೋತೃವು ಬ್ರಹ್ಮಸ್ವರೂಪನೇ ಆಗಿರುತ್ತಾನೆ; ಆದ್ದರಿಂದ ಆತ್ಮನು ಬ್ರಹ್ಮವೇ ಆಗಿದ್ದು ವಾಕ್ಯಶ್ರವಣದಿಂದ ತಾನು ಬ್ರಹ್ಮವೆಂದು ತಿಳಿದುಕೊಳ್ಳುತ್ತಾನೆ; ಹೀಗಲ್ಲದಿದ್ದರೆ ಸದ್ಬ್ರಹ್ಮವಲ್ಲದ ಅಹಂಕಾರವು ನಾನು ಬ್ರಹ್ಮವೆಂದು ತಿಳಿದುಕೊಳ್ಳಬೇಕಾಗಿದೆ ಎಂದರೆ ಆಗ ವಾಕ್ಯಜನ್ಯಜ್ಞಾನವು ಮಿಥ್ಯೆಯೇ ಆಗುವದು. ಅಹಂಕಾರವೂ ಪ್ರತ್ಯಯವೂ ಅಚೇತನವಾಗಿರುವದರಿಂದ ಫಲವಾದ ಆತ್ಮಜ್ಞಾನವು ಆತ್ಮನಿಗೇ ಎನ್ನಬೇಕಾಗಿದೆ. ಕೂಟಸ್ಥನಾದ ಆತ್ಮನಿಗೂ ರಾಜನಿಗೆ ಸೇನಾಧಿಪತಿಯ ಮೂಲಕ ಜಯಾಪಜಯವಾಗುವಂತೆ ಫಲವುಂಟಾಗಬಹುದಾಗಿದೆ. ಸಾಕ್ಷಿಯನ್ನೇ ಇಲ್ಲಿ ಶ್ರೋತೃವೆಂದು ಭಾವಿಸಬೇಕು; ಏಕೆಂದರೆ ಅವನನ್ನು ಬಿಟ್ಟರೆ ಮಿಕ್ಕ ಯಾರೂ ಶ್ರೋತೃವೆನಿಸಲಾರರು. ಸಾಕ್ಷಿಯ ಸಮೀಪದಲ್ಲಿ ಅಹಂಕಾರಕ್ಕೇ ಶ್ರೋತೃತ್ವವೆಂದಾಗಲಿ ಎನ್ನುವದು ಸರಿಯಲ್ಲ; ಏಕೆಂದರೆ ಸಾಕ್ಷಿಯಿಂದ ಯಾವದಾದರೂ, ನಿಜವಾದ ಉಪಕಾರವು ಅಹಂಕಾರಕ್ಕೆ ಆಗುವದೆಂದರೆ ಆತ್ಮನು ಪರಿಣಾಮಿ ಎಂದಂತೆ ಆಗುವದು.

ಆದ್ದರಿಂದ ಅಸತ್ಯವಾದ ಆಭಾಸದಮೂಲಕ ಆತ್ಮನಲ್ಲಿಯೇ ಶ್ರೋತೃತ್ವಾದಿಗಳ ವ್ಯವಹಾರವಾಗುವದೆಂಬುದೇ ಸರಿ.

೧೧೨–೧೩೭. ಆಭಾಸವೆಂಬುದೇ ಇಲ್ಲ, ಆಭಾಸವೆಂದು ಸಿದ್ಧಾಂತಿಯು ಕರೆಯುತ್ತಿರುವದಕ್ಕಿಂತ ವ್ಯತಿರಿಕ್ತವಾಗಿ ಆತ್ಮನೇ ಇಲ್ಲ– ಎಂದು ಪೂರ್ವಪಕ್ಷಿಯು ವಾದಿಸಬಹುದು. ಆದರೆ ಕನಸಿನಲ್ಲಿ ಆತ್ಮನು ವಿಷಯಿಯಾಗಿಯೂ ಅಂತಃಕರಣವು ವಿಷಯವಾಗಿಯೂ ತೋರುವದು ಅನುಭವದಲ್ಲಿದೆ. ಆಭಾಸದಿಂದ ಕೂಡಿದ ಜ್ಞಾತೃ, ಪ್ರತ್ಯಯರೂಪವಾದ ಜ್ಞಾನ, ಹೊರಗಿನ ವಿಷಯಗಳು– ಇವುಗಳನ್ನು ವಿಂಗಡಿಸಿ ಅರಿಯುವಾತನಿಗೆ ಅವಶ್ಯವಾಗಿ ಸಾಕ್ಷಿಯ ಅರಿವು ಆಗುತ್ತದೆ. ಆತ್ಮನು ಎಲ್ಲಾ ಜ್ಞಾನಗಳಲ್ಲಿಯೂ ಅನುಗತವಾಗಿರುವ ಅವಗತಿಯೇ ಆಗಿರುತ್ತಾನೆ; ಪ್ರತ್ಯಯಗಳ ಸ್ವರೂಪ, ಪ್ರಕಾಶ– ಮುಂತಾದವುಗಳಿಗೆ ಮೂಲವಾಗಿರುತ್ತಾನೆ. ಅಜ್ಞಾನಾದವನಿಗೆ ಆತ್ಮನನ್ನು ತಿಳಿಸುವದಕ್ಕೆ ತಾನೇ ಇರುವದೆಂಬ ಸ್ವತಃಸಿದ್ಧಿಯಾಗಲಿ 'ನಾನು ಇದನ್ನು ಅರಿತೆನು' ಎಂಬ ಬರಿಯ ಸ್ಮರಣೆಯಾಗಲಿ ಸಾಕಾಗುವದಿಲ್ಲ; ಆತ್ಮನನ್ನು ಅರಿತುಕೊಳ್ಳುವದೇ ಸಿದ್ಧಿಯಾದ್ದರಿಂದ ಅದಕ್ಕೆ ಆಭಾಸದಿಂದೊಡಗೂಡಿದ ಪ್ರಮಾಣವೇ ಅವಶ್ಯವಾಗಿರುತ್ತದೆ. ಆದ್ದರಿಂದ ಶಾಸ್ತ್ರವು ಆಭಾಸದ ಮೂಲಕವೇ ಚೈತನ್ಯವನ್ನು ತಿಳಿಸಿಕೊಡುತ್ತದೆ ಎಂದು ನಿಶ್ಚಯವಾಗುತ್ತದೆ.

೧೩೪–೧೪೭. ಕ್ಷಣಿಕವಿಜ್ಞಾನಕ್ಕಿಂತ ಬೇರೆಯಾದ ಆತ್ಮಚೈತನ್ಯವೇ ಇಲ್ಲವೆಂದೂ ಆ ವಿಜ್ಞಾನವೇ ಜ್ಞಾತೃಜ್ಞಾನಜ್ಞೇಯಗಳಾಗಿ ತೋರಿಕೊಳ್ಳುವದೆಂದೂ ವಿಜ್ಞಾನವಾದಿಗಳಾದ ಬೌದ್ಧರು ಹೇಳುತ್ತಾರೆ. ಆದರೆ ಜ್ಞಾನಕ್ಕೆ ಕ್ಷಣಿಕತ್ವವೇ ಮುಂತಾದ ಧರ್ಮಗಳನ್ನು ಒಪ್ಪಿರುವ ಅವರು ಸಕರ್ತೃಕತ್ವವೆಂಬ ಧರ್ಮವನ್ನು ಒಪ್ಪದೆ ಇರಲು ಕಾರಣವಿಲ್ಲ. ಆ ಧರ್ಮಗಳೆಲ್ಲ ಅಭಾವರೂಪ ಎಂದು ಹೇಳಿದರೆ ನಿರ್ಧರ್ಮಕವಾದ ಕೂಟಸ್ಥಚೈತನ್ಯವನ್ನೇ ಒಪ್ಪಿದಂತಾಗುತ್ತದೆ. ಪ್ರತ್ಯಕ್ಷವೂ ಅನುಮಾನವೂ ವ್ಯವಹಾರದಲ್ಲಿ ಪ್ರಮಾಣಗಳೆಂದು ಒಪ್ಪುವ ಈ ವಾದಿಗಳು ಪ್ರಮಾತೃವನ್ನೂ ಪ್ರಮೇಯವನ್ನೂ ಒಪ್ಪಲೇಬೇಕು. ಪ್ರತ್ಯಯವು ದೀಪದಂತೆ ವ್ಯಂಜಕವಾಗಿರುವದರಿಂದ ಅದನ್ನು ಅರಿಯುವ ಪ್ರಮಾತೃವು ಬೇರೆಯಾಗಿರುತ್ತಾನೆಂದೇ ಒಪ್ಪಬೇಕು.

೧೪೮–೧೫೬. ಸಾಕ್ಷಿಗೂ ಸಾಕ್ಷ್ಯಕ್ಕೂ ದ್ರಷ್ಟೃದೃಶ್ಯತ್ವವೇ ಸಂಬಂಧವು. ಅಂತಃಕರಣವು ವಿಷಯಗಳನ್ನು ಅರಿಯುವಾಗ ವಿಷಯಾಕಾರವಾಗಿ ಪರಿಣಮಿಸಬೇಕಾಗಿರುವದರಿಂದ ಅದು ಕ್ರಮಕ್ರಮವಾಗಿಯೇ ವಿಷಯವನ್ನು ಬೆಳಗಬೇಕು; ಆಗ ಅದಕ್ಕೆ ಚಿದಾಭಾಸರೂಪವಾದ ಆತ್ಮನ ಅನುಗ್ರಹವೂ ಬೇಕು. ಆದರೆ ಆತ್ಮನು ಸಾಕ್ಷ್ಯವಾದದ್ದನ್ನು ಬೆಳಗುವದಕ್ಕೆ ಯಾವ ಕ್ರಮವನ್ನೂ ಅಪೇಕ್ಷಿಸುವದಿಲ್ಲ; ಎಲ್ಲವನ್ನೂ ಒಟ್ಟಿಗೆ ಬೆಳಗುತ್ತಾನೆ. ಅಂತಃಕರಣವು ಕರಣವನ್ನು ಬಯಸಿಯೇ ವಿಷಯವನ್ನು ತಿಳಿಸುತ್ತದೆಯಾದ್ದರಿಂದ ಅದು ಪರಿಣಾಮಿಯು; ಆದರೆ ಆತ್ಮನು ಹಾಗಲ್ಲ. ಹೀಗೆ ಅಂತಃಕರಣಕ್ಕೆ ಪರಿಣಾಮವು, ಸಾಕ್ಷಿಗೇ ಫಲವು. ಏಕೆಂದರೆ ನಾನು ಸುಖದುಃಖಿಯು ಎಂಬ ಅವಿವೇಕವಾಗಲಿ, ಜ್ಞಾನದಿಂದ ನಾನು ಸುಖದುಃಖರಹಿತನು ಎಂಬ ವಿವೇಕವಾಗಲಿ ಅಚೇತನವಾದ ಅಹಂಕರ್ತೃವಿಗೆ ಆಗಲಾರದು.

೧೫೭-೧೬೪. ಆತ್ಮನಿಗೆ ಅಧ್ಯಾಸದಿಂದ ದುಃಖವಾಗಿರುವದರಿಂದ ಜ್ಞಾನದಿಂದ ದುಃಖದ ಬಿಡುಗಡೆಯಾಗಬಹುದಾಗಿದೆ. ಶರೀರಾದಿಗಳಿಗೆ ದಾಹಚ್ಛೇದಾದಿಗಳಾದರೂ ದೇಹಾತಿರಿಕ್ತನಾದ ಆತ್ಮನಿಗೆ ಸುಡುವದೇ ಮುಂತಾದ ನಿಮಿತ್ತದಿಂದಾಗುವ ದುಃಖವು ಅವಿವೇಕದಿಂದಲೇ ಆಗುವದು. ಮಗನ ಸಾವಿನಿಂದ ತಂದೆಗೆ ಅಧ್ಯಾಸಿಕದುಃಖವಾಗುವಂತೆಯೂ ದೇಹಧರ್ಮಗಳನ್ನು ಅಧ್ಯಾಸದಿಂದ ಆತ್ಮನಿಗೆ ಸಂಬಂಧಿಸಿಕೊಂಡದ್ದರಿಂದ ದುಃಖವಾಗುವಂತೆಯೂ ಮನಸ್ಸಿನ ದುಃಖವೂ ಆತ್ಮನಲ್ಲಿ ಅಧ್ಯಾಸದಿಂದಲೇ ಕಾಣುತ್ತಿರುತ್ತದೆ. ಆದ್ದರಿಂದ ಪರಮಾರ್ಥವಾಗಿ ಆತ್ಮನಲ್ಲಿ ಯಾವ ದುಃಖವೂ ಇರುವದಿಲ್ಲ.

೧೬೪-೧೭೫. ತತ್ತ್ವಮಸಿ ಎಂಬ ವಾಕ್ಯದಲ್ಲಿ ತತ್ ಮತ್ತು ತ್ವಮ್- ಎಂಬ ಪದಗಳು ಸಮಾನಾಧಿಕರಣವಾಗಿರುವದರಿಂದ ತ್ವಮ್ ಎಂಬ ಪದವು ತತ್ಪದದ ಅರ್ಥವನ್ನೂ ತತ್ಪದವು ತ್ವಂಪದದ ಅರ್ಥವನ್ನೂ ಹೊಂದುವಂತೆ ಅವಿರುದ್ಧವಾಗಿ ವಾಕ್ಯಾರ್ಥವನ್ನು ಅರಿತುಕೊಳ್ಳಬೇಕು. 'ಹತ್ತನೆಯವನು ನೀನು' ಎಂಬಂತೆ ತ್ವಂಪದಾರ್ಥಕ್ಕೆ ತತ್ಪದಾರ್ಥಸ್ವರೂಪವನ್ನು ಹೇಳುವ ಅಪರೋಕ್ಷಾನುಭವವನ್ನು ಕೊಡುವ ವಾಕ್ಯವಿದು. ಈ ವಾಕ್ಯದಲ್ಲಿ ಕೇಳಬರುವ ಪದಗಳಿಗೆ ಅರ್ಥವು ಯಾವದೆಂಬುದು ಅನ್ವಯವ್ಯತಿರೇಕಗಳಿಂದ ಆಗುತ್ತದೆ; ಆದ್ದರಿಂದ ಶ್ರುತಿಯಲ್ಲಿ ಅನ್ವಯವ್ಯತಿರೇಕಗಳನ್ನು ಹೇಳಿರುತ್ತದೆ. ಅದರಲ್ಲಿಯೂ ತ್ವಂಪದದ ಅರ್ಥವನ್ನು ವಿವೇಚನೆಮಾಡಿ ಅರಿತುಕೊಂಡಹೊರತು ಈ ವಾಕ್ಯದ ಅರ್ಥವು ಆಗಲಾರದು. ಆ ಅರ್ಥವನ್ನು ಸರಿಯಾಗಿ ಅರಿತುಕೊಂಡರೆ ನಾನು ದುಃಖಿಯು ಎಂಬ ಅಭಿಪ್ರಾಯವು ಬಾಧಿತವಾಗುವದರಿಂದ ವಾಕ್ಯದ ಅರ್ಥವು ಸ್ಫುಟವಾಗಿ ತಿಳಿಯುತ್ತದೆ.

೧೭೬-೨೦೪. ಆದ್ದರಿಂದ ವಾಕ್ಯದಲ್ಲಿ ಹೇಳದೆ ಇರುವ ಪ್ರಸಂಖ್ಯಾನವಿಧಿಯನ್ನು ಕಲ್ಪಿಸುವದು ಯುಕ್ತವಲ್ಲ. ನಾನು ದುಃಖಿ ಎಂಬುದು ಪ್ರತ್ಯಕ್ಷಾಭಾಸವಾದ ಜ್ಞಾನವಾದ್ದರಿಂದ ಅದು ವಾಕ್ಯಾರ್ಥವನ್ನು ಬಾಧಿಸಲಾರದು. ದುಃಖಿತ್ವವು ನಿದ್ರೆಯಲ್ಲಿ ಕಾಣುವದೇ ಇಲ್ಲವಾದ್ದರಿಂದ ಆತ್ಮನ ಧರ್ಮವಲ್ಲವೆಂದು ನಿಶ್ಚಯವಾಗುತ್ತದೆ. ಹೀಗೆ ಅನ್ವಯವ್ಯತಿರೇಕಗಳಿಂದ ತಾನು ಅದುಃಖಿಯು ಎಂಬುದನ್ನು ತಿಳಿದುಕೊಂಡವನಿಗೆ ವಾಕ್ಯಾರ್ಥಜ್ಞಾನವಾಗಲು ಯಾವ ಅಡ್ಡಿಯೂ ಇರುವದಿಲ್ಲ. ಈ ವಾಕ್ಯದಿಂದ ಜ್ಞಾನವುಂಟಾಗುವದಿಲ್ಲವೆಂದಾಗಲಿ ಸಂಶಯಿತವಾಗಿ ಉಂಟಾಗುವದೆಂದಾಗಲಿ ವಿಪರೀತವಾಗಿಯೇ ಜ್ಞಾನವುಂಟಾಗುವದೆಂದಾಗಲಿ ಹೇಳುವದಕ್ಕೆ ಕಾರಣವಿಲ್ಲ. 'ತತ್ತ್ವಮಸಿ' (ಅದು ನೀನಾಗಿರುವೆ) ಎಂಬಲ್ಲಿ ಅದು ಎಂಬುದು ಅಪ್ರತ್ಯಗಾತ್ಮನನ್ನು ಹೇಳುವದೆಂಬುದು ತ್ವಂಪದದ ಸಾಹಚರ್ಯದಿಂದಲೂ ನೀನು ಎಂಬುದು ದುಃಖಿಯನ್ನು ಹೇಳುವದೆಂಬುದು ತತ್‌ಪದದ ಸಾಹಚರ್ಯದಿಂದಲೂ ತೊಲಗುವದು; ಹೀಗೆ ವಾಕ್ಯವು ನಿರ್ವಿಶೇಷಾತ್ಮನನ್ನೇ ತಿಳಿಸುತ್ತದೆ ಎಂಬುದು ಸ್ಪಷ್ಟವಾಗುತ್ತದೆ. ಹೀಗೆ ವಾಕ್ಯದಿಂದಲೇ ಸ್ಫುಟಜ್ಞಾನವಾಗುತ್ತಿರುವಲ್ಲಿ ವಾಕ್ಯದಿಂದ ಅಪರೋಕ್ಷಜ್ಞಾನವಾಗುವದಿಲ್ಲವೆಂದೂ ಅನುಭವವುಂಟಾಗುವದಕ್ಕಾಗಿ ಪ್ರಸಂಖ್ಯಾನವನ್ನು ವಿಧಿಸಿದೆಯೆಂದೂ ಕಲ್ಪಿಸುವದು ಶ್ರುತತ್ಯಾಗ, ಅಶ್ರುತಕಲ್ಪನ, ಶ್ರುತಿಪ್ರಾಮಾಣ್ಯಹಾನಿ- ಮುಂತಾದ ದೋಷಗಳಿಗೆ ಈಡಾಗುವದು.

ಆತ್ಮನು ದುಃಖವನ್ನು ಅರಿಯುವ ಬುದ್ಧಿಯನ್ನು ಕೂಡ ಅರಿಯುತ್ತಿರುವದರಿಂದ ವಿಷಯಿಯಾದ ಆವನಲ್ಲಿ ವಿಷಯುವಾದ ಬುದ್ಧಿಯ ದುಃಖವಿದೆ ಎಂದು ವಾದಿಸುವದು

ಅವಿವೇಕವು. 'ತತ್ತ್ವಮಸಿ' (ನಿರ್ದುಃಖನಾದ ಆತ್ಮನೇ ನೀನು) ಎಂದೂ ಉಪದೇಶಿಸಿ ಮೋಕ್ಷಕ್ಕಾಗಿ ಶ್ರವಣಾದಿಗಳನ್ನು ಮಾಡಬೇಕು ಎಂದೂ ಪ್ರಸಂಖ್ಯಾನವನ್ನು ವಿಧಿಸಿದೆ ಎನ್ನುವದು ವ್ಯಾಹತವಚನವು. ಶ್ರೋತವ್ಯನಾದ ಆತ್ಮನೇ ತಾನೆಂದು ತಿಳಿದವನು ಎಂದಿಗೂ ಮತ್ತೆ ಶ್ರವಣದಲ್ಲಿ ತೊಡಗಲಾರನು. ನೀನು ನಿತ್ಯಮುಕ್ತನು ಎಂದು ಫಲವನ್ನು ಹೇಳಿ ಪ್ರಸಂಖ್ಯಾನವನ್ನು ಶ್ರುತಿಯು ವಿಧಿಸಿದೆ ಎಂಬ ವಾದವು ತತ್ತ್ವಮಸಿ ಎಂಬ ವಾಕ್ಯದಿಂದ ಆಗುವ ಜ್ಞಾನಕ್ಕೇ ವಿರುದ್ಧವಾಗಿರುತ್ತದೆ.

೨೦೫-೨೦೧. ಹಾಗಾದರೆ ನಾನು ದುಃಖಿ ಎಂಬ ಅನುಭವಕ್ಕೇನು ಗತಿ?- ಎಂದು ಪೂರ್ವಪಕ್ಷಿಗಳು ಕೇಳಬಹುದು. ಇದು ಭ್ರಾಂತಿ ಎಂಬುದೇ ಗತಿ. ವಾಕ್ಯವು ಪ್ರಮಾಣ ವಾಗಿರುವದರಿಂದ ಅದು ತಾತ್ಪರ್ಯದಿಂದ ಹೇಳುವದು ಎಂದಿಗೂ ಸುಳ್ಳಾಗಲಾರದು. ದುಃಖಿತ್ವವು ಆತ್ಮನ ಧರ್ಮವಲ್ಲವೆಂಬುದು ಅನ್ವಯವ್ಯತಿರೇಕಗಳಿಂದ ಗೊತ್ತಾಗುತ್ತದೆ; ಅದನ್ನು ಬಾಧಿಸುವದಕ್ಕಾಗಿಯೇ ವಾಕ್ಯವು ಬಂದಿರುತ್ತದೆಯೇ ಹೊರತು ಆತ್ಮನ ವಿಷಯ ದಲ್ಲಿ ಹೊಸ ಅನುಭವವನ್ನುಂಟುಮಾಡುವದಕ್ಕಲ್ಲ. ಏಕೆಂದರೆ ಆತ್ಮನು ಅವಿಷಯನೆಂಬುದು ಶ್ರುತಿಪ್ರಮಾಣದಿಂದಲೇ ಗೊತ್ತಾಗಿರುತ್ತದೆ.

೨೦೧-೨೨೦. ವಾಕ್ಯಾರ್ಥಜ್ಞಾನವೇ ಕೊನೆಯದಾದರೆ ಸಂನ್ಯಾಸವು ವ್ಯರ್ಥವಾಗು ವದೆಂಬುದು ಸರಿಯಲ್ಲ; ಏಕೆಂದರೆ ತ್ವಂಪದಾರ್ಥದ ವಿವೇಕಕ್ಕೆ ಅದನ್ನು ವಿಧಿಸಿರುತ್ತದೆ. ನಿರ್ದುಃಖನಾದ ಆತ್ಮನು ತಾನೆಂಬ ಪದಾರ್ಥಜ್ಞಾನವನ್ನು ಮೊದಲು ಮಾಡಿಕೊಂಡವನಿಗೆ ಈ ಆತ್ಮನೇ ಸರ್ವವೆಂಬ ವಾಕ್ಯಾರ್ಥಜ್ಞಾನವೂ ಉಂಟಾಗುತ್ತದೆ. ಈ ಜ್ಞಾನವು ಉಂಟಾದ ಬಳಿಕ ಪ್ರಮಾಣವ್ಯವಹಾರವೇ ಬಾಧಿತವಾಗಿಬಿಡುವದರಿಂದ ಆ ಬಳಿಕ ಯಾವ ವಿಧಿಗೂ ಅವಕಾಶವಿರುವದಿಲ್ಲ. ಈ ವಾಕ್ಯಾರ್ಥಜ್ಞಾನಕ್ಕೂ ನಾನು ಕರ್ತೃವೆಂಬ ಜ್ಞಾನಕ್ಕೂ ಪರಸ್ಪರವಿರೋಧವಿರುತ್ತದೆ; ನಾನು ಕರ್ತೃವೆಂಬುದು ಸ್ವಾಭಾವಿಕಜ್ಞಾನವಾದ್ದರಿಂದ ಪ್ರಮಾಣಜನ್ಯವಾದ 'ನಾನು ಬ್ರಹ್ಮವು' ಎಂಬ ಜ್ಞಾನದಿಂದ ಅದೇ ಬಾಧಿತವಾಗುತ್ತದೆ. ಕರ್ತೃತ್ವವು ಭಯರೂಪವಾಗಿರುವದರಿಂದ ಅಭಯವಾದ ಬ್ರಹ್ಮವೇ ತಾನೆಂದು ತಿಳಿದವನು ಮತ್ತೆ ಕರ್ತೃತ್ವವನ್ನು ಅಂಗೀಕರಿಸಲಾರನು. ಮುಮುಕ್ಷುವಾದವನು ವಾಕ್ಯಾರ್ಥಜ್ಞಾನ ಕ್ಕಾಗಿ ಸಂನ್ಯಾಸವನ್ನು ಮಾಡಿ ಪದಾರ್ಥವನ್ನು ವಿವೇಚನೆ ಮಾಡುತ್ತಿರುವದರಿಂದ ಅವನೇ ಮತ್ತೆ ಕರ್ಮವನ್ನು ಮಾಡುವದಕ್ಕೆ ಹೋಗುವದಿಲ್ಲ; ಹೀಗಿರುವಲ್ಲಿ ನಾನು ಅಕರ್ತೃವಾದ ಬ್ರಹ್ಮವು ಎಂಬ ಜ್ಞಾನದಿಂದ ತೃಪ್ತನಾದವನು ಏತಕ್ಕೆ ಕರ್ಮದಲ್ಲಿ ತೊಡಗುವನು? ಆದ್ದ ರಿಂದ ವಾಕ್ಯಜ್ಞಾನವಾದಬಳಿಕ ಮಾಡತಕ್ಕ ಸಾಧನವು ಯಾವದೂ ಉಳಿದಿರುವದಿಲ್ಲ ಎಂಬುದೇ ಸಿದ್ಧಾಂತವು.

೨೨೧. ವೇದಾಂತವಾಕ್ಯಗಳ ಈ ಅರ್ಥದ ಜ್ಞಾನವನ್ನು ತಿಳಿಸಿಕೊಟ್ಟ ಗುರುಗಳಿಗೆ ನಮಸ್ಕಾರ!



# ೧೯. ಭೇದಗ್ರಹನಾಶ[1]

## ಪ್ರಕರಣಾರ್ಥದ ಸಂಕ್ಷೇಪ

**ಪ್ರಯುಜ್ಯ ತೃಷ್ಣಾಜ್ವರನಾಶಕಾರಣಂ**
**ಚಿಕಿತ್ಸಿತಂ ಜ್ಞಾನವಿರಾಗಭೇಷಜಮ್ ।**
**ನ ಯಾತಿ ಕಾಮಜ್ವರಸನ್ನಿಪಾತಜಾಂ**
**ಶರೀರಮಾಲಾ[2] ಶತಯೋಗದುಃಖಿತಾಮ್ ॥ ೧ ॥**

೧. ತೃಷ್ಣೆ ಎಂಬ ಜ್ವರವನ್ನು ನಾಶಪಡಿಸುವದಕ್ಕೆ ಕಾರಣವಾದ ಜ್ಞಾನ ವೈರಾಗ್ಯಗಳೆಂಬ ಔಷಧಿಯ ಚಿಕಿತ್ಸೆಯನ್ನು ಪ್ರಯೋಗಮಾಡಿದರೆ ಕಾಮ ಜ್ವರದ ಸನ್ನಿಪಾತದಿಂದುಂಟಾಗುವ ನೂರಾರು ಶರೀರಮಾಲೆಗಳ ಸಂಬಂಧ ದಿಂದಾಗುವ ದುಃಖಿತ್ವವನ್ನು[3] ಹೊಂದುವದಿಲ್ಲ.

**ಅಹಂ ಮಮೇತಿ ತ್ವಮನರ್ಥಮೀಹಸೇ**
**ಪರಾರ್ಥಮಿಚ್ಛನ್ತಿ ತವಾನ್ಯ ಈಹಿತಮ್ ।**
**ನ ತೇಽರ್ಥಬೋಧೋ ನ ಹಿ ಮೇಽಸ್ತಿ ಚಾರ್ಥಿತಾ**
**ತತಶ್ಚ ಯುಕ್ತಃ ಶಮ ಏವ ತೇ ಮನಃ ॥ ೨ ॥**

೨. ಮನಸ್ಸೆ, 'ನಾನು, ನನ್ನದು' ಎಂದು ನೀನು ವ್ಯರ್ಥವಾಗಿ ಹರಿ ದಾಡುತ್ತಿರುವೆ. (ತಿಳಿದ) ಕೆಲವರು ನಿನ್ನ (ಈ) ವ್ಯಾಪಾರವು ಮತ್ತೊಬ್ಬನಿ ಗಾಗಿ ಆಗತಕ್ಕದ್ದು[4] ಎಂದು ಅಭಿಪ್ರಾಯಪಡುತ್ತಾರೆ. (ಆದರೆ) ನಿನಗೆ

---

1. ಭೇಷಜಪ್ರಯೋಗಪ್ರಕರಣವೆಂದು ಮೈ॥ ಪುಸ್ತಕದಲ್ಲಿರುವ ಹೆಸರನ್ನು ಹೀಗೆ ತಿದ್ದಿಕೊಂಡಿದೆ.

2. 'ಶರೀರಮಾಲಾಂ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವು ಮೇಲು.

3. ಅಜ್ಞಾನದಿಂದ ಕಾಮವೂ ಕಾಮದಿಂದ ಕರ್ಮವೂ ಕರ್ಮದಿಂದ ಶರೀರ ಗ್ರಹಣವೂ ಅದರಿಂದ ದುಃಖಿತ್ವವೂ ಉಂಟಾಗುವವು. ಆದ್ದರಿಂದ ಜ್ಞಾನವೈರಾಗ್ಯಗಳೇ ಈ ರೋಗಕ್ಕೆ ಚಿಕಿತ್ಸೆ.

4. ಸಾಂಖ್ಯರೇ ಮುಂತಾದವರು ಪ್ರಕೃತಿಯಿಂದಾಗಿರುವ ಮನಸ್ಸು ಆತ್ಮನಿಗಾಗಿ ಕೆಲಸಮಾಡುವದು ಎನ್ನುವರು.

ಅರ್ಥದ ಜ್ಞಾನವಿಲ್ಲ,[1] ನನಗೆ ಅರ್ಥಿತ್ವವೂ ಇಲ್ಲವಷ್ಟೆ.[2] ಆದ್ದರಿಂದ ನಿನಗೆ ಶಾಂತಿಯೇ ಯುಕ್ತವು.

## ಪರಮಾತ್ಮನಿಗೂ ಆತ್ಮನಿಗೂ ಭೇದವಿಲ್ಲ

**ಯತೋ ನ ಚಾನ್ಯಃ ಪರಮಾತ್ ಸನಾತನಾತ್**
**ಸದೈವ ತೃಪ್ತೋಽಹಮತೋ ನ ಮೇಽರ್ಥಿತಾ ।**
**ಸದೈವ ಮುಕ್ತಶ್ಚ[3] ನ ಕಾಮಯೇ ಹಿತಂ**
**ಯತಸ್ವ ಚೇತಃ ಪ್ರಶಮಾಯ ತೇಽಧಿಕಮ್[4]** ॥ ೩ ॥

೩. ಸನಾತನನಾದ ಪರಮಾತ್ಮನಿಗಿಂತ ಬೇರೆಯಲ್ಲವಾದ್ದರಿಂದ ನಾನು ನಿತ್ಯತೃಪ್ತನಾಗಿರುವೆನು; ಆ ದ ಕಾ ರ ಣ ನನಗೆ ಅರ್ಥಿತ್ವವಿರುವದಿಲ್ಲ.[5] ಯಾವಾಗಲೂ ಮುಕ್ತನಾಗಿಯೇ ಇರುವದರಿಂದ ನಾನು ಹಿತವನ್ನು ಕೋರುವದಿಲ್ಲ.[6] ಚಿತ್ತವೆ, ನಿನ್ನ ಶಾಂತಿಗಾಗಿ ಬಹಳವಾಗಿ ಪ್ರಯತ್ನಿಸು.

**ಷಡೂರ್ಮಿಮಾಲಾಭ್ಯತಿವೃತ್ತ ಏವ ಯಃ**
**ಸ ಏವ ಚಾತ್ಮಾ ಜಗತಶ್ಚ ನಃ ಶ್ರುತೇಃ ।**
**ಪ್ರಮಾಣತಶ್ಚಾಪಿ ಮಯಾ ಪ್ರವೇದ್ಯತೇ**
**ಮುಧೈವ ತಸ್ಮಾಚ್ಚ ಮನಸ್ತವೇಹಿತಮ್** ॥ ೪ ॥

೪. ಆರು ಊರ್ಮಿಗಳ ಮಾಲೆಯನ್ನು ತೀರ ದಾಟಿಯೇ ಇರುವವನು[7] ಯಾರೋ ಅವನೇ ಜಗತ್ತಿಗೂ ನಮಗೂ ಆತ್ಮನೆಂದು ಶ್ರುತಿಯಿಂದಲೂ

---

1. ಮನಸ್ಸು ಪುರುಷನಿಗೆ ಈ ಪ್ರಯೋಜನವು ಆಗಬೇಕು ಎಂದು ಅರಿತು ಕೆಲಸ ಮಾಡುವಂತಿಲ್ಲ.

2. ನನಗೆ ಪುರುಷಾರ್ಥದ ಬಯಕೆಯಿಲ್ಲ. ಏಕೆಂದರೆ ಇಚ್ಛೆಯು ಆತ್ಮನ ಧರ್ಮವಲ್ಲ.

3.–4. ಇವೆರಡೂ **ಬೋಧನಿಧಿಯ** ಪಾಠಗಳು ; ತೃಪ್ತಶ್ಚ, ತೇ ಹಿತಮ್– ಎಂಬ ಮೈ॥ ಪಾಠಕ್ಕಿಂತ ಇವೇ ಮೇಲು.

5. ನಿತ್ಯತೃಪ್ತನಿಗೆ ಭೋಗದಲ್ಲಿ ಆಶೆಯಿರುವದಿಲ್ಲ.

6. ನಿತ್ಯಮುಕ್ತನಿಗೆ ಮೋಕ್ಷದಲ್ಲಿ ಆಶೆಯಿರುವದಿಲ್ಲ.

7. ಹಸಿವು, ನೀರಡಿಕೆ, ಶೋಕ, ಮೋಹ, ಮುಪ್ಪು, ಸಾವು– ಈ ಆರೂ ಸಮುದ್ರದ ಅಲೆಗಳಂತೆ ಮತ್ತೆಮತ್ತೆ ಅಜ್ಞಜೀವರಿಗೆ ತೋರುವದರಿಂದ ಇವುಗಳನ್ನು **ಷಡೂರ್ಮಿಗಳು** ಎನ್ನುತ್ತಾರೆ. ಪರಮಾತ್ಮನು ಈ ಆರನ್ನೂ ಯಾವಾಗಲೂ ಮೀರಿರುವ ಸ್ವರೂಪವುಳ್ಳವನೆಂದೂ ಅವನೇ ನಮ್ಮ ಆತ್ಮನೆಂದೂ ಶ್ರುತಿ. ಬೃ. ೩–೫–೧.

ಪ್ರಮಾಣದಿಂದಲೂ[1] ನಮಗೆ (ತಿಳಿದಿರುತ್ತದೆ). ಆದ್ದರಿಂದ ಮನಸ್ಸೆ, ನಿನ್ನ ಹರಿದಾಟವು ವ್ಯರ್ಥವೇ.

## ಮನಸ್ಸು ಶಾಂತವಾದರೆ ದ್ವೈತವಿಲ್ಲ

ತ್ವಯಿ ಪ್ರಶಾಸ್ತೇ ನ ಹಿ ನಾಸ್ತಿ ಭೇದಧೀ
　ರ್ಯತೋ ಜಗನ್ಮೋಹಮುಪೈತಿ ಮಾಯಯಾ ।
ಗ್ರಹೋ ಹಿ ಮಾಯಾಪ್ರಭವಸ್ಯ ಕಾರಣಂ
　ಗ್ರಹಾದ್ವಿಮೋಕೇ ನ ಹಿ ಸಾಸ್ತಿ ಕಸ್ಯಚಿತ್　　॥ ೫ ॥

೫. ಯಾವದರಿಂದ ಜಗತ್ತು ಮಾಯೆಯಿಂದ ಮೋಹವನ್ನು ಹೊಂದುತ್ತಿರುವದೋ ಆ ಭೇದಬುದ್ಧಿಯು ನೀನು ಸಂಪೂರ್ಣವಾಗಿ ಶಾಂತವಾದರೆ ಇರುವದಿಲ್ಲ. ಏಕೆಂದರೆ (ಭೇದ)ಗ್ರಹಣವೇ ಮಾಯೆಯಿಂದುಂಟಾಗುವ (ಮೋಹಕ್ಕೆ) ಕಾರಣವು;[2] ಗ್ರಹಣವಿಲ್ಲದವರಿಗೆ ಯಾವನಿಗೂ ಆ ಮಾಯೆಯಿರುವದಿಲ್ಲ.[3]

## ಜ್ಞಾನಿಯು ತಾನು ನಿತ್ಯಮುಕ್ತನೆಂದು ತಿಳಿದಿರುವನು

ನ ಮೇಽಸ್ತಿ ಮೋಹಸ್ತವ ಚೇಷ್ಟಿತೇನ ಹಿ
　ಪ್ರಬುದ್ಧತತ್ತ್ವಸ್ತ್ವಸಿತೋ ಹ್ಯವಿಕ್ರಿಯಃ ।
ನ ಪೂರ್ವತತ್ತ್ವೋತ್ತರಭೇದತಾ ಹಿ ನೋ
　ವೃಥೈವ ತಸ್ಮಾಚ್ಚ ಮನಸ್ತವೇಹಿತಮ್　　॥ ೬ ॥

೬. ನಿನ್ನ ವ್ಯಾಪಾರದಿಂದ ನನಗೆ ಮೋಹವುಂಟಾಗಿರುವದಿಲ್ಲ. ಏಕೆಂದರೆ ನಾನು ತತ್ತ್ವವನ್ನು ಅರಿತುಕೊಂಡು ಅಬದ್ಧನಾಗಿರುತ್ತೇನೆ, ವಿಕಾರರಹಿತನಾಗಿರುತ್ತೇನೆ. ನಮ್ಮ (ಮತದಲ್ಲಿ) ಹಿಂದಿನ ತತ್ತ್ವ, ಆಮೇಲಿನ (ತತ್ತ್ವ) ಎಂಬ ಭೇದವಿಲ್ಲವೇ ಇಲ್ಲ.[4] ಆದ್ದರಿಂದಲೂ ಎಲೈ ಮನಸ್ಸೆ, ನಿನ್ನ ಚೇಷ್ಟೆಯು ವ್ಯರ್ಥ.

---

1. ಶ್ರುತಿಸ್ಮೃತಿಗಳಿಂದಲೂ ಯುಕ್ತಿಯಿಂದಲೂ ಎಂದರ್ಥ. ಕಾರ್ಯಕಾರಣೋಪಾಧಿಗಳ ಪರಾಮರ್ಶವಿಲ್ಲದೆ ಹಸಿವು ಮುಂತಾದವುಗಳು ತೋರುವದಿಲ್ಲವೆಂಬುದೇ ಯುಕ್ತಿ.

2. ದ್ವೈತವಿರುವಂತೆ ತೋರುವಾಗ ಒಬ್ಬನು ಮತ್ತೊಂದನ್ನು ಗ್ರಹಿಸುತ್ತಾನೆ ಎಂಬ ಬೃ. ೨-೪-೧೪ ಶ್ರುತಿಯ ಪ್ರಮಾಣದಿಂದ ಇದು ಸಿದ್ಧವಾಗುತ್ತದೆ.

3. ಸುಷುಪ್ತ್ಯಾದಿಗಳು ಇದಕ್ಕೆ ಪ್ರಮಾಣವಾದ ಅನುಭವವು.

4. ಜ್ಞಾನದಿಂದ ಅಬದ್ಧನು ಎಂದದ್ದರಿಂದ ಜ್ಞಾನಾಜ್ಞಾನಗಳ ಅಪೇಕ್ಷೆಯಿಂದ ಆತ್ಮತತ್ತ್ವದಲ್ಲಿ ಯಾವ ಹೆಚ್ಚುಕಡಿಮೆಯಾದರೂ ಆಗುವದೆಂದು ಭಾವಿಸಬಾರದು. ಏಕೆಂದರೆ ಮೊದಲು ಬದ್ಧನಾಗಿದ್ದು ಆ ಬಳಿಕ ಮುಕ್ತನಾಗುವದಿಲ್ಲ.

ಯತಶ್ಚ ನಿತ್ಯೋಽಹಮತೋ ನ ಚಾನ್ಯಥಾ
ವಿಕಾರಯೋಗೇ ಹಿ ಭವೇದನಿತ್ಯತಾ ।
ಸದಾ ಪ್ರಭಾತೋಽಹಮತೋ ಹಿ ಚಾದ್ವಯೋ
ವಿಕಲ್ಪಿತಂ ಚಾಪ್ಯಸದಿತ್ಯವಸ್ಥಿತಮ್ ॥ ೭ ॥

೭. ನಾನು ನಿತ್ಯನಾಗಿರುವದರಿಂದ (ನನಗೆ) ಮತ್ತೊಂದು ರೂಪವಿಲ್ಲ.[1] ವಿಕಾರದ ಸಂಬಂಧವಿದ್ದರೆ ಅನಿತ್ಯತ್ವವೇ ಆಗುವದು. ನಾನು ಯಾವಾಗಲೂ ಬೆಳಗುತ್ತಿರುವವನು.[2] ಆದ್ದರಿಂದ ( ನಾನು ) ಅದ್ವಯನೆಂದೂ ವಿಕಲ್ಪಿತವಾದದ್ದು[3] ಅಸತ್ತೆಂದೂ ಸಿದ್ಧವಾಗುತ್ತದೆ.

ಅಭಾವರೂಪಂ ತ್ವಮಸೀಹ ಹೇ ಮನೋ
ನಿರೀಕ್ಷ್ಯಮಾಣೇ ನ ಹಿ ಯುಕ್ತಿತೋಽಸ್ತಿತಾ ।
ಸತೋ ಹ್ಯನಾಶಾದಸತೋಽಪ್ಯಜನ್ಮತೋ
ದ್ವಯಂ ಚ ತೇಽತಸ್ತವ ನಾಸ್ತಿತೇಷ್ಯತೇ ॥ ೮ ॥

೮. ಎಲೆ ಮನಸ್ಸೆ, ನೀನು ಭಾವರೂಪನಲ್ಲ; ಏಕೆಂದರೆ ಯುಕ್ತಿಯಿಂದ ನಿಟ್ಟಿಸಿ ನೋಡಿದರೆ ನಿನ್ನಲ್ಲಿ ಅಸ್ತಿತ್ವವಿರುವದಿಲ್ಲ. ಏಕೆಂದರೆ ಸತ್ತಾದದ್ದು ನಾಶವಾಗಬಾರದು, ಅಸತ್ತಾದದ್ದಕ್ಕೆ ಜನ್ಮವಿರುವದಿಲ್ಲ. ನಿನಗೆ ಎರಡೂ ಉಂಟು; ಆದ್ದರಿಂದ ನೀನು ಇರುವದಿಲ್ಲ.[4]

ದ್ರಷ್ಟಾ ಚ ದೃಶ್ಯಂ ಚ ತಥಾ ಚ ದರ್ಶನಂ
ಭ್ರಮಸ್ತು ಸರ್ವಸ್ತವ ಕಲ್ಪಿತೋ ಹಿ ಸಃ ।
ದೃಶೇಶ್ಚ ಭಿನ್ನಂ ನ ಹಿ ದೃಶ್ಯಮಿಷ್ಯತೇ
ಸ್ವಪನ್ ಪ್ರಬೋಧೇ ಚ[5] ತಥಾ ನ ಭಿದ್ಯತೇ ॥ ೯ ॥

---

1. ಬದ್ಧಾವಸ್ಥೆ, ಮುಕ್ತಾವಸ್ಥೆ ಎಂಬ ಎರಡು ರೂಪಗಳಿಲ್ಲ.

2. ಅಜ್ಞತ್ವವನ್ನೂ ಜ್ಞಾನಿತ್ವವನ್ನೂ ಬೆಳಗುತ್ತಿರುವ ಚೈತನ್ಯಸ್ವರೂಪನು.

3. ಅಜ್ಞತ್ವ, ಬದ್ಧತ್ವ, ಜ್ಞಾನಿತ್ವ, ಮುಕ್ತತ್ವ- ಮುಂತಾದದ್ದು.

4. ಮನಸ್ಸು ಆತ್ಮನಂತೆ ಸತ್ತಾದರೆ ನಾಶವಾಗಬಾರದು ; ಆದರೆ ಸುಷುಪ್ತಿಯಲ್ಲಿ ಅದು ಇಲ್ಲದಿರುವದು ಕಾಣುತ್ತದೆ. ಅದು ಮೊಲದ ಕೊಂಬಿನಂತೆ ಅತ್ಯಂತವಾಗಿ ಇಲ್ಲದ್ದಲ್ಲ; ಏಕೆಂದರೆ ಜಾಗ್ರದಾದಿಗಳಲ್ಲಿ ಮತ್ತೆ ತೋರಿಕೊಳ್ಳುತ್ತದೆ. ಆದ್ದರಿಂದ ಮನಸ್ಸು ಆತ್ಮನಂತೆ ಸತ್ತಲ್ಲ. ಆತ್ಮನ ಅದ್ವಿತೀಯತ್ವಕ್ಕೆ ಅದರಿಂದ ಯಾವ ಹಾನಿಯೂ ಇಲ್ಲ.

5. 'ಪ್ರಬೋಧೇನ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವು ಮೇಲು.

೯. ನೋಡುವವನು, ನೋಡಲ್ಪಡತಕ್ಕದ್ದು, ಮತ್ತು ನೋಟ- (ಇವೆಲ್ಲವೂ) (ನಿನ್ನ) ಭ್ರಾಂತಿಯೇ; ಏಕೆಂದರೆ ಇದು ಕಲ್ಪನೆಯೇ. ದೃಕ್ಕಿಗಿಂತ ದೃಶ್ಯವು ಬೇರೆಯಾಗಿ ಕಾಣುವದಿಲ್ಲವಷ್ಟೆ. ಆದ್ದರಿಂದ ನಿದ್ರಿಸುವವನು ಎಚ್ಚರದಲ್ಲಿಯೂ ಭಿನ್ನನಾಗಿರುವದಿಲ್ಲ.[1]

**ವಿಕಲ್ಪನಾ ವಾಪಿ ತಥಾದ್ವಯೋ ಭವೇ**
**ದವಸ್ತುಯೋಗಾತ್ ತದಲಾತಚಕ್ರವತ್ ।**
**ನ ಶಕ್ತಿಭೇದೋಽಸ್ತಿ ಯತೋ ನ ಚಾತ್ಮನಾಂ**
**ತತೋಽದ್ವಯತ್ವಂ ಶ್ರುತಿತೋಽವಸೀಯತೇ ॥ ೧೦ ॥**

೧೦. ವಿಕಲ್ಪನೆಯಾದರೂ ಹಾಗೆಯೇ ಅದ್ವಯಾತ್ಮನೇ ಆಗಿರಬೇಕು: ಏಕೆಂದರೆ ಅದು ವಸ್ತುವಿಗೆ ಸಂಬಂಧಪಟ್ಟಿದ್ದಲ್ಲವಾದ್ದರಿಂದ ತಿರುಗಿಸಿದ ಕೊಳ್ಳಿಯಂತೆ (ಇರುತ್ತದೆ).[2] ಶಕ್ತಿಗಳ ಭೇದವಿಲ್ಲ, ಆತ್ಮರ (ಭೇದವೂ) ಇಲ್ಲ[3]; ಆದ್ದರಿಂದ (ಆತ್ಮನು) ಅದ್ವಿತೀಯನೇ ಎಂದು ಶ್ರುತಿಯಿಂದ ನಿಶ್ಚಯವಾಗುತ್ತದೆ.

**ಮಿಥಶ್ಚ ಭಿನ್ನಾ ಯದಿ ತೇ ಹಿ ಚೇತನಾಃ**
**ಕ್ಷಯಸ್ತು ತೇಷಾಂ ಪರಿಮಾಣಯೋಗತಃ ।**
**ಧ್ರುವೋ ಭವೇದ್ ಭೇದವತಾಂ ಹಿ ದೃಶ್ಯತೋ**
**ಜಗತ್ಕ್ಷಯಶ್ಚಾಪಿ ಸಮಸ್ತಮೋಕ್ಷತಃ ॥ ೧೧ ॥**

೧೧. ಆ ಚೇತನರಾದ (ಆತ್ಮರು) ಒಬ್ಬರಿಗಿಂತ ಒಬ್ಬರು ಬೇರೆಯವರಾಗಿರುವರೆಂದರೆ, ಅವರಿಗೆ ಪರಿಚ್ಛೇದವುಂಟಾಗುವದರಿಂದ[4] ನಾಶವು ನಿಶ್ಚಿತವಾಗುವದು. ಏಕೆಂದರೆ ಭೇದವುಳ್ಳ ವಸ್ತುಗಳಿಗೆ (ಪರಿಮಿತಿಯೂ ನಾಶವೂ) ಕಂಡಿದೆ. ಎಲ್ಲರೂ ಮುಕ್ತರಾದರೆ ಜಗತ್ತೂ ಕ್ಷಯ(ವಾಗಬೇಕಾಗುತ್ತದೆ).[5]

1. ಎಚ್ಚರಕನಸುಗಳಲ್ಲಿ ಮಾತ್ರ ದೃಶ್ಯಾದಿಭೇದವಿರುತ್ತದೆ; ಮನಸ್ಸಿಲ್ಲದ ಸುಷುಪ್ತಿಯಲ್ಲಿ ಇರುವದಿಲ್ಲ. ಆದ್ದರಿಂದ ಅದು ವಿಕಲ್ಪವೇ; ಆದ್ದರಿಂದ ಆತ್ಮನಿಗಿಂತ ಬೇರೆಯಾದ ದೃಶ್ಯಾದಿಗಳಿಲ್ಲ. ಆತ್ಮನು ಯಾವಾಗಲೂ ಅದ್ವಯನೇ.

2. ವಿಕಲ್ಪವೆಂಬುದು ವಸ್ತುವಲ್ಲ; ಕೊಳ್ಳಿಯ ಚಕ್ರವು ಕೊಳ್ಳಿಗೆ ಸಂಬಂಧಪಟ್ಟ ಆಕಾರವಲ್ಲದಿರುವಂತೆ ಅದು ಬರಿಯ ತೋರಿಕೆ. ಅಲಾತಶಾಂತಿಪ್ರಕರಣದ ೪೭ರಿಂದ ೫೦ನೆಯ ವರೆಗೆ ಈ ದೃಷ್ಟಾಂತವನ್ನು ವಿವರಿಸಿ ೫೧, ೫೨ರಲ್ಲಿ ದಾರ್ಷ್ಟಾಂತಿಕವನ್ನು ಕೊಟ್ಟಿದೆ.

3. ದೃಷ್ಟ್ಯಾದಿಶಕ್ತಿಗಳು ಬೇರೆಬೇರೆಯಲ್ಲ, (೧೭-೫೪ನ್ನು ನೋಡಿ); ಆದ್ದರಿಂದ ಶಕ್ತಿಭೇದನಿಮಿತ್ತದಿಂದ ಆತ್ಮರುಗಳು ಬೇರೆಬೇರೆ ಎನ್ನುವದಕ್ಕೂ ಬರುವದಿಲ್ಲ.

4. ವಸ್ತುಪರಿಮಿತಿಯೂ ಸಂಖ್ಯಾಪರಿಮಿತಿಯೂ ಇರುವದರಿಂದ ಎಂದರ್ಥ.

5. ಸಂಖ್ಯಾಪರಿಮಿತಿಯುಳ್ಳವರು ಎಷ್ಟು ನಿಧಾನವಾಗಿ ಮುಕ್ತರಾದರೂ ಒಂದಾನೊಂದು ಕಾಲದಲ್ಲಿ ಮುಕ್ತರಾಗದೆ ಉಳಿದವರೇ ಇರುವದಿಲ್ಲವಾಗಿ ಭೋಕ್ತ್ರರ್ಥವಾದ ಭೋಗ್ಯಜಗತ್ತು ಕ್ರಮದಿಂದ ನಾಶವಾಗಬಹುದು.

## ಆತ್ಮನು ಅದ್ವಯನು, ಅಕಲ್ಪಿತನು

**ನ ಮೇಽಸ್ತಿ ಕಶ್ಚಿನ್ನ ಚ ಸೋಽಸ್ಮಿ ಕಸ್ಯಚಿ**
**ದ್ಯತೋಽದ್ವಯೋಽಹಂ ನ ಹಿ ಚಾಸ್ತಿ ಕಲ್ಪಿತಮ್ ।**
**ಅಕಲ್ಪಿತಶ್ಚಾಸ್ಮಿ ಪುರಾ ಪ್ರಸಿದ್ಧತೋ[1]**
**ವಿಕಲ್ಪನಾಯಾ ದ್ವಯಮೇವ ಕಲ್ಪಿತಮ್ ॥ ೧೨ ॥**

೧೨. ನನಗೆ ಯಾರೊಬ್ಬರೂ ಇಲ್ಲ, ಆ (ನಾನು) ಯಾರೊಬ್ಬನವನೂ ಅಲ್ಲ.[2] ಏಕೆಂದರೆ ನಾನು ಅದ್ವಯನು; ಕಲ್ಪಿತವಾದದ್ದು ಇರುವದೇ ಇಲ್ಲವಷ್ಟೆ.[3] (ನಾನು) ಕಲ್ಪನೆಗಿಂತ ಮುನ್ನವೂ ಸಿದ್ಧನಾಗಿರುವದರಿಂದ ಅಕಲ್ಪಿತನಾಗಿರುವೆನು. ದ್ವೈತವೇ ಕಲ್ಪಿತವು.[4]

**ವಿಕಲ್ಪನಾ ಚಾಪ್ಯಭವೇ ನ ವಿದ್ಯತೇ**
**ಸದನ್ಯದಿತ್ಯೇವಮತೋ ನ ನಾಸ್ತಿತಾ ।**
**ಯತಃ ಪ್ರವೃತ್ತಾ ತವ ಚಾಪಿ ಕಲ್ಪನಾ**
**ಪುರಾ ಪ್ರಸಿದ್ಧೇರ್ನ ಚ ತದ್ಧಿ ಕಲ್ಪಿತಮ್ ॥ ೧೩ ॥**

೧೩. ಹುಟ್ಟಿಲ್ಲದ ಅದರಲ್ಲಿ ಇರುವದು, ಮತ್ತೊಂದು[5]– ಎಂಬೀ ರೀತಿಯ ಕಲ್ಪನೆಯೂ ಇರುವದಿಲ್ಲವಾದ್ದರಿಂದ ಅದು ಇಲ್ಲವೆಂಬುದಿಲ್ಲ.[6] ನಿನ್ನ

1. 'ಪುರಾ ಪ್ರಸಿದ್ಧಿತೋ' ಮ್ಯೆ॥

2. ನನಗೆ ಶೇಷವಾದದ್ದೂ ಇಲ್ಲ, ನಾನೂ ಯಾವದೊಂದಕ್ಕೂ ಶೇಷವಲ್ಲ– ಎಂದರ್ಥ.

3. ಕಲ್ಪಿತವಾದದ್ದು ನಿಜವಾಗಿರುವದಿಲ್ಲವಷ್ಟೆ ಎಂದರ್ಥ. 'ನ ಹಿ ಚಾಸ್ತ್ಯಕಲ್ಪಿತಮ್' ಎಂಬ ಪಾಠವಿದ್ದರೆ ಅಕಲ್ಪಿತವಾದ ಮತ್ತೊಂದು ವಸ್ತುವಿಲ್ಲವಷ್ಟೆ ಎಂದು ಕನ್ನಡಿಸಬೇಕು.

4. ಆಸ್ಪದವಿಲ್ಲದ ಕಲ್ಪನೆಯಿಲ್ಲ; ಕಲ್ಪನೆಯು ಕಲ್ಪನಾಕಾಲದಲ್ಲಿ ಮಾತ್ರ ತೋರುತ್ತದೆ. ಆದ್ದರಿಂದ ಅದ್ವಿತೀಯನಾದ ನಾನು ಕಲ್ಪಿತನೆಂಬುವದಕ್ಕೆ ಪ್ರಮಾಣವಿಲ್ಲ. ನಾನು ಸ್ವತಃಸಿದ್ಧನೂ ನಿತ್ಯನೂ ಆಗಿರುವೆನು.

5. ಅಸತ್ತು.

6. ಹುಟ್ಟಿದ ವಸ್ತುವಿನಲ್ಲಿ ಅಸ್ತಿ ನಾಸ್ತಿ, ವರ್ಧತೇ ನ ವರ್ಧತೇ– ಮುಂತಾದ ವಿಕಲ್ಪಗಳುಂಟಾಗಬಹುದು. ನಿತ್ಯವಾದ ಆತ್ಮನಲ್ಲಿ ಇಲ್ಲವೆಂಬ ವಿಕಲ್ಪವು ಹೇಗೆ ಬಂದೀತು?

ಕಲ್ಪನೆಯೂ ಯಾವದರಿಂದ ಉಂಟಾಗಿರುವದೋ[1] ಅದು ಮೊದಲೇ ಇರುವದರಿಂದ ಅದು ಕಲ್ಪಿತವಲ್ಲವಷ್ಟೆ.

**ಅಸದ್ದ್ವಯಂ ತೇಽಪಿ ಹಿ ಯದ್ಯದೀಕ್ಷ್ಯತೇ**
**ನ ದೃಷ್ಟಮಿತ್ಯೇವ ನ ಚೈವ ನಾಸ್ತಿತಾ ।**
**ಯತಃ ಪ್ರವೃತ್ತಾ ಸದಸದ್ವಿಕಲ್ಪನಾ**
**ವಿಚಾರವದ್ವಾಪಿ ತಥಾದ್ವಯಂ ಚ ಸತ್ ॥ ೧೪ ॥**

೧೪. ಯಾವಯಾವದು ಕಾಣುವದೋ (ಆ) ದ್ವೈತವು ನಿನಗೂ ಅಸತ್ತೇ ಆಗಿರುವದಷ್ಟೆ;[2] ಕಾಣುವದಿಲ್ಲವೆಂಬುದರಿಂದಲೇ ಅದು ಇಲ್ಲವೆಂಬುದೂ ಇಲ್ಲವಷ್ಟೆ.[3] (ಇದು) ಸತ್ತು, (ಇದು) ಅಸತ್ತು -ಎಂಬ ವಿಕಲ್ಪನೆಯು ಏತರಿಂದ ಪ್ರವೃತ್ತವಾಗಿರುವದೋ ಆ ಅದ್ವಯವಸ್ತುವೂ ವಿಚಾರದಂತೆಯೇ ಸತ್ತಾಗಿರುತ್ತದೆ[4]

**ಸದಭ್ಯುಪೇತಂ ಭವತಾಪಿ[5] ಕಲ್ಪಿತಂ**
**ವಿಚಾರಹೇತೋರ್ಯದಿ ತಸ್ಯ ನಾಸ್ತಿತಾ ।**
**ವಿಚಾರಹಾನಾಚ್ಚ ತಥೈವ ಸಂಸ್ಥಿತಂ**
**ನ ಚೇತ್ತದಿಷ್ಟಂ ನಿತರಾಂ ಸದಿಷ್ಯತೇ ॥ ೧೫ ॥**

೧೫. ಕಲ್ಪಿತವಾದ (ದ್ವೈತವು) ವಿಚಾರಕ್ಕೆ ಕಾರಣವಾಗಿರುವದರಿಂದ ಸತ್ತೆಂದು (ನೀನು) ಒಪ್ಪಿರುತ್ತೀಯೆ.[6] ಅದು ಇಲ್ಲವಾದರೆ ವಿಚಾರವೇ ಇಲ್ಲವಾಗುವದರಿಂದಲೂ ಹಾಗೆಯೇ ಸಿದ್ಧವಾಗುತ್ತದೆ.[7] ಅದು ಇಷ್ಟವಲ್ಲದೆಹೋದರೆ

---

1. ಮನಸ್ಸೆಂಬ ಕಲ್ಪನೆಯೂ ಯಾವದರಲ್ಲಿ ವಿಕಲ್ಪಿತವಾಗಿರುವದೋ ಯಾರ ಬಲದಿಂದ ಮನಸ್ಸು ಕಲ್ಪಿಸುತ್ತಿರುವದೋ ಅದು ಇಲ್ಲವೆನ್ನುವದಾಗದು.

2. ಆತ್ಮನು ಕಾಣುವದಿಲ್ಲವಲ್ಲ!- ಎಂಬ ಶಂಕೆಗೆ ಪರಿಹಾರ. ಮನಸ್ಸಿಗೆ ಕಂಡ ರಜ್ಜುಸರ್ಪವು ಸತ್ತಾಗಿರುವದಿಲ್ಲ.

3. ಕಾಣದಿರುವ ಎಷ್ಟೋ ವಸ್ತುಗಳು ಸತ್ತಾಗಿರಬಹುದು; ಆದ್ದರಿಂದ ಕಾಣುವದಿಲ್ಲವಾದ್ದರಿಂದ ಅಸತ್ತು ಎಂಬ ಯುಕ್ತಿ ಸರಿಯಲ್ಲ.

4. ವಿಚಾರವಿಲ್ಲದೆ ಏನೂ ನಿರ್ಣಯವಾಗುವದಿಲ್ಲವೆಂದು ವಾದಿಗಳು ಒಪ್ಪಿರುತ್ತಾರೆ; ಆ ವಿಚಾರದಂತೆ ವಿಕಲ್ಪನೆಗೆ ಆಧಾರವಿಲ್ಲದೆ ವಿಕಲ್ಪವು ಸಿದ್ಧಿಸುವದಿಲ್ಲ- ಎಂದು ಅಭಿಪ್ರಾಯ.

5. 'ಭವತೋಽಪ' ಎಂಬ ಮೈ॥ ಪಾಠಕ್ಕಿಂತ ಈ ಬೋಧನಿಧಿಯ ಪಾಠವು ಮೇಲು.

6. ಇದು ಏನು ? ಎಂಬ ವಿಚಾರಕ್ಕೆ ಆಲಂಬನವು ಏನಾದರೂ ಬೇಕೇಬೇಕು.

7. ವಿಚಾರಾನ್ಯಥಾನುಪಪತ್ತಿ ಎಂಬ ಪ್ರಮಾಣದಿಂದ ದ್ವೈತಕ್ಕೆ ಆಧಾರವೊಂದು ಇರಬೇಕೆಂದು ಸಿದ್ಧವಾಗುತ್ತದೆ.

(೬೧) ಸತ್ತನ್ನು ಇನ್ನೂ ಹೆಚ್ಚಾಗಿಯೇ ಒಪ್ಪಿದಂತಾಗುತ್ತದೆ.[1]

**ಅಸತ್ಸಮಂ ಚೈವ ಸದಿತ್ಯಪೀತಿ ಚೇ**
**ದನರ್ಥವತ್ತ್ವಾನ್ನರಶೃಙ್ಗತುಲ್ಯತಃ ।**
**ಅನರ್ಥವತ್ತ್ವಂ ತ್ವಸತಿ ಹ್ಯಕಾರಣಂ**
**ನ ಚೈವ ತಸ್ಮಾನ್ನ ವಿಪರ್ಯಯೋಽನ್ಯಥಾ ॥ ೧೬ ॥**

೧೬. ಸದ್ವಸ್ತುವೂ ಅರ್ಥಕ್ರಿಯಾಕಾರಿಯಲ್ಲದೆ ಇರುವದರಿಂದ[2] ಮನುಷ್ಯನ ಕೋಡಿಗೆ ಸಮಾನವಾಗಿರುತ್ತದೆಯಾಗಿ ಅದೂ ಅಸತ್ಸಮವೇ ಆಗಿರುತ್ತದೆ.[3] ಎನ್ನುವದಾದರೆ ಅರ್ಥಕ್ರಿಯೆಯನ್ನುಂಟುಮಾಡದಿರುವದೆಂಬುದು

---

1. ಯಾವ ದ್ವೈತವನ್ನೂ ಒಪ್ಪದಿದ್ದರೆ ಅದಕ್ಕೆ ಆಧಾರವಾದ ಸದ್ವಸ್ತುವಿದ್ದೇ ಇರುತ್ತದೆ. ಈ ಶ್ಲೋಕಕ್ಕೆ ವ್ಯಾಖ್ಯಾನಕಾರರು ಕೊಟ್ಟಿರುವ ಅರ್ಥವೇ ಬೇರೆಯಾಗಿವೆ :

ರಾಮತೀರ್ಥ: (೧) ವಿಚಾರಕ್ಕಾಗಿ ಏನಾದರೊಂದು ವಸ್ತುವನ್ನೊಪ್ಪಲೇಬೇಕಾದ್ದರಿಂದ ನೀನೂ ವಿಚಾರಕ್ಕಾಗಿ ಸದ್ವಸ್ತುವನ್ನೊಪ್ಪಿದಂತೆಯೇ ಸರಿ. ಅದು ಇಲ್ಲವೆಂದರೆ ವಿಚಾರವೂ ಆಗುವದಿಲ್ಲ, ಸತ್ತು ಇಲ್ಲವೆಂದೂ ನಿರ್ಣಯವಾಗುವದಿಲ್ಲ. ಈ ದೋಷವನ್ನೊಪ್ಪದಿರುವದಕ್ಕೆ ಸತ್ತನ್ನೊಪ್ಪಲೇಬೇಕು. ಈ ವ್ಯಾಖ್ಯಾನದಲ್ಲಿ ತತ್ –ಎಂದರೆ ಅವಿಚಾರಿತ, ಅನಿರ್ಣೀತ. (೨) ದ್ವೈತವನ್ನು ಆತ್ಮತತ್ತ್ವದ ನಿಶ್ಚಯಕ್ಕಾಗಿ ಒಪ್ಪಿರುತ್ತೀಯೆ; ಅದು ಇಲ್ಲವೆಂದರೆ ಎಲ್ಲವೂ ಶೂನ್ಯವೇ ಆಗಿ ಪರಮಾರ್ಥನಿರ್ಣಯವಿಲ್ಲದೆ ಹೋಗುತ್ತದೆ. ಆದ್ದರಿಂದ ಈ ದೋಷವನ್ನು ತಪ್ಪಿಸಿಕೊಳ್ಳುವದಕ್ಕೆ ಸತ್ತನ್ನು ಒಪ್ಪಬೇಕು. ಈ ವ್ಯಾಖ್ಯಾನದಲ್ಲಿಯೂ ತತ್ ಎಂದರೆ ಅವಿಚಾರಿತವಾದದ್ದು.

ಬೋಧನಿಧಿ: ಸತ್ತನ್ನು ನೀನೂ ಕಲ್ಪಿಸಿಲ್ಲ ('ಅಕಲ್ಪಿತಂ' ಎಂದು ಪಾಠ) ; ಏಕೆಂದರೆ ಅದು ವಿಚಾರಕ್ಕೆ ಹೇತುವಾಗಿದೆ, ಅದಿಲ್ಲದೆ ವಿಚಾರವೇ ಸಿದ್ಧಿಸುವದಿಲ್ಲ. ವಿಚಾರವೇ ಬೇಡವೆಂದರೆ ಸತ್ತಿಲ್ಲವೆಂದು ನಿರ್ಣಯಿಸುವದಕ್ಕೆ ಆಗುವದಿಲ್ಲವಾಗಿ ಸತ್ತೇ ಉಳಿದುಕೊಳ್ಳುತ್ತದೆ. ಈ ವಿಚಾರಹಾನವು ಇಷ್ಟವಲ್ಲವಾದರೆ ಸತ್ತು ಇದೆ ಎಂದು ಇನ್ನೂ ನಿಶ್ಚಿತವಾಗಿ ಸಿದ್ಧಿಸುತ್ತದೆ ; ಏಕೆಂದರೆ ವಿಚಾರಕ್ಕಾಗಿ ಅದರ ಆಶ್ರಯವಾದ ಸತ್ತನ್ನು ಅಂಗೀಕರಿಸಿಯೇ ತೀರಬೇಕು. ಈ ವ್ಯಾಖ್ಯಾನದಲ್ಲಿ ತತ್ ಎಂದರೆ ವಿಚಾರತ್ಯಾಗ.

ವ್ಯಾಖ್ಯಾನರೀತಿಯಿಂದ ಹಿಂದಿನ ಶ್ಲೋಕದ ಅಭಿಪ್ರಾಯಕ್ಕೂ ಈ ಶ್ಲೋಕದ ಅಭಿಪ್ರಾಯಕ್ಕೂ ವಿಶೇಷವಿಲ್ಲ. ಈ ಶ್ಲೋಕದ ಪೂರ್ವಾರ್ಧದ ಅಭಿಪ್ರಾಯಕ್ಕೂ ಉತ್ತರಾರ್ಧದ ಅಭಿಪ್ರಾಯಕ್ಕೂ ವಿಶೇಷವಿಲ್ಲ. ಆದ್ದರಿಂದ ದ್ವೈತವನ್ನು ಒಪ್ಪಿದರೂ ಒಪ್ಪದಿದ್ದರೂ ಸತ್ತನ್ನೊಪ್ಪಬೇಕು ಎಂಬ ಅರ್ಥವನ್ನು ನಾವು ತೆಗೆದಿರುತ್ತೇವೆ.

2. ನಿಜವಾದ ನೀರು ಇದ್ದರೆ ಕುಡಿದವನಿಗೆ ಬಾಯಾರಿಕೆ ಇಂಗುವದೆಂಬ ಅರ್ಥಕ್ರಿಯೆಯುಂಟಾಗಬೇಕು. ಆದರೆ ಸದ್ವಸ್ತುವಿನಿಂದ ಅರ್ಥಕ್ರಿಯೆಯಾಗುವದಿಲ್ಲ.

3. ಮನುಷ್ಯನ ಕೋಡು, ಸದ್ವಸ್ತು –ಎರಡೂ ಒಂದೇ ಆಯಿತು ; ಏಕೆಂದರೆ ಎರಡಕ್ಕೂ ಅರ್ಥಕ್ರಿಯೆಯಿಲ್ಲ ಎಂದು ಪೂರ್ವಪಕ್ಷ.

ಅಸತ್ತ್ವಕ್ಕೆ ಕಾರಣವೇ ಅಲ್ಲ. ಆದರಿಂದ ಅಸತ್ತ್ವವೂ ಇಲ್ಲ, ವಿಪರೀತವಾದರೆ ಬೇರೆ ಎಂಬದೂ ಇಲ್ಲ.[1]

**ಅಸಿದ್ಧತಶ್ಚಾಪಿ[2] ವಿಚಾರಕಾರಣಾದ್**
**ದ್ವಯಂ ಚ ತಸ್ಮಾತ್ ಪ್ರಸೃತಂ ಚ ಮಾಯಯಾ ।**
**ಶ್ರುತೇಃ ಸ್ಮೃತೇಶ್ಚಾಪಿ ತಥಾ ಹಿ ಯುಕ್ತಿತಃ**
**ಪ್ರಸಿಧ್ಯತೀತ್ಥಂ ನ ತು ಯುಜ್ಯತೇಽನ್ಯಥಾ ॥ ೧೭ ॥**

೧೭. (ಹೇತು) ಅಸಿದ್ಧವಾಗಿರುವದರಿಂದಲೂ[3] (ಇದು ಸರಿಯಲ್ಲ), ಏಕೆಂದರೆ (ಸದ್ವಸ್ತು) ವಿಚಾರಕ್ಕೆ ಕಾರಣವಾಗಿರುತ್ತದೆ.[4] ಆದರಿಂದ ದ್ವೈತವು ಮಾಯೆಯಿಂದ ಹರಡಿಕೊಂಡು ಇರುತ್ತದೆ. ಶ್ರುತಿಯಿಂದಲೂ ಸ್ಮೃತಿಯಿಂದಲೂ ಹಾಗೂ ಯುಕ್ತಿಯಿಂದಲೂ ಹೀಗೆಂದು ಸಿದ್ಧವಾಗುತ್ತದೆಯೇ ಹೊರತು ಬೇರೆಯ ರೀತಿಯಿಂದ ಯುಕ್ತವಾಗುವದಿಲ್ಲ.[5]

**ವಿಕಲ್ಪನಾಚ್ಚಾಪಿ ವಿಧರ್ಮಕಂ ಶ್ರುತೇಃ**
**ಪುರಾ ಪ್ರಸಿದ್ಧೇಶ್ಚ ವಿಕಲ್ಪತೋಽದ್ವಯಮ್ ।**
**ನ ಚೇತಿ ನೇತೀತಿ ಯಥಾ ವಿಕಲ್ಪಿತಂ**
**ನಿಷಿಧ್ಯತೇಽತ್ರಾಪ್ಯವಿಶೇಷಸಿದ್ಧಯೇ ॥ ೧೮ ॥**

೧೮. ವಿರುದ್ಧಕಲ್ಪನೆಗಳ ಕಾರಣದಿಂದಲೂ (ಸದ್ವಸ್ತುವು) ನಿರ್ಧರ್ಮಕವೆಂದೂ[6] ವಿಕಲ್ಪಗಳಿಗಿಂತಲೂ ಮೊದಲೇ ಸಿದ್ಧವಾಗಿರುವದರಿಂದ[7] ಅದ್ವಯ

---

1. ಅರ್ಥಕ್ರಿಯೆಯನ್ನುಂಟುಮಾಡುವದು ಸತ್ತೆಂದಾಗಲಿ, ಮಾಡದಿದ್ದರೆ ಅಸತ್ತೆಂದಾಗಲಿ ಹೇಳುವದಕ್ಕಾಗುವದಿಲ್ಲ ಎಂದರ್ಥ. ಉದಾಹರಣೆಗೆ ದುರ್ಭಿಕ್ಷವಿಲ್ಲದ್ದರಿಂದ ವಾಸ ಮಾಡುತ್ತೇನೆ ಎಂಬಲ್ಲಿ ದುರ್ಭಿಕ್ಷಾಭಾವವು ಅರ್ಥಕ್ರಿಯಾಕಾರಿಯಾದರೂ ಸತ್ತಲ್ಲ; ಹೂಳಿಟ್ಟ ನಿಧಿಯು ಅರ್ಥಕ್ರಿಯಾಕಾರಿಯಾದರೂ ಅಸತ್ತಲ್ಲ. ಇಲ್ಲಿ 'ಹಿ ಕಾರಣಂ' ಎಂಬ ಪಾಠವಿದ್ದರೆ ಅನರ್ಥವತ್ತ್ವಂ ಹಿ ಅಸತೋ ಹಿ ಕಾರಣಂ ನ ಚೈವ, ತಸ್ಮಾತ್ ನ ವಿಪರ್ಯಯೋ ಅನ್ಯಥಾ (ಸತ್ಕಾರಣತ್ವಂ) ನ – ಎಂದು ಸರಳವಾಗಿ ಅನ್ವಯಿಸಬಹುದಾಗುವದು.

2. 'ಅಸಿದ್ಧಿತಶ್ಚಾಪಿ' ಎಂಬದಕ್ಕಿಂತ ಈ ಪಾಠವು ಮೇಲು.

3. ಅನರ್ಥವತ್ತ್ವವೆಂಬ ಹೇತುಸಿದ್ಧವಲ್ಲವಾದ್ದರಿಂದ ಸಾಧ್ಯವೂ ಸಿದ್ಧವಲ್ಲ.

4. ವಿಚಾರಕ್ಕೆ ಕಾರಣವಾದದ್ದು ಸತ್ತು – ಎಂದೊಪ್ಪಿದರೆ ಸಾಕು.

5. 'ಇನ್ದ್ರೋ ಮಾಯಾಭಿಃ,' (ಬೃ. ೨-೫-೫) ಎಂಬ ಶ್ರುತಿಯಿಂದಲೂ 'ಮಯಾಧ್ಯಕ್ಷೇಣ'(ಗೀ. ೯-೧೦) 'ಮಮ ಮಾಯಾ' (ಗೀ. ೭-೧೪) ಮುಂತಾದ ಸ್ಮೃತಿಯಿಂದಲೂ, ಕಾರ್ಯವು ಕಾರಣಕ್ಕೆ ಬೇರೆಯಲ್ಲ – ಎಂಬ ಯುಕ್ತಿಯಿಂದಲೂ ದ್ವೈತವು ಸಿದ್ಧವಾಗುತ್ತದೆ. ದ್ವೈತವು ಪರಮಾರ್ಥವೆಂಬುದು 'ಸ್ವಲ್ಪವೂ ನಾನಾತ್ವವಿಲ್ಲ' (ಕ. ೨-೧-೧೧) ಮುಂತಾದ ಶ್ರುತಿಗಳಿಗೆ ವಿರುದ್ಧವೂ ಆಗಿರುತ್ತದೆ.

6. ವಾದಿಗಳು ವಿರುದ್ಧವಾದ ವಿಕಲ್ಪಗಳನ್ನು ಮಾಡುತ್ತಿರುವದರಿಂದ ತತ್ತ್ವದಲ್ಲಿ ಯಾವ ಧರ್ಮವೂ ಇಲ್ಲವೆಂದಾಯಿತು.

7. ವಿಕಲ್ಪಗಳಿಗೆ ಆಧಾರವಾದ ತತ್ತ್ವವು ಇದ್ದರೇ ವಿಕಲ್ಪಿಸುವದಕ್ಕೆ ಬರುತ್ತದೆ.

ವೆಂದೂ ಶ್ರುತಿಯಿಂದ ಏರ್ಪಡುತ್ತದೆ. ಏಕೆಂದರೆ ಇಲ್ಲಿ ವಿಕಲ್ಪಿತವಾದದ್ದು 'ನ ಚ' (ಗೀ. ೯-೫)[1] ಎಂದೂ, 'ನೇತಿ' (ಬೃ. ೨-೩-೬) ಎಂದೂ[2] ನಿರ್ವಿಶೇಷತ್ವಸಿದ್ಧಿಗಾಗಿ ಅಲ್ಲಗಳೆದಿರುತ್ತದೆ.

**ಅಕಲ್ಪಿತೇಽಪ್ಯೇವಮಜೇಽದ್ವಯೇಽಕ್ಷರೇ**
**ವಿಕಲ್ಪಯನ್ತಃ ಸದಸತ್ತ್ವ[3]ಜನ್ಮಭಿಃ ।**
**ಸ್ವಚಿತ್ತಮಾಯಾಪ್ರಭವಂ ಚ ತೇ ಭವಂ**
**ಜರಾಂ ಚ ಮೃತ್ಯುಂ ಚ ನಿಯಾನ್ತಿ ಸನ್ತತಮ್ ॥ ೧೯ ॥**

೧೯. ಹೀಗೆ ಅಕಲ್ಪಿತನೂ ಅಜನೂ ಅದ್ವಯನೂ ಅಕ್ಷರನೂ (ಆಗಿರುವ ಆತ್ಮನಲ್ಲಿ) ಕೂಡ ಸತ್ತ್ವ, ಅಸತ್ತ್ವ, ಜನ್ಮ – ಎಂಬ (ಪ್ರಕಾರ)ಗಳಿಂದ ಕಲ್ಪಿಸುವವರು ತಮ್ಮ ಚಿತ್ತದ ಮಾಯೆಯಿಂದಾಗಿರುವ ಜರಾಮೃತ್ಯುರೂಪವಾದ ಸಂಸಾರವನ್ನು ಸಂತತವಾಗಿ ಹೊಂದುತ್ತಿರುವರು.[4]

## ಕಾರ್ಯಕಾರಣಭಾವವು ಪರಮಾರ್ಥವಲ್ಲ

**ಭವಾಭವತ್ವಂ ತು ಸ ಚೇದವಸ್ಥಿತಿ**
**ರ್ನ ಚಾಸ್ಯ ಚಾನ್ಯಸ್ಥಿತಿಜನ್ಮ ನಾನ್ಯಥಾ ।**
**ಸತೋ ಹ್ಯಸತ್ತ್ವಾದಸತಶ್ಚ ಸತ್ತ್ವತೋ**
**ನ ಚ ಕ್ರಿಯಾಕಾರಕಮಿತ್ಯತೋಽಪ್ಯಜಮ್ ॥ ೨೦ ॥**

೨೦. ಹುಟ್ಟುವಿಕೆಯು (ನಿಜವಾಗಿ) ಹುಟ್ಟುವದಲ್ಲ.[5] ಹಾಗಿಲ್ಲದಿದ್ದರೆ ನಿಲುಗಡೆಯೇ ಇರುವದಿಲ್ಲ.[6] ಇದು ಮತ್ತೊಂದು ಅವಸ್ಥೆಯನ್ನು ಪಡೆಯು

---

1. 'ಶ್ರುತಿಯಿಂದ' ಏರ್ಪಡುತ್ತದೆ ಎಂಬುದು ಸ್ಮೃತಿಗೂ ಉಪಲಕ್ಷಣವೆಂದು ಭಾವಿಸಬೇಕು. ಈ ಸ್ಮೃತಿಯಲ್ಲಿ ಭೂತಗಳು ಆತ್ಮನಲ್ಲಿಲ್ಲವೆಂದು ಹೇಳಿದೆ.

2. ಮೂರ್ತಾಮೂರ್ತಗಳು ಆತ್ಮನಲ್ಲಿಲ್ಲವೆಂದು ಈ ಶ್ರುತಿಯಲ್ಲಿ ಹೇಳಿದೆ.

3. ಈ ಬೋಧನಿಧಿಯ ಪಾಠವೇ ಮೇಲು. 'ಸದಸಚ್ಚ' ಎಂಬ ಪಾಠವು ಅನ್ವಯವಾಗುವದಿಲ್ಲ.

4. ಆತ್ಮನಲ್ಲಿ ನಿಜವಾಗಿ ಜರಾಮರಣಗಳು ಇಲ್ಲದಿದ್ದರೂ ಇವನ್ನು ಕಲ್ಪಿಸಿಕೊಂಡು ಸಂಕಟಪಡುತ್ತಿರುವರು ಎಂದು ಅಭಿಪ್ರಾಯ. ಮಾಂ. ಕಾ. ಭಾ. ೪-೧೦ ನೋಡಿ.

5. ಮಾಯೆಯಿಂದ ಹಾಗೆ ತೋರುವದೇ ಹೊರತು ನಿಜವಾಗಿ ಹುಟ್ಟುವದೆಂಬುದಿಲ್ಲ.

6. ಅದು ಮತ್ತೊಂದರಿಂದ ಹುಟ್ಟುವದು ಎಂದು ಅನವಸ್ಥೆಯಾಗುತ್ತದೆ. ಮಾಂ. ಕಾ. ಭಾ. ೪-೧೩ ನೋಡಿ.

ಪಡೆಯುಬ ಜನ್ಮವು ಬೇರೆ ರೀತಿಯಲ್ಲಿ[1] ಆಗುವದಿಲ್ಲ; ಏಕೆಂದರೆ (ಆಗ) ಸತ್ತು ಅಸತ್ತಾಗುವದು, ಅಸತ್ತು ಸತ್ತಾಗುವದು. ಕ್ರಿಯೆಯು ಕಾರಕವೂ ಅಲ್ಲ[2] ಆದ್ದರಿಂದಲೂ (ಆತ್ಮತತ್ತ್ವವು) ಜನ್ಮರಹಿತವಾದದ್ದೇ.

**ಅಕುರ್ವದಿಷ್ಟಂ ಯದಿ ನಾಸ್ಯ ಕಾರಕಂ**
**ನ ಕಿಂಚಿದನ್ಯನ್ನನು ನಾಸ್ತ್ಯಕಾರಕಮ್ ।**
**ಸತೋಽವಿಶೇಷಾದಸತಶ್ಚ ಸಚ್ಚ್ಯುತೌ**
**ತುಲಾಂತಯೋರ್ಯದ್ವದನಿಶ್ಚಯಾನ್ನ ಹಿ ॥ ೨೧ ॥**

೨೧. ಅಥವಾ ಈ (ಕಾರ್ಯಕ್ಕೆ) ಏನೂ ಮಾಡದ್ದೇ ಕಾರಕವೆಂದು ಇಷ್ಟವಾದರೆ (ಆಗ) ಮತ್ತೊಂದು ಯಾವದೂ ಇಲ್ಲ.[3] ಕಾರಕವಿಲ್ಲದ್ದು ಇಲ್ಲವೇ ಇಲ್ಲವಲ್ಲ ![4] ಸತ್ತಿಗೂ ಅಸತ್ತಿಗೂ ಯಾವ ವಿಶೇಷವೂ ಇಲ್ಲದಿರುವದರಿಂದ[5] ಸತ್ತು ಚ್ಯುತಿಯಾದರೆ ತಕ್ಕಡಿಯ ಕೊನೆಗಳಂತೆ ಯಾವ ನಿಶ್ಚಯವೂ ಆಗುವದಿಲ್ಲವಾದ್ದರಿಂದ[6] (ಕಾರ್ಯಕಾರಣಭಾವವು) ಇಲ್ಲವೆಂದೇ ಆಗುವದು.

---

1. ಮಾಯೆಯಿಂದ ಹುಟ್ಟುತ್ತದೆ ಎಂಬ ರೀತಿಯಲ್ಲಲ್ಲದೆ ಬೇರೆಯ ರೀತಿಯಲ್ಲಿ. ಹುಟ್ಟುವದೆಂದರೆ ವಸ್ತು ಮತ್ತೊಂದು ಅವಸ್ಥೆಯನ್ನು ನಿಜವಾಗಿ ಪಡೆಯುವದು – ಎಂದು ಹೇಳಬಾರದು. ಈ ಸಾಂಖ್ಯಮತದಲ್ಲಿ ಮುಂದೆ ಹೇಳುವ ದೋಷವಿದೆ.

2. ಕ್ರಿಯೆಯೇ ಕಾರಕವು; ಕ್ರಿಯೆಗಿಂತ ಬೇರೆಯಾದ ಸ್ಥಿರವಸ್ತುವಿಲ್ಲ ಎಂಬ ಬೌದ್ಧರ ಮತದ ನಿರಾಕರಣೆಯಿದು. ಈ ಮತದಲ್ಲಿ ಅದೇ ಈ ಸ್ಥಿತಿಗೆ ಬಂದಿದೆ ಎಂಬ ಪ್ರತ್ಯಭಿಜ್ಞೆಯನ್ನು ಸಮರ್ಥಿಸುವದಕ್ಕೆ ಆಗುವದಿಲ್ಲ.

3. ಕಾರಣವು ಏನಾದರೊಂದು ಮಾಡಿಯೇ ಕಾರ್ಯವನ್ನುಂಟುಮಾಡುವದೆಂಬುದು ಕುರ್ವತ್ಕಾರಣಪಕ್ಷವು. ಏನೂ ಮಾಡದೆ ಇರುವದೇ ಕಾರಣವೆಂದರೆ ಅಂಥ ಕಾರಣವೇ ಇಲ್ಲವಲ್ಲ !

4. ಏನಾದರೂ ಮಾಡಿಯೇ ಕಾರಣವಾಗುವದೆಂದರೆ ಹಾಗೆ ಮಾಡುವದೆಂಬ ಕಾರ್ಯಕ್ಕೆ ಮತ್ತೊಂದು ಕಾರಣವು ಇದ್ದೇ ಇರಬೇಕಾಗುವದು – ಎಂದು ಅನವಸ್ಥೆ ಬರುವದು.

5. ಸತ್ತು ಸತ್ತೇ ಆಗುವಂತಿಲ್ಲ; ಏಕೆಂದರೆ ಸತ್ತಿನಲ್ಲಿ ವಿಶೇಷವಿಲ್ಲ. ಹೀಗೆಯೇ ಅಸತ್ತಿನಲ್ಲಿಯೂ ವಿಶೇಷವಿಲ್ಲದ್ದರಿಂದ ಅಸತ್ತಿನಿಂದ ಸತ್ತು ಹುಟ್ಟುವದಿಲ್ಲ.

6. ಆದರೆ ಈ ತಕ್ಕಡಿಯ ಪರಡಿಯು ಎದ್ದರೆ ಆ ಪರಡಿಯು ಇಳಿಯಬೇಕಾಗುವಂತೆ ಸತ್ತು ಮಾರ್ಪಟ್ಟರೆ ಅಸತ್ತೇ ಆಗಬೇಕು, ಅಸತ್ತು ಮಾರ್ಪಟ್ಟರೆ ಸತ್ತೇ ಆಗಬೇಕು. ಆಗ ಸತ್ತು ಅಸತ್ತು – ಎಂಬ ನಿಶ್ಚಯವೇ ಇಲ್ಲದೆ ಹೋಗುವದು. ಅಂತೂ ಕಾರ್ಯಕಾರಣಭಾವವು ಹೇಗೂ ಇಲ್ಲ. ಈ ವಿಷಯಕ್ಕೆ ಮಾಂ. ಕಾ. ಭಾ. ೪-೪೦ ನೋಡಿ.

**ನ ಚೇತ್ ಸ ಇಷ್ಟಃ ಸದಸದ್ವಿಪರ್ಯಯಃ**
**ಕಥಂ ಭವಃ ಸ್ಯಾತ್ ಸದಸ್ವದ್ವ್ಯವಸ್ಥಿತೌ ।**
**ವಿಭಕ್ತಮೇತದ್ದ್ವಯಮಪ್ಯವಸ್ಥಿತಂ**
**ನ ಜನ್ಮ ತಸ್ಮಾಚ್ಚ ಮನೋ ಹಿ ಕಸ್ಯಚಿತ್ ॥ ೨೨ ॥**

**೨೨.** ಸದಸತ್ತುಗಳು ವಿಪರೀತವಾಗುವದೆಂಬ ಆ (ದೋಷವು)[1] ಇಷ್ಟವಲ್ಲವಾದರೆ, ಸತ್ತು, ಅಸತ್ತು – ಇವೆರಡೂ ವ್ಯವಸ್ಥಿತವಾಗಿರುವಾಗ[2] ಜನ್ಮವೆಂಬುದು ಹೇಗೆತಾನೆ ಆದೀತು ?[3] ಈ ಎರಡೂ ವಿಂಗಡವಾಗಿಯೇ (ಇರುತ್ತವೆ) ಎಂದಾಯಿತು ; ಆದ್ದರಿಂದಲೂ ಎಲೈ ಮನಸ್ಸೆ, ಯಾವದಕ್ಕೂ ಜನ್ಮವಿಲ್ಲವೇ ಇಲ್ಲ.[4]

## ಮನಸ್ಸಿನ ವ್ಯಾಪಾರದಿಂದ ಆತ್ಮನಲ್ಲಿ ಅತಿಶಯವಿಲ್ಲ

**ಅಥಾಭ್ಯುಪೇತ್ಯಾಪಿ ಭವಂ ತವೇಚ್ಛತೋ**
**ಬ್ರವೀಮಿ ನಾರ್ಥಸ್ತವ ಚೇಷ್ಟಿತೇನ ಮೇ ।**
**ನ ಹಾನಿವೃದ್ಧೀ ನ ಯತಃ ಸ್ವತೋಽಸತೋ**
**ಭವೋಽನ್ಯತೋ ವಾ ಯದಿ ವಾಸ್ತಿತಾ ತಯೋಃ ॥ ೨೩ ॥**

**೨೩.** ಇನ್ನು (ನಿನ್ನ) ಇಷ್ಟದಂತೆ ನಿನ್ನ ಜನ್ಮವನ್ನು ಒಪ್ಪಿಕೊಂಡು ಹೇಳುತ್ತೇನೆ. ನಿನ್ನ ವ್ಯಾಪಾರದಿಂದ ನನಗೆ ಯಾವ ಪ್ರಯೋಜನವೂ ಇಲ್ಲ, ಹಾನಿವೃದ್ಧಿಗಳೂ ಇಲ್ಲ. ಏಕೆಂದರೆ, ಅಸತ್ತಾದದ್ದಕ್ಕೆ ತನ್ನಿಂದಲಾಗಲಿ ಮತ್ತೊಂದರಿಂದಲಾಗಲಿ ಜನ್ಮವುಂಟಾಗಲಾರದು[5] ; ಅಥವಾ ಅವೆರಡೂ ಸತ್ತಾಗಿದ್ದರೂ (ಆಗಲಾರದು).[6]

---

1. ಸತ್ತು ಅಸತ್ತಾಗುವದು, ಅಸತ್ತು ಸತ್ತಾಗುವದು – ಎಂಬ ವಿಪರೀತಭಾವವು.

2. ಸತ್ತು ಸತ್ತೇ, ಅಸತ್ತು ಅಸತ್ತೇ – ಎಂದಾಗಿರುವಾಗ.

3. ಯಾವದಕ್ಕೆ ಜನ್ಮ ? ಸ್ಥಿತ್ಯಂತರವನ್ನು ಪಡೆದರಲ್ಲವೆ, ಜನ್ಮವೆಂಬುದು ?

4. ಸತ್ತೊಂದು ಅಸತ್ತೊಂದು – ಹೀಗೆ ಎರಡೂ ಬೇರೆಬೇರೆಯಾಗಿಯೇ ಇರಬೇಕೇ ಹೊರತು ಒಂದು ಬೇರೊಂದುರೂಪವನ್ನು ಪಡೆಯುವದಕ್ಕೆ ಕಾರಣವಿಲ್ಲ ಎಂದರ್ಥ.

5. ಹಾನಿವೃದ್ಧಿಗಳೆಂಬ ಪ್ರಯೋಜನವು ಆತ್ಮನಲ್ಲಿ ಉಂಟಾಗಬಹುದಲ್ಲ ? – ಎಂದರೆ ಹಾನಿವೃದ್ಧಿಗಳು ಸತ್ತೊ, ಅಸತ್ತೊ ? ಅಸತ್ತಾದರೆ ಅವು ತಮ್ಮಿಂದಾಗಲಿ ಮತ್ತೊಂದಾದ ಮನಸ್ಸಿನಿಂದಲಾಗಲಿ ಹೇಗೆ ಉಂಟಾಗುವವು ? ಅಸತ್ತಾದ ಹಾನಿವೃದ್ಧಿಗಳು ಆತ್ಮನಲ್ಲಿ ತನ್ನಿಂದಾಗಲಿ ಮತ್ತೊಂದಾದ ಮನಸ್ಸಿನಿಂದಲಾಗಲಿ ಹೇಗೆ ಉಂಟಾಗುವವು ?

6. ಹಾನಿವೃದ್ಧಿಗಳು ಸತ್ತೇ ಆದರೆ ಆತ್ಮಸ್ವರೂಪವೇ ; ಅವು ಉಂಟಾಗುವದೆಂದರೇನೂ ಅರ್ಥವಿರುವದಿಲ್ಲ.

ಧ್ರುವಾ ಹ್ಯನಿತ್ಯಾಶ್ಚ ನ ಚಾನ್ಯಯೋಗಿನೋ
ಮಿಥಶ್ಚ ಕಾರ್ಯಂ ನ ಚ ತೇಷು ಯುಜ್ಯತೇ ।
ಅತೋ ನ ಕಸ್ಯಾಪಿ ಹಿ ಕಿಂಚಿದಿಷ್ಯತೇ
ಸ್ವಯಂ ಚ ತತ್ತ್ವಂ ನ ನಿರುಕ್ತಿಗೋಚರಮ್ ॥ ೨೪ ॥

೨೪. ನಿತ್ಯ(ವಸ್ತುಗಳೂ) ಅನಿತ್ಯವಸ್ತುಗಳೂ ಮತ್ತೊಂದಕ್ಕೆ ಸಂಬಂಧಪಟ್ಟಿರುವದಿಲ್ಲ[1]. ಅವುಗಳಲ್ಲಿ ಒಂದಕ್ಕೊಂದು ಕಾರ್ಯವಾಗುವದೆಂಬುದೂ ಯುಕ್ತವಾಗುವದಿಲ್ಲ[2]. ಆದ್ದರಿಂದ ಯಾವದೂ ಯಾವದಕ್ಕೂ (ಸಂಬಂಧ)ಪಟ್ಟದ್ದಲ್ಲ.[3] ತತ್ತ್ವವು ತನ್ನ ರೂಪದಲ್ಲಿ ನಿರುಕ್ತಿಗೆ ವಿಷಯವೂ ಅಲ್ಲ[4].

## ಉಪಸಂಹಾರ

ಸಮಂ ತು ತಸ್ಮಾತ್ ಸತತಂ ವಿಭಾತವದ್
ದ್ವಯಾದ್ವಿಮುಕ್ತಂ ಸದಸದ್ವಿಕಲ್ಪಿತಾತ್ ।
ನಿರೀಕ್ಷ್ಯ ಯುಕ್ತ್ಯಾ ಶ್ರುತಿತಸ್ತು ಬುದ್ಧಿಮಾ-
ನಶೇಷನಿರ್ವಾಣಮುಪೈತಿ ದೀಪವತ್ ॥ ೨೫ ॥

೨೫. ಆದ್ದರಿಂದ ಸಮವಾಗಿ[5] ನಿರಂತರವಾಗಿ[6] ಬೆಳಗುತ್ತಾ[7] ಸತ್ತು, ಅಸತ್ತು- ಎಂದು ವಿಕಲ್ಪಿತವಾಗುವ ದ್ವೈತದಿಂದ ರಹಿತವಾಗಿರುವ (ತತ್ತ್ವ

---

1. ನಿತ್ಯವಸ್ತುವಾಗಲಿ ಅನಿತ್ಯವಸ್ತುವಾಗಲಿ ಮತ್ತೊಂದಕ್ಕೆ ಸಂಬಂಧಪಡುವದಿಲ್ಲ; ಏಕೆಂದರೆ ನಿತ್ಯವಾದದ್ದು ಮತ್ತೊಂದಕ್ಕೆ ಸಂಬಂಧಪಡುವದಕ್ಕೆ ಅನಿತ್ಯವಾಗಬೇಕು. ಅನಿತ್ಯವಸ್ತುವು ಕ್ಷಣಕ್ಷಣಕ್ಕೂ ಮಾರ್ಪಡುತ್ತಲೇ ಇರುವದು. ಸಂಬಂಧವು ನಿತ್ಯವಾಗಲಿ ಅನಿತ್ಯವಾಗಲಿ ಅದರಿಂದ ನಿತ್ಯವಸ್ತುವಿನಲ್ಲಿ ಅಥವಾ ಅನಿತ್ಯವಸ್ತುವಿನಲ್ಲಿ ಯಾವ ಅತಿಶಯವೂ ಆಗುವಂತಿಲ್ಲ.

2. ಅವುಗಳೆಲ್ಲವೂ ಕಾರ್ಯವೇ ಆದ್ದರಿಂದ ಒಂದಕ್ಕೊಂದು ಕಾರಣವೆಂಬುದು ಸರಿಯಲ್ಲ.

3. ಸಂಬಂಧವೇ ಇಲ್ಲದ್ದರಿಂದ ಮನೋವ್ಯಾಪಾರದಿಂದ ಆಗುವ ಹಾನಿವೃದ್ಧಿಗಳು ಆತ್ಮನಿಗೆ ಸಂಬಂಧಪಡುವದೆಂಬುದು ಅಯುಕ್ತ ಎಂದು ಭಾವ.

4. ಆತ್ಮತತ್ತ್ವವು ನಿತ್ಯ, ಅನಿತ್ಯ, ಸಂಬಂಧ- ಎಂದು ಮುಂತಾಗಿ ನಿರ್ವಚನಮಾಡಿ ಹೇಳುವದಕ್ಕಾದರೂ ಮೇಲಲ್ಲವೆ, ಅದಕ್ಕೆ ಮನಸ್ಸಿನ ವ್ಯಾಪಾರದಿಂದಾಗುವ ಪ್ರಯೋಜನದ ಸಂಬಂಧವನ್ನು ಹೇಳಬಹುದು? ಆದರೆ ಆತ್ಮತತ್ತ್ವವು ಯಾವ ಶಬ್ದಪ್ರತ್ಯಯಗಳಿಗೂ ಗೋಚರವೇ ಅಲ್ಲ. ಆದ್ದರಿಂದ ಅದಕ್ಕೆ ಪ್ರಯೋಜನದ ಸಂಬಂಧವಾಗಲಾರದು.

5. ಎಲ್ಲೆಲ್ಲಿಯೂ ಏಕರೂಪದಿಂದಿರುವ.

6. ಜಾತ್ಯಂತರಲ್ಲದೆ ವಿಜ್ಞಾನೈಕರಸವಾಗಿರುವ.

7. ಮತ್ತೊಂದರ ಹಂಗಿಲ್ಲದೆ ತಾನೇ ಬೆಳಗುತ್ತಿರುವ.

ವನ್ನು) ಯುಕ್ತಿಯಿಂದಲೂ ಶ್ರುತಿಯಿಂದಲೂ ಕಂಡುಕೊಳ್ಳುವ ಬುದ್ಧಿವಂತನು ದೀಪದಂತೆ ಸಂಪೂರ್ಣನಿರ್ವಾಣವನ್ನು ಹೊಂದುತ್ತಾನೆ.[1]

ಅವೇದ್ಯಮೇಕಂ ಯದನನ್ಯವೇದಿನಾಂ
ಕುತಾರ್ಕಿಕಾಣಾಂ ಚ ಸುವೇದ್ಯಮನ್ಯಥಾ ।
ನಿರೀಕ್ಷ್ಯ ಚೇತ್ಥಂ ತ್ವಗುಣಗ್ರಹೋಽಗುಣಂ
ನ ಯಾತಿ ಮೋಹಂ ಗ್ರಹದೋಷಮುಕ್ತಿತಃ ॥ ೨೬ ॥

೨೬ ಅನನ್ಯವೆಂದು ಅರಿತಿರುವವರಿಗೆ[2] ಅವೇದ್ಯವಾಗಿರುವ ಯಾವ ಅದ್ವೈತ(ತತ್ತ್ವ)ವಿರುವದೋ ಅದು ಕುತಾರ್ಕಿಕರಿಗೆ ಬೇರೆಯಾಗಿ ಸುವೇದ್ಯ ವಾಗಿರುವದು.[3] ಗುಣವನ್ನು ಗ್ರಹಿಸದೆ,[4] ನಿರ್ಗುಣವಾದ (ಆತ್ಮತತ್ತ್ವವನ್ನು) ಹೀಗೆ ಕಂಡುಕೊಂಡರೆ ಅನಾತ್ಮಗ್ರಹಣದೋಷದಿಂದ ಬಿಡುಗಡೆಯಾಗುವದ ರಿಂದ ಮೋಹವನ್ನು ಹೊಂದುವದಿಲ್ಲ.[5]

ಅತೋಽನ್ಯಥಾ ನ ಗ್ರಹನಾಶ ಇಷ್ಯತೇ
ವಿಮೋಹಬುದ್ಧೇರ್ಗ್ರಹ ಏವ ಕಾರಣಮ್ ।
ಗ್ರಹೋಪ್ಯಹೇತುಸ್ತ್ವನಲಸ್ತ್ವನಿನ್ಧನೋ
ಯಥಾ ಪ್ರಶಾನ್ತಿಂ ಪರಮಾಂ ತಥಾ ವ್ರಜೇತ್ ॥ ೨೭ ॥

೨೭. ಇದಕ್ಕಿಂತ ಬೇರೆಯ ರೀತಿಯಿಂದ (ಭೇದ)ಗ್ರಹಣದ ನಾಶವಾಗ ಲಾರದು.[6] ವಿಮೋಹಬುದ್ಧಿಗೆ ಭೇದಗ್ರಹಣವೇ ಕಾರಣವು; ಆ ಗ್ರಹಣವು

---

1. ದೀಪವು ಆರಿಹೋದರೆ ಎಲ್ಲಿಗೋ ಹೋಗುವದಿಲ್ಲ; ತನ್ನ ಅವ್ಯಕ್ತರೂಪ ದಲ್ಲಿಯೇ ಇದ್ದುಕೊಂಡುಬಿಡುತ್ತದೆ. ಇದರಂತೆ ಆತ್ಮಸ್ವರೂಪವನ್ನು ಅರಿತುಕೊಂಡವನು ತನ್ನ ಸ್ವರೂಪದಲ್ಲಿಯೇ ನಿಂತು ಮುಕ್ತನಾಗುವನು ಎಂದು ಭಾವ.

2. ಪರಮಾತ್ಮನು ತಾನೇ ಎಂದು ತಿಳಿದುಕೊಂಡವರಿಗೆ.

3. ತನ್ನನ್ನು ತಾನು ಅರಿತುಕೊಳ್ಳಲಾಗುವದಿಲ್ಲ; ಮತ್ತೊಂದು ವಸ್ತುವನ್ನು ಅರಿಯಬಹುದು. ಆದ್ದರಿಂದ ಆತ್ಮನನ್ನು ಅರಿಯುವೆನೆಂಬುದು ತನಗಿಂತ ಬೇರೆಯೆಂದು ಭಾವಿಸುವ ಕುತರ್ಕವು. ಕೇ. ಭಾ. ೨-೩ ನೋಡಿ.

4. ಅನಾತ್ಮವಸ್ತುವನ್ನು ಗ್ರಹಿಸದೆ.

5. ಆತ್ಮತತ್ತ್ವವು ಅದ್ವಿತೀಯವು, ನಿರ್ಗುಣವು, ನನ್ನ ಸ್ವರೂಪವೇ ಎಂದು ಅರಿತು ಕೊಂಡಾಗ ಮಾತ್ರವೇ ಭೇದಗ್ರಹಣದೋಷವು ತೊಲಗುವದು.

6. ಸುಷುಪ್ತ್ಯಾದಿಗಳಲ್ಲಿ ಮರೆಯಾಗಬಹುದು; ಆದರೆ ನಾಶವಾಗಲಾರದು.

(ತನ್ನ) ಹೇತುವಿಲ್ಲವಾಗಲು ಕಟ್ಟಿಗೆಯಿಲ್ಲದ ಬೆಂಕಿಯು ಆರಿಹೋಗುವಂತೆ ಆತ್ಯಂತಿಕವಾಗಿ ನಾಶವಾಗಿಬಿಡುತ್ತದೆ.[1]

## ಕೊನೆಯ ಮಂಗಲ

**ವಿಮಥ್ಯ ವೇದೋದಧಿತಃ ಸಮುದ್ಧೃತಂ**
**ಸುರೈರ್ಮಹಾಬ್ಧೇಸ್ತು ಯಥಾ ಮಹಾತ್ಮಭಿಃ ।**
**ತಥಾಮೃತಂ ಜ್ಞಾನಮಿದಂ ಹಿ ಯೈಃ ಪುರಾ**
**ನಮೋ ಗುರುಭ್ಯಃ ಪರಮೀಕ್ಷಿತಂ ಚ ಯೈಃ** ॥ ೨೮ ॥

೨೮. ದೇವತೆಗಳು ಮಹಾಸಾಗರದಿಂದ ಹೇಗೆ (ಅಮೃತವನ್ನು ಕಡೆದು ತೆಗೆದರೋ) ಹಾಗೆ ವೇದಸಾಗರದಿಂದ ಯಾವ ಮಹಾತ್ಮರು ಈ ಜ್ಞಾನಾಮೃತವನ್ನು ಪೂರ್ವದಲ್ಲಿ ಕಡೆದು ತೆಗೆದರೋ ಪರತತ್ತ್ವವನ್ನು ಕಂಡುಕೊಂಡರೋ ಆ ಗುರುಗಳಿಗೆ ನಮಸ್ಕಾರ!



1. ಗ್ರಾಹ್ಯವಾದ ಭೇದವು ಅದ್ವೈತವನ್ನು ಅರಿಯದ್ದರಿಂದ ತೋರುತ್ತಿರುವದು; ಅದ್ವೈತಜ್ಞಾನವಾದರೆ ಗ್ರಾಹ್ಯವು ತೋರದು. ಗ್ರಾಹ್ಯವಿಲ್ಲದಿದ್ದರೆ ಭೇದವನ್ನು ಕಾಣುವ ಮನಸ್ಸು ಆತ್ಮನಲ್ಲಿ ಒಂದಾಗಿಬಿಡುತ್ತದೆ. ಮಾಂ. ಕಾ. ಭಾ. ೪-೪೨.

# ಭೇದಗ್ರಹನಾಶಪ್ರಕರಣದ ಸಾರ

೧-೨. ಆಶೆ ಎಂಬ ಜ್ವರಕ್ಕೆ ಜ್ಞಾನವೈರಾಗ್ಯಗಳೇ ಔಷಧವು; ಆ ಔಷಧಸೇವನೆಯಿಂದ ಮತ್ತೆಮತ್ತೆ ಶರೀರಗ್ರಹಣವನ್ನು ಕೊಡುವ ಈ ಜ್ವರವು ನಾಶವಾಗುವದು. ನಾನು, ನನ್ನದು-ಎಂಬ ಮನಸ್ಸಿನ ಭಾವವೇ ಕಾಮಕ್ಕೆ ಕಾರಣವು. ಆದರೆ ಆತ್ಮನು ನಿಷ್ಕಾಮನೆಂಬದನ್ನು ಅರಿತುಕೊಂಡವನಿಗೆ ಕಾಮವೂ ಇರುವದಿಲ್ಲ, ಮನಸ್ಸೂ ಶಾಂತವಾಗುವದು.

೩-೫. ನಾನು ಪರಮಾತ್ಮನಿಗಿಂತ ಅನ್ಯನಲ್ಲ, ನಿತ್ಯತೃಪ್ತನು, ನಿತ್ಯಮುಕ್ತನು, ಷಡೂರ್ಮಿಗಳಿಲ್ಲದವನು - ಎಂದು ಶಾಸ್ತ್ರಪ್ರಮಾಣದಿಂದ ಅರಿತುಕೊಂಡರೆ ಮನಸ್ಸು ಶಾಂತವಾಗುವದು. ಏಕೆಂದರೆ ಆಗ ದ್ವೈತಗ್ರಹಣವಿರುವದಿಲ್ಲ.

೬-೧೧. ಆತ್ಮನು ನಿತ್ಯಮುಕ್ತನು, ಜ್ಞಾನಾಜ್ಞಾನಗಳಿಂದ ಅವನಲ್ಲಿ ಬದ್ಧಮುಕ್ತಭೇದವುಂಟಾಗುವದಿಲ್ಲ. ಅವನು ನಿತ್ಯನು, ಅದ್ವಯನು; ಮನಸ್ಸು ಆದ್ಯಂತಗಳುಳ್ಳದ್ದಾದ್ದರಿಂದ ಪರಮಾರ್ಥವಲ್ಲ. ದ್ರಷ್ಟೃದೃಶ್ಯದರ್ಶನಗಳೆಂಬುದು ಮನಸ್ಸಿನ ವಿಕಲ್ಪಮಾತ್ರ. ಆತ್ಮನನ್ನು ಇಂಥವನು, ಅಂಥವನು ಎಂದು ವಿಕಲ್ಪಿಸುವದಕ್ಕೆ ಬರುವದಿಲ್ಲ; ಅವನು ವಿಕಲ್ಪನೆಗಳಿಗೆಲ್ಲ ಆಧಾರವಾಗಿರುತ್ತಾನೆ. ವಿಕಲ್ಪನೆಗಳ ಪರಮಾರ್ಥಸ್ವರೂಪವೂ ಅವನೇ. ಅವನಲ್ಲಿ ಯಾವ ಭೇದವೂ ಇಲ್ಲ; ಆತ್ಮರು ಅನೇಕರೆಂದರೆ ವಿನಾಶಿಗಳೆಂದಾಗುವದು, ಜಗತ್ತೇ ಶೂನ್ಯವೆಂದಾಗುವದು.

೧೨-೧೯. ಆತ್ಮನಿಗೂ ಮತ್ತೊಂದಕ್ಕೂ ಶೇಷಶೇಷಿಭಾವವಿಲ್ಲ. ಆತ್ಮನು ಕಲ್ಪಿತನಲ್ಲ; ಕಲ್ಪನೆಯೂ ಅವನಿಂದಲೇ ಆಗಿರುತ್ತದೆ. ಆತ್ಮನು ಕಾಣದೆ ಇರುವನೆಂಬುದು ಅವನು ಇಲ್ಲವೆಂಬುವದಕ್ಕೆ ಕಾರಣವಲ್ಲ. ಏಕೆಂದರೆ ಮನಸ್ಸಿಗೆ ತೋರಿದ್ದು ಸತ್ಯವೆಂಬ ನಿಯಮವಿಲ್ಲ, ತೋರದ್ದು ಅಸತ್ಯವೆಂದೂ ಇಲ್ಲ. ಯಾವದು ವಿಚಾರಕ್ಕೆ ಹೇತುವಾಗಿದೆಯೋ ಅದಕ್ಕೆ ಆಧಾರವಾಗಿ ಸತ್ತಾದದ್ದೂ ಇರಬೇಕು. ಅರ್ಥಕ್ರಿಯಾಕಾರಿಯಲ್ಲವೆಂಬುದು ಆತ್ಮನ ಅಸತ್ತ್ವಕ್ಕೆ ಕಾರಣವಲ್ಲ; ಏಕೆಂದರೆ ಅರ್ಥಕ್ರಿಯಾಕಾರಿಯಾದದ್ದು ಸತ್ಯವೆಂಬ ನಿಯಮವಿಲ್ಲ. ವಿಚಾರಕ್ಕೆ ಆಸ್ಪದವಾದದ್ದಾದ ತತ್ತ್ವವೇ ಸದ್ರೂಪನಾದ ಆತ್ಮನು. ಆ ಆತ್ಮನಲ್ಲಿ ವಿರುದ್ಧವಾದ ಕಲ್ಪನೆಗಳಿರುವದರಿಂದ ಯಾವ ವಿಕಲ್ಪವೂ ಇಲ್ಲದ ನಿರ್ಗುಣನವನು. ಅವನನಲ್ಲಿಲ್ಲದ ವಿಕಲ್ಪಗಳನ್ನು ಮಾಡುತ್ತಿರುವದರಿಂದಲೇ ಜನರು ಸಂಸಾರದಲ್ಲಿ ತೊಳಲುತ್ತಿರುವರು.

೨೦-೨೨. ಸಂಸಾರವೆಂದರೆ ಜನನಮರಣಗಳಷ್ಟೆ. ನಿಜವಾಗಿ ಜನ್ಮವೆಂಬುದೇ ಇಲ್ಲ. ಏಕೆಂದರೆ ಯಾವದಾದರೂ ನಿಜವಾಗಿ ಹುಟ್ಟುವದೆಂದು ಒಪ್ಪಿದರೆ ಸತ್ತು ಅಸತ್ತಾಗುವದೆಂದೂ ಅಸತ್ತು ಸತ್ತಾಗುವದೆಂದೂ ಒಪ್ಪಬೇಕಾಗುತ್ತದೆ; ಅದನ್ನು ಒಪ್ಪಿದರೆ ತತ್ತ್ವನಿಶ್ಚಯವೇ ಇಲ್ಲದೆಹೋಗುವದು. ಸದಸತ್ತುಗಳು ಬೇರೆಬೇರೆ ಎಂದು ಒಪ್ಪಿದರೂ ಜನ್ಮವಾಗುವದಕ್ಕೆ ಕಾರಣವಿಲ್ಲ.

೨೩-೨೪. ಮನಸ್ಸಿನಿಂದಾಗುವ ಹಾನಿವೃದ್ಧಿಗಳು ಅದಕ್ಕಿಂತ ಬೇರೆಯಾದ ಆತ್ಮನಲ್ಲಿ ಆಗುವದಕ್ಕೆ ಕಾರಣವಿಲ್ಲ. ವಸ್ತುಗಳು ನಿತ್ಯವಾಗಲಿ ಅನಿತ್ಯವಾಗಲಿ ಅವಕ್ಕೆ ಒಂದ ಕ್ಕೊಂದಕ್ಕೆ ಯಾವ ಸಂಬಂಧವೂ ಸಿದ್ಧಿಸುವದಿಲ್ಲ. ಆತ್ಮನು ನಿತ್ಯಾನಿತ್ಯಾದಿವಿಕಲ್ಪಗಳಿಲ್ಲ ದವನಾದ್ದರಿಂದ ಅವನಲ್ಲಿ ಯಾವದರ ಸಂಬಂಧವೂ ಇರುವಂತೆಯೂ ಇಲ್ಲ.

೨೫-೨೭. ಹೀಗೆ ಎಲ್ಲೆಲ್ಲಿಯೂ ಸಮವಾಗಿ ನಿರಂತರವಾಗಿ ಸ್ವಯಂಪ್ರಕಾಶವಿರುವ ನಿರ್ವಿಕಲ್ಪವಾದ ಅದ್ವೈತತತ್ತ್ವವೇ ಆತ್ಮನೆಂಬುದನ್ನು ಕಂಡುಕೊಂಡವನಿಗೆ ಸದ್ಯೋ ಮುಕ್ತಿಯಾಗುವದು. ಆತ್ಮತತ್ತ್ವವು ನಮ್ಮ ಸ್ವರೂಪವೇ ಆಗಿರುವದರಿಂದ ಅದು ಯಾವ ಜ್ಞಾನಕ್ಕೂ ವಿಷಯವಲ್ಲ. ಹೀಗಿದ್ದರೂ ಕುತಾರ್ಕಿಕರು ಅದನ್ನು ಅನಾತ್ಮವಾಗಿ ಮಾಡಿ ಕೊಂಡು ಅರಿಯುತ್ತೇವೆನ್ನುವವರು. ಆತ್ಮನು ಹೀಗೆ ನಿರ್ವಿಕಲ್ಪನು, ಅವಿಷಯನು, ಅದ್ವಿತೀಯನು, ನಮ್ಮ ಸ್ವರೂಪವೇ ಎಂಬುದನ್ನು ತಿಳಿದರೆ ದ್ವೈತವನ್ನು ಗ್ರಹಿಸುವ ಮನಸ್ಸು ನಾಶವಾಗುತ್ತದೆ; ಇಲ್ಲದಿದ್ದರೆ ಎಂದಿಗೂ ನಾಶವಾಗದು. ಆತ್ಮತತ್ತ್ವವನ್ನು ಅರಿತಮೇಲೆ ಮನಸ್ಸು ತನಗೆ ತಾನೇ ನಾಶವಾಗುವದರಿಂದ ಅದಕ್ಕಾಗಿ ಬೇರೆಯ ಪ್ರಯತ್ನ ವನ್ನು ಮಾಡಬೇಕಾಗಿರುವದಿಲ್ಲ.

೨೮. ವೇದದ ಸಾರವಾಗಿರುವ ಈ ಅದ್ವೈತಜ್ಞಾನವೆಂಬ ಅಮೃತವನ್ನು ತೆಗೆದು ಜನರಿಗೆ ಕೊಟ್ಟು ಉದ್ಧಾರಮಾಡಿರುವ ಗುರುಗಳಿಗೆ ನಮಸ್ಕಾರ!

——:0:——

# ಶ್ಲೋಕಗಳ ವರ್ಣಾನುಕ್ರಮಣಿಕೆ

—ೞೞ—

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಈ ಗ್ರಂಥದ ಪ್ರಕರಣ ಮತ್ತು ಶ್ಲೋಕ – ಇವುಗಳನ್ನು ಸೂಚಿಸುವವು. ಒಂದು ಪ್ರತೀಕದ ಮುಂದೆ ಕಂಸದಲ್ಲಿ (ನೈ.) ಅಥವಾ (ವಾ.) – ಎಂದಿದ್ದರೆ ಪ್ರಕೃತ ಶ್ಲೋಕವು ಅಥವಾ ಅದರ ಭಾಗವು ನೈಷ್ಕರ್ಮ್ಯಸಿದ್ಧಿಯಲ್ಲಿ ಅಥವಾ ಬೃಹದಾರಣ್ಯಕವಾರ್ತಿಕದಲ್ಲಿ ಇದೆ ಎಂದರ್ಥ ; (ನೈ. ವಾ.) ಎಂದಿದ್ದರೆ ಆ ಎರಡು ಗ್ರಂಥಗಳಲ್ಲಿಯೂ ಇದೆ ಎಂದರ್ಥ.

——:೦:——

# ಶಬ್ದಾನುಕ್ರಮಣಿಕೆ

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಪ್ರಕರಣವನ್ನೂ ಶ್ಲೋಕವನ್ನೂ ಸೂಚಿಸುವವು

೧. **ಅಕ್ಷಜಮ್**—
ಇಂದ್ರಿಯಗಳಿಂದಾಗುವ ಜ್ಞಾನ, ೧೮-೧೪

೨. **ಅಕ್ಷಜಾದಿನಿಭ**—
ಪ್ರತ್ಯಕ್ಷಾಭಾಸವೇ ಮುಂತಾದ, ೧೮-೧೭೭

೩. **ಅಗ್ನಿಃ**—
ಬೆಂಕಿ, ತನ್ನನ್ನೇ ತಾನು ಸುಡಲಾರದು, ಬೆಳಗಲಾರದು (ಆತ್ಮನು ತನ್ನನ್ನು ತಾನು ಅರಿಯಲಾರನೆಂಬುವಕ್ಕೆ ದೃಷ್ಟಾಂತ) ೧೬-೧೩

೪. **ಅಜ್ಞಾನಮ್**—
ಸಂಸಾರಕ್ಕೆ ಕಾರಣವಾದ ತಪ್ಪುತಿಳಿವಳಿಕೆ, ೧-೫, ೧-೬, ೧-೨೫

೫. **ಅಧ್ಯಕ್ಷಃ**—
ಎಲ್ಲವನ್ನೂ ನೋಡುತ್ತಿರುವ ಸಾಕ್ಷಿ, ೧೮-೭೩, ೭೪, ೭೮, ೧೦೭, ೧೧೩, ೧೨೨, ೧೨೪, ೧೩೫

೬. **ಅಧ್ಯಕ್ಷ್ಯ**—
ಸಾಕ್ಷಿಗೆ ವಿಷಯವಾದ ಅನಾತ್ಮ, ೧೮-೧೩೫.

೭. **ಅಧ್ಯಾಸಃ**—
ಒಂದನ್ನು ಮತ್ತೊಂದೆಂದು ತಿಳಿಯುವದು, ೧೮-೨೧, ೨೨

೮. **ಅನರ್ಥವತ್ತ್ವಮ್**—
ಪ್ರಯೋಜನವಿಲ್ಲದಿರುವದು, ಅರ್ಥಕ್ರಿಯಾಕಾರಿಯಲ್ಲದಿರುವದು. ೧೯-೧೬

೯. **ಅನಲಃ**—
ಕಟ್ಟಿಗೆಯಿಲ್ಲದ ಬೆಂಕಿ, (ದ್ವೈತಗ್ರಹಣವು ಇಲ್ಲವಾಗುವದಕ್ಕೆ ದೃಷ್ಟಾಂತ) ೧೯-೨೭

೧೦. **ಅನಾದ್ಯವಿವೇಕಃ**—
ಆತ್ಮನನ್ನೂ ಅಂತಃಕರಣವನ್ನೂ ಕಲೆಬೆರಕೆಮಾಡಿಕೊಂಡಿರುವ ಅನಾದಿಯಾದ ತಪ್ಪುತಿಳಿವು ೧೬-೬೧

೧೧. **ಅನುಪಾಧಿಕ**—
ಯಾವ ಉಪಾಧಿಯೂ ಇಲ್ಲದ ಆತ್ಮ, ೧೫-೨೯

೧೨. **ಅನುಭವಃ**—
ಆತ್ಮನನ್ನು ನೇರಾಗಿ ಅನುಭವಿಸುವದು, ಸಾಕ್ಷಾತ್ಕಾರ, ೫-೫ ; ೧೨-೮, ೯, ೧೭-೧೯೩, ೨೦೩

೧೩. **ಅನುಭವಾತ್ಮಾ**—
ಅನುಭವಸ್ವರೂಪನೇ ಆಗಿರುವ ಆತ್ಮ ೧೮-೧೦೧ . ಅನುಭವಸ್ವರೂಪ, ೧೮ ೧೯೫.

೧೪. **ಅನ್ವಯವ್ಯತಿರೇಕೌ**—
ಅದಿದ್ದರೆ ಅದೂ ಇದೆ ಎಂಬುದು ಅನ್ವಯ, ಅದಿದ್ದರೆ ಅದು ಇಲ್ಲ ಎಂಬುದು ವ್ಯತಿರೇಕ, ೧೮-೯೩, ೧೭೧, ೧೮೩

೧೫. **ಅನ್ವಯಾ**—
ಎಲ್ಲವನ್ನೂ ಅನುಸರಿಸಿಕೊಂಡಿರು (ಅಹಂಕಾರ), ೧೮-೭೨

೧೬. **ಅಮೃತಮ್**—
ದೇವತೆಗಳು ಸಮುದ್ರದಿಂದ ಕಡೆದು ತೆಗೆದ ಅಮೃತ (ಜ್ಞಾನಕ್ಕೆ ದೃಷ್ಟಾಂತ), ೨೯-೨೮

**೩೮. ಆತ್ಮಲಾಭಃ—**
ಜ್ಞಾನದಿಂದ ತನ್ನ ಸ್ವರೂಪವನ್ನು ಪಡೆದುಕೊಳ್ಳುವದು, ೧೭-೪

**೩೯. ಆತ್ಮಾ—**
ತನ್ನ ಸ್ವರೂಪ, ೨-೪, ೪-೫, ೫-೩, ೬-೧

**೪೦. ಆತ್ಮಾಭಾಸಃ—**
ಆತ್ಮನಂತೆ ತೋರುವ ಅಂತಃಕರಣದ ತೋರಿಕೆ, ೧೮-೩೦, ೪೬, ೫೧. ೬೯

**೪೧. ಆದಿತ್ಯಃ—**
ಸೂರ್ಯ, (ತನ್ನ ಇರುವಿಕೆಯಿಂದಲೇ ಆತ್ಮನು ಬೆಳಗುವದಕ್ಕೆ ದೃಷ್ಟಾಂತ) ೧೫-೪೫ ; (ಆತ್ಮನಿಗೆ ಅಜ್ಞಾನವಿಲ್ಲವೆಂಬುದಕ್ಕೆ ದೃಷ್ಟಾಂತ), ೧೬-೩೭

**೪೨. ಆಧಿಃ—**
ಉಪಾಧಿ, ೧೭-೧೬, ೧೮-೧೧೯

**೪೩. ಆರಬ್ಧ—**
ಫಲವನ್ನು ಕೊಟ್ಟಿರುವ (ಕರ್ಮ), ೪-೪

**೪೪. ಆಲೋಕಃ—**
ಬೆಳಕು, ವಸ್ತುವಿನ ಆಕಾರವನ್ನು ಪಡೆಯುವ ಅಂತಃಕರಣಕ್ಕೆ ದೃಷ್ಟಾಂತ, ೧೪-೪

**೪೫. ಇದಂವನಮ್—**
ದಾಟುವದಕ್ಕೆ ಕಷ್ಟವಾಗಿ ವನದಂತಿರುವ ಅನಾತ್ಮ, ೨-೪

**೪೬. ಇದಮಂಶಃ—**
ನಾನು ಎಂಬ ಅಹಂಕಾರದಲ್ಲಿ ಸೇರಿಕೊಂಡಿರುವ ಅನಾತ್ಮಾಂಶ, ೫-೫, ೬-೬, ೧೨-೧

**೪೭. ಇದಮಾತ್ಮಾ—**
ಇದು ಎಂದು ಹೇಳಿಸಿಕೊಳ್ಳುವದಕ್ಕೆ ತಕ್ಕ ಅನಾತ್ಮ, ೨-೨

**೪೮. ಉತ್ಪಾದ್ಯಾಪ್ಯವಿಕಾರಾಣಿ—**
ಹುಟ್ಟುವ, ಪಡೆಯುವ, ಮಾರ್ಪಾಡುವ ಕಾರ್ಯ, ಕ್ರಿಯಾಫಲ, ೧೭-೫೦

**೪೯. ಉಪನಿಷತ್—**
ಬ್ರಹ್ಮವಿದ್ಯೆ, ಉಪನಿಷತ್ತು ೧-೨೬.

**೫೦. ಉಪಾಧಿಃ, ಉಪಧಾನಮ್—**
ಆತ್ಮವಸ್ತುವನ್ನು ತೋರಿಸುವ, ಆತ್ಮನಿಗೆ ಸೇರದೆ ಇರುವ ದೇಹಾದಿ, ೧೪-೩೦, ೧೫-೪೭, ೧೫-೧೫

**೫೧. ಉಪಾದೇಯ—**
ಸ್ವೀಕರಿಸಬೇಕಾದ, ಕ್ರಿಯಾ ಶೇಷ, ೧೬-೨೬, ೧೭-೪೨, ೮೩

**೫೨. ಏಕರಸಃ—**
ಒಂದೇ ತೆರನಾದ, (ಚೈತನ್ಯಮಾತ್ರ), ೧೫-೧೫

**೫೩. ಕರ್ತ್ರಧೀನ—**
ಕರ್ತೃವಿನ ವಶವಾಗಿರುವ ಕರ್ಮ, ೧-೧೩

**೫೪. ಕರ್ಮ—**
ಶಾಸ್ತ್ರದಲ್ಲಿ ವಿಧಿಸಿರುವ ಕ್ರಿಯೆ, ೧೫-೭ ೧೬-೧೦ ; ವಿಷಯ, ೧೫-೩

**೫೫. ಕರ್ಮಕರ್ತೃತ್ವಮ್—**
ಒಂದು ಕ್ರಿಯೆಗೆ ತಾನೇ ಕರ್ಮವೂ ಕರ್ತೃವೂ ಆಗಿರುವದು ೧೬-೧೦

**೫೬. ಕಲ್ಪಿತಸ್ಯಾಪನೇತೃ—**
ಅಧ್ಯಸ್ತವಾದದ್ದನ್ನು ಅಲ್ಲಗಳೆಯುವ (ವಾಕ್ಯ), ೧೧-೧೨

**೫೭. ಕಾರಕಾಪೇಕ್ಷ—**
ಕರ್ಮವೇ ಮುಂತಾದವನ್ನು ಬಯಸುವ (ಕರ್ತೃತ್ವ), ೧೨-೧೭

**೫೮. ಕಾರ್ಯಕಾರಣವರ್ಜಿತಃ—**
ಕಾರ್ಯಕರಣಗಳಾದ ದೇಹೇಂದ್ರಿಯಗಳಿಲ್ಲದ (ಆತ್ಮ), ೧೧

**೫೯. ಕುಣ್ಡಲೀಪ್ರತ್ಯಯಃ—**
ನಾನು ಒಂಟಿಯನ್ನು ಧರಿಸಿರುವೆನೆಂಬ ಅಭಿಮಾನ, ೧೮-೧೫೬

**೬೦. ಕುತಾರ್ಕಿಕಾಃ—**
ಆತ್ಮನು ಜ್ಞೇಯನೆಂಬ ತಪ್ಪುತರ್ಕದವರು, ೧೯-೨೬

೮೦. **ತುಲಾಸ್ತೌ—**
ತಕ್ಕಡಿಯ ಕೊನೆಯ ಪರಡಿಗಳು, ಒಂದು ತಪ್ಪಿದರೆ ಇನ್ನೊಂದಾಗುವ ಸಪಸತ್ತುಗಳಿಗೆ ದೃಷ್ಟಾಂತ, ೧೯-೨೧

೮೧. **ತುಲ್ಯನೀಡತ್ವಮ್—**
ತತ್ತ್ವಂಪದಗಳ ಸಾಮಾನಾಧಿಕರಣ್ಯ, ೧೮-೧೬೪॥, ೧೮೭॥

೮೨. **ತ್ವಂಪದಾರ್ಥವಿವೇಕಃ—**
ತತ್ತ್ವಮಸಿ ಎಂಬ ವಾಕ್ಯದಿಂದ ಪ್ರತ್ಯಗಾತ್ಮನನ್ನು ಬಿಂಗಡಿಸಿ ಅರಿತುಕೊಳ್ಳುವದು, ೧೮-೧೭೫, ೨೧೧

೮೩. **ದಶಮಃ—**
ಹತ್ತನೆಯವನು, ತಾನೇ ತನ್ನನ್ನು ಮರೆತಿದ್ದದ್ದಕ್ಕೆ ದೃಷ್ಟಾಂತ, ೧೨-೩ ೧೮-೧೭೫॥, ೧೭೮, ೧೭೯, ೧೮೪

೮೪. **ದಾಶರಥಿಃ—**
ತಾನು ವಿಷ್ಣುವೆಂಬುದನ್ನು ಬ್ರಹ್ಮನಿಂದ ಅರಿತುಕೊಂಡ ರಾಮ ೧೮-೯೭

೮೫. **ದೃಶೇಶ್ಛಾಯಾ—**
ಆತ್ಮನ ಆಭಾಸ, ೧೨-೬

೮೬. **ದೃಶ್ಯ—**
ಆತ್ಮನಿಗೆ ವಿಷಯವಾಗಿರುವ (ಅನಾತ್ಮ), ೧೫-೪, ೧೬

೮೭. **ದೃಷ್ಟಮ್—**
ಅನುಭವಕ್ಕೆ ಬರುವ ಜಾಗ್ರತ್ತು, ೧೫-೩೩

೮೮. **ದೃಷ್ಟಾನ್ತಃ—**
ಕಂಡಿರುವ ವಸ್ತು, ದಾರ್ಷ್ಟಾಂತಿಕಕ್ಕೆ ಎಲ್ಲಾ ಭಾಗದಲ್ಲೂ ಸಮನಾಗಿರಬೇಕಾದದ್ದಿಲ್ಲ, ೧೮-೩೩

೮೯. **ದೇಹಯೋಗಃ—**
ದೇಹದ ಸಂಬಂಧ, ಜನ್ಮ, ೧-೧೪, ೧೫-೬

೯೦. **ದೇಹಾತ್ಮಜ್ಞಾನಮ್, ದೇಹಾತ್ಮತ್ವಮ್—**
ದೇಹವೇ ತಾನೆಂಬ ಜ್ಞಾನ, ೪-೫, ೧೧-೫

೯೧. **ದೇಹಾಭಿಮಾನೀ—**
ದೇಹವೇ ತಾನೆಂದುಕೊಂಡು ದುಃಖಿಸುವವನು, ೧೨-೫

೯೨. **ದೀಪಃ—**
ಆತ್ಮನಿಗೆ ದೃಷ್ಟಾಂತ, ೧೬-೬, ಮೋಕ್ಷಕ್ಕೆ ದೃಷ್ಟಾಂತ, ೧೯-೨೫

೯೩. **ದೃಗಾದಿಶಕ್ತಯಃ—**
ನೋಟವೇ ಮುಂತಾದ ಚೈತನ್ಯಸ್ವರೂಪ ಶಕ್ತಿಗಳು, ೧೦-೯

೯೪. **ದೇಹಾದ್ಯಾರಮ್ಭಃ—**
ದೇಹವೇ ಮುಂತಾದ ಕಾರ್ಯವನ್ನುಂಟುಮಾಡಿರುವದು, ೪-೩

೯೫. **ದ್ರಷ್ಟಾ—**
ಸಾಕ್ಷಿಯಾದ ಆತ್ಮ, ೭-೫ ; ೧೪-೮, ೨೦; ೧೬-೮

೯೬. **ದ್ರಷ್ಟೃತ್ವಮ್—**
ಅಂತಃಕರಣವನ್ನು ವ್ಯಾಪಿಸುವದು ಸಾಕ್ಷಿತ್ವವು, ೧೯-೬

೯೭. **ದ್ರಷ್ಟ್ರಾಭಾಸಮ್—**
ಚೈತನ್ಯದಂತೆ ಕಾಣುವ ಚಿತ್ತ, ೧೨-೧

೯೮. **ದ್ವಂದ್ವಾನಿ—**
ಶೀತೋಷ್ಣದುಃಖಾದಿಗಳು, ೧೫-೩೭

೯೯. **ಧೀಪ್ರತ್ಯಯಾತ್ಮಾ—**
ಅಂತಃಕರಣ ಪ್ರತ್ಯಯಗಳಿಗೆ ಆತ್ಮ, ೧೮-೧

೧೦೦. **ಧೀಸಾಕ್ಷೀ—**
ಅಂತಕರಣವನ್ನು ನೋಡುವ ಆತ್ಮ, ೧೫-೧೨

೧೦೧. **ಧ್ರುವಕಾರ್ಯಮ್, ಧ್ರುವಫಲಮ್**—
ಅವಶ್ಯವಾಗಿ ಫಲವನ್ನು ಕೊಡುವ (ಕರ್ಮ), ೧-೯, ೧೧

೧೦೨. **ಧ್ಯಾನಮ್**—
ಆತ್ಮಚಿಂತನೆ, ೧೪-೩೯

೧೦೩. **ನಭಃ**—
ಎಲ್ಲೆಲ್ಲಿಯೂ ಒಬ್ಬನೇ ಇರುವ ಆತ್ಮನಿಗೆ ದೃಷ್ಟಾಂತವಾದ ಆಕಾಶ, ೧೭-೬೯

೧೦೪. **ನರಶೃಙ್ಗಮ್**—
ಅರ್ಥಕ್ರಿಯಾಕಾರಿಯಲ್ಲದ್ದಕ್ಕೆ ದೃಷ್ಟಾಂತವಾದ ಮನುಷ್ಯನ ಕೋಡು, ೧೯-೧೬

೧೦೫. **ನಿತ್ಯಮುಕ್ತ**—
ಯಾವಾಗಲೂ ಮುಕ್ತನಾಗಿರುವ ಆತ್ಮ, ೧೩-೧೧, ೧೬ ; ೧೮-೩, ೧೭೪, ೧೮೩

೧೦೬. **ನಿತ್ಯವಿಜ್ಞಾನರೂಪಃ, ನಿತ್ಯಾವಗತಿಃ**—
ನಿತ್ಯವಾದ ಚೈತನ್ಯಸ್ವರೂಪನಾದ ಆತ್ಮ, ೧೩-೫, ೧೮-೧

೧೦೭. **ನಿರುಪಾಖ್ಯಃ**—
ವರ್ಣಿಸಿ ಹೇಳುವದಕ್ಕೆ ಆಗದ, ೧೫-೩೯

೧೦೮. **ನಿಃಶ್ರೇಯಸಮ್**—
ಮೋಕ್ಷ, ೧-೫, ೭

೧೦೯. **ನೀಲಾಶ್ವಃ**—
ಕರಿಯ ಕುದುರೆ, ತತ್ತ್ವಂಪದಾರ್ಥಗಳ ಸಾಮಾನಾಧಿಕರಣ್ಯಕ್ಕೆ ದೃಷ್ಟಾಂತ, ೧೮-೧೬೪||

೧೧೦. **ನ್ಯಾಸಃ**—
ಕರ್ಮಸಂನ್ಯಾಸ, ೧-೨೦

೧೧೧. **ಪಟೇ ಚಿತ್ರಮ್**—
ಬಟ್ಟೆಯಲ್ಲಿ ಬರೆದ ಚಿತ್ರ, ಸ್ಮರಣೆಯಿಂದ ಕಾಣುವ ವಸ್ತುವಿಗೆ ದೃಷ್ಟಾಂತ, ೧೫-೨

೧೧೨. **ಪರಮಾರ್ಥದರ್ಶನಮ್**—
ನಿಜವಾಗಿರುವ ಬ್ರಹ್ಮದ ಜ್ಞಾನ, ೧೦-೧೪

೧೧೩. **ಪರಾಪೋಹಃ**—
ಅನಾತ್ಮವನ್ನು ಅಲ್ಲಗಳೆಯುವದು, ೧೪-೧೧

೧೧೪. **ಪಾರಗಃ**—
ನದಿಯ ಆಚೆಯ ದಡವನ್ನು ಕಂಡವನು, ಕೃತಕೃತ್ಯ, ೧೪-೧೩

೧೧೫. **ಪ್ರತ್ಯಕ್ಷತಾ**—
ನೇರಾಗಿ ಅನುಭವಕ್ಕೆ ಬರುವಿಕೆ, ೧೪-೨೬

೧೧೬. **ಪ್ರತ್ಯಕ್ಷಾದೀನಿ**—
ಪ್ರತ್ಯಕ್ಷವೇ ಮುಂತಾದ ಲೌಕಿಕಪ್ರಮಾಣಗಳು, ೧೧-೫, ೧೨-೧೭೭

೧೧೭. **ಪ್ರತ್ಯಕ್ಷಾದಿನಿಭ, ಪ್ರತ್ಯಕ್ಷಾಭಾಸ**—
ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳಂತೆ ಕಾಣುವ ಭ್ರಾಂತಿ, ೧೮-೭, ೧೭೮, ೨೦೭

೧೧೮. **ಪ್ರತ್ಯಗಾತ್ಮಾ**—
ಒಳಗಿನ ಆತ್ಮ, ೧-೧೮, ೩-೪, ೧೮-೯೮, ೧೬೪, ೧೬೫, ೧೮೮, ೧೯೩, ೧೯೪

೧೧೯. **ಪ್ರತ್ಯಯಾವಗತೀ**—
ಅಂತಃಕರಣದ ವೃತ್ತಿ ಮತ್ತು ಫಲರೂಪ ಜ್ಞಾನ, ೧೮-೯೫||

೧೨೦. **ಪ್ರಮಾ**—
ಪ್ರಮಾಣದಿಂದಾಗುವ ಜ್ಞಾನ, ೧೮-೧೦೧, ೧೮೭

೧೨೧. **ಪ್ರಸಙ್ಖ್ಯಾನಮ್, ಪ್ರಸಙ್ಖ್ಯಾ**—
ಸಾಕ್ಷಾತ್ಕಾರಕ್ಕಾಗಿ ಮಾಡುವ ಶಾಸ್ತ್ರಯುಕ್ತಿಗಳ ಅಭ್ಯಾಸ, ೧೮-೯, ೧೨-೧೭

೧೨೨. **ಪ್ರತ್ಯವಾಯಃ**—
ಕರ್ಮವನ್ನು ಮಾಡದೆ ಇರುವದರಿಂದಾಗುವ ದೋಷ, ೧-೯, ೧-೨೪

**೧೨೩. ಫಲಮ್—**
ಪ್ರಮಾಣದಿಂದುಂಟಾಗುವಂತಿರುವ ಜ್ಞಾನ, ಆತ್ಮಚೈತನ್ಯವು, ೨-೩

**೧೨೪. ಫಲಾರ್ಥಿತ್ವಮ್—**
ಕರ್ಮದ ಫಲವನ್ನು ಬಯಸುವದು, ೧-೨೪

**೧೨೫. ಬನ್ಧಮೋಕ್ಷಾದಯಃ—**
ಬಂಧಮೋಕ್ಷಾದಿಗಳು ಕಲ್ಪಿತ, ನಿಜವಾದ ಅವಸ್ಥೆಗಳಲ್ಲ, ೧೫-೪೯, ೧೬-೩೯

**೧೨೬. ಬಿಮ್ಬಮ್—**
ಚಂದ್ರಾದಿಗಳ ಪ್ರತಿಬಿಂಬವು, ಅದೃಶ್ಯನಾದ ಆತ್ಮನು ಅಂತಃಕರಣದಲ್ಲಿ ಕಾಣುತ್ತಾನೆಂಬುದಕ್ಕೆ ದೃಷ್ಟಾಂತ, ೧೭-೩೪, ೩೫

**೧೨೭. ಬೀಜಮ್—**
(೧) ಎಚ್ಚರಕನಸುಗಳ ಕಾರಣವಾದ ನಿದ್ರೆ, ೧೬-೧೮, ೧೭-೨೫, (೨) ಸುಟ್ಟ ಬೀಜ. ಜ್ಞಾನದಿಂದ ಹೋದದ್ದು ಮತ್ತೆ ಹುಟ್ಟುವದಿಲ್ಲವೆಂಬುದಕ್ಕೆ ದೃಷ್ಟಾಂತ, ೧೭-೨೬ (೩) ಕಾರಣ, ೧೦-೧೦, ೧೪-೧೯

**೧೨೮. ಬುದ್ಧಿಚಾರಾಃ—**
ಅಂತಃಕರಣವೃತ್ತಿಗಳು, ೭-೨

**೧೨೯. ಬುಭುತ್ಸುಃ—**
ತತ್ತ್ವವನ್ನು ತಿಳಿಯಬೇಕೆಂಬ ಇಚ್ಛೆಯುಳ್ಳವ, ೩-೪

**೧೩೦. ಬೋಧಾಬೋಧೌ**
ಜ್ಞಾನಾಜ್ಞಾನಗಳು (ನಿಜವಾಗಿ ಆತ್ಮನಲ್ಲಿಲ್ಲ), ೧೫-೫೦

**೧೩೧. ಬ್ರಹ್ಮ—**
ಅಪರೋಕ್ಷವಾಗಿರುವ ನಮ್ಮಗಳ ಆತ್ಮ ೧೭-೪೦

**೧೩೨. ಬ್ರಹ್ಮವಿತ್**
ಬ್ರಹ್ಮವನ್ನು ಅರಿತುಕೊಂಡವನು, ೧೪-೧೧ ೧೫ ; ೧೫-೧೧

**೧೩೩. ಬ್ರಹ್ಮವಿದ್ಯಾ—**
ಬ್ರಹ್ಮದ ಜ್ಞಾನ, ೧-೨, ೫, ೨೫

**೧೩೪. ಭಾನುಃ—**
ಸೂರ್ಯ, ಆತ್ಮನಿಗೆ ಜ್ಞಾನಾಜ್ಞಾನಗಳಿಲ್ಲವೆಂಬುದಕ್ಕೆ ದೃಷ್ಟಾಂತ, ೧೭-೬೭

**೧೩೫. ಭಾನೋರ್ಬಿಮ್ಬಮ್—**
ಸೂರ್ಯನ ಪ್ರತಿಬಿಂಬ, ಅಂತಃಕರಣದಲ್ಲಿ ತೋರುವ ಜ್ಞಾನವು ಅದರದ್ದಲ್ಲವೆಂಬುದಕ್ಕೆ ದೃಷ್ಟಾಂತ, ೧೭-೩೫

**೧೩೬. ಭಾವನಾ—**
ಕರ್ಮಕ್ಕೆ ಕಾರಣವಾದ ಕಾಮ, ೧೦-೯

**೧೩೭. ಭಾವಾಭಾವಜ್ಞಃ—**
ಭಾವಕ್ಕೂ ಅಭಾವಕ್ಕೂ ಸಾಕ್ಷಿಯಾಗಿರುವ ಆತ್ಮ, ೧೬-೩೧

**೧೩೮. ಭ್ರಾಮಕಃ—**
ಸೂಜಿಗಲ್ಲು, ಆತ್ಮನ ಕರ್ತೃತ್ವಕ್ಕೆ ದೃಷ್ಟಾಂತ, ೧೫-೪೭॥, ೧೭-೮೦

**೧೩೯. ಮಣಿಃ—**
ಸ್ಫಟಿಕ, ಬುದ್ಧಿಯಲ್ಲಿ ನಾನಾವೃತ್ತಿಗಳಾಗುವದಕ್ಕೆ ದೃಷ್ಟಾಂತ, ೭-೪, ೧೭-೧೬, ೧೮-೧೧೯

**೧೪೦. ಮಾಯಾ—**
(೧) ಕಣ್ಣುಕಟ್ಟಿನಿಂದ ಕಾಣುವ ಹುಸಿ ತೋರಿಕೆ, ೧೭-೩೧. (೨) ಜಗತ್ತೆಂಬ ಹುಸಿತೋರಿಕೆ, ೧೯-೫. ಅವಿದ್ಯೆ, ೧೯-೧೭

**೧೪೧. ಮಾಯಾಬೀಜಮ್—**
ಅವಸ್ಥಾತ್ರಯವಾಗಿ ಕಾಣುವ ಸುಷುಪ್ತಿ, ೧೭-೨೭

**೧೪೨. ಮಾಯಾಮಯಕಾರ್ಯತಾ**
ಹುಸಿತೋರಿಕೆಗಳನ್ನು ಸೃಷ್ಟಿಸುವ ಅಂತಃಕರಣದ ಧರ್ಮ, ೮-೨

**೧೬೪. ವೇದಃ**—
ಯಾವದರಿಂದ ತಿಳಿಯುತ್ತಾರೋ ಆ ಚೈತನ್ಯವೆಂಬ ಮುಖ್ಯವೇದ, ೧೭-೧೩

**೧೬೫. ವ್ಯಞ್ಜಕಃ**—
ವಿಷಯವನ್ನು ತೋರಿಸುವ ಬೆಳಕು, ಬೆಳಕಿನಂತೆ ವಿಷಯಾಕಾರವಾಗುವ ಮನಸ್ಸು, ೧೪-೬, ೧೬-೫

**೧೬೬. ವ್ಯಸ್ತಮ್**—
ಬಿಡಿಬಿಡಿಯಾಗಿರುವ, ೧೫-೨೦

**೧೬೭. ವ್ಯೋಮ**—
(೧) ಕಪ್ಪೆಂಬ ಅಧ್ಯಾಸವಿರುವ ಆಕಾಶ, ೯-೫ ; (೨) ಉಪಾಧಿಯಿಂದ ಅನೇಕವೆಂದು ತೋರುವ ಆಕಾಶ, ೧೩-೨೧ ; ಇತರ ಲೇಪವೂ ಇಲ್ಲದ ನಿರ್ಮಲವಾದ ಆಕಾಶ, ೧೦-೧೪, ೧೧-೬, ೧೪-೩೧ ; ವ್ಯಾಪಕವಾದ ಆಕಾಶ, ೧೪-೩೪, ೧೫-೯

**೧೬೮. ಶಕ್ತಯಃ**—
ಚೈತನ್ಯದಲ್ಲಿ ಉಪಾಧಿಯಿಂದ ಕಲ್ಪಿತವಾಗಿರುವ ದೃಷ್ಟ್ಯಾದಿಶಕ್ತಿಗಳು, ೧೦-೯, ೧೭-೫೪

**೧೬೯. ಶರೀರಮಾಲಾ**—
ಒಂದಾಗುತ್ತಲೊಂದು ಬರುವ ಶರೀರಗಳ ಸಾಲು, ೧೯-೧

**೧೭೦. ಶಿರೋದುಃಖಮ್**—
ತಲೆನೋವು (ದೇಹದಲ್ಲಿ ಒಂದು ಭಾಗದಲ್ಲಾಗುವ ಅನಾತ್ಮಧರ್ಮ), ೧೬-೮

**೧೭೧. ಶ್ರುತ್ಯನುಮಾನಜನ್ಮಾನಾ**—
ಶ್ರುತಿಯಿಂದಲೂ ಅನುಮಾನದಿಂದಲೂ ಹುಟ್ಟುವ ಸಾಮಾನ್ಯರೂಪಜ್ಞಾನಗಳು, ೧೮-೧೪

**೧೭೨. ಷಡೂರ್ಮಯಃ**—
ಹಸಿವುಬಾಯಾರಿಕೆ, ಮುಪ್ಪುಸಾವು, ಶೋಕಮೋಹ ಎಂಬ ಅನಾತ್ಮಧರ್ಮಗಳು, ೧೯-೪

**೧೭೩. ಸಂಹತ**—
ಒಟ್ಟುಗೂಡಿ ವ್ಯಾಪಾರಮಾಡುವ, ೧೬-೯

**೧೭೪. ಸಙ್ಘಾತಃ**—
ಕಾರ್ಯಕಾರಣಗಳ ಗುಂಪು, ೧೫-೧೯, ೧೬-೭

**೧೭೫. ಸತ್ತ್ವಕ್ಷೇತ್ರಜ್ಞೌ**—
ಅಂತಃಕರಣವೂ ಸಾಕ್ಷಿಯಾದ ಆತ್ಮನೂ, ೧೫-೨

**೧೭೬. ಸದಸದ್ವಿಕಲ್ಪನಾ**—
ಇರುವದು, ಇಲ್ಲದ್ದು ಎಂದು ವಿಕಲ್ಪಿಸುವದು, ೧೯-೨೧

**೧೭೭. ಸದಸದ್ವಿಪರ್ಯಯಃ**—
ಇದ್ದದ್ದು ಇಲ್ಲವಾಗುವದು, ಇಲ್ಲದ್ದು ಇರುವದಾಗುವದು, ೧೯-೨೨

**೧೭೮. ಸಮಸ್ತಮ್**—
ವ್ಯಷ್ಟಿಗಳನ್ನೆಲ್ಲ ಸೇರಿಸಿಕೊಂಡು ವ್ಯಾಪಿಸಿರುವ ಒಟ್ಟು, ೧೫-೨೦

**೧೭೯. ಸಮಾಧಿಃ** —
ನಿಲುಗಡೆಗೆ ಬರುವದು, ಚಾಂಚಲ್ಯವಿಲ್ಲದಿರುವದು, ೧೩-೧೪, ೧೪-೩೫.

**೧೮೦. ಸರ್ಪಿಃ** —
ಹಾಲಿನಿಂದ ಹೊರಕ್ಕೆ ಬಂದು ಅದರಲ್ಲಿ ಮತ್ತೆ ಬೆರೆಯದ ಬೆಣ್ಣೆ ಅಥವಾ ತುಪ್ಪ, ಜ್ಞಾನದಿಂದ ದೇಹಕ್ಕಂಟದ ಆತ್ಮನಿಗೆ ದೃಷ್ಟಾಂತ, ೧೭-೬೧.

**೧೮೧ ಸರ್ವಪ್ರತ್ಯಯಸಾಕ್ಷೀ**—
ಎಲ್ಲಾ ಪ್ರತ್ಯಯಗಳನ್ನೂ ನೇರಾಗಿ ನೋಡುವ ಕೂಟಸ್ಥಚೈತನ್ಯ, ೧೫-೧೭, ೩೮

**೧೮೨. ಸರ್ವಾನ್ತರಃ** —
ಎಲ್ಲಕ್ಕೂ ಒಳಗಿನ ಆತ್ಮ, ೧೨-೯

**೧೮೩. ಸುಷುಪ್ತಮ್, ಸ್ವಾಪಃ** —
ಗಾಢನಿದ್ರೆ, ೯-೮, ೧೦-೧೩, ೧೭-೩೯

**೧೮೪. ಸೋಪಾಧಿಃ —**
ಉಪಾಧಿಯಿಂದ ಬೇರೆಯಾಗಿ ತೋರುವ ಆತ್ಮ, ೧೫-೨೯

**೧೮೫. ಸ್ಥೂಲದೇಹಃ —**
ಮಾಂಸಮಯವಾಗಿ ಇಂದ್ರಿಯಗಳಿಗೆ ಕಾಣುವ ದೇಹ, ೧೫-೧೦

**೧೮೬. ಸ್ಮೃತಿಃ —**
(೧) ಶ್ರುತ್ಯರ್ಥವನ್ನು ಹೇಳುವ ಗ್ರಂಥ, ೧೮-೩೩ ;
(೨) ನೆನಪು, ೧೮-೬೭,೧೫೫.
(೩) ಅನ್ವಯವ್ಯತಿರೇಕಗಳಿಂದಾಗುವ ಪದಾರ್ಥಗಳ ಸ್ಮರಣೆ, ೧೧-೧೭೧
(೪) ಸ್ವಪ್ನಾವಸ್ಥೆ, ೧೫-೩೩, ೩೪ ; ೧೭-೨೫

**೧೮೭. ಸ್ವಬೋಧಃ —**
ತನ್ನ ಸ್ವರೂಪವಾಗಿ ಚೈತನ್ಯರೂಪವಾದ ಜ್ಞಾನ, ೧೫-೪೧

**೧೮೮. ಸ್ವಯಂಲಬ್ಧ—**
ತಾನೇ ಪ್ರಾಪ್ತವಾಗಿರುವ ಆತ್ಮ ೧೭-೬

**೧೮೯. ಸ್ವಯಂಸಿದ್ಧ—**
ಮತ್ತೊಂದು ಜ್ಞಾನವನ್ನು ಅಪೇಕ್ಷಿಸ ಗೊತ್ತಾಗುವ, ೧-೩,

**೧೯೦ ಸ್ವರೂಪಲಾಭಃ —**
ಆತ್ಮಸ್ವರೂಪದ ಪ್ರಾಪ್ತಿ, ೧೬-೭೪

**೧೯೧. ಸ್ವರೂಪಾವ್ಯವಧಾನೇ—**
ತನ್ನ ರೂಪವೂ ನಡುವೆ ಯಾವ ಮರೆ ಮರೆಯಿಲ್ಲದ್ದೂ ಆಗಿರುವದೆಂಬ ಹೇತುಗಳು, ೧೫-೪೦

**೧೯೨. ಸ್ವಲಕ್ಷಣಮ್—**
ತನ್ನ ಅಸಾಧಾರಣರೂಪ, ೧೮-೧೪೨

**೧೯೩. ಸ್ವಾಭಾವಿಕಂ ಪದಮ್—**
ತನ್ನ ರೂಪವೇ ಆಗಿರುವ ಸ್ಥಾನ, ಆತ್ಮ, ೧೧-೨೨

**೧೯೪ ಹಾನೋಪಾದಾನೇ—**
ಬಿಡುವದು ಮತ್ತು ತೆಗೆದುಕೊಳ್ಳುವದು (ಅನಾತ್ಮದ ಧರ್ಮ), ೧೪-೯. ೧೪.



ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಸಂಖ್ಯೆ ೫೨

ಶ್ರೀ ಶಂಕರಾಚಾರ್ಯವಿರಚಿತ

# ಅಪರೋಕ್ಷಾನುಭೂತಿ

ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ ಮುಂತಾದವುಗಳೊಡನೆ

ಬರೆದವರು:

**ಶ್ರೀ ಸಚ್ಚಿದಾನಂದಸರಸ್ವತೀಸ್ವಾಮಿಗಳವರು**

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೨೧

**ಅಧ್ಯಾತ್ಮಪ್ರಕಾಶಕಾರ್ಯಾಲಯ**

**ಹೊಳೆನರಸೀಪುರ**

೧೯೪೯

# ಮೊದಲ ಮಾತು



ಅಪರೋಕ್ಷಾನುಭೂತಿಯು ವಿಸ್ತಾರವಾದ ಕನ್ನಡ ವ್ಯಾಖ್ಯಾನದೊಡನೆ ಕಾರ್ಯಾಲಯದಲ್ಲಿ ಅಚ್ಚಾಗಿ ಒಂಬತ್ತು ವರ್ಷಗಳಾದವು. ಈಗ ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲೆಗೆ ತಕ್ಕಂತೆ ಮೂಲ, ಅನುವಾದ, ಟಿಪ್ಪಣಿ, ಅನುಕ್ರಮಣಿಕೆಗಳು, ಪೀಠಿಕೆ – ಇಷ್ಟು ಪರಿಕರಗಳೊಡನೆ ಮುದ್ರಿಸಲಾಗಿದೆ. ಪೀಠಿಕೆಯಲ್ಲಿ ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು ಗ್ರಂಥದ ವಿಷಯದಲ್ಲಿ ವಿವೇಚನೆಮಾಡಿರುವ ವಿಷಯಗಳು ವಿಶೇಷಮಹತ್ತ್ವದವಾಗಿವೆ. ಸಂಪುಟದಲ್ಲಿ ಸೇರಿರುವ ಇತರ ಪ್ರಕರಣಗಳ ಹೋಲಿಕೆಯಿಂದ ಗ್ರಂಥದ ತತ್ತ್ವನಿರ್ಧಾರಣೆಗೆ ಪ್ರಯೋಜನವಾಗುವದೆಂದು ನಮ್ಮ ನಂಬಿಕೆ.

ಅಧ್ಯಾತ್ಮಪ್ರಕಾಶ ಕಾರ್ಯಾಲಯ
30—10—49

**ಪ್ರಕಾಶಕರು**



# ಪೀಠಿಕೆ



ಅಪರೋಕ್ಷಾನುಭೂತಿಗ್ರಂಥವು ಮೂರ್ತಿಯಲ್ಲಿ ಚಿಕ್ಕದಾದರೂ ಬೆಲೆಯಲ್ಲಿ ಅತ್ಯುತ್ತಮವಾದ ಪ್ರಕರಣಗಳಲ್ಲೊಂದೆನಿಸಿರುತ್ತದೆ. ಇದರ ವಿಷಯದಲ್ಲಿ ವಿಸ್ತಾರವಾದ ಪೀಠಿಕೆಯನ್ನು ಕಾರ್ಯಾಲಯದ ಸವ್ಯಾಖ್ಯಾನಸಂಸ್ಕರಣದಲ್ಲಿ ಬರೆದಿತ್ತು. ಅದರಲ್ಲಿ "ಗ್ರಂಥಕರ್ತರು ಶ್ರೀ ಶಂಕರಾಚಾರ್ಯರೇ ಅಲ್ಲದಿದ್ದರೂ ಅವರ ಸಿದ್ಧಾಂತವನ್ನೇ ಎತ್ತಿಹಿಡಿಯುವದಕ್ಕೆ ಬದ್ಧಾದರರಾಗಿರುವರೆಂತಲೂ ಈ ಗ್ರಂಥದಲ್ಲಿ ಯಾವ ಅರ್ವಾಚೀನ ಗ್ರಂಥಗಳಿಂದಲೂ ಪ್ರಮಾಣವಚನಗಳನ್ನು ಉದಾಹರಿಸಿಲ್ಲವಾದ್ದರಿಂದ ಇವರು ತಕ್ಕಮಟ್ಟಿಗೆ ಪ್ರಾಚೀನರೇ ಆಗಿರುವರೆಂತಲೂ ಹೇಳಬೇಕಾಗಿದೆ" ಎಂದು ಹೇಳಿತ್ತು.

ಗ್ರಂಥವು ಆಚಾರ್ಯರದ್ದಾಗಿರಲಾರದೆಂದು ಕಲ್ಪಿಸುವವರಿಗೆ ಯುಕ್ತಿಗಳು ಯಾವವೆಂದರೆ (೧) ನಿದಿಧ್ಯಾಸನವನ್ನು ಧ್ಯಾನಾಭ್ಯಾಸವೆಂಬಂತೆ ಪರಿಗಣಿಸಿ ಬ್ರಹ್ಮಾಕಾರವೃತ್ತಿಯನ್ನು ಅಭ್ಯಾಸಮಾಡಿದರೆ ವೃತ್ತಿವಿಸ್ಮರಣರೂಪವಾದ ಸಮಾಧಿಜ್ಞಾನವುಂಟಾಗುವದೆಂದು ತಿಳಿಸಿರುವದು (೧೨೪, ೧೨೭) ಮತ್ತು (೨) ನಿದಿಧ್ಯಾಸನವನ್ನು ರಾಜಯೋಗವೆಂದು ಕರೆದು ಅದಕ್ಕೆ ಹದಿನೈದು ಅಂಗಗಳನ್ನೂ (೧೦೦) ಸಮಾಧಿಗೆ ಎಂಟು ವಿಘ್ನಗಳನ್ನೂ (೧೨೭, ೧೨೮) ಕಲ್ಪಿಸಿ ಪಾತಂಜಲಯೋಗಕ್ಕೆ ಇದನ್ನು ಪ್ರತಿಪಕ್ಷವಾಗಿ ನಿಲ್ಲಿಸಿರುವದು. ಶ್ರೀ ಶಂಕರಾಚಾರ್ಯರು ತಮ್ಮ ಪ್ರಸ್ಥಾನತ್ರಯಭಾಷ್ಯದಲ್ಲಿ ಬಳಸದೆ ಇರುವ ಕೆಲವು ಪಾರಿಭಾಷಿಕಶಬ್ದಗಳನ್ನುಪಯೋಗಿಸಿರುವದು ಈ ಗ್ರಂಥವು ಅರ್ವಾಚೀನವೆಂಬುದಕ್ಕೆ ಸಾಕಾದಷ್ಟು ಸಾಕ್ಷ್ಯವನ್ನು ಕೊಡುತ್ತದೆ ಎಂದು ವಿಮರ್ಶಕರ ಅಭಿಪ್ರಾಯವಿದೆ. ಈ ಪುಸ್ತಕದ ಕೊನೆಯಲ್ಲಿ ಕೊಟ್ಟಿರುವ ಶಬ್ದಾನುಕ್ರಮಣಿಕೆಯಲ್ಲಿ ಇಂಥ ಕೆಲವು ಶಬ್ದಗಳನ್ನು ನಕ್ಷತ್ರಚಿಹ್ನೆಯಿಂದ ತೋರಿಸಿರುತ್ತದೆ. ಪುರಾತತ್ತ್ವವಿಮರ್ಶನದಕ್ಷರಾದವರು ಈ ವಾದದ ಸಾರಾಸಾರತೆಯನ್ನು ನಿರ್ಧರಿಸಬೇಕಾಗಿರುತ್ತದೆ.

ಇದು ಹೇಗಾದರೂ ಇರಲಿ. ಗ್ರಂಥವು ಕರ್ತೃಗಳ ಹೆಸರಿನ ಮರೆಯಲ್ಲಿ ಬಾಳುವದಾಗಿಲ್ಲ. ಇದರಲ್ಲಿ ದೇಹಾತ್ಮಜ್ಞಾನನಿರಾಸ, ದೇಹಾಸತ್ಯತ್ವ, ಜ್ಞಾನಿಗೆ ಯಾವ ಕರ್ಮದ ಬಂಧವೂ ಇಲ್ಲವೆಂಬ ವಾದ –ಇವುಗಳನ್ನು ನಿರೂಪಿಸಿರುವ ಕ್ರಮವು ಜಿಜ್ಞಾಸುಗಳಿಗೆ ಅಮೂಲ್ಯವಾದ ಸಹಾಯವಾಗಿರುತ್ತದೆ. ನಿದಿ

ಧ್ಯಾಸನದಲ್ಲಿ ವೃತ್ತ್ಯನುಸಂಧಾನವನ್ನು ಮಾಡಬೇಕೆಂದು ಹೇಳಿರುವದನ್ನು ಬಾಧಿತಾನುವೃತ್ತಿಯಿಂದ ತೋರುವ ಧ್ಯಾನದಿಂದ ಕೃತ್ರಿಮಾನಂದವೂ ಜ್ಞಾನದಿಂದ ಮನೋವಾಕ್ಕುಗಳಿಗೆ ಅಗೋಚರವಾದ ಸುಖವೂ ದೊರಕುವದೆಂದು (೧೨೫, ೧೨೬) ಹೇಳಿರುವದರೊಡನೆ ಏಕವಾಕ್ಯತೆಮಾಡಿಕೊಂಡರೆ ಸಿದ್ಧಾಂತಕ್ಕೆ ಯಾವ ಹಾನಿಯೂ ಇರುವದಿಲ್ಲ ; ಸಾಧಕರಿಗೆ ಮನನಕ್ಕೆ ಕೆಲವು ಅತ್ಯುತ್ತಮಸೂಚನೆಗಳೂ ಆ ಪ್ರಕರಣದಲ್ಲಿ ದೊರೆಯುವವು.

ವೇದಾಂತವು ಪರೋಕ್ಷವಾದ ಕಾಲಾಂತರದಲ್ಲಿ ಲೋಕಾಂತರದಲ್ಲಾಗುವ ಫಲಕ್ಕೆ ಬೆಲೆಯನ್ನು ಕೊಡದೆ ಈಗಲೇ ಇಲ್ಲಿಯೇ ನಮ್ಮ ಅನುಭವಕ್ಕೆ ಬರುವ ನಿರತಿಶಯವಾದ ಆನಂದವನ್ನು ಕೊಡುವ ಉಪಾಯವನ್ನು ತಿಳಿಸುವದೆಂಬುದೂ ಯೋಗಾದಿಗಳಂತೆ ಆಯಾ ಪುರುಷನಿಗೆ ಆಗುವ ವಿಶೇಷಾನುಭವಮಾತ್ರದ ಆಧಾರದಿಂದ ವಿಚಾರವನ್ನು ಮಾಡದೆ ಸರ್ವರಿಗೂ ಆಗುವ ಅವಸ್ಥಾತ್ರಯಗಳ ವಿಚಾರದಿಂದುಂಟಾಗುವ ಜ್ಞಾನವೇ ಈ ಉಪಾಯವೆಂಬುದೂ ಈ ಗ್ರಂಥದಿಂದ ಮನದಟ್ಟಾದರೆ ಗ್ರಂಥಕರ್ತರ ಉದ್ದೇಶವು ಈಡೇರಿದಂತೆ ಆಗುವದು. ಇದನ್ನು ವಾಚಕರಿಗೆ ಮನಗಾಣಿಸುವದಕ್ಕೆ ಈ ಕನ್ನಡದ ಅನುವಾದವು ಒಂದಿಷ್ಟಾದರೂ ಸಹಾಯಕವಾದರೆ ಅನುವಾದಕನ ಶ್ರಮವು ಸಾರ್ಥಕವಾದಂತಾಗುವದು.

ಅಧ್ಯಾತ್ಮಪ್ರಕಾಶಕಾರ್ಯಾಲಯ,
ವಿರೋಧಿಸಂವತ್ಸರ,
ಆಶ್ವಯುಜ ಬ. ೧೩

**ಅನುವಾದಕ**

# ವಿಷಯಾನುಕ್ರಮಣಿಕೆ

——:o:——

——::——

# ಸಂಕೇತಗಳ ವಿವರಣೆ

| ಸಂಕೇತ | ವಿವರಣೆ |
| --- | --- |
| ಅ\|\| | ಪೂನ ಅಷ್ಟೇಕರ್ ಕಂಪೆನಿ ಮುದ್ರಿತ ಅಪರೋಕ್ಷಾನುಭೂತಿಯ ಪಾಠ. |
| ನಿ\|\| | ಬೊಂಬಾಯಿ ನಿರ್ಣಯಸಾಗರ ಮುದ್ರಣಾಲಯದಲ್ಲಿ ಅಚ್ಚಾದ ಅಪರೋಕ್ಷಾನುಭೂತಿಯ ಪಾಠ. |
| ವಾ\|\| | ಶ್ರೀರಂಗದ ವಾಣೀವಿಲಾಸಮುದ್ರಣಾಲಯದಲ್ಲಿ ಅಚ್ಚಾದ ಅಪರೋಕ್ಷಾನುಭೂತಿಯ ಪಾಠ. |
| ತೈ. ಆ.= | ತೈತ್ತಿರೀಯಾರಣ್ಯಕ |
| ತೈ. ನಾ.= | ತೈತ್ತಿರೀಯೋಪನಿಷತ್ತಿನ ನಾರಾಯಣಪ್ರಶ್ನ |

ಉಪನಿಷತ್ತುಗಳನ್ನು ಮೊದಲನೆಯ ಅಕ್ಷರದಿಂದ ತಿಳಿಸಿದೆ. ಉದಾಹರಣೆಗೆ

ಈ. = ಈಶಾವಾಸ್ಯೋಪನಿಷತ್ತು.

ಕ. = ಕಠೋಪನಿಷತ್ತು.

ಛಾಂ. = ಛಾಂದೋಗ್ಯೋಪನಿಷತ್ತು.

ಬೃ. = ಬೃಹದಾರಣ್ಯಕೋಪನಿಷತ್ತು.

ಮುಂ. = ಮುಂಡಕೋಪನಿಷತ್ತು.

—:o:—

|| ಓಂ ||

# ಅಪರೋಕ್ಷಾನುಭೂತಿ



## ಮಂಗಲ

**ಶ್ರೀಹರಿಂ ಪರಮಾನನ್ದಮುಪದೇಷ್ಟಾರಮೀಶ್ವರಮ್ ।**
**ವ್ಯಾಪಕಂ ಸರ್ವಲೋಕಾನಾಂ ಕಾರಣಂ ತಂ ನಮಾಮ್ಯಹಮ್ ॥೧॥**

೧. ಪರಮಾನಂದರೂಪನೂ (ತತ್ತ್ವವನ್ನು) ಉಪದೇಶಿಸುವ (ಗುರುವೂ) ಈಶ್ವರನೂ ವ್ಯಾಪಕನೂ ಸರ್ವಲೋಕಗಳಿಗೂ ಕಾರಣನೂ ಆಗಿರುವ ಆ ಶ್ರೀಹರಿಯನ್ನು ನಾನು ನಮಸ್ಕರಿಸುತ್ತೇನೆ.

## ಅನುಬಂಧಗಳು

**ಅಪರೋಕ್ಷಾನುಭೂತಿರ್ವೈ ಪ್ರೋಚ್ಯತೇ ಮೋಕ್ಷಸಿದ್ಧಯೇ ।**
**ಸದ್ಭಿರೇವ[1] ಪ್ರಯತ್ನೇನ ವೀಕ್ಷಣೀಯಾ ಮುಹುರ್ಮುಹುಃ ॥೨॥**

೨. ಮೋಕ್ಷವುಂಟಾಗುವದಕ್ಕಾಗಿ ಪ್ರಸಿದ್ಧವಾದ ಅಪರೋಕ್ಷಾನುಭೂತಿಯನ್ನು[2] ಹೇಳಲಾಗುತ್ತದೆ. ಇದನ್ನು ಸತ್ಪುರುಷರೇ[3] ಪ್ರಯತ್ನದಿಂದ ಮತ್ತೆ ಮತ್ತೆ (ವಿಚಾರಿಸಿ) ನೋಡಬೇಕು.

## ಸಾಧನಸಂಪತ್ತು

**ಸ್ವವರ್ಣಾಶ್ರಮಧರ್ಮೇಣ ತಪಸಾ ಹರಿತೋಷಣಾತ್ ।**
**ಸಾಧನಂ ಪ್ರಭವೇತ್ ಪುಂಸಾಂ ವೈರಾಗ್ಯಾದಿಚತುಷ್ಟಯಮ್ ॥೩॥**

---

1. 'ಸದ್ಭಿರೇಷಾ' ಎಂದು ಪಾ॥ ಪಾಠ.

2. ಅಪರೋಕ್ಷವಾದ ಅನುಭವವನ್ನು, ಎಂದರೆ ಈಗಲೇ ಇಲ್ಲಿಯೇ ಉಂಟಾಗುವ ಅನುಭವವನ್ನು– ಎಂದರ್ಥ. ಈ ಅನುಭವವನ್ನು ತಿಳಿಸುವದರಿಂದ ಗ್ರಂಥಕ್ಕೂ 'ಅಪರೋಕ್ಷಾನುಭೂತಿ' ಎಂಬ ಹೆಸರು ಬಂದಿದೆ.

3. 'ಸದ್ಭಿರೇಷಾ' ಎಂಬ ಪಾಠಕ್ಕೆ ಸತ್ಪುರುಷರು ಈ ಗ್ರಂಥವನ್ನು– ಎಂದು ಅರ್ಥ.

೩. ತನ್ಮಾತ್ರವನ್ನು ವರ್ಣಾಶ್ರಮಧರ್ಮವೆಂಬ ತಪಸ್ಸಿನಿಂದ ಹರಿಪ್ರೀತಿಯನ್ನು ಉಂಟುಮಾಡುವದರಿಂದ ಜನರಿಗೆ ವೈರಾಗ್ಯವೇ ಮುಂತಾದ ನಾಲ್ಕು ಸಾಧನವು ಉಂಟಾಗುವದು.

**ಬ್ರಹ್ಮಾದಿಸ್ಥಾವರಾನ್ತೇಷು ವೈರಾಗ್ಯಂ ವಿಷಯೇಷ್ವನು ।**
**ಯಥೈವ ಕಾಕವಿಷ್ಠಾಯಾಂ ವೈರಾಗ್ಯಂ ತದ್ಧಿ ನಿರ್ಮಲಮ್ ॥೪॥**

೪. ಬ್ರಹ್ಮನು ಮೊದಲಾಗಿ ಸ್ಥಾವರಪ್ರಾಣಿಯವರೆಗೂ[1] ಇರುವ ವಿಷಯಗಳಲ್ಲಿ (ವಿಮರ್ಶೆಮಾಡಿದ) ಬಳಿಕ ಕಾಗೆಯ ಹೇಸಿಗೆಯಲ್ಲಿ ಉಂಟಾಗುವ ವೈರಾಗ್ಯದಂತೆ ಉಂಟಾಗುವ ವೈರಾಗ್ಯವೇ ಶುದ್ಧವಾದ ವೈರಾಗ್ಯವು.

**ನಿತ್ಯಮಾತ್ಮಸ್ವರೂಪಂ ಹಿ ದೃಶ್ಯಂ ತದ್ವಿಪರೀತಗಮ್ ।**
**ಏವಂ ಯೋ ನಿಶ್ಚಯಃ ಸಮ್ಯಗ್ವಿವೇಕೋ ವಸ್ತುನಃ ಸ ವೈ ॥೫॥**

೫. ಆತ್ಮಸ್ವರೂಪವೇ ನಿತ್ಯವು, ದೃಶ್ಯವಾದ (ಅನಾತ್ಮವು) ಅದಕ್ಕೆ ವಿಪರೀತವಾದದ್ದು– ಹೀಗೆಂಬ ನಿಶ್ಚಯವಿದೆಯಲ್ಲ, ಅದೇ ಸರಿಯಾದ ವಸ್ತುವಿನ ವಿವೇಕವು.

**ಸದೈವ ವಾಸನಾತ್ಯಾಗಃ ಶಮೋಽಯಮಿತಿ ಶಬ್ದಿತಃ ।**
**ನಿಗ್ರಹೋ ಬಾಹ್ಯವೃತ್ತೀನಾಂ ದಮ ಇತ್ಯಭಿಧೀಯತೇ ॥೬॥**

೬. ಯಾವಾಗಲೂ ವಾಸನೆಗಳನ್ನು ತ್ಯಜಿಸುವ(ದಿದೆಯಲ್ಲ), ಅದು ಶಮವೆನಿಸುತ್ತದೆ. ಹೊರಗಿನ ವೃತ್ತಿಗಳ ನಿಗ್ರಹವು ದಮವೆನ್ನಲ್ಪಡುವದು.

**ವಿಷಯೇಭ್ಯಃ ಪರಾವೃತ್ತಿಃ ಪರಮೋಪರತಿರ್ಹಿ ಸಾ ।**
**ಸಹನಂ ಸರ್ವದುಃಖಾನಾಂ ತಿತಿಕ್ಷಾ ಸಾ ಶುಭಾ ಮತಾ ॥೭॥**
**ನಿಗಮಾಚಾರ್ಯವಾಕ್ಯೇಷು ಭಕ್ತಿಃ ಶ್ರದ್ಧೇತಿ ವಿಶ್ರುತಾ ।**
**ಚಿತ್ತೈಕಾಗ್ರ್ಯಂ ತು ಸಲ್ಲಕ್ಷ್ಯೇ ಸಮಾಧಾನಮಿತಿ ಸ್ಮೃತಮ್ ॥೮॥**

೭-೮. ವಿಷಯಗಳನ್ನು ಬಿಟ್ಟು ಹಿಂತಿರುಗುವದಿದೆಯಲ್ಲ, ಅದು ಹೆಚ್ಚಿನ ಉಪರತಿಯು. ಎಲ್ಲಾ ದುಃಖಗಳನ್ನೂ ಸಹಿಸಿಕೊಳ್ಳುವದಿದೆಯಲ್ಲ, ಅದು ಶುಭವಾದ ತಿತಿಕ್ಷೆಯೆನಿಸುವದು. ಶಾಸ್ತ್ರವಾಕ್ಯದಲ್ಲಿಯೂ ಗುರುವಾಕ್ಯದಲ್ಲಿಯೂ ಇಟ್ಟಿರುವ ಭಕ್ತಿಯು ಶ್ರದ್ಧೆಯೆಂದು ಪ್ರಸಿದ್ಧವಾಗಿರುತ್ತದೆ. ಉತ್ತಮವಾದ ಗುರಿಯಲ್ಲಿ ಚಿತ್ತವನ್ನು ಏಕಾಗ್ರವಾಗಿಟ್ಟುಕೊಂಡಿರುವದು ಸಮಾಧಾನವೆನಿಸುವದು.

---

1. ಅತ್ಯಂತಪುಣ್ಯದಿಂದ ಬ್ರಹ್ಮಲೋಕವು ದೊರಕುವದು; ಅತ್ಯಂತಪಾಪದಿಂದ ಸ್ಥಾವರತ್ವವು ಪ್ರಾಪ್ತವಾಗುವದು.

**ಸಂಸಾರಬನ್ಧನಿರ್ಮುಕ್ತಿಃ ಕಥಂ ಮೇ ಸ್ಯಾತ್ ಕದಾ ವಿಧೇ ।[1]**
**ಇತಿ ಯಾ ಸುದೃಢಾ ಬುದ್ಧಿರ್ವಕ್ತವ್ಯಾ ಸಾ ಮುಮುಕ್ಷುತಾ ॥೯॥**

೯. ಅಯ್ಯೋ ವಿಧಿಯೆ, (ಈ) ಸಂಸಾರಬಾಧದಿಂದ ನನಗೆ ಹೇಗೆ ಯಾವಾಗ ಬಿಡುಗಡೆಯಾದೀತು? ಎಂದು (ಹಂಬಲಿಸುವ) ಈ ದೃಢಬುದ್ಧಿಯನ್ನೇ ಮುಮುಕ್ಷುತೆ ಎನ್ನಬೇಕು.

## ವಿಚಾರದ ಆವಶ್ಯಕತೆ

**ಉಕ್ತಸಾಧನಯುಕ್ತೇನ ವಿಚಾರಃ ಪುರುಷೇಣ ಹಿ ।**
**ಕರ್ತವ್ಯೋ ಜ್ಞಾನಸಿದ್ಧ್ಯರ್ಥಮಾತ್ಮನಃ ಶುಭಮಿಚ್ಛತಾ ॥ ೧೦ ॥**
**ನೋತ್ಪದ್ಯತೇ ವಿನಾ ಜ್ಞಾನಂ ವಿಚಾರೇಣಾನ್ಯಸಾಧನೈಃ ।**
**ಯಥಾ ಪದಾರ್ಥಭಾನಂ ಹಿ ಪ್ರಕಾಶೇನ ವಿನಾ ಕ್ವಚಿತ್ ॥ ೧೧ ॥**

೧೦-೧೧. ತನಗೆ ಒಳ್ಳೆಯದಾಗಬೇಕೆಂದು ಬಯಸುವ ಪುರುಷನು ಮೇಲೆ ಹೇಳಿದ ಸಾಧನಗಳಿಂದ ಕೂಡಿ ಜ್ಞಾನೋತ್ಪತ್ತಿಗಾಗಿ ವಿಚಾರವನ್ನು ಮಾಡಬೇಕು. ಬೆಳಕಿಲ್ಲದೆ ಪದಾರ್ಥಗಳು ಹೇಗೆ ತೋರಲಾರವೋ ಹಾಗೆ ವಿಚಾರವನ್ನು ಬಿಟ್ಟು ಮಿಕ್ಕ ಸಾಧನಗಳಿಂದ ಜ್ಞಾನವು ಎಂದಿಗೂ ಉಂಟಾಗಲಾರದು.

## ವಿಚಾರವು ಹೇಗಿರಬೇಕು?

**ಕೋಽಹಂ ಕಥಮಿದಂ ಜಾತಂ ಕೋ ವೈ ಕರ್ತಾಸ್ಯ ವಿದ್ಯತೇ ।**
**ಉಪಾದಾನಂ ಕಿಮಸ್ತೀಹ ವಿಚಾರಃ ಸೋಽಯಮೀದೃಶಃ ॥೧೨॥**

೧೨. ನಾನು ಯಾರು? ಈ ಜಗತ್ತು ಹೇಗೆ ಉಂಟಾಯಿತು? ಇದಕ್ಕೆ ಕರ್ತನು ಯಾರಿರುವನು? ಇದಕ್ಕೆ ಉಪಾದಾನವು ಯಾವದಿದೆ? ಹೀಗೆ (ಆಲೋಚಿಸುವದೇ) ವಿಚಾರವು.

**ನಾಹಂ ಭೂತಗಣೋ ದೇಹೋ ನಾಹಂ ಚಾಕ್ಷಗಣಸ್ತಥಾ ।**
**ಏತದ್ವಿಲಕ್ಷಣಃ ಕಶ್ಚಿದ್ವಿಚಾರಃ ಸೋಽಯಮೀದೃಶಃ ॥೧೩॥**

೧೩. ನಾನು ಭೂತಗಳ ಗುಂಪಾದ ದೇಹವಲ್ಲ; ಇದರಂತೆ ನಾನು ಇಂದ್ರಿಯಗಳ ಸಮೂಹವೂ ಅಲ್ಲ. ಇವುಗಳಿಗಿಂತ ಬೇರೆಯಾದ ಯಾವನೋ ಒಬ್ಬನಾಗಿರಬೇಕು. ಹೀಗೆ (ಆಲೋಚಿಸುವದೇ) ವಿಚಾರವು.

**ಅಜ್ಞಾನಪ್ರಭವಂ ಸರ್ವಂ ಜ್ಞಾನೇನ ಪ್ರವಿಲೀಯತೇ ।**
**ಸಙ್ಕಲ್ಪೋ ವಿವಿಧಃ ಕರ್ತಾ ವಿಚಾರಃ ಸೋಽಯಮೀದೃಶಃ ॥೧೪॥**

[1]. 'ದಯಾನಿಧೇ' ಪಾ॥ ಪಾಠ.

೧೪. ಎಲ್ಲವೂ ಅಜ್ಞಾನದಿಂದ ಹುಟ್ಟಿರುವದು, ಜ್ಞಾನದಿಂದ ನಾಶವಾಗುವದು. ಬಗೆಬಗೆಯ ಸಂಕಲ್ಪವೇ ಕರ್ತೃ[1]. ಹೀಗೆಂದು (ಯೋಚಿಸುವದೇ) ವಿಚಾರವು.

**ಏತಯೋರ್ಯದುಪಾದಾನಮೇಕಂ ಸೂಕ್ಷ್ಮಂ ಸದವ್ಯಯಮ್ ।**
**ಯಥೈವ ಮೃದ್ಘಟಾದೀನಾಂ ವಿಚಾರಃ ಸೋಽಯಮೀದೃಶಃ ॥೧೫॥**

೧೫. ಗಡಿಗಯೇ ಮುಂತಾದವುಗಳಿಗೆ (ಉಪಾದಾನವಾಗಿರುವ ಮಣ್ಣಿನಂತೆ)ಯೇ ಈ ಎರಡಕ್ಕೂ[2] ಉಪಾದಾನಕಾರಣವಾದದ್ದು ಒಂದು, ಸೂಕ್ಷ್ಮವಾದದ್ದು, ಸದ್ರೂಪವಾದದ್ದು, ಅವ್ಯಯವಾದದ್ದು. ಹೀಗೆಂದು (ತಿಳಿಯುವದೇ) ವಿಚಾರವು.

**ಅಹಮೇಕೋಽಪಿ ಸೂಕ್ಷ್ಮಶ್ಚ ಜ್ಞಾತಾ ಸಾಕ್ಷೀ ಸದವ್ಯಯಃ ।**
**ತದಹಂ ನಾತ್ರ ಸನ್ದೇಹೋ ವಿಚಾರಃ ಸೋಽಯಮೀದೃಶಃ ॥೧೬॥**

೧೬. ನಾನು ಒಬ್ಬನೂ ಸೂಕ್ಷ್ಮನೂ (ಆಗಿರುತ್ತೇನೆ); ಜ್ಞಾತೃವೂ ಸಾಕ್ಷಿಯೂ ಸದ್ರೂಪನೂ ಅವ್ಯಯನೂ ಆಗಿದ್ದೇನೆ. ಆದ್ದರಿಂದ ಅದೇ ನಾನೆಂಬುದರಲ್ಲಿ ಸಂದೇಹವಿಲ್ಲ. ಹೀಗೆಂದು (ತಿಳಿಯುವದೇ) ವಿಚಾರವು.

## ಅಜ್ಞಾನ

**ಆತ್ಮಾ ವಿನಿಷ್ಕಲೋ ಹ್ಯೇಕೋ ದೇಹೋ ಬಹುಭಿರಾವೃತಃ ।**
**ತಯೋರೈಕ್ಯಂ ಪ್ರಪಶ್ಯನ್ತಿ ಕಿಮಜ್ಞಾನಮಿತಃಪರಮ್ ॥ ೧೭ ॥**

೧೭. ಆತ್ಮನು ನಿರವಯವನು, ಏಕನು; ದೇಹವು ಬಹು (ಅವಯವ)ಗಳಿಂದ ಕೂಡಿರುವದು. ಇವೆರಡೂ ಒಂದೆಂದು ತಿಳಿಯುವರಲ್ಲ! ಇದಕ್ಕಿಂತ ಹೆಚ್ಚಿನ ಅಜ್ಞಾನವು ಯಾವದು ?

**ಆತ್ಮಾ ನಿಯಾಮಕಶ್ಚಾನ್ತರ್ದೇಹೋ ಬಾಹ್ಯೋ ನಿಯಮ್ಯಕಃ[3] ।**
**ತಯೋರೈಕ್ಯಂ ಪ್ರಪಶ್ಯನ್ತಿ ಕಿಮಜ್ಞಾನಮತಃಪರಮ್ ॥ ೧೮ ॥**

---

1. ಅಜ್ಞಾನದಿಂದಾದ ಸಂಕಲ್ಪವೇ ಜಗತ್ತನ್ನು ತೋರಿಸುತ್ತಿರುವದು ಎಂದರ್ಥ.

2. ಅಜ್ಞಾನಕ್ಕೂ ಸಂಕಲ್ಪಕ್ಕೂ ಎಂದು ಅಭಿಪ್ರಾಯ. ಈ ಅಭಿಪ್ರಾಯವು ಮತ್ತೆ ಯಾವ ಪ್ರಕರಣದಲ್ಲಿಯೂ ಇರುವಂತೆ ಕಾಣಲಲ್ಲ.

3. 'ನಿಯಮ್ಯ ಬಾಹ್ಯಕಃ' ಎಂದು ವಾ॥, 'ಬಾಹ್ಯೋ ನಿಯಾಮಕಃ' ಎಂದು ಅ॥ ; ನಾವು ಅನುಸರಿಸಿರುವದು ನಿ॥ ಪಾಠ.

೧೮. ಆತ್ಮನು ಒಳಗಿರುವ ನಿಯಾಮಕನು, ದೇಹವು ಹೊರಗಿನ ನಿಯಾಮ್ಯವು. ಇವೆರಡೂ ಒಂದೆಂದು ಭಾವಿಸುವರಲ್ಲ! ಇದಕ್ಕಿಂತ ಹೆಚ್ಚಿನ ಅಜ್ಞಾನವು ಯಾವದು ?

**ಆತ್ಮಾ ಜ್ಞಾನಮಯಃ ಪುಣ್ಯೋ ದೇಹೋ ಮಾಂಸಮಯೋಽಶುಚಿಃ ।**
**ತಯೋರೈಕ್ಯಂ ಪ್ರಪಶ್ಯನ್ತಿ ಕಿಮಜ್ಞಾನಮತಃ ಪರಮ್ ॥೧೯॥**

೧೯. ಆತ್ಮನು ಜ್ಞಾನಮಯನು, ಶುದ್ಧನು ; ದೇಹವು ಮಾಂಸಮಯವು, ಅಶುಚಿಯು, ಇವೆರಡೂ ಒಂದೆಂದು ಭಾವಿಸುವರಲ್ಲ ! ಇದಕ್ಕಿಂತ ಹೆಚ್ಚಿನ ಅಜ್ಞಾನವು ಯಾವದು ?

**ಆತ್ಮಾ ಪ್ರಕಾಶಕಃ ಸ್ವಚ್ಛೋ ದೇಹಸ್ತಾಮಸ ಉಚ್ಯತೇ ।**
**ತಯೋರೈಕ್ಯಂ ಪ್ರಪಶ್ಯನ್ತಿ ಕಿಮಜ್ಞಾನಮತಃ ಪರಮ್ ॥ ೨೦ ॥**

೨೦. ಆತ್ಮನು ಪ್ರಕಾಶಸ್ವರೂಪನು, ಸ್ವಚ್ಛನು ; ದೇಹವು ತಾಮಸವೆನಿಸಿರುತ್ತದೆ. ಇವೆರಡೂ ಒಂದೆಂದು ಭಾವಿಸುವರಲ್ಲ! ಇದಕ್ಕಿಂತ ಹೆಚ್ಚಿನ ಅಜ್ಞಾನವು ಯಾವದು ?

**ಆತ್ಮಾ ನಿತ್ಯೋ ಹಿ ಸದ್ರೂಪೋ ದೇಹೋಽನಿತ್ಯೋ ಹ್ಯಸನ್ಮಯಃ ।**
**ತಯೋರೈಕ್ಯಂ ಪ್ರಪಶ್ಯನ್ತಿ ಕಿಮಜ್ಞಾನಮತಃ ಪರಮ್ ॥ ೨೧ ॥**

೨೧. ಆತ್ಮನು ಸದ್ರೂಪನು, ನಿತ್ಯನು ; ದೇಹವು ಅಸದ್ರೂಪವು, ಅನಿತ್ಯವು. ಇವೆರಡೂ ಒಂದೆಂದು ತಿಳಿಯುವರಲ್ಲ ! ಇದಕ್ಕಿಂತ ಹೆಚ್ಚಿನ ಅಜ್ಞಾನವು ಯಾವದು ?

**ಆತ್ಮನಸ್ತತ್ಪ್ರಕಾಶತ್ವಂ ಯತ್ಪದಾರ್ಥಾವಭಾಸನಮ್ ।**
**ನಾಗ್ನ್ಯಾದಿದೀಪ್ತಿವದ್ದೀಪ್ತಿರ್ಭವತ್ಯಾನ್ಧ್ಯಂ ಯತೋ ನಿಶಿ ॥ ೨೨ ॥**

೨೨. ಆತ್ಮನು ಪ್ರಕಾಶರೂಪನೆಂದರೆ ಪದಾರ್ಥಗಳನ್ನು ತೋರಿಸಿಕೊಡುವವನು ಎಂದರ್ಥ. ಬೆಂಕಿ ಮುಂತಾದವುಗಳಂತೆ (ಆತ್ಮನಿಗೆ) ಬೆಳಕು ಇರುವದು ಎಂದರ್ಥವಲ್ಲ. ಏಕೆಂದರೆ ರಾತ್ರಿಯಲ್ಲಿ ಕತ್ತಲೆಯಾಗಿಬಿಡುತ್ತದೆ.[1]

---

1. ಸ್ವಯಂಪ್ರಕಾಶನೆಂದು ಜನರು ನಂಬಿರುವ ಸೂರ್ಯನ ಬೆಳಕು ರಾತ್ರಿಯಲ್ಲಿ ಇಲ್ಲವಾಗುವದು. ಇದರಂತೆ ಬೆಂಕಿಯ ಬೆಳಕು ಬೆಂಕಿಯು ಆರಿಹೋದಾಗ ಇಲ್ಲವಾಗುವದು. ಹೀಗೆ ಆತ್ಮನ ಬೆಳಕು ಇಲ್ಲವಾಗುವದಲ್ಲ ; ಏಕೆಂದರೆ ಅದು ಎಲ್ಲವನ್ನೂ ತೋರಿಸಿಕೊಡುತ್ತಾ ಯಾವಾಗಲೂ ಇರುತ್ತದೆ ಎಂದು ಭಾವ.

**ದೇಹೋಽಹಮಿತ್ಯಯಂ ಮೂಢೋ ಧೃತ್ವಾ[1] ತಿಷ್ಠತ್ಯಹೋ ಜನಃ ।**
**ಮಮಾಯಮಿತ್ಯಪಿ ಜ್ಞಾತ್ವಾ ಘಟದ್ರಷ್ಟೇವ ಸರ್ವದಾ ॥ ೨೩ ॥**

೨೩. ಗಡಿಗೆಯನ್ನು ನೋಡುವವನಂತೆ ಈ ದೇಹವು ನನ್ನದು ಎಂದು (ಅದನ್ನು) ಅರಿತುಕೊಂಡಿದ್ದರೂ (ಈ) ಜನವು ದೇಹವೇ ತಾನೆಂದು ನಂಬಿ ಕೊಂಡಿರುವದಲ್ಲ ! (ಇದು) ಆಶ್ಚರ್ಯವು !

## ಜ್ಞಾನಸ್ವರೂಪ

**ಬ್ರಹ್ಮೈವಾಹಂ ಸಮಃ ಶಾಂತಃ ಸಚ್ಚಿದಾನನ್ದಲಕ್ಷಣಃ ।**
**ನಾಹಂ ದೇಹೋ ಹ್ಯಸದ್ರೂಪೋ ಜ್ಞಾನಮಿತ್ಯುಚ್ಯತೇ ಬುಧೈಃ ॥೨೪॥**

೨೪. ನಾನು ಸಮನು, ಶಾಂತನು, ಸಚ್ಚಿದಾನಂದಸ್ವರೂಪನು ; (ಆದ್ದ ರಿಂದ) ಬ್ರಹ್ಮವೇ ಹೊರತು ಅಸದ್ರೂಪವಾದ ದೇಹವಲ್ಲ–ಎಂಬುದು ಜ್ಞಾನ ವೆಂದು ಬಲ್ಲವರು ಹೇಳುತ್ತಾರೆ.

**ನಿರ್ವಿಕಾರೋ ನಿರಾಕಾರೋ ನಿರವದ್ಯೋಽಹಮವ್ಯಯಃ ।**
**ನಾಹಂ ದೇಹೋ ಹ್ಯಸದ್ರೂಪೋ ಜ್ಞಾನಮಿತ್ಯುಚ್ಯತೇ ಬುಧೈಃ ॥೨೫॥**

೨೫. ನಾನು ನಿರ್ವಿಕಾರನು, ನಿರಾಕಾರನು, ನಿರ್ದೋಷನು, ಅವ್ಯಯನು. ಅಸದ್ರೂಪವಾದ ದೇಹವು ನಾನಲ್ಲ– ಎಂಬುದು ಜ್ಞಾನವೆಂದು ಬಲ್ಲವರು ಹೇಳುತ್ತಾರೆ.

**ನಿರಾಮಯೋ ನಿರಾಭಾಸೋ ನಿರ್ವಿಕಲ್ಪೋಽಹಮಾತತಃ ।**
**ನಾಹಂ ದೇಹೋ ಹ್ಯಸದ್ರೂಪೋ ಜ್ಞಾನಮಿತ್ಯುಚ್ಯತೇ ಬುಧೈಃ ॥೨೬॥**

೨೬. ಯಾವ ರೋಗವೂ ಇಲ್ಲದವನು, ಮತ್ತೊಂದರಿಂದ ಬೆಳಗದವನು, ಯಾವ ಕಲ್ಪನೆಗೂ ಅವಕಾಶವನ್ನು ಕೊಡದವನು, ಎಲ್ಲೆಲ್ಲಿಯೂ ವ್ಯಾಪಿಸಿರು ವವನು ನಾನು ; ನಾನು ಅಸದ್ರೂಪವಾದ ದೇಹವಲ್ಲ– ಎಂಬುದು ಜ್ಞಾನ ವೆಂದು ಬಲ್ಲವರು ಹೇಳುತ್ತಾರೆ.

**ನಿರ್ಗುಣೋ ನಿಷ್ಕ್ರಿಯೋ ನಿತ್ಯೋ ನಿತ್ಯಮುಕ್ತೋಽಹಮಚ್ಯುತಃ ।**
**ನಾಹಂ ದೇಹೋ ಹ್ಯಸದ್ರೂಪೋ ಜ್ಞಾನಮಿತ್ಯುಚ್ಯತೇ ಬುಧೈಃ ॥೨೭**

೨೭. ಗುಣಗಳಿಲ್ಲದವನು, ಕ್ರಿಯೆಯಿಲ್ಲದವನು, ನಿತ್ಯನು, ನಿತ್ಯ ಮುಕ್ತನು, ಚ್ಯುತಿಯಿಲ್ಲದವನು ; ನಾನು ಅಸದ್ರೂಪವಾದ ದೇಹವಲ್ಲ –ಎಂಬುದು ಜ್ಞಾನವೆಂದು ಬಲ್ಲವರು ಹೇಳುತ್ತಾರೆ.

---

1. 'ಮತ್ವಾ' ಎಂದು ಪಾ॥ ಅ॥

**ನಿರ್ಮಲೋ ನಿಶ್ಚಲೋಽನನ್ತಃ ಶುದ್ಧೋಽಹಮಜರೋಽಮರಃ ।**
**ನಾಹಂ ದೇಹೋ ಹ್ಯಸದ್ರೂಪೋ ಜ್ಞಾನಮಿತ್ಯುಚ್ಯತೇ ಬುಧೈಃ ॥೨೮॥**

೨೮. ದೋಷವಿಲ್ಲದವನು, ಚಲನವಿಲ್ಲದವನು, ಅಂತವಿಲ್ಲದವನು, ಶುದ್ಧನು, ಮುಪ್ಪಿಲ್ಲದವನು, ಮರಣವಿಲ್ಲದವನು ; ನಾನು ಅಸದ್ರೂಪವಾದ ದೇಹವಲ್ಲ- ಎಂಬುದು ಜ್ಞಾನವೆಂದು ಬಲ್ಲವರು ಹೇಳುತ್ತಾರೆ.

## ಆತ್ಮನು ದೇಹಗಳೆರಡಕ್ಕೂ ಭಿನ್ನನೆಂಬುದು ಹೇಗೆ?

**ಸ್ವದೇಹೇ ಶೋಭನಂ ಸನ್ತಂ[1] ಪುರುಷಾಖ್ಯಂ ಚ ಸಮ್ಮತಮ್ ।**
**ಕಿಂ ಮೂರ್ಖ ಶೂನ್ಯಮಾತ್ಮಾನಂ ದೇಹಾತೀತಂ ಕರೋಷಿ ಭೋಃ ॥**

೨೯. ಎಲೈ ಮೂರ್ಖನೆ, ನಿನ್ನ ದೇಹದಲ್ಲಿಯೇ ಮಂಗಲಕರನಾಗಿದ್ದು ಕೊಂಡು,[2] ಪುರುಷನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವ ದೇಹಾತೀತನಾದ ಆತ್ಮನನ್ನು ಏತಕ್ಕೆ ಶೂನ್ಯವಾಗಿ ಮಾಡುತ್ತೀಯೆ ?

**ಸ್ವಾತ್ಮಾನಂ ಶೃಣು ಮೂರ್ಖ ತ್ವಂ ಶ್ರುತ್ಯಾ ಯುಕ್ತ್ಯಾ ಚ ಪೂರುಷಮ್**
**ದೇಹಾತೀತಂ ಸದಾಕಾರಂ ಸುದುರ್ದರ್ಶಂ ಭವಾದೃಶೈಃ[3] ॥ ೩೦ ॥**

೩೦. ಎಲೈ ಮೂರ್ಖನೆ, ಶ್ರುತಿಯಿಂದಲೂ ಯುಕ್ತಿಯಿಂದಲೂ ಪುರುಷ ನೆನ್ನಿಸಿಕೊಂಡಿರುವ ದೇಹಾತೀತನಾಗಿ ಸದ್ರೂಪನಾಗಿ ನಿನ್ನಂಥವರಿಗೆ ಕಾಣು ವದಕ್ಕೆ ಬಹುಕಷ್ಟವಾಗಿರುವ ನಿನ್ನ ಆತ್ಮನನ್ನು ಹೇಳುವೆನು, ಕೇಳು.

**ಅಹಂಶಬ್ದೇನ ವಿಖ್ಯಾತ ಏಕ ಏವ ಸ್ಥಿತಃ ಪರಃ ।**
**ಸ್ಥೂಲಸ್ತ್ವನೇಕತಾಂ ಪ್ರಾಪ್ತಃ ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೧**

---

1. ಸ್ವದೇಹೇ ಎಂಬುದಕ್ಕೆ 'ಸ್ವದೇಹಂ' ಎಂದು ಪಾ॥ ಮುದ್ರಿತವಾದ ಪಾಠವಿದೆ. ಈ ಪಾಠಕ್ಕೆ 'ರೇ ಮೂರ್ಖ, ಶೋಭನಂ ಸ್ವದೇಹಂ ಸನ್ತಂ ಪುರುಷಾಖ್ಯಂ ಸಮ್ಮತಂ ಆತ್ಮಾನಂ ಕಿಂ ದೇಹಾತೀತಂ ಶೂನ್ಯಂ ಕರೋಷಿ ?' -ಎಂದು ಅನ್ವಯ. ದೇಹವೇ ಪುರುಷ ನಾಗಿರುವಾಗ ದೇಹಾತೀತನಾದವನೆಂದು ಭಾವಿಸಿ ಪುರುಷನನ್ನು ಶೂನ್ಯವಾಗಿ ಏಕೆ ಮಾಡು ತ್ತೀಯೆ ?- ಎಂದು ಪೂರ್ವಪಕ್ಷಿಯು ಕೇಳುತ್ತಾನೆಂದೂ ಮುಂದಿನ ಶ್ಲೋಕದಲ್ಲಿ ಸಿದ್ಧಾಂತಿ ಯು ಉತ್ತರವನ್ನು ಕೊಡುತ್ತಾನೆಂದೂ ಕಲ್ಪಿಸಬೇಕು. ನಾವು ಕೊಟ್ಟಿರುವ ಪಾಠದಲ್ಲಿ ಯಾವ ಕ್ಲೇಶವೂ ಇಲ್ಲ.

2. ನನ್ನದು ಎಂಬುದು ನನಗಿಂತ ಬೇರೆಯಾಗಿರಬೇಕು.

3. 'ಭವಾದೃಶಾಂ' ಪಾ॥

೩೧. ನಾನು ಎಂಬ ಶಬ್ದದಿಂದ ಪ್ರಸಿದ್ಧನಾಗಿರುವ ಈ ಪರಮಾತ್ಮನು ಒಬ್ಬನೇ ಆಗಿರುವನು ; ಸ್ಥೂಲದೇಹವಾದರೋ ಅನೇಕವಾಗಿರುವದು. ಈ ಕುತ್ಸಿತದೇಹವು ಹೇಗೆ ಪುರುಷನಾದೀತು ?

**ಅಹಂ ದ್ರಷ್ಟೃತಯಾ ಸಿದ್ಧೋ ದೇಹೋ ದೃಶ್ಯತಯಾ ಸ್ಥಿತಃ ।**
**ಮಮಾಯಮಿತಿ ನಿರ್ದೇಶಾತ್ ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೨**

೩೨. 'ನಾನು' (ಎನ್ನಿಸಿಕೊಳ್ಳುವ ಆತ್ಮನು) ನೋಡುವಾತನು ; ದೇಹವೋ ನೋಡಲ್ಪಡತಕ್ಕದ್ದು, ಏಕೆಂದರೆ (ಇದನ್ನು) 'ನನ್ನದು' ಎಂದು ತಿಳಿಸುತ್ತಾರೆ. (ಹೀಗಿರುವಾಗ) ಈ ಕುತ್ಸಿತದೇಹವು ಹೇಗೆ ಪುರುಷನಾದೀತು ?

**ಅಹಂ ವಿಕಾರಹೀನಸ್ತು ದೇಹೋ ನಿತ್ಯಂ ವಿಕಾರವಾನ್ ।**
**ಇತಿ ಪ್ರತೀಯತೇ ಸಾಕ್ಷಾತ್ ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೩ ॥**

೩೩. ನಾನು ವಿಕಾರಗಳಿಲ್ಲದವನು, ದೇಹವು ಯಾವಾಗಲೂ ವಿಕಾರಗಳುಳ್ಳದ್ದು ಎಂದು ಕಾಣಿಸುತ್ತದೆ.[1] ಈ ಕುತ್ಸಿತದೇಹವು ಹೇಗೆ ಪುರುಷನಾದೀತು ?

**ಯಸ್ಮಾತ್ ಪರಮಿತಿ ಶ್ರುತ್ಯಾ ತಯಾ ಪುರುಷಲಕ್ಷಣಮ್ ।**
**ವಿನಿರ್ಣೀತಂ ವಿಮೂಢೇನ[2] ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೪ ॥**

೩೪. "ಯಸ್ಮಾತ್ ಪರಮ್" (ತೈ. ನಾ. ೧೨-೩) ಎಂಬ ಆ (ಪ್ರಸಿದ್ಧವಾದ) ಶ್ರುತಿಯಲ್ಲಿ ಪುರುಷಸ್ವರೂಪವು ನಿರ್ಣೀತವಾಗಿರುತ್ತದೆ. ಎಲೈ ಪರಮಮೂಢನೆ, ಈ ಕುತ್ಸಿತದೇಹವು ಹೇಗೆ ಪುರುಷನಾದೀತು ?

**ಸರ್ವಂ ಪುರುಷ ಏವೇತಿ ಸೂಕ್ತೇ ಪುರುಷಸಂಜ್ಞಿತೇ ।**
**ಅಪ್ಯುಚ್ಯತೇ ಯತಃ ಶ್ರುತ್ಯಾ ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೫ ॥**

೩೫. ಪುರುಷಸೂಕ್ತವೆಂಬ ಹೆಸರಿನ ಸೂಕ್ತದಲ್ಲಿಯೂ 'ಸರ್ವವೂ ಪುರುಷನೇ' (ತೈ. ಆ. ೩-೧೨) ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಈ ಕುತ್ಸಿತದೇಹವು ಹೇಗೆ ಪುರುಷನಾದೀತು ?

**ಅಸಙ್ಗಃ ಪುರುಷಃ ಪ್ರೋಕ್ತೋ ಬೃಹದಾರಣ್ಯಕೇಽಪಿ ಚ ।**
**ಅನನ್ತಮಲಸಂಶ್ಲಿಷ್ಟಃ ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೬ ॥**

---

1. ವಿಕಾರಗಳನ್ನು ನೋಡಿ ಅರಿಯುವವನು ಸ್ವತಃ ಅವಿಕಾರಿಯಾದ್ದರಿಂದ ಅದಕ್ಕಿಂತ ಬೇರೆಯಾಗಿರಬೇಕು.

2. 'ವಿಶುದ್ಧೇನ' ಎಂಬ ಪಾ॥ ಪಾಠಕ್ಕಿಂತ ಈ ಪಾಠವು ಉತ್ತಮ.

೩೬. ಬೃಹದಾರಣ್ಯಕದಲ್ಲಿಯೂ ಪುರುಷನು ಅಸಂಗನೆಂದು (ಬೃ. ೪-೩-೧೫) ಹೇಳಿರುತ್ತದೆ ; ಅನಂತಮಲದಿಂದ ಕೂಡಿದ ದೇಹವು ಹೇಗೆ ಪುರುಷನಾದೀತು ?

**ತತ್ರೈವ ಚ ಸಮಾಖ್ಯಾತಃ ಸ್ವಯಂಜ್ಯೋತಿರ್ಹಿ ಪೂರುಷಃ ।**
**ಜಡಃ ಪರಪ್ರಕಾಶ್ಯೋಽಸೌ ಕಥಂ ಸ್ಯಾದ್ದೇಹಕಃ ಪುಮಾನ್ ॥ ೩೭ ॥**

೩೭. ಮತ್ತು ಅಲ್ಲಿಯೇ 'ಪುರುಷನು ಸ್ವಯಂಜ್ಯೋತಿಯು' (ಬೃ. ೪-೩-೯) ಎಂದು ಹೇಳಿರುತ್ತದೆಯಲ್ಲವೆ ? ಜಡವಾಗಿಯೂ ಮತ್ತೊಂದರಿಂದ ಬೆಳಗತಕ್ಕದ್ದಾಗಿಯೂ ಈ ಕುತ್ಸಿತದೇಹವು ಹೇಗೆ ಪುರುಷನಾದೀತು ?

**ಪ್ರೋಕ್ತೋಽಪಿ ಕರ್ಮಕಾಣ್ಡೇನ ಹ್ಯಾತ್ಮಾ ದೇಹಾದ್ವಿಲಕ್ಷಣಃ ।**
**ನಿತ್ಯಶ್ಚ ತತ್ಫಲಂ ಭುಙ್ಕ್ತೇ ದೇಹಪಾತಾದನನ್ತರಮ್ ॥ ೩೮ ॥**

೩೮. ಆತ್ಮನು ದೇಹಕ್ಕಿಂತ ಬೇರೆಯಾಗಿರುವನೆಂದೂ ನಿತ್ಯನಾಗಿರುವದರಿಂದ ದೇಹವು ಬಿದ್ದ ಬಳಿಕ ಕರ್ಮಫಲವನ್ನು ಅನುಭವಿಸುವನೆಂದೂ ಕರ್ಮಕಾಂಡದಲ್ಲಿ ಕೂಡ[1] ಹೇಳಿರುತ್ತದೆ.

**ಲಿಙ್ಗಂ ಚಾನೇಕಸಂಯುಕ್ತಂ ಚಲಂ ದೃಶ್ಯಂ ವಿಕಾರಿ ಚ ।**
**ಅವ್ಯಾಪಕಮಸದ್ರೂಪಂ ತತ್ಕಥಂ ಸ್ಯಾತ್ಪುಮಾನಯಮ್ ॥ ೩೯ ॥**

೩೯. ಲಿಂಗ(ಶರೀರ)ವೂ[2] ಅನೇಕಾವಯವಗಳಿಂದ ಕೂಡಿದ್ದು, ಚಂಚಲವಾದದ್ದು, ಕಾಣುವಂಥದ್ದು, ವಿಕಾರಗಳುಳ್ಳದ್ದು, ವ್ಯಾಪಕವಲ್ಲ, ಸದ್ರೂಪವಲ್ಲ. ಅದು ಹೇಗೆ ಪುರುಷನಾದೀತು ?

**ಏವಂ ದೇಹದ್ವಯಾದನ್ಯ ಆತ್ಮಾ ಪೂರುಷ ಈಶ್ವರಃ ।**
**ಸರ್ವಾತ್ಮಾ ಸರ್ವರೂಪಶ್ಚ ಸರ್ವಾತೀತೋಽಹಮವ್ಯಯಃ ॥ ೪೦ ॥**

---

1. ಕರ್ಮಕಾಂಡದಲ್ಲಿ ದೇಹಾದಿಗಳು ಅಸತ್ಯವೆಂದು ಹೇಳದಿದ್ದರೂ ಆತ್ಮನು ದೇಹಕ್ಕಿಂತ ವಿಲಕ್ಷಣನೆಂದು ಹೇಳಿರುತ್ತದೆ.

2. ಇಂದ್ರಿಯಗಳು, ಪ್ರಾಣಗಳು, ಮನಸ್ಸು, ಬುದ್ಧಿ- ಇವುಗಳ ಒಟ್ಟನ್ನು ಲಿಂಗಶರೀರವು ಅಥವಾ ಸೂಕ್ಷ್ಮಶರೀರವು ಎಂದು ಕರೆಯುವರು.

೪೦. ಹೀಗೆ ನಾನು ಎರಡು ಬಗೆಯ ದೇಹಕ್ಕೂ ಬೇರೆಯಾಗಿರುವ ಆತ್ಮನು, ಪುರುಷನು, ಈಶ್ವರನು, ಸರ್ವಾತ್ಮನು, ಸರ್ವರೂಪನು, ಸರ್ವಾತೀತನು, ಅವ್ಯಯನು.[1]

## ದೇಹಗಳೆಂಬುದೇ ಸುಳ್ಳು

**ಇತ್ಯಾತ್ಮದೇಹಭಾಗೇನ[2] ಪ್ರಪಞ್ಚಸ್ಯೈವ ಸತ್ಯತಾ ।**
**ಯಥೋಕ್ತಾ ತರ್ಕಶಾಸ್ತ್ರೇಣ ತತಃ ಕಿಂ ಪುರುಷಾರ್ಥತಾ ॥ ೪೧ ॥**

೪೧. ಹೀಗೆ ಆತ್ಮನನ್ನೂ ದೇಹವನ್ನೂ ಬೇರ್ಪಡಿಸಿ ಪ್ರಪಂಚವೇ ಸತ್ಯವೆಂದು ತರ್ಕಶಾಸ್ತ್ರದಲ್ಲಿ ಹೇಳಿರುವಂತೆಯೇ ಇಲ್ಲಿಯೂ ಹೇಳಿದಂತಾಯಿತು. ಇದರಿಂದ ಪುರುಷಾರ್ಥವೇನಿದೆ ?

**ಇತ್ಯಾತ್ಮದೇಹಭೇದೇನ ದೇಹಾತ್ಮತ್ವಂ ನಿವಾರಿತಮ್ ।**
**ಇದಾನೀಂ ದೇಹಭೇದಸ್ಯ ಹ್ಯಸತ್ತ್ವಂ ಸ್ಫುಟಮುಚ್ಯತೇ ॥ ೪೨ ॥**

೪೨. ಹೀಗೆ ಆತ್ಮನನ್ನೂ ದೇಹವನ್ನೂ ಬೇರ್ಪಡಿಸಿ ದೇಹವೇ ಆತ್ಮನೆಂಬುದನ್ನು ತಿರಸ್ಕರಿಸಿದ್ದಾಯಿತು. ಈಗ ಬೇರೆಯಾದ ದೇಹವೇ ಇಲ್ಲವೆಂಬುದನ್ನು ಸ್ಫುಟವಾಗಿ ತಿಳಿಸಲಾಗುತ್ತದೆ.

## ಚಿದಾತ್ಮನು ಒಬ್ಬನೇ

**ಚೈತನ್ಯಸ್ಯೈಕರೂಪತ್ವಾದ್ಭೇದೋ ಯುಕ್ತೋ ನ ಕರ್ಹಿಚಿತ್ ।**
**ಜೀವತ್ವಂ ಚ ಮೃಷಾ ಜ್ಞೇಯಂ ರಜ್ಜ್ವಾಂ[3] ಸರ್ಪಗ್ರಹೋ ಯಥಾ॥ ೪೩**

---

1. ಆತ್ಮನು ಎಂದರೆ ದೇಹಕ್ಕಿಂತ ವಿಲಕ್ಷಣನಾದ ಚೇತನನು, ಪುರುಷನು ಎಂದರೆ ಹೃದಯದಲ್ಲಿರುವ ಆತ್ಮನು, ಈಶ್ವರನೆಂದರೆ ಆಳುವವನು, ಸರ್ವಾತ್ಮನು ಎಂದರೆ ಎಲ್ಲಕ್ಕೂ ಆತ್ಮನು, ಸರ್ವರೂಪನೆಂದರೆ ಎಲ್ಲರ ರೂಪದಿಂದಲೂ ಕಾಣುವವನು, ಸರ್ವಾತೀತನು ಎಲ್ಲವನ್ನೂ ಮೀರಿರುವ ತತ್ತ್ವವು. ಅವ್ಯಯನು ಎಂದರೆ ನಾಶರಹಿತಸ್ವಭಾವನು.

2. 'ಭಾನೇನ' ಎಂಬ ಪಾ॥ ಪಾಠಕ್ಕಿಂತ ಇದು ಉತ್ತಮ. 'ಭಾವೇನ' ಎಂಬ ಅ॥ ಪಾಠವೂ ಅಷ್ಟು ಹೊಂದಿಕೆಯಾಗಿಲ್ಲ. 'ಭೇದೇನ' ಎಂಬ ಪಾಠವು ಮೂಲದಲ್ಲಿದ್ದು ಹೀಗೆ ಪಾಠಾಂತರವಾಗಿರಬಹುದು ಎಂದು ಮುಂದಿನ ಶ್ಲೋಕದಿಂದ ತೋರುತ್ತದೆ.

3. 'ರಜ್ಜ್ವಾಂ' ಎಂದು ಪಾಠಾಂತರ.

೪೩. ಚೈತನ್ಯವು ಒಂದೇ ರೂಪವಾಗಿರುವದರಿಂದ (ಅದರಲ್ಲಿ) ಯಾವಾಗಲೂ[1] ಭೇದವು ಯುಕ್ತವಲ್ಲ. ಹಗ್ಗದಲ್ಲಿ (ಇದು) ಹಾವೆಂಬ ಬುದ್ಧಿಯು ಹೇಗೋ ಹಾಗೆ ಜೀವತ್ವವೂ ಸಟೆಯೆಂದು ತಿಳಿಯಬೇಕು.[2]

**ರಜ್ಜ್ವಜ್ಞಾನಾತ್ ಕ್ಷಣೇನೈವ ಯದ್ವದ್ರಜ್ಜುರ್ಹಿ ಸರ್ಪಿಣೀ ।**
**ಭಾತಿ ತದ್ವಚ್ಚಿತಿಃ ಸಾಕ್ಷಾದ್ವಿಶ್ವಾಕಾರೇಣ ಕೇವಲಾ ॥ ೪೪ ॥**

೪೪. ಹಗ್ಗವನ್ನು ಅರಿತುಕೊಳ್ಳದ್ದರಿಂದ ಹೇಗೆ ಹಗ್ಗವು ಕ್ಷಣಮಾತ್ರದಲ್ಲಿ ಹಾವಾಗಿ ತೋರುವದೋ ಅದರಂತೆ ಚೈತನ್ಯವೊಂದೇ ತಾನೇ ಪ್ರಪಂಚದ ಆಕಾರವಾಗಿ ತೋರುತ್ತಿರುವದು[3].

## ಅದ್ವೈತಬ್ರಹ್ಮಾತ್ಮತ್ವಕ್ಕೆ ಶ್ರುತಿಪ್ರಮಾಣ

**ಉಪಾದಾನಂ ಪ್ರಪಞ್ಚಸ್ಯ ಬ್ರಹ್ಮಣೋಽನ್ಯನ್ನ ವಿದ್ಯತೇ ।**
**ತಸ್ಮಾತ್ ಸರ್ವಪ್ರಪಞ್ಚೋಽಯಂ ಬ್ರಹ್ಮೈವಾಸ್ತಿ ನ ಚೇತರತ್ ॥ ೪೫**

೪೫. ಪ್ರಪಂಚಕ್ಕೆ ಬ್ರಹ್ಮಕ್ಕಿಂತ ಬೇರೆಯಾದ ಉಪಾದಾನವು ಇರುವದಿಲ್ಲ; ಆದ್ದರಿಂದ ಈ ಪ್ರಪಂಚವೆಲ್ಲವೂ ಬ್ರಹ್ಮವೇ ಹೊರತು ಬೇರೆಯಿರುವದಿಲ್ಲ.[4]

**ವ್ಯಾಪ್ಯವ್ಯಾಪಕತಾ ಮಿಥ್ಯಾ ಸರ್ವಮಾತ್ಮೇತಿ ಶಾಸನಾತ್ ।**
**ಇತಿ ಜ್ಞಾತೇ ಪರೇ ತತ್ತ್ವೇ ಭೇದಸ್ಯಾವಸರಃ ಕುತಃ ॥ ೪೬ ॥**

೪೬. "ಎಲ್ಲವೂ ಆತ್ಮನೇ" (ಛಾಂ. ೭-೨೫-೨, ಬೃ. ೨-೪-೬) ಎಂದು ಶಾಸ್ತ್ರವಿರುವದರಿಂದ ವ್ಯಾಪ್ಯವ್ಯಾಪಕತ್ವವು ಸುಳ್ಳೇ.[5] ಹೀಗೆಂದು ಪರತತ್ತ್ವವನ್ನು ತಿಳಿದುಕೊಂಡರೆ ಭೇದಕ್ಕೆ ಅವಕಾಶವೆಲ್ಲಿಯದು ?

---

1. ತನ್ನ ಸ್ವರೂಪದಿಂದಾಗಲಿ ಉಪಾಧಿಯಿಂದಾಗಲಿ ಭೇದವಿಲ್ಲ ಎಂದಭಿಪ್ರಾಯ. ಉಪಾಧಿಯಿಂದ ಭೇದವುಂಟಾಗಿರುವಂತೆ ಭ್ರಾಂತಿಯಾಗುತ್ತದೆ, ಅಷ್ಟೆ.

2. ಜೀವರುಗಳು ಅನೇಕರಾಗಿ ಕಾಣುತ್ತಾರೆ. ಆದ್ದರಿಂದ ಚೈತನ್ಯದಲ್ಲಿ ಭೇದವಿದೆಯೆಂದಾಯಿತಲ್ಲ !– ಎಂಬ ಆಕ್ಷೇಪಕ್ಕೆ ಪರಿಹಾರವಿದು.

3. ಜೀವರುಗಳಿಗೆ ಉಪಾಧಿಯಾಗಿರುವ ಅಚೇತನಾಂಶವಾದರೂ ಸತ್ಯವಷ್ಟೆ ; ಆದ್ದರಿಂದ ಚೇತನದಲ್ಲಿ ಸಜಾತೀಯಭೇದವಿಲ್ಲದ್ದರೂ ವಿಜಾತೀಯಭೇದವಿರಬಹುದಲ್ಲ !– ಎಂಬ ಶಂಕೆಗೆ ಇದು ಪರಿಹಾರ.

4. ಉಪಾದಾನಕಾರಣಕ್ಕಿಂತ ಕಾರ್ಯವು ಬೇರೆಯಲ್ಲ.

5. ಆತ್ಮನು ವ್ಯಾಪಕನು, ಜಗತ್ತು ವ್ಯಾಪ್ಯವು– ಎಂದು ಕಲ್ಪಿಸುವದು ಪರಮಸಿದ್ಧಾಂತವಲ್ಲ.

**ಶ್ರುತ್ಯಾ ನಿವಾರಿತಂ ನೂನಂ ನಾನಾತ್ವಂ ಸ್ವಮುಖೇನ ಹಿ ।**
**ಕಥಂ ಭಾಸೋ ಭವೇದನ್ಯಃ ಸ್ಥಿತೇ ಚಾದ್ವಯಕಾರಣೇ ॥ ೪೭ ॥**

೪೭. ನಾನಾತ್ವವನ್ನು ಶ್ರುತಿಯು (ಕ. ೨-೧-೧೧) ಬಾಯಿಬಿಟ್ಟು ಅಲ್ಲಗಳೆದಿರುತ್ತದೆ. ಅದ್ವಯವಾದ ಕಾರಣವು ಇರುವಲ್ಲಿ ಮತ್ತೊಂದು ಹೇಗೆ ತೋರೀತು ?

**ದೋಷೋಽಪಿ ವಿಹಿತಃ ಶ್ರುತ್ಯಾ ಮೃತ್ಯೋರ್ಮೃತ್ಯುಂ ಸ ಗಚ್ಛತಿ ।**
**ಇಹ ಪಶ್ಯತಿ ನಾನಾತ್ವಂ ಮಾಯಯಾ ವಞ್ಚಿತೋ ನರಃ ॥ ೪೮ ॥**

೪೮. ಇದಲ್ಲದೆ (ಭೇದದೃಷ್ಟಿಯಲ್ಲಿ) ದೋಷವನ್ನು "ಯಾವ ಮನುಷ್ಯನು ಮಾಯೆಯಿಂದ ವಂಚಿತನಾಗಿ ನಾನಾತ್ವವನ್ನು ಈ (ಆತ್ಮ)ನಲ್ಲಿ ಕಾಣುತ್ತಾನೋ ಅವನು ಮೃತ್ಯುವಿನಿಂದ ಮೃತ್ಯುವನ್ನು ಪಡೆಯುತ್ತಿರುವನು" (ಕ. ೨-೧-೧೧) ಎಂದು ಶ್ರುತಿಯು ಹೇಳಿರುತ್ತದೆ.

**ಬ್ರಹ್ಮಣಃ ಸರ್ವಭೂತಾನಿ ಜಾಯನ್ತೇ ಪರಮಾತ್ಮನಃ ।**
**ತಸ್ಮಾದೇತಾನಿ ಬ್ರಹ್ಮೈವ ಭವನ್ತೀತ್ಯವಧಾರಯೇತ್ ॥ ೪೯ ॥**

೪೯. ಬ್ರಹ್ಮವೆಂಬ ಪರಮಾತ್ಮನಿಂದಲೇ ಎಲ್ಲಾ ಭೂತಗಳೂ ಹುಟ್ಟುತ್ತವೆ. ಆದ್ದರಿಂದ ಇವು ಬ್ರಹ್ಮವೇ ಆಗಿರುತ್ತವೆ[1] ಎಂದು ನಿಶ್ಚಯಿಸಬೇಕು.

**ಬ್ರಹ್ಮೈವ ಸರ್ವನಾಮಾನಿ ರೂಪಾಣಿ ವಿವಿಧಾನಿ ಚ ।**
**ಕರ್ಮಾಣ್ಯಪಿ ಸಮಗ್ರಾಣಿ ಬಿಭರ್ತೀತಿ ಶ್ರುತಿರ್ಜಗೌ ॥ ೫೦ ॥**

೫೦. "ಬ್ರಹ್ಮವೇ ಎಲ್ಲಾ ನಾಮಗಳನ್ನೂ ವಿಧವಿಧವಾದ ರೂಪಗಳನ್ನೂ ಎಲ್ಲಾ ಕರ್ಮಗಳನ್ನೂ ಧರಿಸುತ್ತದೆ" (ಬೃ. ೧-೬-೧) ಎಂದು ಶ್ರುತಿಯು ಹೇಳಿರುತ್ತದೆ.

**ಸುವರ್ಣಾಜ್ಜಾಯಮಾನಸ್ಯ ಸುವರ್ಣತ್ವಂ ಚ ಶಾಶ್ವತಮ್ ।**
**ಬ್ರಹ್ಮಣೋ ಜಾಯಮಾನಸ್ಯ ಬ್ರಹ್ಮತ್ವಂ ಚ ತಥಾ ಭವೇತ್ ॥ ೫೧ ॥**

೫೧. ಚಿನ್ನದಿಂದ ಹುಟ್ಟಿರುವದು ಯಾವಾಗಲೂ ಚಿನ್ನವೇ ಆಗಿರುವದಷ್ಟೆ. ಬ್ರಹ್ಮದಿಂದ ಹುಟ್ಟಿರುವದೂ ಹಾಗೆಯೇ (ಯಾವಾಗಲೂ ಬ್ರಹ್ಮವೇ) ಆಗಿರಬೇಕು.

---

1. ಮುಂ. ೨-೨-೧೧ರ ಸೂಚನೆಯಿದು. ಬ್ರಹ್ಮದಿಂದ ಎಲ್ಲವೂ ಹುಟ್ಟುತ್ತದೆ ಎಂದು ಶ್ರುತಿಯಲ್ಲಿ ಹೇಳಿರುವದು ಎಲ್ಲವೂ ಬ್ರಹ್ಮವೇ ಎಂದು ತಿಳಿಸುವದಕ್ಕೆ ಎಂದು ಭಾವ.

**ಸ್ವಲ್ಪಮಪ್ಯನ್ತರಂ ಕೃತ್ವಾ ಜೀವಾತ್ಮಪರಮಾತ್ಮನೋಃ ।**
**ಯಃ ಸನ್ತಿಷ್ಠತಿ ಮೂಢಾತ್ಮಾ ಭಯಂ ತಸ್ಯಾಭಿಭಾಷಿತಮ್ ॥ ೫೨ ॥**

೫೨. ಜೀವಾತ್ಮಪರಮಾತ್ಮರಿಗೆ ಸ್ವಲ್ಪವಾದರೂ ಭೇದವನ್ನು ಮಾಡಿ ಯಾವ ಮೂಢಾತ್ಮನು ಇರುವನೋ ಅವನಿಗೆ ಭಯವನ್ನು (ಶ್ರುತಿಯಲ್ಲಿ) ಹೇಳಿರುತ್ತದೆ.[1]

**ಯತ್ರಾಜ್ಞಾನಾದ್ಭವೇದ್ದ್ವೈತಮಿತರಸ್ತತ್ರ ಪಶ್ಯತಿ ।**
**ಆತ್ಮತ್ವೇನ ಯದಾ ಸರ್ವಂ ನೇತರಸ್ತತ್ರ ಚಾಣ್ವಪಿ ॥ ೫೩ ॥**

೫೩. ಎಲ್ಲಿ ಅಜ್ಞಾನದಿಂದ ದ್ವೈತವಾಗಿರುವದೋ ಅಲ್ಲಿ ಒಬ್ಬನು (ಮತ್ತೊಬ್ಬನನ್ನು) ಕಾಣುವನು. ಎಲ್ಲವೂ ಆತ್ಮನೇ ಎಂದು ಯಾವಾಗ (ಆಗುವದೋ) ಅಲ್ಲಿ ಮತ್ತೊಂದು (ಪದಾರ್ಥವು) ಒಂದಿಷ್ಟೂ ಇರುವದಿಲ್ಲ.[2]

**ಯಸ್ಮಿನ್ ಸರ್ವಾಣಿ ಭೂತಾನಿ ಹ್ಯಾತ್ಮತ್ವೇನ[3] ವಿಜಾನತಃ ।**
**ನ ವೈ ತಸ್ಯ ಭವೇನ್ಮೋಹೋ ನ ಚ ಶೋಕೋಽದ್ವಿತೀಯತಃ ॥ ೫೪ ॥**

೫೪. ಯಾವ (ಕಾಲ)ದಲ್ಲಿ ಜ್ಞಾನವುಂಟಾದವನಿಗೆ ಎಲ್ಲಾ ಭೂತಗಳೂ ಆತ್ಮನೆಂದೇ (ಆಗುವದೋ ಆಗ) ಅಂಥವನಿಗೆ ಎರಡನೆಯದು ಇರುವದಿಲ್ಲವಾಗಿ ಮೋಹವೂ ಆಗಲಾರದು, ಶೋಕವೂ ಆಗಲಾರದು.[4]

**ಅಯಮಾತ್ಮಾ ಹಿ ಬ್ರಹ್ಮೈವ ಸರ್ವಾತ್ಮಕತಯಾ ಸ್ಥಿತಃ ।**
**ಇತಿ ನಿರ್ಧಾರಿತಂ ಶ್ರುತ್ಯಾ ಬೃಹದಾರಣ್ಯಸಂಸ್ಥಯಾ ॥ ೫೫ ॥**

೫೫. ಎಲ್ಲಾ ರೂಪದಿಂದಲೂ ಇರುವ ಈ ಆತ್ಮನೇ ಬ್ರಹ್ಮವು (ಬೃ. ೪-೪-೫) ಎಂದು ಬೃಹದಾರಣ್ಯಕದಲ್ಲಿರುವ ಶ್ರುತಿಯಿಂದ ನಿಶ್ಚಯಿಸಲ್ಪಟ್ಟಿರುತ್ತದೆ.

## ಅದ್ವೈತಬ್ರಹ್ಮಾತ್ಮತ್ವವನ್ನು ತಿಳಿಸುವ ಯುಕ್ತಿ

**ಅನುಭೂತೋಽಪ್ಯಯಂ ಲೋಕೋ ವ್ಯವಹಾರಕ್ಷಮೋಽಪಿ ಸನ್ ।**
**ಅಸದ್ರೂಪೋ ಯಥಾ ಸ್ವಪ್ನ ಉತ್ತರಕ್ಷಣಬಾಧತಃ ॥ ೫೬ ॥**

---

1. ತೈ. ೨-೭ರ ಅಭಿಪ್ರಾಯವಿದು.
2. ಬೃ. ೨-೪-೧೪ರ ಅಭಿಪ್ರಾಯ.
3. 'ಆತ್ಮತ್ವೇನ ವಿಜಾನತಃ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ, ಇದು ಶ್ರುತಿಗೂ ಅನುಗುಣವಾಗಿದೆ, ಅನ್ವಯವೂ ಸರಳವಾಗಿ ಆಗುತ್ತದೆ.
4. ಈ. ೭ರ ಅಭಿಪ್ರಾಯವಿದು.

೫೬. ಈ ಪ್ರಪಂಚವು ಅನುಭವದಲ್ಲಿದೆಯಾದರೂ[1] ವ್ಯವಹಾರಕ್ಕೆ ಉಪಯೋಗವಾಗಿರುತ್ತದೆಯಾದರೂ[2] ಅಸದ್ರೂಪವೇ. ಏಕೆಂದರೆ ಇದು ಕನಸಿನಂತೆ ಉತ್ತರಕ್ಷಣದಲ್ಲಿಯೇ[3] ಬಾಧಿತವಾಗುವದು.

**ಸ್ವಪ್ನೇ ಜಾಗರಣೇಽಲೀಕಃ ಸ್ವಪ್ನೇಽಪಿ ಜಾಗರೋ ನ ಹಿ[4] ।**
**ದ್ವಯಮೇವ ಲಯೇ ನಾಸ್ತಿ ಲಯೋಽಪಿ ಹ್ಯುಭಯೋರ್ನ ಚ ॥ ೫೭**

೫೭. ಕನಸು ಎಚ್ಚರದಲ್ಲಿ ಇರುವದಿಲ್ಲ. ಕನಸಿನಲ್ಲಿಯೂ ಎಚ್ಚರವು ಇರುವದಿಲ್ಲ. ಇವೆರಡೂ ತನಿನಿದ್ರೆಯಲ್ಲಿರುವದಿಲ್ಲ. (ಆ) ನಿದ್ರೆಯೂ ಇವೆರಡರಲ್ಲಿರುವದಿಲ್ಲ.

**ತ್ರಯಮೇವಂ ಭವೇನ್ಮಿಥ್ಯಾ ಗುಣತ್ರಯವಿನಿರ್ಮಿತಮ್ ।**
**ತಸ್ಯ ದ್ರಷ್ಟಾ ಗುಣಾತೀತೋ ನಿತ್ಯೋ ಹ್ಯೇಕಶ್ಚಿದಾತ್ಮಕಃ ॥ ೫೮ ॥**

೫೮. ಹೀಗೆ ಮೂರು ಗುಣಗಳಿಂದ[5] ನಿರ್ಮಿತವಾಗಿರುವ ಈ ಮೂರೂ ಮಿಥ್ಯೆಯೇ. ಆದರೆ ಇದನ್ನು ನೋಡುವವನು ಗುಣಗಳನ್ನು ಮೀರಿದವನಾಗಿಯೂ ನಿತ್ಯನಾಗಿಯೂ ಒಬ್ಬನಾಗಿಯೂ ಚಿದ್ರೂಪನಾಗಿಯೂ ಇರುತ್ತಾನೆ.

**ಯದ್ವನ್ಮೃದಿ ಘಟಭ್ರಾನ್ತಿಂ ಶುಕ್ತೌ ವಾ ರಜತಸ್ಥಿತಿಮ್ ।**
**ತದ್ವದ್ಬ್ರಹ್ಮಣಿ ಜೀವತ್ವಂ ವೀಕ್ಷ್ಯಮಾಣೇ ನ ಪಶ್ಯತಿ[6] ॥ ೫೯ ॥**

೫೯. ಹೇಗೆ ಮಣ್ಣಿನಲ್ಲಿ ಗಡಿಗೆ ಎಂಬ ಭ್ರಾಂತಿಯನ್ನು ಅಥವಾ ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯಿರುವದನ್ನೂ (ವಿಚಾರಿಸಿ ನೋಡಿದರೆ ಅದು ಕಾಣಿಸದೆ

---

1. ಪ್ರತೀತವಾಗಿದ್ದರೆ ನಿಜವಾಗಿರಬೇಕಾದದ್ದಿಲ್ಲ; ಉದಾಹರಣೆಗೆ ಆಕಾಶವು ನೀಲವರ್ಣವಾಗಿ ತೋರಿದರೂ ನಿಜವಾಗಿ ಅದಕ್ಕೆ ವರ್ಣವಿಲ್ಲ.

2. ಕುಡಿದು ಬಾಯಾರಿಕೆ ಇಂಗಿದರೆ ನಿಜವಾದ ನೀರೆನ್ನುವದಕ್ಕೆ ಬರುವದಿಲ್ಲ. ಇದಕ್ಕೆ ಸ್ವಪ್ನದ ನೀರೇ ದೃಷ್ಟಾಂತ.

3. ಜ್ಞಾನಕ್ಷಣದಲ್ಲಿಯೇ ಎಂದರ್ಥ.

4. 'ನ ಹಿ ಜಾಗರಃ' ಎಂಬ ಪಾಠವೂ ಉಂಟು; ಅದರಿಂದ ಅರ್ಥದಲ್ಲಿ ಯಾವ ಹೆಚ್ಚುಕಡಿಮೆಯೂ ಆಗುವದಿಲ್ಲ.

5. ಸತ್ತ್ವರಜಸ್ತಮೋಗುಣಗಳಿಂದ ಎಂದರ್ಥ. ಅವಸ್ಥೆಗಳು ಗುಣತ್ರಯದ ಕಾರ್ಯವೆಂಬ ಅಭಿಪ್ರಾಯವು ಭಾಷ್ಯಗಳಲ್ಲಿ ಕಾಣುವದಿಲ್ಲ.

6. 'ಭ್ರಾಂತ್ಯಾ ಪಶ್ಯತಿ ನ ಸ್ವತಃ' (ಭ್ರಾಂತಿಯಿಂದ ಕಾಣುತ್ತಾನೆಯೇ ಹೊರತು ಅದು ನಿಜವಾಗಿರುವದಿಲ್ಲ) ಎಂದು ಪಾ॥ ಪಾಠ.

ಹೋಗುವದೋ) ಅದರಂತೆ ಚೆನ್ನಾಗಿ ನೋಡಿದರೆ ಬ್ರಹ್ಮದಲ್ಲಿ ಜೀವತ್ವವೂ ನೋಡಿದರೆ ಕಾಣಿಸದೆ ಹೋಗುವವು.

**ಯಥಾ ಮೃದಿ ಘಟೋ ನಾಮ ಕನಕೇ ಕುಣ್ಡಲಾಭಿದಾ ।**
**ಶುಕ್ತೌ ಹಿ ರಜತಖ್ಯಾತಿರ್ಜೀವಶಬ್ದಸ್ತಥಾ ಪರೇ ॥ ೬೦ ॥**

೬೦. ಮಣ್ಣಿನಲ್ಲಿ ಗಡಿಗೆಯೆಂಬ ಹೆಸರು, ಚಿನ್ನದಲ್ಲಿ ಕುಂಡಲವೆಂಬ ಹೆಸರು, ಕಪ್ಪೆಯಚಿಪ್ಪಿನಲ್ಲಿ ಬೆಳ್ಳಿಯೆಂಬ ಹೆಸರು ಹೇಗೋ ಹಾಗೆ ಪರ(ಬ್ರಹ್ಮ) ದಲ್ಲಿ ಜೀವಶಬ್ದವು ಹಾಗೆ.[1]

**ಯಥೈವ ವ್ಯೋಮ್ನಿ ನೀಲತ್ವಂ ಯಥಾ ನೀರಂ ಮರುಸ್ಥಲೇ ।**
**ಪುರುಷತ್ವಂ ಯಥಾ ಸ್ಥಾಣೌ ತದ್ವದ್ವಿಶ್ವಂ ಚಿದಾತ್ಮನಿ ॥ ೬೧ ॥**

೬೧. ಆಕಾಶದಲ್ಲಿ ನೀಲವರ್ಣವು ಹೇಗೋ, ಮರುಭೂಮಿಯಲ್ಲಿ ನೀರು ಹೇಗೋ, ಮೋಟ-ಮರದಲ್ಲಿ ಮನುಷ್ಯನೆಂಬುದು ಹೇಗೋ ಚಿದಾತ್ಮನಲ್ಲಿ ವಿಶ್ವವು ಹಾಗೆ.[2]

**ಯಥೈವ ಶೂನ್ಯೇ ವೇತಾಲೋ ಗನ್ಧರ್ವಾಣಾಂ ಪುರಂ ಯಥಾ ।**
**ಯಥಾಕಾಶೇ ದ್ವಿಚನ್ದ್ರತ್ವಂ ತದ್ವತ್ಸತ್ಯೇ ಜಗತ್ಸ್ಥಿತಿಃ ॥ ೬೨ ॥**

೬೨. ಏನೂ ಇಲ್ಲದೆಡೆಯಲ್ಲಿ ವೇತಾಳನು ಹೇಗೋ (ಅಂತರಿಕ್ಷದಲ್ಲಿ) ಗಂಧರ್ವನಗರವು ಹೇಗೋ ಆಕಾಶದಲ್ಲಿ ಇಬ್ಬರು ಚಂದ್ರರು ಹೇಗೋ ಸತ್ಯ ರೂಪನಾದ ಪರಮಾತ್ಮನಲ್ಲಿ ಜಗತ್ತು ಇರುವದು ಹಾಗೆ.[3]

**ಯಥಾ ತರಙ್ಗಕಲ್ಲೋಲೈರ್ಜಲಮೇವ ಸ್ಫುರತ್ಯಲಮ್ ।**
**ಪಾತ್ರರೂಪೇಣ ತಾಮ್ರಂ ಹಿ ಬ್ರಹ್ಮಾಣ್ಡೌಘೈಸ್ತಥಾತ್ಮತಾ ॥ ೬೩ ॥**

೬೩. ನೀರೇ ತೆರೆಗಳೆಂದೂ ಅಲೆಗಳೆಂದೂ ಹೇಗೆ ಕಾಣಿಸುತ್ತಿರುವದೋ ತಾಮ್ರವೊಂದೇ ಪಾತ್ರೆಯ ರೂಪದಿಂದ ತೋರುತ್ತಿರುವದೋ ಹಾಗೆಯೇ ಆತ್ಮ ಸ್ವರೂಪವೊಂದೇ ಬ್ರಹ್ಮಾಂಡಸಮೂಹವಾಗಿ (ತೋರುತ್ತಿರುವದು).

---

1. ಬರಿಯ ಮಾತು ಪ್ರಯೋಗವಾಗಿರುತ್ತದೆ, ವಸ್ತುವಿಲ್ಲ ಎಂದರ್ಥ.

2. ಅಧ್ಯಾರೋಪವಾಗಿರುತ್ತದೆ.

3. ಆಕಾಶವನ್ನು ಅಧಿಷ್ಠಾನಮಾಡಿ ಇಬ್ಬರು ಚಂದ್ರರ ಆರೋಪವನ್ನು ಹೇಳುವದು ಭಾಷ್ಯಗಳಲ್ಲಿ ಕಾಣಬರುವದಿಲ್ಲ. ಒಬ್ಬ ಚಂದ್ರನಲ್ಲಿ ಸದ್ವಿತೀಯತ್ವವು ಆರೋಪಿತವೆಂಬು ಸೂತ್ರಭಾಷ್ಯದಲ್ಲಿದೆ.

## ಬ್ರಹ್ಮವೇ ಎಲ್ಲಾ ವ್ಯವಹಾರಕ್ಕೂ ಆಶ್ರಯ

**ಘಟನಾಮ್ನಾ ಯಥಾ ಪೃಥ್ವೀ ಪಟನಾಮ್ನಾ ಹಿ ತನ್ತವಃ ।**
**ಜಗನ್ನಾಮ್ನಾ ಚಿದಾಭಾತಿ ಜ್ಞೇಯಂ ತತ್ತದಭಾವತಃ ॥ ೬೪ ॥**

೬೪. ಗಡಿಗೆಯೆಂಬ ಹೆಸರಿನಿಂದ ಹೇಗೆ ಮಣ್ಣೂ ಬಟ್ಟೆಯೆಂಬ ಹೆಸರಿನಿಂದ ನೂಲುಗಳೂ ಹೇಗೋ ಹಾಗೆ ಜಗತ್ತೆಂಬ ಹೆಸರಿನಿಂದ ಚಿತ್ತೇ ತೋರುತ್ತಿರುವದು ; ಆಯಾ (ತೋರಿಕೆಯ) ಅಭಾವದಿಂದ (ವಸ್ತುಸ್ವರೂಪವನ್ನು) ಅರಿಯಬೇಕು.

**ಸರ್ವೋಽಪಿ ವ್ಯವಹಾರಸ್ತು ಬ್ರಹ್ಮಣಾ ಕ್ರಿಯತೇ ಜನೈಃ ।**
**ಅಜ್ಞಾನಾನ್ನ ವಿಜಾನನ್ತಿ ಮೃದೇವ ಹಿ ಘಟಾದಿಕಮ್ ॥ ೬೫ ॥**

೬೫. ಬ್ರಹ್ಮದಿಂದಲೇ ಜನರು ಎಲ್ಲಾ ವ್ಯವಹಾರವನ್ನೂ ಮಾಡುತ್ತಿರುವರು. ಆದರೂ ಅಜ್ಞಾನದಿಂದ (ಇದನ್ನು) ಅರಿಯದೆ ಇರುವರು. ಗಡಿಗೆ ಮುಂತಾದದ್ದು (ಬರಿಯ) ಮಣ್ಣೇ ಅಷ್ಟೆ ?

**ಕಾರ್ಯಕಾರಣತಾ ನಿತ್ಯಮಾಸ್ತೇ ಘಟಮೃದೋರ್ಯಥಾ ।**
**ತಥೈವ ಶ್ರುತಿಯುಕ್ತಿಭ್ಯಾಂ ಪ್ರಪಞ್ಚಬ್ರಹ್ಮಣೋರಿಹ ॥ ೬೬ ॥**

೬೬. ಗಡಿಗೆಗೂ ಮಣ್ಣಿಗೂ ಕಾರ್ಯಕಾರಣಭಾವವು ಯಾವಾಗಲೂ ಹೇಗೆ ಇದ್ದುಕೊಂಡಿರುವದೋ ಹಾಗೆಯೇ ಪ್ರಪಂಚಬ್ರಹ್ಮಗಳಿಗೂ ಇರುವದೆಂದು ಶ್ರುತಿಯುಕ್ತಿಗಳಿಂದ (ಗೊತ್ತಾಗುತ್ತದೆ)[1].

## ಜ್ಞಾನಾಜ್ಞಾನದೃಷ್ಟಿಗಳ ತಾರತಮ್ಯ

**ಗೃಹ್ಯಮಾಣೇ ಘಟೇ ಯದ್ವನ್ಮೃತ್ತಿಕಾಯಾತಿ ವೈ ಬಲಾತ್ ।**
**ವೀಕ್ಷ್ಯಮಾಣೇ ಪ್ರಪಞ್ಚೇಽಪಿ ಬ್ರಹ್ಮೈವಾಭಾತಿ ಭಾಸುರಮ್ ॥ ೬೭॥**

೬೭. ಗಡಿಗೆಯನ್ನು ಗ್ರಹಿಸಿದರೆ ಮಣ್ಣು ಬಲಾತ್ಕಾರದಿಂದ ಹೇಗೆ (ಆ ಗ್ರಹಣದಲ್ಲಿ) ಬಂದೇ ತೀರುವದೋ (ಹಾಗೆ) ಪ್ರಪಂಚವನ್ನು ಕಾಣುತ್ತಿದ್ದರೂ ಪ್ರಕಾಶರೂಪವಾದ ಬ್ರಹ್ಮವೇ ತೋರುತ್ತಿರುವದು[2].

---

1. ಘಟಾದಿಕಾರ್ಯವು ಕಾರಣಕ್ಕಿಂತ ಬೇರೆಯಲ್ಲವೆ ಕಾರಣರೂಪದಿಂದಲೇ ಇರುವಂತೆ ಜಗದ್ರೂಪಕಾರ್ಯವು ಕಾರಣವಾದ ಬ್ರಹ್ಮರೂಪದಿಂದಲೇ ಇರುವದು — ಎಂದು ಅಭಿಪ್ರಾಯ.

2. ಅಜ್ಞಾನಿಗಳು ಪ್ರಪಂಚವೆಂದು ಕಾಣುವದು ಆಗಲೂ ಪರಮಾರ್ಥವಾಗಿ ಬ್ರಹ್ಮವೇ.

**ಸದೈವಾತ್ಮಾ ವಿಶುದ್ಧೋಽಸ್ತಿ ಹ್ಯಶುದ್ಧೋ ಭಾತಿ ವೈ ಸದಾ ।**
**ಯಥೈವ ದ್ವಿವಿಧಾ ರಜ್ಜುರ್ಜ್ಞಾನಿನೋಽಜ್ಞಾನಿನೋಽಪಿ ವಾ ॥ ೬೮ ॥**

೬೮. ಹೇಗೆ ಹಗ್ಗವು ಯಾವಾಗಲೂ (ಬೇರೆಬೇರೆಯಾಗಿ) ಎರಡು ವಿಧವಾಗಿ ಕಾಣುತ್ತಿರುವದೋ[1] (ಹಾಗೆ) ಆತ್ಮನು ಯಾವಾಗಲೂ ವಿಶುದ್ಧನೇ ಆಗಿರುತ್ತಾನೆ, ಯಾವಾಗಲೂ ಅಶುದ್ಧನಾಗಿ ತೋರುತ್ತಿರುತ್ತಾನೆ[2]

## ಅನಾತ್ಮವೆಲ್ಲ ನಿಜವಾಗಿ ಆತ್ಮನು

**ಯಥೈವ ಮೃನ್ಮಯಃ ಕುಂಭಸ್ತದ್ವದ್ದೇಹೋಽಪಿ ಚಿನ್ಮಯಃ ।**
**ಆತ್ಮಾನಾತ್ಮವಿಭಾಗೋಽಯಂ ಮುಧೈವ ಕ್ರಿಯತೇಽಬುಧೈಃ ॥ ೬೯ ॥**

೬೯. ಹೇಗೆ ಗಡಿಗೆಯು ಮಣ್ಣಿನ ರೂಪವಾಗಿಯೇ (ಇದ್ದುಕೊಂಡಿರುವದೋ) ಹಾಗೆ ದೇಹವೂ ಚಿದ್ರೂಪವಾಗಿಯೇ (ಇದ್ದುಕೊಂಡಿರುತ್ತದೆ. ಆದರೂ) ತಿಳಿಯದವರು ಈ ಆತ್ಮಾನಾತ್ಮವಿಭಾಗವನ್ನು ಸುಮ್ಮನೆ ಮಾಡಿಕೊಂಡಿರುವರು[3]

## ಆತ್ಮನನ್ನೇ ದೇಹವೆಂದು ತಿಳಿಯುವರೆಂಬುದಕ್ಕೆ ದೃಷ್ಟಾಂತಗಳು

**ಸರ್ಪತ್ವೇನ ಯಥಾ ರಜ್ಜೂ ರಜತತ್ವೇನ ಶುಕ್ತಿಕಾ ।**
**ವಿನಿರ್ಣೀತಾ ವಿಮೂಢೇನ ದೇಹತ್ವೇನ ತಥಾತ್ಮತಾ[4] ॥ ೭೦ ॥**

೭೦. ಹೇಗೆ ಹಗ್ಗವನ್ನು ಹಾವೆಂದೂ ಕಪ್ಪೆಯ ಚಿಪ್ಪನ್ನು ಬೆಳ್ಳಿಯೆಂದೂ ಮೂಢನು ನಿಶ್ಚಯಿಸುವನೋ ಹಾಗೆಯೇ ಆತ್ಮನನ್ನು ದೇಹವೆಂದು ನಿಶ್ಚಯಿಸಿಕೊಂಡಿರುವನು.

**ಘಟತ್ವೇನ ಯಥಾ ಪೃಥ್ವೀ ಪಟತ್ವೇನೈವ ತನ್ತವಃ ।**
**ವಿನಿರ್ಣೀತಾ ವಿಮೂಢೇನ ದೇಹತ್ವೇನ ತಥಾತ್ಮತಾ ॥ ೭೧ ॥**

---

1. ಹಗ್ಗ, ಹಾವು—ಎಂದು ಎರಡು ವಿಧವಾಗಿ ತೋರುತ್ತಿದ್ದರೂ ಅದು ನಿಜವಾಗಿ ಹಗ್ಗವೇ ಆಗಿರುತ್ತದೆ ಎಂದು ಭಾವ.

2. ಅಜ್ಞರಿಗೆ ಅಶುದ್ಧನೆಂದು ತೋರಿದ ಮಾತ್ರದಿಂದ ನಿಜವಾಗಿಯೂ ಅಶುದ್ಧನೇ ಆಗಿರುವದಿಲ್ಲ ; ಆಗಲೂ ನಿಜವಾಗಿ ವಿಶುದ್ಧನೇ ಆಗಿರುತ್ತಾನೆ.

3. ಅವರು ಅನಾತ್ಮವೆಂದು ಭಾವಿಸಿರುವದೂ ಪರಮಾರ್ಥವಾಗಿ ಆತ್ಮನೇ ಎಂದರ್ಥ.

4. ಆತ್ಮತಾ ಎಂಬುವದರ ಬದಲು 'ಆತ್ಮಾ' ಎಂದಿಷ್ಟೇ ಇದ್ದರೆ ಸಾಕಾಗಿತ್ತು. ಛಂದಸ್ಸಿಗೆ 'ಆತ್ಮತಾ' ಬೇಕು.

೭೧. ಪೃಥ್ವಿಯನ್ನು ಗಡಿಗೆಯೆಂದೂ ನೂಲುಗಳನ್ನು ಬಟ್ಟೆಯೇ ಎಂದೂ ಹೇಗೆ ಮೂಢನು ನಿಶ್ಚಯಿಸಿಕೊಂಡಿರುವನೋ ಹಾಗೆಯೇ ಆತ್ಮನನ್ನು ದೇಹವೆಂದು ನಿಶ್ಚಯಿಸಿರುವನು.

**ಕನಕಂ ಕುಣ್ಡಲತ್ವೇನ ತರಙ್ಗತ್ವೇನ ವೈ ಜಲಮ್ |**
**ವಿನಿರ್ಣೀತಾ ವಿಮೂಢೇನ ದೇಹತ್ವೇನ ತಥಾತ್ಮತಾ || ೭೨ ||**

೭೨. ಚಿನ್ನವನ್ನು ಕುಂಡಲವೆಂದೂ ನೀರನ್ನು ಅಲೆಯೇ ಎಂದೂ ಮೂಢನು ಹೇಗೆ ನಿಶ್ಚಯಿಸಿಕೊಳ್ಳುವನೋ ಹಾಗೆಯೇ ಆತ್ಮನನ್ನು ದೇಹವೆಂದು ನಿಶ್ಚಯಿಸಿರುವನು.

**ನರತ್ವೇನ ಯಥಾ ಸ್ಥಾಣುರ್ಜಲತ್ವೇನ ಮರೀಚಿಕಾ |**
**ವಿನಿರ್ಣೀತಾ ವಿಮೂಢೇನ ದೇಹತ್ವೇನ ತಥಾತ್ಮತಾ || ೭೩ ||**

೭೩. ಮೋಟುಮರವನ್ನು ಮನುಷ್ಯನೆಂದೂ ಬಿಸಿಲುಕುದುರೆಯನ್ನು ನೀರೆಂದೂ ಮೂಢನು ಹೇಗೆ ನಿಶ್ಚಯಿಸಿಕೊಳ್ಳುವನೋ ಹಾಗೆ ಆತ್ಮನನ್ನು ದೇಹವೆಂದು ನಿಶ್ಚಯಿಸಿರುವನು.

**ಗೃಹತ್ವೇನೈವ ಕಾಷ್ಠಾನಿ ಖಡ್ಗತ್ವೇನೈವ ಲೋಹತಾ |**
**ವಿನಿರ್ಣೀತಾ ವಿಮೂಢೇನ ದೇಹತ್ವೇನ ತಥಾತ್ಮತಾ || ೭೪ ||**

೭೪. ಮರಮುಟ್ಟುಗಳನ್ನು ಮನೆಯೇ ಎಂದೂ ಕಬ್ಬಿಣವನ್ನು ಕತ್ತಿಯೇ ಎಂದೂ ಮೂಢನಾದವನು ಹೇಗೆ ನಿಶ್ಚಯಿಸಿಕೊಳ್ಳುವನೋ[1] ಹಾಗೆ ಆತ್ಮನನ್ನು ದೇಹವೆಂದು ನಿಶ್ಚಯಿಸಿರುವನು.

## ಆತ್ಮನನ್ನು ದೇಹವೆಂದರಿಯುವದಕ್ಕೆ ಅಜ್ಞಾನವೇ ಕಾರಣ

**ಯಥಾ ವೃಕ್ಷವಿಪರ್ಯಾಸೋ ಜಲಾದ್ಭವತಿ ಕಸ್ಯಚಿತ್ |**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ || ೭೫ ||**

---

1 ಇಲ್ಲಿ ಪರಿಣಾಮಕಾರಣಗಳನ್ನೂ ವಿವರ್ತಕಾರಣಗಳನ್ನೂ ಮಿಶ್ರಮಾಡಿ ದೃಷ್ಟಾಂತಗಳಲ್ಲಿ ಕೊಟ್ಟಿರುವದು ಆ ಎರಡು ಬಗೆಯ ಕಾರ್ಯಕಾರಣಭಾವವೂ ನಿಜವಾಗಿ ಒಂದೇ ಎಂಬ ಭಾವದಿಂದ.

೭೫. ಹೇಗೆ ನೀರಿನ (ಸಂಬಂಧ)ದಿಂದ ಮರದಲ್ಲಿ ವಿಪರೀತಪ್ರತ್ಯಯವು[1] ಯಾವನಿಗಾದರೂ ಆಗುವದೋ ಅದರಂತೆ ಅಜ್ಞಾನದ ಸಂಬಂಧದಿಂದ ಆತ್ಮನಲ್ಲಿ ದೇಹತ್ವವನ್ನು ಕಾಣುತ್ತಾನೆ.

**ಪೋತೇನ ಗಚ್ಛತಃ ಪುಂಸಃ ಸರ್ವಂ ಭಾತೀವ ಚಞ್ಚಲಮ್ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥ ೭೬ ॥**

೭೬. ದೋಣಿಯಲ್ಲಿ (ಕುಳಿತುಕೊಂಡು) ಪ್ರಯಾಣಮಾಡುತ್ತಿರುವ ಮನುಷ್ಯನಿಗೆ ಎಲ್ಲವೂ ಚಲಿಸುತ್ತಿರುವಂತೆ ಕಾಣುತ್ತದೆ. ಅದರಂತೆ ಅಜ್ಞಾನದ ಸಂಬಂಧದಿಂದ ಆತ್ಮನಲ್ಲಿ ದೇಹತ್ವವನ್ನು ಕಾಣುತ್ತಾನೆ.

**ಪೀತತ್ವಂ ಹಿ ಯಥಾ ಶುಭ್ರೇ ದೋಷಾದ್ಭವತಿ ಕಸ್ಯಚಿತ್ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥ ೭೭ ॥**

೭೭. ಬೆಳ್ಳಗಿರುವ (ವಸ್ತುವಿನಲ್ಲಿ) ದೋಷವಶದಿಂದ ಯಾವನಿಗಾದರೂ ಹಳದಿಯ (ಬಣ್ಣವು) ಹೇಗೆ ತೋರುವದೋ ಅದರಂತೆ ಅಜ್ಞಾನದ ಸಂಬಂಧದಿಂದ ಆತ್ಮನಲ್ಲಿ ದೇಹತ್ವವನ್ನು ಕಾಣುತ್ತಾನೆ.

**ಚಕ್ಷುರ್ಭ್ಯಾಂ ಭ್ರಮಶೀಲಾಭ್ಯಾಂ ಸರ್ವಂ ಭಾತಿ ಭ್ರಮಾತ್ಮಕಮ್ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥ ೭೮ ॥**

೭೮. ಕಣ್ಣುಗಳು ತೊಳಸುವದರಿಂದ ಎಲ್ಲವೂ ಚಲಿಸುತ್ತಿರುವಂತೆಯೇ ತೋರುತ್ತದೆ. ಅದರಂತೆ ಅಜ್ಞಾನದ ಸಂಬಂಧದಿಂದ ಆತ್ಮನಲ್ಲಿ ದೇಹತ್ವವನ್ನು ಕಾಣುತ್ತಾನೆ.

**ಅಲಾತಂ ಭ್ರಮಣೇನೈವ ವರ್ತುಲಂ ಭಾತಿ ಸೂರ್ಯವತ್ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥ ೭೯ ॥**

೭೯. ತಿರುಗಿಸಿದ ಮಾತ್ರಕ್ಕೇ ಕೊಳ್ಳಿಯು ಸೂರ್ಯನಂತೆ ದುಂಡಗೆ ಕಾಣುತ್ತದೆ. ಅದರಂತೆ ಆತ್ಮನಲ್ಲಿ ದೇಹತ್ವವನ್ನು ಅಜ್ಞಾನದ ಸಂಬಂಧದಿಂದ ಕಾಣುತ್ತಾನೆ.

**ಮಹತ್ತ್ವೇ ಸರ್ವವಸ್ತೂನಾಮಣುತ್ವಂ ಹ್ಯತಿದೂರತಃ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥ ೮೦ ॥**

---

1. ತಲೆಕೆಳಗಾಗಿದೆ ಎಂಬ ತಪ್ಪುತಿಳಿವಳಿಕೆಯು. ಆತ್ಮನಿಗಿಂತ ಬೇರೆಯಾದ ದೇಹವು ಇಲ್ಲದಿದ್ದರೂ ಅದು ಇರುವಂತೆ ಕಾಣುವದುಕೂಡ ಅಧ್ಯಾಸದ ಕಾರ್ಯವು ಎಂದರ್ಥ.

೮೦. ದೊಡ್ಡವಾಗಿದ್ದರೂ ಯಾವ ವಸ್ತುಗಳೇ ಆಗಲಿ, ಅತಿ ದೂರದಲ್ಲಿ ರುವುದರಿಂದ ಸಣ್ಣವಾಗಿರುವಂತೆ (ಕಾಣುತ್ತವೆ)ಯಲ್ಲವೆ? ಅದರಂತೆ ಆತ್ಮನಲ್ಲಿ ಅಜ್ಞಾನದ ಸಂಬಂಧದಿಂದ ದೇಹತ್ವವನ್ನು ಕಾಣುತ್ತಾನೆ.

**ಸೂಕ್ಷ್ಮತ್ವೇ ಸರ್ವಭಾವಾನಾಂ ಸ್ಥೂಲತ್ವಂ ಚೋಪನೇತ್ರತಃ |**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ || ೮೧ ||**

೮೧. ಸಣ್ಣವಾಗಿದ್ದರೂ ಯಾವ ವಸ್ತುಗಳೇ ಆಗಲಿ ಕಣ್ಣಿಗೆ ಹತ್ತಿರವಿರುವದರಿಂದ ದೊಡ್ಡವಾಗಿರುವಂತೆ (ಕಾಣುತ್ತವೆ). ಅದರಂತೆ ಆತ್ಮನಲ್ಲಿ ಅಜ್ಞಾನದ ಸಂಬಂಧದಿಂದ ದೇಹತ್ವವನ್ನು ಕಾಣುತ್ತಾನೆ.

**ಕಾಚಭೂಮೌ ಜಲತ್ವಂ ವಾ ಜಲಭೂಮೌ ಹಿ ಕಾಚತಾ |**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ || ೮೨ ||**

೮೨. ಗಾಜಿನ ನೆಲದಲ್ಲಿ ನೀರನ್ನೂ ನೀರಿನ ಸ್ಥಲದಲ್ಲಿ ಗಾಜನ್ನೂ (ಕಾಣುವ)ರಷ್ಟೆ, ಅದರಂತೆ ಆತ್ಮನಲ್ಲಿ ಅಜ್ಞಾನದ ಸಂಬಂಧದಿಂದ ದೇಹತ್ವವನ್ನು ಕಾಣುತ್ತಾನೆ.

**ಯದ್ವದಗ್ನೌ ಮಣಿತ್ವಂ ಹಿ ಮಣೌ ವಾ ವಹ್ನಿತಾ[1] ಪುಮಾನ್ |**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ || ೮೩ ||**

೮೩. ಬೆಂಕಿಯಲ್ಲಿ ರತ್ನವೆಂದೂ ರತ್ನದಲ್ಲಿ ಬೆಂಕಿಯೆಂದೂ ಹೇಗೆ (ಬುದ್ಧಿಯುಂಟಾಗುವದೋ) ಅದರಂತೆ ಆತ್ಮನಲ್ಲಿ ಅಜ್ಞಾನದ ಸಂಬಂಧದಿಂದ ದೇಹತ್ವವನ್ನು ಕಾಣುತ್ತಾನೆ.

**ಅಭ್ರೇಷು ಸತ್ಸು ಧಾವತ್ಸು ಸೋಮೋ ಧಾವತಿ ಭಾತಿ ವೈ |**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ || ೮೪ ||**

೮೪. ಮೋಡಗಳು ಓಡಾಡುತ್ತಿರುವಲ್ಲಿ ಚಂದ್ರನು ಓಡಾಡುತ್ತಿರುವಂತೆ ಕಾಣುವದಷ್ಟೆ. ಅದರಂತೆ ಆತ್ಮನಲ್ಲಿ ಅಜ್ಞಾನದ ಸಂಬಂಧದಿಂದ ದೇಹತ್ವವನ್ನು ಕಾಣುತ್ತಾನೆ.

**ಯಥೈವ ದಿಗ್ವಿಪರ್ಯಾಸೋ ಮೋಹಾದ್ಭವತಿ ಕಸ್ಯಚಿತ್ |**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ || ೮೫ ||**

---

1. 'ವಹ್ನಿತಾಂ' ಎಂಬ ಪಾಠವಿದ್ದರೆ ಇನ್ನೂ ಸರಳವಾಗಿ ಅನ್ವಯವಾಗುವದು.

೮೫. ಹೇಗೆ ಮೋಹದಿಂದ ಯಾವನಿಗಾದರೂ ದಿಕ್ಕಿನ ತಪ್ಪುತಿಳಿವಳಿಕೆಯು (ಉಂಟಾಗಬಹುದೋ) ಹಾಗೆಯೇ ಆತ್ಮನಲ್ಲಿ ಅಜ್ಞಾನದ ಸಂಬಂಧದಿಂದ ದೇಹತ್ವವನ್ನು ಕಾಣುತ್ತಾನೆ.

**ಯಥಾ ಶಶೀ ಜಲೇ ಭಾತಿ ಚಞ್ಚಲತ್ವೇನ ಕಸ್ಯಚಿತ್ ।**
**ತದ್ವದಾತ್ಮನಿ ದೇಹತ್ವಂ ಪಶ್ಯತ್ಯಜ್ಞಾನಯೋಗತಃ ॥ ೮೬ ॥**

೮೬. ಹೇಗೆ ಚಂದ್ರನು ನೀರಿನಲ್ಲಿ ಅಲುಗಾಡುತ್ತಿರುವಂತೆ ಯಾವನಿಗಾದರೂ ತೋರುವನೋ ಅದರಂತೆಯೇ ಅಜ್ಞಾನದ ಸಂಬಂಧದಿಂದ ಆತ್ಮನಲ್ಲಿ ದೇಹತ್ವವನ್ನು ಕಾಣುತ್ತಾನೆ.

## ಜ್ಞಾನಿಯು ಕೃತಕೃತ್ಯನು

**ಪರಮಾತ್ಮನ್ಯವಿದ್ಯಾತೋ[1] ದೇಹಾಧ್ಯಾಸೋ ಹಿ ಜಾಯತೇ ।**
**ಸ ಏವಾತ್ಮಪರಿಜ್ಞಾನಾಲ್ಲೀಯತೇ[2] ಚ ಪರಾತ್ಮನಿ ॥ ೮೭ ॥**

೮೭. ಪರಮಾತ್ಮನಲ್ಲಿ ಅವಿದ್ಯೆಯಿಂದ ದೇಹಾಧ್ಯಾಸವುಂಟಾಗಿರುತ್ತದೆ. ಆತ್ಮನನ್ನು ಚೆನ್ನಾಗಿ ಅರಿತುಕೊಳ್ಳುವದರಿಂದ ಆ (ಅಧ್ಯಾಸವೇ) ಪರಮಾತ್ಮನಲ್ಲಿ ಲಯವಾಗುತ್ತದೆ[3].

**ಸರ್ವಮಾತ್ಮತಯಾ ಜ್ಞಾತಂ ಜಗತ್ಸ್ಥಾವರಜಙ್ಗಮಮ್ ।**
**ಅಭಾವಾತ್ ಸರ್ವಭಾವಾನಾಂ ದೇಹಸ್ಯ ತ್ವಾತ್ಮತಾ[4] ಕುತಃ ॥ ೮೮ ॥**

೮೮. ಸ್ಥಾವರಜಂಗಮಾತ್ಮಕವಾದ ಜಗತ್ತೆಲ್ಲವೂ ಆತ್ಮನೆಂದೇ ತಿಳಿದದ್ದಾಯಿತು. ಯಾವ (ಮಿಕ್ಕ) ವಸ್ತುಗಳೂ ಇಲ್ಲದ್ದರಿಂದ ದೇಹಕ್ಕೆ ಆತ್ಮತ್ವವು ಎಲ್ಲಿಂದ (ಬಂದೀತು) ?

---

1. "ಏವಮಾತ್ಮನಿ ನ ಜ್ಞಾತೇ" ಎಂಬ ಪಾ॥ ಪಾಠಕ್ಕಿಂತ ಇದೇ ಮೇಲು.

2. ''ಸ ಏವಾತ್ಮಾ ಪರಿಜ್ಞಾತೋ'' ಎಂಬ ಪಾ॥ ಪಾಠವು ಸರಿಯಲ್ಲ; ಏಕೆಂದರೆ ಇಲ್ಲಿ ಅಧ್ಯಾಸವು ಪ್ರಕೃತವಾಗಿದೆ, ಆತ್ಮನಲ್ಲ.

3. ಅಧ್ಯಾಸವೂ ಆತ್ಮನೆಂವೇ ಸಿದ್ಧವಾಗಿಬಿಡುತ್ತದೆ ಎಂದರ್ಥ.

4. 'ದೇಹಾನಾಂ ಚಾತ್ಮತಾ' ಎಂದು ಪಾ॥ ಪಾಠ. 'ದೇಹಗಳಿಗೆ' ಎಂದು ಆ ಪಾಠಕ್ಕೆ ಅನುವಾದ.

**ಆತ್ಮಾನಂ ಸತತಂ ಜಾನನ್ ಕಾಲಂ ನಯ ಮಹಾಮತೇ[1] ।**
**ಪ್ರಾರಬ್ಧಮಖಿಲಂ ಭುಞ್ಜನ್ನೋದ್ವೇಗಂ ಕರ್ತುಮರ್ಹಸಿ ॥ ೮೯ ॥**

೮೯. ಎಲೈ ಮಹಾಬುದ್ಧಿಶಾಲಿಯೇ, ನೀನು ಆತ್ಮನೆಂದೇ ಯಾವಾಗಲೂ ತಿಳಿದುಕೊಂಡು ಪ್ರಾರಬ್ಧವನ್ನೆಲ್ಲ ಅನುಭವಿಸುತ್ತಾ ಕಾಲವನ್ನು ಕಳೆಯುತ್ತಿರು. ಮನಸ್ಸಿಗೆ ತಳಮಳವನ್ನು ಮಾಡಿಕೊಳ್ಳಬೇಡ.

## ಜ್ಞಾನಿಗೆ ಪ್ರಾರಬ್ಧಕರ್ಮವೂ ಇಲ್ಲ

**ಉತ್ಪನ್ನೇಽಪ್ಯಾತ್ಮವಿಜ್ಞಾನೇ ಪ್ರಾರಬ್ಧಂ ನೈವ ಮುಞ್ಚತಿ ।**
**ಇತಿ ಯಚ್ಛ್ರೂಯತೇ ಶಾಸ್ತ್ರೇ[2] ತನ್ನಿರಾಕ್ರಿಯತೇಽಧುನಾ ॥ ೯೦ ॥**

೯೦. ಆತ್ಮಜ್ಞಾನವುಂಟಾದರೂ ಪ್ರಾರಬ್ಧವು ಬಿಡುವದೇ ಇಲ್ಲ ಎಂದು ಶಾಸ್ತ್ರದಲ್ಲಿ ಹೇಳಿದೆಯಷ್ಟೆ. ಅದನ್ನು ಈಗ ನಿರಾಕರಿಸಲಾಗುತ್ತದೆ.

**ತತ್ತ್ವಜ್ಞಾನೋದಯಾದೂರ್ಧ್ವಂ ಪ್ರಾರಬ್ಧಂ ನೈವ ವಿದ್ಯತೇ ।**
**ದೇಹಾದೀನಾಮಸತ್ತ್ವಾತ್ತು[3] ಯಥಾ ಸ್ವಪ್ನೋ ವಿಬೋಧತಃ[4] ॥**

೯೧. ಎಚ್ಚರವಾದೊಡನೆ ಹೇಗೆ ಸ್ವಪ್ನವು ಇರುವದೇ ಇಲ್ಲವೋ ಅದರಂತೆ ತತ್ತ್ವಜ್ಞಾನವಾದ ಮೇಲೆ ದೇಹಾದಿಗಳು ಇಲ್ಲದಿರುವದರಿಂದ ಪ್ರಾರಬ್ಧವು ಇರುವದೇ ಇಲ್ಲ.

**ಕರ್ಮ ಜನ್ಮಾನ್ತರೀಯಂ ಯತ್[5] ಪ್ರಾರಬ್ಧಮಿತಿ ಕೀರ್ತಿತಮ್ ।**
**ತತ್ತು ಜನ್ಮಾನ್ತರಾಭಾವಾತ್ಪುಂಸೋ ನೈವಾಸ್ತಿ ಕರ್ಹಿಚಿತ್ ॥ ೯೨ ॥**

೯೨. ಹಿಂದಿನ ಜನ್ಮದ ಕರ್ಮವು ಪ್ರಾರಬ್ಧವೆನಿಸುವದಷ್ಟೆ ? ಜನ್ಮಾಂತರವೇ ಇಲ್ಲದ್ದರಿಂದ ಮನುಷ್ಯನಿಗೆ ಅದು ಯಾವಾಗಲೂ ಇರುವದೇ ಇಲ್ಲ.[6]

---

1. 'ಮಹಾದ್ಯುತೇ' ಎಂಬ ನಿ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು.
2. 'ಶಾಸ್ತ್ರಾತ್' ಎಂದು ವಾ॥ ಪಾಠ.
3. 'ದೇಹಾದೀನಾಮಸತ್ಯತ್ವಾತ್' ಎಂದು ವಾ॥ ಪಾಠ.
4. 'ಸ್ವಪ್ನಃ ಪ್ರಬೋಧತಃ' ಎಂದು ವಾ॥ ಪಾಠ.
5. 'ಜನ್ಮಾನ್ತರಕೃತಂ' ಎಂದು ವಾ॥ ಪಾಠ.
6. ದೇಹವು ಪರಮಾರ್ಥವಾಗಿರುವದಲ್ಲವಾದ್ದರಿಂದ ಜನ್ಮವೂ ಇಲ್ಲ ; ಜನ್ಮ ಇಲ್ಲದ್ದರಿಂದ ಜನ್ಮಾಂತರವೂ ಇಲ್ಲ. ಆದ್ದರಿಂದ ಜನ್ಮಾಂತರಕರ್ಮದ ಫಲವು ಈಗ ಪ್ರಾರಂಭವಾಗಿರುತ್ತದೆ ಎಂಬುದು ಪರಮಾರ್ಥವಲ್ಲ ಎಂದು ಅಭಿಪ್ರಾಯ.

**ಸ್ವಪ್ನದೇಹೋ ಯಥಾಧ್ಯಸ್ತಸ್ತಥೈವಾಯಂ ಹಿ ದೇಹಕಃ ।**
**ಅಧ್ಯಸ್ತಸ್ಯ ಕುತೋ ಜನ್ಮ ಜನ್ಮಾಭಾವೇ ಹಿ ತತ್ಕುತಃ[1]   ॥ ೯೩ ॥**

೯೩. ಕನಸಿನ ದೇಹವು ಹೇಗೆ ಆರೋಪಿತವಾಗಿರುವದೋ ಹಾಗೆಯೇ ಈ ದೇಹವೂ (ಆರೋಪಿತವಾಗಿರುತ್ತದೆ). ಆರೋಪಿತವಾಗಿರುವದಕ್ಕೆ ಜನ್ಮವೆಲ್ಲಿಯದು ? ಜನ್ಮವಿಲ್ಲವಿದ್ದರೆ ಆ (ಪ್ರಾರಬ್ಧ)ವೆಲ್ಲಿಯದು ?

**ಉಪಾದಾನಂ ಪ್ರಪಞ್ಚಸ್ಯ ಮೃದ್ಭಾಣ್ಡಸ್ಯೇವ ಕಥ್ಯತೇ ।**
**ಅಜ್ಞಾನಂ ಚೈವ ವೇದಾನ್ತೈಸ್ತಸ್ಮಿನ್ನಷ್ಟೇ ಕ್ವ ವಿಶ್ವತಾ   ॥ ೯೪ ॥**

೯೪. ಮಣ್ಣುಗಡಿಗೆಗೆ ಉಪಾದಾನವಾಗಿರುವಂತೆ ಪ್ರಪಂಚಕ್ಕೆ ಅಜ್ಞಾನವೇ ಉಪಾದಾನವೆಂದು ವೇದಾಂತಗಳಲ್ಲಿ ಹೇಳಿರುತ್ತದೆ.[2] ಅದು ನಷ್ಟವಾದ ಮೇಲೆ ಪ್ರಪಂಚವೆಂಬುದೆಲ್ಲಿ ಬಂತು ?

**ಯಥಾ ರಜ್ಜುಂ ಪರಿತ್ಯಜ್ಯ ಸರ್ಪಂ ಗೃಹ್ಣಾತಿ ವೈ ಭ್ರಮಾತ್ ।**
**ತದ್ವತ್ಸತ್ಯಮವಿಜ್ಞಾಯ ಜಗತ್ಪಶ್ಯತಿ ಮೂಢಧೀಃ   ॥ ೯೫ ॥**

೯೫. ಹೇಗೆ ಹಗ್ಗವನ್ನು ಬಿಟ್ಟು ಭ್ರಾಂತಿಯಿಂದ ಹಾವನ್ನು ಗ್ರಹಿಸುವನೋ, ಆದರಂತೆ ಮೂಢಬುದ್ಧಿಯುಳ್ಳವನು ಸತ್ಯವನ್ನು ಬಿಟ್ಟು ಜಗತ್ತನ್ನು ಕಾಣುತ್ತಿರುವನು.

**ರಜ್ಜುರೂಪೇ ಪರಿಜ್ಞಾತೇ ಸರ್ಪಖಣ್ಡಂ ನ ತಿಷ್ಠತಿ ।**
**ಅಧಿಷ್ಠಾನೇ ತಥಾ ಜ್ಞಾತೇ ಪ್ರಪಞ್ಚಃ ಶೂನ್ಯತಾಂ ಗತಃ   ॥ ೯೬ ॥**

೯೬. ಹಗ್ಗದ ಸ್ವರೂಪವನ್ನು ಅರಿತುಕೊಂಡರೆ ಹಾವಿನಂಶವು ಇರುವದಿಲ್ಲ.[3] ಹಾಗೆಯೇ ಅಧಿಷ್ಠಾನವನ್ನು ಅರಿತುಕೊಂಡಮೇಲೆ ಪ್ರಪಂಚವು ಶೂನ್ಯವಾಗುವದು.

**ದೇಹಸ್ಯಾಪಿ ಪ್ರಪಞ್ಚತ್ವಾತ್ ಪ್ರಾರಬ್ಧಾವಸ್ಥಿತಿಃ ಕುತಃ ।**
**ಅಜ್ಞಾನಜನಬೋಧಾರ್ಥಂ ಪ್ರಾರಬ್ಧಂ ವಕ್ತಿ ವೈ ಶ್ರುತಿಃ   ॥ ೯೭ ॥**

---

1. 'ಸ್ಥಿತಿಃ ಕುತಃ' ಎಂದು ಪಾ॥ ಪಾಠ.

2. ಶ್ರುತಿಗಳಲ್ಲಿ ಅಜ್ಞಾನವು ಉಪಾದಾನವೆಂದು ಹೇಳಿಲ್ಲ. ಈ ವಾಕ್ಯವು ೪೫ನೆಯ ಶ್ಲೋಕದ ಅಭಿಪ್ರಾಯಕ್ಕೆ ವಿರುದ್ಧವಾಗಿರುವಂತೆಯೂ ಕಾಣುತ್ತದೆ. ಆದರೆ ಈ ಶ್ಲೋಕದ ವಿಷಯಕ್ಕೆ ನಮ್ಮ ಸವಿವರಣಅಪರೋಕ್ಷಾನುಭೂತಿಯನ್ನು ನೋಡಿ.

3. ಪ್ರಾರಬ್ಧಕರ್ಮವೂ ದೇಹವೂ ಆರೋಪಿತಜಗತ್ತಿನ ಅಂಶವೆಂಬುದನ್ನು ತಿಳಿಸುವದಕ್ಕೆ ಅಂಶವೆಂಬ ಮಾತನ್ನು ಪ್ರಯೋಗಿಸಿದೆ.

೯೭. ದೇಹವೂ ಪ್ರಪಂಚವೇ ಆಗಿರುವದರಿಂದ ಪ್ರಾರಬ್ಧವು ಉಳಿದು ಕೊಳ್ಳುವದು ಹೇಗೆ ? ತಿಳಿವಳಿಕೆಯಿಲ್ಲದ ಜನರಿಗೆ ಶ್ರುತಿಯು ಪ್ರಾರಬ್ಧವನ್ನು ಹೇಳುತ್ತಿರುವದು.

**ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ।**
**ಬಹುತ್ವಂ ತನ್ನಿಷೇಧಾರ್ಥಂ ಶ್ರುತ್ಯಾ ಗೀತಂ ಚ ಯತ್ಸ್ಫುಟಮ್[1] ॥**

೯೮. "ಆ ಪರಾವರನನ್ನು ಕಂಡುಕೊಂಡರೆ ಇವನ ಕರ್ಮಗಳೂ ನಾಶ ವಾಗುತ್ತವೆ" (ಮುಂ. ೨-೨-೮ ಎಂಬ ಶ್ರುತಿಯಲ್ಲಿ) ಈ (ಪ್ರಾರಬ್ಧವನ್ನು) ಅಲ್ಲಗಳೆಯುವದಕ್ಕಾಗಿ ಬಹುವಚನವನ್ನು (ಪ್ರಯೋಗಿಸಿರುತ್ತದೆ).

**ಉಚ್ಯತೇಽಜ್ಞೈರ್ಬಲಾಚ್ಚೇ[2] ತ್ತತ್ತದಾನರ್ಥದ್ವಯಾಗಮಃ ।**
**ವೇದಾನ್ತಮತಹಾನಂ ಚ ಯತೋ ಜ್ಞಾನಮಿತಿ ಶ್ರುತಿಃ ॥ ೯೯ ॥**

೯೯. ಅಜ್ಞರು ಈ (ಪ್ರಾರಬ್ಧವು ಉಂಟೆಂದು) ಬಲಾತ್ಕರಿಸಿ ಹೇಳುವ ದಾದರೆ ಅನರ್ಥರೂಪವಾದ ದ್ವೈತವು ಬರುವದು; ವೇದಾಂತಮತವನ್ನು ಬಿಟ್ಟಂತೆಯೂ ಆಗುವದು. ಏಕೆಂದರೆ ಜ್ಞಾನವು (ಅದ್ವಿತೀಯವಾದ ಬ್ರಹ್ಮವೇ) ಎಂದು ಶ್ರುತಿ ಹೇಳುತ್ತಿರುವದು.[3]

## ನಿದಿಧ್ಯಾಸನದ ಅಂಗಗಳು

**ತ್ರಿಪಞ್ಚಾಙ್ಗಾನ್ಯಥೋ ವಕ್ಷ್ಯೇ ಪೂರ್ವೋಕ್ತಸ್ಯ ಹಿ[4] ಸಿದ್ಧಯೇ ।**
**ತೈಶ್ಚ ಸರ್ವೈಃ ಸದಾ ಕಾರ್ಯಂ ನಿದಿಧ್ಯಾಸನಮೇವ ತು ॥ ೧೦೦ ॥**

೧೦೦. ಇನ್ನು ಹಿಂದೆ ಹೇಳಿದ್ದು ಸಿದ್ಧವಾಗುವದಕ್ಕಾಗಿ (ಸಾಧನವಾಗಿ) ಹದಿನೈದು ಅಂಗಗಳನ್ನು[5] ಹೇಳುವೆನು. ಈ ನಿದಿಧ್ಯಾಸನವನ್ನು ಎಲ್ಲಾ (ಅಂಗಗಳೊಡನೆ) ಯಾವಾಗಲೂ ಮಾಡುತ್ತಿರಬೇಕು.

---

1. "ವೈ ಸ್ಫುಟಮ್" ಎಂದು ಪಾ॥ ಪಾಠ.

2. 'ಬಲಾಚ್ಚೈತತ್' ಎಂಬ ಪಾಠಕ್ಕಿಂತ ಇದು ಮೇಲು. ಇಲ್ಲಿ ಬಲಾತ್ ಚೇತ್ ತತ್ ಎಂದು ಪದಚ್ಛೇದಮಾಡಿಕೊಳ್ಳಬೇಕು.

3. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' (ತೈ. ೨-೧) ಮುಂತಾದ ಶ್ರುತಿಗಳಲ್ಲಿ ಜ್ಞಾನವು ಅದ್ವಿತೀಯಬ್ರಹ್ಮವೆಂದು ಹೇಳಿದೆ. ಅದರಲ್ಲಿ ಅಜ್ಞಾನದ ಕಾರ್ಯವಾದ ಪ್ರಾರಬ್ಧವಿದೆ ಎಂಬುದು ವೇದಾಂತವಿರುದ್ಧ.

4. 'ಪೂರ್ವೋಕ್ತಸ್ಯೈವ' ಎಂದು ಪಾ॥ ಪಾಠ.

5. ಈ ಅಂಗಗಳನ್ನು ಭಾಷ್ಯದಲ್ಲಿ ಎಲ್ಲಿಯೂ ಹೇಳಿಲ್ಲ.

**ನಿತ್ಯಾಭ್ಯಾಸಾದೃತೇ ಪ್ರಾಪ್ತಿರ್ನ ಭವೇತ್ ಸಚ್ಚಿದಾತ್ಮನಃ |**
**ತಸ್ಮಾದ್ಬ್ರಹ್ಮ ನಿದಿಧ್ಯಾಸೇಜ್ಜಿಜ್ಞಾಸುಃ ಶ್ರೇಯಸೇ ಚಿರಮ್ ॥ ೧೦೧ ॥**

೧೦೧. ಯಾವಾಗಲೂ ಅಭ್ಯಾಸಮಾಡದಿದ್ದರೆ ಸಚ್ಚಿದಾತ್ಮನ ಪ್ರಾಪ್ತಿಯಾಗಲಾರದು. ಆದ್ದರಿಂದ ಜಿಜ್ಞಾಸುವಾದವನು ತನಗೆ ಶ್ರೇಯಸ್ಸಾಗುವದಕ್ಕಾಗಿ ಬ್ರಹ್ಮವನ್ನು ಯಾವಾಗಲೂ ನಿದಿಧ್ಯಾಸನಮಾಡುತ್ತಿರಬೇಕು.

**ಯಮೋ ಹಿ ನಿಯಮಸ್ತ್ಯಾಗೋ ಮೌನಂ ದೇಶಶ್ಚ ಕಾಲತಾ |**
**ಆಸನಂ ಮೂಲಬನ್ಧಶ್ಚ ದೇಹಸಾಮ್ಯಂ ಚ ದೃಕ್ಸ್ಥಿತಿಃ ॥ ೧೦೨ ॥**
**ಪ್ರಾಣಸಂಯಮನಂ ಚೈವ ಪ್ರತ್ಯಾಹಾರಶ್ಚ ಧಾರಣಾ |**
**ಆತ್ಮಧ್ಯಾನಂ ಸಮಾಧಿಶ್ಚ ಪ್ರೋಕ್ತಾನ್ಯಙ್ಗಾನಿ ವೈ ಕ್ರಮಾತ್ ॥ ೧೦೩ ॥**

೧೦೨–೧೦೩. ಯಮ, ನಿಯಮ, ತ್ಯಾಗ, ಮೌನ, ದೇಶ, ಕಾಲ, ಆಸನ, ಮೂಲಬನ್ಧ, ದೇಹಸಾಮ್ಯ, ದೇಶ, ಕಾಲ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣೆ, ಆತ್ಮಧ್ಯಾನ, ಸಮಾಧಿ. (ಇಲ್ಲಿ) ಕ್ರಮದಿಂದ ಹೇಳಿರುವವು (ನಿದಿಧ್ಯಾಸನದ) ಅಂಗಗಳು.

**ಸರ್ವಂ ಬ್ರಹ್ಮೇತಿ ವಿಜ್ಞಾನಾದಿನ್ದ್ರಿಯಗ್ರಾಮಸಂಯಮಃ |**
**ಯಮೋಽಯಮಿತಿ ಸಂಪ್ರೋಕ್ತೋಽಭ್ಯಸನೀಯೋ ಮುಹುರ್ಮುಹುಃ**

೧೦೪. ಎಲ್ಲವೂ ಬ್ರಹ್ಮವೇ ಎಂಬ ಅರಿವಿನಿಂದ ಇಂದ್ರಿಯಸಮೂಹವನ್ನು ತಡೆದುಕೊಳ್ಳುವದೇ **ಯಮವೆ**ನಿಸಿರುತ್ತದೆ. ಇದನ್ನು ಮತ್ತೆಮತ್ತೆ ಅಭ್ಯಾಸಮಾಡಬೇಕು.

**ಸಜಾತೀಯಪ್ರವಾಹಶ್ಚ ವಿಜಾತೀಯತಿರಸ್ಕೃತಿಃ |**
**ನಿಯಮೋ ಹಿ ಪರಾನನ್ದೋ ನಿಯಮಾತ್ ಕ್ರಿಯತೇ ಬುಧೈಃ ॥೧೦೫**

೧೦೫. ಸಜಾತೀಯವಾದ (ಭಾವನೆಯನ್ನು) ಹರಿಯಿಸುವದೂ ವಿಜಾತೀಯವಾದದ್ದನ್ನು ಬಿಡುವದೂ ಪರಮಾನಂದರೂಪವಾದ **ನಿಯಮವು.** ತಿಳಿದವರು (ಇದನ್ನು) ನಿಯಮದಿಂದ ಮಾಡುತ್ತಾರೆ.

**ತ್ಯಾಗಃ ಪ್ರಪಞ್ಚರೂಪಸ್ಯ ಚಿದಾತ್ಮತ್ವಾವಲೋಕನಾತ್ |**
**ತ್ಯಾಗೋ ಹಿ ಮಹತಾಂ ಪೂಜ್ಯಃ ಸದ್ಯೋ ಮೋಕ್ಷಮಯೋ ಯತಃ ॥**

೧೦೬. (ಇದು) ಚಿದ್ರೂಪವೇ ಎಂಬುದನ್ನು ಕಂಡುಕೊಂಡು ಪ್ರಪಂಚರೂಪದ ( ಭಾವನೆಯನ್ನು ) ಬಿಡುವದೇ **ತ್ಯಾಗವು.** ಸದ್ಯೋಮೋಕ್ಷರೂಪವಾಗಿರುವದರಿಂದ (ಇದು) ದೊಡ್ಡವರಿಗೆ ಪೂಜ್ಯವಾಗಿರುವದು.

**ಯಸ್ಮಾದ್ವಾಚೋ[1] ನಿವರ್ತನ್ತೇ ಅಪ್ರಾಪ್ಯ ಮನಸಾ ಸಹ ।**
**ಯನ್ಮೌನಂ ಯೋಗಿಭಿರ್ಗಮ್ಯಂ ತದ್ಭವೇತ್ ಸರ್ವದಾ ಬುಧಃ ॥ ೧೦೭**

೧೦೭. 'ಮನಸ್ಸಿನೊಡಗೂಡಿ ವಾಕ್ಕುಗಳು ಪಡೆಯಲಾರದೆ ಯಾವದರಿಂದ ಹಿಂದಿರುಗುವವೋ', ಯಾವದು ಯೋಗಿಗಳಿಗೆ ಮಾತ್ರ ಗೊತ್ತಿರುವದೋ, ವಿವೇಕಿಯಾದವನು ಯಾವಾಗಲೂ ಆ **ಮೌನ**ವಾಗಿರಬೇಕು.

**ವಾಚೋ ಯಸ್ಮಾನ್ನಿವರ್ತನ್ತೇ ತದ್ವಕ್ತುಂ ಕೇನ ಶಕ್ಯತೇ ।**
**ಪ್ರಪಞ್ಚೋ ಯದಿ ವಕ್ತವ್ಯಃ ಸೋಽಪಿ ಶಬ್ದವಿವರ್ಜಿತಃ ॥ ೧೦೮ ॥**
**ಇತಿ ವಾ ತದ್ಭವೇನ್ಮೌನಂ ಸತಾಂ ಸಹಜಸಂಜ್ಞಿತಮ್ ।**
**ಗಿರಾ ಮೌನಂ ತು ಬಾಲಾನಾಂ ಪ್ರಯುಕ್ತಂ ಬ್ರಹ್ಮವಾದಿಭಿಃ ॥ ೧೦೯**

೧೦೮-೧೦೯. "ಅಥವಾ ಯಾವದರಿಂದ ವಾಕ್ಕುಗಳು ಹಿಂದಿರುಗುವವೋ ಅದನ್ನು ಹೇಳುವದಕ್ಕೆ ಯಾರಿಂದ ಶಕ್ಯವಾದೀತು ? ಪ್ರಪಂಚವನ್ನು ವರ್ಣಿಸಿ ಹೇಳೋಣವೆಂದರೆ ಅದೂ ಮಾತಿಗೆ ಸಿಕ್ಕುವದಿಲ್ಲ[2] " ಎಂದು ಸುಮ್ಮನಿರುವದೇ ಸತ್ಪುರುಷರಿಗೆ ಸಹಜವೆನಿಸುವ **ಮೌನವು.** ಮಾತನಾಡದೆ ಇರುವದೆಂಬ ಮೌನವನ್ನು ಬಾಲಕರಿಗಾಗಿ ಬ್ರಹ್ಮವಾದಿಗಳು ಹೇಳಿರುವರು.

**ಆದಾವನ್ತೇ ಚ ಮಧ್ಯೇ ಚ ಜನೋ ಯಸ್ಮಿನ್ನ ವಿದ್ಯತೇ ।**
**ಯೇನೇದಂ ಸತತಂ ವ್ಯಾಪ್ತಂ ಸ ದೇಶೋ ವಿಜನಃ ಸ್ಮೃತಃ ॥ ೧೧೦ ॥**

೧೧೦. ಮೊದಲು, ಕೊನೆಯಲ್ಲಿ, ಮತ್ತು ನಡುವೆ ಯಾವದರಲ್ಲಿ ಜನವಿಲ್ಲವೋ ಯಾವದರಿಂದ ಈ ಸಕಲಪ್ರಪಂಚವೂ ವ್ಯಾಪ್ತವಾಗಿರುವದೋ ಅದೇ **ವಿಜನದೇಶವು.**

**ಕಲನಾತ್ಸರ್ವಭೂತಾನಾಂ ಬ್ರಹ್ಮಾದೀನಾಂ ನಿಮೇಷತಃ ।**
**ಕಾಲಶಬ್ದೇನ ನಿರ್ದಿಷ್ಟೋ ಹ್ಯಖಣ್ಡಾನನ್ದ ಅದ್ವಯಃ ॥ ೧೧೧ ॥**

೧೧೧. ಬ್ರಹ್ಮನೇ ಮುಂತಾದ ಸರ್ವಭೂತಗಳನ್ನೂ ನಿಮಿಷಮಾತ್ರದಿಂದ ಅಳತೆಮಾಡುವದರಿಂದ ಎರಡನೆಯದಿಲ್ಲದ ಅಖಂಡಾನಂದವು **ಕಾಲ**ವೆಂಬ ಶಬ್ದದಿಂದ ಹೇಳಲ್ಪಡುವದು.

**ಸುಖೇನೈವ ಭವೇದ್ಯಸ್ಮಿನ್ನಜಸ್ರಂ ಬ್ರಹ್ಮಚಿನ್ತನಮ್ ।**
**ಆಸನಂ ತದ್ವಿಜಾನೀಯಾನ್ನೇತರತ್ ಸುಖನಾಶನಮ್ ॥ ೧೧೨ ॥**

---

1. 'ಯತೋ ವಾಚೋ' ಎಂದು ವಾ॥ ಪಾಠ. ಅದು ತೈತ್ತಿರೀಯಶ್ರುತಿಗೆ ಅನುಗುಣವಾಗಿದೆ.

2. ಏಕೆಂದರೆ ಅದು ಸ್ವರೂಪದಿಂದ ಇಲ್ಲವೇ ಇಲ್ಲ.

೧೧೨. ಯಾವದರಲ್ಲಿ ಯಾವಾಗಲೂ ಸುಖವಾಗಿಯೇ ಬ್ರಹ್ಮಚಿಂತನೆ ಯಾಗುವದೋ ಅದೇ **ಆಸನವು.** ಉಳಿದದ್ದು ಸುಖನಾಶಕವಾದದ್ದರಿಂದ (ಆಸನ)ವಲ್ಲ.

**ಸಿದ್ಧಂ ಯತ್ಸರ್ವಭೂತಾದಿ ವಿಶ್ವಾಧಿಷ್ಠಾನಮವ್ಯಯಮ್ |**
**ಯಸ್ಮಿನ್ ಸಿದ್ಧಾಃ ಸಮಾವಿಷ್ಟಾಸ್ತದ್ವೈ ಸಿದ್ಧಾಸನಂ ವಿದುಃ || ೧೧೩ ||**

೧೧೩. ಯಾವದು ಸರ್ವಭೂತಗಳಿಗೂ ಆದಿಯಾಗಿ ಪ್ರಪಂಚಕ್ಕೆ ಅವ್ಯಯ ವಾದ ಅಧಿಷ್ಠಾನವಾಗಿ ಸಿದ್ಧವಾಗಿರುವದೋ, ಯಾವದರಲ್ಲಿ ಸಿದ್ಧರು ಸೇರಿ ಕೊಂಡಿರುವರೋ ಅದೇ **ಸಿದ್ಧಾಸನವೆನ್ನು**ವರು.

**ಯನ್ಮೂಲಂ ಸರ್ವಭೂತಾನಾಂ ಯನ್ಮೂಲಂ ಚಿತ್ತಬನ್ಧನಮ್ |**
**ಮೂಲಬನ್ಧಃ ಸದಾ ಸೇವ್ಯೋ ಯೋಗ್ಯೋಽಸೌ[1] ರಾಜಯೋಗಿನಾಮ್**

೧೧೪. ಯಾವದು ಸರ್ವಭೂತಗಳಿಗೂ ಮೂಲವೋ ಯಾವದು ಚಿತ್ತ ವನ್ನು ಕಟ್ಟಿಹಾಕುವದಕ್ಕೆ ಕಾರಣವಾಗಿರುವದೋ ಆ **ಮೂಲಬಂಧವನ್ನು**[2] ಯಾವಾಗಲೂ ಸೇವಿಸುತ್ತಿರಬೇಕು. ಇದೇ ರಾಜಯೋಗಿಗಳಿಗೆ[3] **ತಕ್ಕದ್ದು.**

**ಅಙ್ಗಾನಾಂ ಸಮತಾಂ ವಿದ್ಯಾತ್ಸಮೇ ಬ್ರಹ್ಮಣಿ ಲೀಯತೇ |**
**ನೋ ಚೇನ್ನೈವ ಸಮಾನತ್ವಮೃಜುತ್ವಂ ಶುಷ್ಕವೃಕ್ಷವತ್ || ೧೧೫ ||**

೧೧೫. ಸಮವೆನಿಸಿರುವ ಬ್ರಹ್ಮದಲ್ಲಿ (ಮನಸ್ಸು) ಲಯವಾಗುವಂತೆ ಇರುವದೇ **ದೇಹದ ಸಮತೆ** ಎಂದು ತಿಳಿಯಬೇಕು. ಹಾಗಿಲ್ಲದಿದ್ದರೆ ಅದು (ದೇಹ)ಸಾಮ್ಯವಲ್ಲ, ಒಣಗಿದ ಮರದಂತೆ **ನೆಟ್ಟ**ಗಿರುವದು.

**ದೃಷ್ಟಿಂ ಜ್ಞಾನಮಯೀಂ ಕೃತ್ವಾ ಪಶ್ಯೇದ್ಬ್ರಹ್ಮಮಯಂ ಜಗತ್ |**
**ಸಾ ದೃಷ್ಟಿಃ ಪರಮೋದಾರಾ ನ ನಾಸಾಗ್ರಾವಲೋಕಿನೀ || ೧೧೬ ||**

೧೧೬. ದೃಷ್ಟಿಯನ್ನು ಜ್ಞಾನಮಯವಾಗಿ ಮಾಡಿಕೊಂಡು ಜಗತ್ತನ್ನು ಬ್ರಹ್ಮಮಯವೆಂದು ಕಾಣಬೇಕು. ಅಂಥ ದೃಷ್ಟಿಯೇ ಬಹಳ ಉದಾರವಾದದ್ದು, ಮೂಗಿನ ತುದಿಯನ್ನು ನೋಡುವದು (ದೃಷ್ಟಿಯಲ್ಲ).

---

1. 'ಯೋಗೋಽಸೌ' ಪಾ||

2. ಸಿದ್ಧಾಸನ, ಮೂಲಬಂಧ ಎಂಬ ಹಠಯೋಗದ ಪಾರಿಭಾಷಿಕಶಬ್ದಗಳನ್ನು ಹೀಗೆ ಅನುವಾದಮಾಡಿರುವದಾಗಲಿ ವಿವರಿಸಿರುವದಾಗಲಿ ಭಾಷ್ಯದಲ್ಲಿಲ್ಲ.

3. 'ರಾಜಯೋಗ'ವೆಂಬ ಶಬ್ದವು ಭಾಷ್ಯದಲ್ಲಿ ಕಾಣುವದಿಲ್ಲ.

**ದ್ರಷ್ಟೃ[1]ದರ್ಶನದೃಶ್ಯಾನಾಂ ವಿರಾಮೋ ಯತ್ರ ವಾ ಭವೇತ್ ।**
**ದೃಷ್ಟಿಸ್ತತ್ರೈವ ಕರ್ತವ್ಯಾ ನ ನಾಸಾಗ್ರಾವಲೋಕಿನೀ ॥ ೧೧೭ ॥**

೧೧೭. ಅಥವಾ ದ್ರಷ್ಟೃ (ನೋಡುವವನು), ದರ್ಶನ (ನೋಡುವಿಕೆ), ದೃಶ್ಯ (ನೋಡಲ್ಪಡತಕ್ಕದ್ದು)- ಇವುಗಳ (ಭೇದವು) ಎಲ್ಲಿ ಇಲ್ಲವಾಗುವದೋ, ಅಲ್ಲಿಯೇ ದೃಷ್ಟಿಯನ್ನು ಮಾಡಬೇಕು. ಮೂಗಿನ ತುದಿಯನ್ನು ನೋಡುವದು (ದೃಷ್ಟಿ)ಯಲ್ಲ.

**ಚಿತ್ತಾದಿಸರ್ವಭಾವೇಷು ಬ್ರಹ್ಮತ್ವೇನೈವ ಭಾವನಾತ್ ।**
**ನಿರೋಧಃ ಸರ್ವವೃತ್ತೀನಾಂ ಪ್ರಾಣಾಯಾಮಃ ಸ ಉಚ್ಯತೇ ॥ ೧೧೮ ॥**

೧೧೮. ಚಿತ್ತವೇ ಮುಂತಾದ ಸರ್ವವಸ್ತುಗಳಲ್ಲಿಯೂ ಬ್ರಹ್ಮವೆಂಬ ಭಾವನೆಯನ್ನು ಮಾಡುವದರಿಂದ ಎಲ್ಲಾ ವೃತ್ತಿಗಳನ್ನೂ ಅಡಗಿಸುವದು **ಪ್ರಾಣಾಯಾಮವೆನಿಸುವದು.**

**ನಿಷೇಧನಂ ಪ್ರಪಞ್ಚಸ್ಯ ರೇಚಕಾಖ್ಯಃ ಸಮೀರಣಃ ।**
**ಬ್ರಹ್ಮೈವಾಸ್ಮೀತಿ ಯಾ ವೃತ್ತಿಃ ಪೂರಕೋ ವಾಯುರೀರಿತಃ ॥ ೧೧೯**

೧೧೯. ಪ್ರಪಂಚವನ್ನು ಇಲ್ಲವೆನ್ನುವದು **ರೇಚಕ**ವೆಂಬ ಪ್ರಾಣಾಯಾಮವು[2]; **ಬ್ರಹ್ಮ**ವೇ ಆಗಿರುವೆನು ಎಂಬ ವೃತ್ತಿಯು **ಪೂರಕ**ವೆಂಬ ಪ್ರಾಣಾಯಾಮವೆನಿಸುವದು.

**ತತಸ್ತದ್ವೃತ್ತಿನೈಶ್ಚಲ್ಯಂ ಕುಮ್ಭಕಃ ಪ್ರಾಣಸಂಯಮಃ ।**
**ಅಯಂ ಚಾಪಿ ಪ್ರಬುದ್ಧಾನಾಮಜ್ಞಾನಾಂ ಘ್ರಾಣಪೀಡನಮ್ ॥೧೨೦**

೧೨೦. ಆಮೇಲೆ ಆ ವೃತ್ತಿಯನ್ನು ಅಲುಗಾಡದಂತೆ ಇರಿಸಿಕೊಳ್ಳುವದೇ **ಕುಂಭಕಪ್ರಾಣಾಯಾಮ**ವೆನಿಸುವದು. ಈ (ಪ್ರಾಣಾಯಾಮವು) ತಿಳಿದವರಿಗೆ (ತಕ್ಕದ್ದು); ಅಜ್ಞರಿಗೆ ಮೂಗನ್ನು ತೊಂದರೆಗೊಳಿಸುವದೇ (ಪ್ರಾಣಾಯಾಮವು).

**ವಿಷಯೇಷ್ವಾತ್ಮತಾಂ ದೃಷ್ಟ್ವಾ ಮನಸಶ್ಚಿತಿ ಮಜ್ಜನಮ್ ।**
**ಪ್ರತ್ಯಾಹಾರಃ ಸ ವಿಜ್ಞೇಯೋಽಭ್ಯಸನೀಯೋ ಮುಮುಕ್ಷುಭಿಃ ॥ ೧೨೧**

1. 'ದೃಷ್ಟಿ' ಎಂಬ ಬಿ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು.

2. ಸಮೀರಣ ಎಂದರೆ ಪ್ರಾಣ, ವಾಯು ಎಂದಿಷ್ಟೇ ಅರ್ಥವಾದರೂ ಪ್ರಕೃತಾನುಸಾರವಾಗಿ **ಪ್ರಾಣಾಯಾಮ** ಎಂದು ಅರ್ಥವನ್ನು ಮಾಡಿದೆ. **ಪೂರಕ**ವೆಂಬ ಮಾತನ್ನೂ ಹೀಗೆಯೇ ತಿಳಿಯಬೇಕು

೧೨೧. ವಿಷಯಗಳಲ್ಲಿ ಆತ್ಮತ್ವವನ್ನು ಕಂಡುಕೊಂಡು ಮನಸ್ಸನ್ನು ಚಿತ್ತಿನಲ್ಲಿ ಮುಳುಗಿಸಿಬಿಡುವದು **ಪ್ರತ್ಯಾಹಾರವೆಂದು** ತಿಳಿಯಬೇಕು. ಮುಮುಕ್ಷುಗಳು (ಇದನ್ನು) ಅಭ್ಯಾಸಮಾಡಬೇಕು.

**ಯತ್ರ ಯತ್ರ ಮನೋ ಯಾತಿ ಬ್ರಹ್ಮಣಸ್ತತ್ರ ದರ್ಶನಾತ್ ।**
**ಮನಸೋ ಧಾರಣಾ ಯ್ಯೆವ[1] ಧಾರಣಾ ಸಾ ಪರಾ ಮತಾ　॥ ೧೨೨**

೧೨೨. ಎಲ್ಲೆಲ್ಲಿ ಮನಸ್ಸು ಹರಿಯುತ್ತಿರುವದೋ ಅಲ್ಲಲ್ಲಿ ಬ್ರಹ್ಮವನ್ನು ಕಂಡುಕೊಂಡು ಮನಸ್ಸನ್ನು ನಿಲ್ಲಿಸಿಕೊಳ್ಳುವದೇ ಹೆಚ್ಚಿನ **ಧಾರಣೆ** ಎನಿಸುವದು.

**ಬ್ರಹ್ಮೈವಾಸ್ಮೀತಿ ಸದ್ವೃತ್ತ್ಯಾ ನಿರಾಲಮ್ಬನತಯಾ ಸ್ಥಿತಿಃ ।**
**ಧ್ಯಾನಶಬ್ದೇನ ವಿಖ್ಯಾತಾ ಪರಮಾನನ್ದದಾಯಿನೀ　॥ ೧೨೩ ॥**

೧೨೩. 'ಬ್ರಹ್ಮವೇ ಆಗಿರುತ್ತೇನೆ' ಎಂಬ ಉತ್ತಮವಾದ ವೃತ್ತಿಯಿಂದ ಮತ್ತೊಂದು ವಿಷಯವನ್ನು ಧ್ಯಾನಿಸದೆ ಇರುವದೇ **ಧ್ಯಾನ**ಶಬ್ದದಿಂದ ಪ್ರಸಿದ್ಧವಾಗಿರುತ್ತದೆ. (ಅದು) ಪರಮಾನಂದವನ್ನು ಕೊಡುವಂಥದ್ದು.

**ನಿರ್ವಿಕಾರತಯಾ ವೃತ್ತ್ಯಾ ಬ್ರಹ್ಮಾಕಾರತಯಾ ಸ್ಥಿತಿಃ ।**
**ವೃತ್ತಿವಿಸ್ಮರಣಂ ಸಮ್ಯಕ್ ಸಮಾಧಿರ್ಜ್ಞಾನಸಂಜ್ಞಕಃ　॥ ೧೨೪ ॥**

೧೨೪. ಯಾವ ವಿಕಾರಗಳೂ ಇಲ್ಲದೆ ಬ್ರಹ್ಮಾಕಾರವಾಗಿಯೇ ಇರುವ ವೃತ್ತಿಯಿಂದ (ಇದ್ದುಕೊಂಡು) ವೃತ್ತಿಗಳನ್ನು ಚೆನ್ನಾಗಿ ಮರೆತುಬಿಡುವದು **ಸಮಾಧಿ**ಯು. ಇದಕ್ಕೆ ಜ್ಞಾನವೆಂದು ಹೆಸರು.

## ನಿದಿಧ್ಯಾಸನದ ಅವಧಿ

**ಇಮಂ ಚ ಕೃತ್ರಿಮಾನನ್ದಂ[2] ತಾವತ್ಸಾಧು ಸಮಭ್ಯಸೇತ್ ।**
**ವಶ್ಯೋ ಯಾವತ್ ಕ್ಷಣಾತ್ಪುಂಸಃ ಪ್ರಯುಕ್ತಃ ಸನ್ ಭವೇತ್ ಸ್ವಯಮ್**

೧೨೫. ಪ್ರಯೋಗಿಸಿದ ಮಾತ್ರದಿಂದ ಕ್ಷಣದಲ್ಲಿ ತನಗೆ ತಾನೇ ವಶವಾಗುವವರೆಗೂ (ಸಾಧಕನು) ಈ ಕೃತ್ರಿಮಾನಂದವನ್ನು ಚೆನ್ನಾಗಿ ಅಭ್ಯಾಸಮಾಡುತ್ತಿರಬೇಕು.[3]

---

1. 'ಚೈವ' ಎಂಬ ನಿ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು.
2. 'ಏವಂ ಚಾಕೃತ್ರಿಮಾನನ್ದಂ' ಎಂಬ ವಾ॥ ಪಾಠವು ಸರಿಯಲ್ಲವೆಂದು ತೋರುತ್ತದೆ.
3. ಸಾಧಕನಿಗೆ ಯತ್ನಸಾಧ್ಯವಾದದ್ದು ಸಿದ್ಧನ ಲಕ್ಷಣವಾಗಿರುವದು.

**ತತಃ ಸಾಧನನಿರ್ಮುಕ್ತಃ ಸಿದ್ಧೋ ಭವತಿ ಯೋಗಿರಾಟ್ ।**
**ತತ್ಸ್ವರೂಪಂ ನ ಚೈತಸ್ಯ[1] ವಿಷಯೋ ಮನಸೋ ಗಿರಾಮ್ ॥ ೧೨೬**

೧೨೬. ಆಮೇಲೆ ಸಾಧನಗಳಿಲ್ಲದೆ (ಈ) **ಯೋಗಿರಾಜನು**[2] ಸಿದ್ಧ ನಾಗುವನು, ಆ (ಸಿದ್ಧನ) ಸ್ವರೂಪವು ಈ ಮನಸ್ಸಿಗಾಗಲಿ ಮಾತುಗಳಿಗಾಗಲಿ ವಿಷಯವಲ್ಲ.

## ಸಾಧಕನಿಗೆ ಒದಗುವ ಅಡ್ಡಿಗಳು

**ಸಮಾಧೌ ಕ್ರಿಯಮಾಣೇ ತು ವಿಘ್ನಾ ಆಯಾನ್ತಿ ವೈ ಬಲಾತ್ ।**
**ಅನುಸನ್ಧಾನರಾಹಿತ್ಯಮಾಲಸ್ಯಂ ಭೋಗಲಾಲಸಾ ॥ ೧೨೭ ॥**

**ಲಯಸ್ತಮಶ್ಚ ವಿಕ್ಷೇಪೋ ರಸಾಸ್ವಾದಶ್ಚ ಶೂನ್ಯತಾ ।**
**ಏವಂ ಯದ್ವಿಘ್ನಬಾಹುಲ್ಯಂ ತ್ಯಾಜ್ಯಂ ಬ್ರಹ್ಮವಿದಾ ಶನೈಃ ॥ ೧೨೮ ॥**

೧೨೭-೧೨೮. ಸಮಾಧಿಯನ್ನು ಅಭ್ಯಾಸಮಾಡುತ್ತಿರುವಾಗ ವಿಘ್ನಗಳು ಬಲಾತ್ಕಾರದಿಂದ ಬಂದೊದಗುತ್ತಿರುವವು. ತತ್ತ್ವವನ್ನು ಅನುಸಂಧಾನ ಮಾಡದಿರುವದು, ಸೋಮಾರಿತನ, ವಿಷಯಭೋಗಗಳಲ್ಲಿ ಬಲವಾದ ಇಚ್ಛೆ, ಲಯ, ತಮಸ್ಸು, ವಿಕ್ಷೇಪ, ರಸಾಸ್ವಾದ, ಶೂನ್ಯತ್ವ- ಹೀಗೆ ಒಂದರ ಮೇಲೊಂದು ಬರುತ್ತಿರುವ ಅನೇಕ ವಿಘ್ನಗಳನ್ನು ಬ್ರಹ್ಮಜ್ಞಾನಿಯು[3] ಮೆಲ್ಲ ಮೆಲ್ಲಗೆ ತಪ್ಪಿಸಿಕೊಳ್ಳಬೇಕು.

**ಭಾವವೃತ್ತ್ಯಾ ಹಿ ಭಾವತ್ವಂ ಶೂನ್ಯವೃತ್ತ್ಯಾ ಹಿ ಶೂನ್ಯತಾ ।**
**ಬ್ರಹ್ಮವೃತ್ತ್ಯಾ ತು ಪೂರ್ಣತ್ವಂ ತಥಾ ಪೂರ್ಣತ್ವಮಭ್ಯಸೇತ್ ॥೧೨೯॥**

೧೨೯. ವಿಷಯಾಕಾರವೃತ್ತಿಯಿಂದ ವಿಷಯಮಯತ್ವವೂ, ಶೂನ್ಯ ವೃತ್ತಿಯಿಂದ ಶೂನ್ಯತ್ವವೂ (ಬರುವವು). ಬ್ರಹ್ಮವೃತ್ತಿಯಿಂದ ಪೂರ್ಣತ್ವ (ವುಂಟಾಗುವದು). ಆದ್ದರಿಂದ ಪೂರ್ಣತ್ವವನ್ನೇ ಅಭ್ಯಾಸಮಾಡಬೇಕು.[4]

## ಬ್ರಹ್ಮವೃತ್ತಿಯ ಸ್ತುತಿ

**ಯೋ ಹಿ ವೃತ್ತಿಂ ಜಹತ್ಯೇನಾಂ ಬ್ರಹ್ಮಾಖ್ಯಾಂ ಪಾವನೀಂ ಪರಾಮ್ ।**
**ತೇ ವೃಥೈವ ತು ಜೀವನ್ತಿ ಪಶುಭಿಶ್ಚ ಸಮಾ ನರಾಃ ॥ ೧೩೦ ॥**

1. 'ನ ಚೈಕಸ್ಯ' ಪಾ॥
2. ನಿದಿಧ್ಯಾಸನವನ್ನು ಮಾಡುತ್ತಿರುವ ಮುಮುಕ್ಷುವು.
3. ಸಾಧಕನು ಎಂದರ್ಥ.
4. ವೃತ್ತಿಯನ್ನು ಅಭ್ಯಾಸಮಾಡಬೇಕೆಂಬುದನ್ನು ಭಾಷ್ಯದಲ್ಲಿ ಹೇಳಿದ್ದು ಕಾಣ ಬರುವದಿಲ್ಲ.

೧೩೦. ಪವಿತ್ರವಾದ ಬ್ರಹ್ಮವೆಂಬ ಹೆಸರಿನ ಈ ವೃತ್ತಿಯನ್ನು ಯಾರು ಕೈಬಿಟ್ಟಿರುವರೋ ಅಂಥ ಮನುಷ್ಯರು ಬದುಕಿರುವದು ವ್ಯರ್ಥ. (ಆ) ಮನುಷ್ಯರು ಪಶುಗಳಿಗೆ ಸಮಾನರು.

**ಯೇ ಹಿ ವೃತ್ತಿಂ ವಿಜಾನನ್ತಿ ಜ್ಞಾತ್ವಾಪಿ ವರ್ಧಯನ್ತಿ ಯೇ[1] ।**
**ತೇ ವೈ ಸತ್ಪುರುಷಾ ಧನ್ಯಾ ವನ್ದ್ಯಾಸ್ತೇ ಭುವನತ್ರಯೇ ॥ ೧೩೧ ॥**

೧೩೧. ಯಾರು (ಈ) ವೃತ್ತಿಯನ್ನು ಅರಿತುಕೊಂಡಿರುವರೋ ಯಾರು ಅರಿತುಕೊಂಡದ್ದಲ್ಲದೆ ಇದನ್ನು ಬೆಳೆಸಿಕೊಳ್ಳುತ್ತಲೂ ಇರುವರೋ ಅವರೇ ಸತ್ಪುರುಷರು, ಅವರು ಮೂರು ಲೋಕಗಳಿಗೂ ವಂದನೀಯರು.

**ಯೇಷಾಂ ವೃತ್ತಿಃ ಸಮಾ ವೃದ್ಧಾ ಪರಿಪಕ್ವಾ ಚ ಸಾ ಪುನಃ ।**
**ತೇ ವೈ ಸದ್ಬ್ರಹ್ಮತಾಂ ಪ್ರಾಪ್ತಾ ನೇತರೇ ಶಬ್ದವಾದಿನಃ ॥ ೧೩೨ ॥**

೧೩೨. ಯಾರ ವೃತ್ತಿಯು ಸಮನಾಗಿದ್ದು, ಬೆಳೆದು, ಪರಿಪಕ್ವವಾಗಿರುವದೋ ಅವರೇ ಸದ್ರೂಪವಾದ ಬ್ರಹ್ಮದ ಸ್ವರೂಪವನ್ನು ಪಡೆದವರು; ಮಿಕ್ಕವರೆಲ್ಲ ಸುಮ್ಮನೆ ಮಾತಾಡುವವರು.

**ಕುಶಲಾ ಬ್ರಹ್ಮವಾರ್ತಾಯಾಂ ವೃತ್ತಿಹೀನಾಃ ಸುರಾಗಿಣಃ ।**
**ತೇಽಪ್ಯಜ್ಞಾನಿತಯಾ ನೂನಂ ಪುನರಾಯಾನ್ತಿ ಯಾನ್ತಿ ಚ ॥ ೧೩೩ ॥**

೧೩೩. ಯಾರು ಬ್ರಹ್ಮ( ವಿಷಯದ ) ಮಾತಿನಲ್ಲಿ ಜಾಣರಾಗಿ ವೃತ್ತಿಯನ್ನು ಪಡೆದುಕೊಳ್ಳದೆ (ವಿಷಯಗಳಲ್ಲಿ) ಹೆಚ್ಚಿನ ರಾಗವುಳ್ಳವರಾಗಿರುವರೋ ಅವರೂ ನಿಜವಾಗಿ ಅಜ್ಞಾನಿಗಳಾಗಿರುವದರಿಂದ ಮತ್ತೆಮತ್ತೆ ಬರುತ್ತಲೂ ಹೋಗುತ್ತಲೂ ಇರುವರು.

**ನಿಮೇಷಾರ್ಧಂ ನ ತಿಷ್ಠನ್ತಿ ವೃತ್ತಿಂ ಬ್ರಹ್ಮಮಯೀಂ ವಿನಾ ।**
**ಯಥಾ ತಿಷ್ಠನ್ತಿ ಬ್ರಹ್ಮಾದ್ಯಾಃ ಸನಕಾದ್ಯಾಃ ಶುಕಾದಯಃ ॥ ೧೩೪ ॥**

೧೩೪. ಬ್ರಹ್ಮಾದಿಗಳೂ ಸನಕಾದಿಗಳೂ ಶುಕಾದಿಗಳೂ ಇರುವಂತೆ ತಿಳಿದವರು ಬ್ರಹ್ಮಮಯವಾದ ವೃತ್ತಿಯನ್ನು ಬಿಟ್ಟು ಅರ್ಧನಿಮಿಷವಾದರೂ ಇರುವದಿಲ್ಲ.

## ನಿದಿಧ್ಯಾಸನದ ಉಪಸಂಹಾರ

**ಕಾರ್ಯೇ ಕಾರಣತಾಯಾತಾ ಕಾರಣೇ ನ ಹಿ ಕಾರ್ಯತಾ ।**
**ಕಾರಣತ್ವಂ ತತೋ ಗಚ್ಛೇತ್ ಕಾರ್ಯಾಭಾವೇ ವಿಚಾರತಃ ॥ ೧೩೫ ॥**

---

1. 'ಯೇ ಜ್ಞಾತ್ವಾ ವರ್ಧಯನ್ತ್ಯಪಿ' ವಾ॥

೧೩೫. ಕಾರ್ಯದಲ್ಲಿ ಕಾರಣತ್ವವು ಬಂದಿರುವದು, ಕಾರಣದಲ್ಲಿ ಕಾರ್ಯತ್ವವಿರುವದಿಲ್ಲ. ಆದ್ದರಿಂದ ವಿಚಾರಿಸಲು ಕಾರ್ಯವು ಇಲ್ಲವಾಗಲು ಕಾರಣತ್ವವೂ ಹೋಗಿಬಿಡುವದು[1].

**ಅಥ ಶುದ್ಧಂ ಭವೇದ್ವಸ್ತು ಯದ್ವೈ ವಾಚಾಮಗೋಚರಮ್ |**
**ದ್ರಷ್ಟವ್ಯಂ ಮೃದ್ಘಟೇನೈವ ದೃಷ್ಟಾನ್ತೇನ ಪುನಃ ಪುನಃ || ೧೩೬ ||**

೧೩೬. ಆಮೇಲೆ ಶುದ್ಧವಾದ ವಸ್ತುವೇ ಆಗಿಬಿಡುವದು. ಅದು ಮಾತುಗಳಿಗೆ ಗೋಚರವಲ್ಲದ್ದೆಂದು ಪ್ರಸಿದ್ಧವಾಗಿದೆ. ಇದನ್ನು ಮಣ್ಣುಗಡಿಗೆಯ ದೃಷ್ಟಾಂತದಿಂದ ಮತ್ತೆ ಮತ್ತೆ ನೋಡಿಕೊಳ್ಳಬೇಕು.

**ಅನೇನೈವ ಪ್ರಕಾರೇಣ ವೃತ್ತಿರ್ಬ್ರಹ್ಮಾತ್ಮಿಕಾ ಭವೇತ್ |**
**ಉದೇತಿ ಶುದ್ಧಚಿತ್ತಾನಾಂ ವೃತ್ತಿಜ್ಞಾನಂ ತತಃ ಪರಮ್ || ೧೩೭ ||**

೧೩೭. ಈ ಪ್ರಕಾರದಿಂದಲೇ ಬ್ರಹ್ಮಾಕಾರವೃತ್ತಿಯೂ ಆಗುವದು. ಶುದ್ಧಚಿತ್ತರಾದವರಿಗೆ ಅದರಿಂದ (ಈ) ಉತ್ತಮವೃತ್ತಿಜ್ಞಾನವು ಉಂಟಾಗುವದು.

**ಕಾರಣಂ ವ್ಯತಿರೇಕೇಣ ಪುಮಾನಾದೌ ವಿಲೋಕಯೇತ್ |**
**ಅನ್ವಯೇನ ಪುನಸ್ತದ್ಧಿ ಕಾರ್ಯೇ ನಿತ್ಯಂ ಪ್ರಪಶ್ಯತಿ || ೧೩೮ ||**

೧೩೮. (ಸಾಧಕ)ಪುರುಷನು ಕಾರಣವು ಬೇರೆ ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಆಮೇಲೆ ಕಾರ್ಯದಲ್ಲಿ ಅದು ಸೇರಿಕೊಂಡಿರುವದರಿಂದ (ಅದರಲ್ಲಿ) ಯಾವಾಗಲೂ ಇರುವದೆಂಬುದನ್ನು ಕಾಣುತ್ತಾನೆ.

**ಕಾರ್ಯೇ ಹಿ ಕಾರಣಂ ಪಶ್ಯೇತ್ ಪಶ್ಚಾತ್ಕಾರ್ಯಂ ವಿಸರ್ಜಯೇತ್ |**
**ಕಾರಣತ್ವಂ ತತೋ ಗಚ್ಛೇದವಶಿಷ್ಟಂ ಭವೇನ್ಮುನಿಃ || ೧೩೯ ||**

೧೩೯. ಕಾರ್ಯದಲ್ಲಿ ಕಾರಣವನ್ನು ಕಾಣಬೇಕು; ಆ ಬಳಿಕ ಕಾರ್ಯವನ್ನು ಬಿಟ್ಟುಬಿಡಬೇಕು. ಆಮೇಲೆ ಕಾರಣತ್ವವೂ ಹೋಗುವದು ; ಆಗ (ಆ ಸಾಧಕನಾದ) ಮುನಿಯು ಉಳಿದ (ಬ್ರಹ್ಮವೇ) ಆಗುವನು.

**ಭಾವಿತಂ ತೀವ್ರವೇಗೇನ ಯದ್ವಸ್ತು ನಿಶ್ಚಯಾತ್ಮನಾ |**
**ಪುಮಾಂಸ್ತದ್ಧಿ ಭವೇಚ್ಛೀಘ್ರಂ ಜ್ಞೇಯಂ ಭ್ರಮರಕೀಟವತ್ || ೧೪೦ ||**

---

1. ಕಾರ್ಯವನ್ನು ವಿಚಾರಿಸಿದರೆ ಕಾರಣಕ್ಕಿಂತ ಅದು ಬೇರೆಯಿರುವದಿಲ್ಲ ; ಕಾರ್ಯತ್ವವು ನಿಜವಲ್ಲವಾದ್ದರಿಂದ ಕಾರಣತ್ವವೂ ನಿಜವಲ್ಲ.

